# ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆ: ಸ್ತ್ರೀವಾದಿ ಅಧ್ಯಯನ

(ಮೈಸೂರು, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

ಸಂಧ್ಯಾ ಹೆಚ್.ಎಸ್.

ಮಾರ್ಗದರ್ಶಕರು

ಡಾ. ಶಿವಾನಂದ ಎಸ್. ವಿರಕ್ತಮಠ

ಪ್ರಾಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೨೦

# ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆ: ಸ್ತ್ರೀವಾದಿ ಅಧ್ಯಯನ

(ಮೈಸೂರು, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

**ಸಂಧ್ಯಾ ಹೆಚ್.ಎಸ್.**

ಮಾರ್ಗದರ್ಶಕರು

**ಡಾ. ಶಿವಾನಂದ ಎಸ್. ವಿರಕ್ತಮಠ**

ಪ್ರಾಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





**ಭಾಷಾ ನಿಕಾಯ**

**ಮಹಿಳಾ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೨೦

# ಮಾರ್ಗದರ್ಶಕರ ದೃಢೀಕರಣ ಪತ್ರ

**ಸಂಧ್ಯಾ ಹೆಚ್.ಎಸ್** ಇವರು, **"ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆ: ಸ್ತ್ರೀವಾದಿ ಅಧ್ಯಯನ"(ಮೈಸೂರು, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳನ್ನು ಅನುಲಕ್ಷಿಸಿ)** ಎಂಬ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಇದನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಮತ್ತು ಇದು ಬಿಡಿಯಾಗಿ ಮತ್ತು ಇಡಿಯಾಗಿ ಎಲ್ಲಿಯೂ ಮುದ್ರಣಗೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಶಿವಾನಂದ ಎಸ್ ವಿರಕ್ತಮಠ**
ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ದಿನಾಂಕ : 11/9/2020
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

**"ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆ: ಸ್ತ್ರೀವಾದಿ ಅಧ್ಯಯನ"**(ಮೈಸೂರು, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳನ್ನು ಅನುಲಕ್ಷಿಸಿ) ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ. ಶಿವಾನಂದ ಎಸ್ ವಿರಕ್ತಮಠ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಮತ್ತು ಇದು ಬಿಡಿಯಾಗಿ ಮತ್ತು ಇಡಿಯಾಗಿ ಎಲ್ಲಿಯೂ ಮುದ್ರಣಗೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

H.S

**ಸಂಧ್ಯಾ ಹೆಚ್.ಎಸ್**

ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ದಿನಾಂಕ : 11/9/2020

ಸ್ಥಳ : ವಿದ್ಯಾರಣ್ಯ

## ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ಸ್ವರೂಪ

ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವೈಧಾನಿಕತೆ

೧.೪. ಅಧ್ಯಯನದ ಮಹತ್ವ

೧.೫. ಅಧ್ಯಯನದ ಸ್ವರೂಪ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ಸ್ವರೂಪ

## ಪ್ರಸ್ತಾವನೆ

ಜಗತ್ತಿನ ಒಟ್ಟು ಜನಸಂಖ್ಯೆಯಲ್ಲಿ ಮಹಿಳೆಯರು ಅರ್ಧಭಾಗದಷ್ಟಿದ್ದಾರೆ. ಇವರು ಸಮಾಜದ ಸಾಧನೆ ಪ್ರಗತಿಯಲ್ಲಿ ಪುರುಷನಷ್ಟೇ ಪ್ರಮುಖರಾಗಿದ್ದಾರೆ. ಸಮಾಜದ ಐತಿಹಾಸಿಕ ಬೆಳವಣಿಗೆಯಲ್ಲಿ ಮಹಿಳೆಯರ ಕೊಡುಗೆ ಬಹಳ ಮಹತ್ವದ್ದಾಗಿದೆ. ಈ ಐತಿಹಾಸಿಕ ಸತ್ಯವನ್ನು ಇತಿಹಾಸದುದ್ದಕ್ಕೂ ಅವಗಣಿಸುತ್ತಾ ಬರಲಾಗಿತ್ತು. ಇಂದಿನ ಜಾಗತಿಕ ದಿನಮಾನಗಳಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಯಾವುದೇ ವಿಷಯಗಳ ಬಗ್ಗೆ ವಿಶೇಷ ಜಾಗೃತಿ ನಿರ್ಮಾಣವಾಗುತ್ತಿದೆ. ಅಂತೆಯೇ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರ ವಾಸ್ತವಿಕ ಸ್ಥಾನಮಾನ, ಸಮಸ್ಯೆ ಹಾಗೂ ಪಾತ್ರಗಳನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವ ದೃಷ್ಟಿಕೋನವು ಅವಶ್ಯಕವಾಯಿತು. ಸ್ವತಂತ್ರವಾದ ಹಾಗೂ ಪ್ರತ್ಯೇಕವಾದ ಅಧ್ಯಯನ ಶಾಸ್ತ್ರದ ಅಗತ್ಯತೆಯ ಪರಿಣಾಮವಾಗಿ ಮಹಿಳಾ ಅಧ್ಯಯನವು ವಿನೂತನ ಅಧ್ಯಯನ ಶಾಸ್ತ್ರವಾಗಿ ಆವಿರ್ಭವಿಸಿತು. ಮಹಿಳಾ ಅಧ್ಯಯನವು ಮಹಿಳಾ ಸಂಬಂಧಿ ವಸ್ತು ವಿಷಯಗಳನ್ನು ಅಧ್ಯಯನ ಮಾಡುವ ಜ್ಞಾನ ಶಿಸ್ತಾಗಿದೆ. ಇದು ಒಂದು ಪ್ರತ್ಯೇಕವಾದ ಜ್ಞಾನಶಿಸ್ತಾಗಿ ೨೦ನೇ ಶತಮಾನದ ಕೊನೆಯ ದಶಕದಿಂದ ಬಹಳ ಜನಪ್ರಿಯವಾಗಿದೆ.

ಮಹಿಳಾ ವಿಷಯಗಳನ್ನು ಮತ್ತು ಸಮಸ್ಯೆಗಳನ್ನು ಚರಿತ್ರೆಯಲ್ಲಿ ನಿರಾಕರಿಸುವ ಧೋರಣೆಯು ಇತ್ತು. ಇಂದು ಮಹಿಳಾ ಚಿಂತನೆಗಳು ಮುಂಚೂಣಿಗೆ ಬಂದ ನಂತರ ಈ ಧೋರಣೆಯು ಹಂತ ಹಂತವಾಗಿ ಹಿಂದೆ ಸರಿಯುತ್ತಿದೆ. ಒಂದು ಕಾಲಘಟ್ಟದಲ್ಲಿ ಪಿತೃಪ್ರಧಾನ ವ್ಯವಸ್ಥೆಯ ಸಮಾಜದಲ್ಲಿ ಮಹಿಳಾ ಸಮಸ್ಯೆಗಳನ್ನು ಪ್ರಸ್ತಾಪಿಸುವುದೇ ಒಂದು ರೀತಿಯ ಅಪರಾಧವಾಗಿತ್ತು. ಆದರೆ ಇಂದು ಹಾಗೆ ಮಾಡುವುದು ಅಪರಾಧ ಎಂಬ ರೀತಿಯಲ್ಲಿ ಈ ಚಿಂತನೆಯು ಪ್ರಭಾವಿಸಿದೆ. ಮಹಿಳಾ ವಿಷಯಗಳನ್ನು ಪ್ರಸ್ತಾಪಿಸಿದರೆ ಸಾಮಾಜಿಕ ಸಮಸ್ಯೆಗಳಿಂದ ಬಿಡುಗಡೆಗೊಂಡಂತೆ ಮಹಿಳೆಯ ಸಮಸ್ಯೆಯು ಇಡೀ ಸಮಾಜದ ಸಮಸ್ಯೆಯನ್ನು ಎತ್ತಿ ತೋರಿಸುತ್ತದೆ. ಸಮಾಜದ ಉದ್ಧಾರವು ಮಹಿಳೆಯರನ್ನು ಒಳಗೊಂಡಿದೆ. ಹಾಗಾಗಿ ಇಂದಿನ ದಿನಮಾನಗಳಲ್ಲಿ ಅದರಲ್ಲಿಯೂ ಕೇವಲ ಕೌಟುಂಬಿಕ ವಲಯದ ಗೃಹಿಣಿಯರ ಸಮಸ್ಯೆಗಳನ್ನೇ ಪ್ರಸ್ತಾಪ ಮಾಡುವುದು ಮಾತ್ರವಲ್ಲ, ಅಂಚಿನ

ಸಮುದಾಯದ ಮಹಿಳೆಯರ ಸಮಸ್ಯೆಗಳನ್ನು ಸಹ ಒಟ್ಟಾರೆ ಮಹಿಳೆಯರ ಸಮಸ್ಯೆಗಳೆಂದು ಭಾವಿಸುವ ಧೋರಣೆಗಳು ವಸಾಹತೋತ್ತರ ಚಿಂತನೆಯಲ್ಲಿ ಹೆಚ್ಚು ಹೆಚ್ಚು ಕಂಡುಬರುತ್ತದೆ. ಈ ನಿಟ್ಟಿನಲ್ಲಿ ಹೆಚ್ಚು ಶೋಷಣೆಗೆ ಒಳಗಾಗಿರುವಂತಹ ದೇವದಾಸಿ ಮಹಿಳೆಯರು, ಅಸ್ಪೃಶ್ಯತೆಗೆ ಒಳಗಾಗಿರುವ ವೇಶ್ಯಾ ಸ್ತ್ರೀಯರು, ದಲಿತ ಮಹಿಳೆಯರು, ಗುಲಾಮರು, ದಸ್ಯುಗಳು, ಸೇವಕಿಯರು ಮುಂತಾದವರ ವಿಷಯಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಚರ್ಚೆಗೆ ಬರುತ್ತಿದೆ. ಹಾಗೆಯೇ ವಸಾಹತೋತ್ತರ ಚಿಂತನೆಗಳಲ್ಲಿ ಹೆಚ್ಚು ಶೋಷಣೆಗೆ ಒಳಗಾಗಿರುವ ಮಹಿಳೆಯರನ್ನು ಕುರಿತು ಅಧ್ಯಯನ ಮಾಡುವುದು ಕೂಡ ಸಂಶೋಧನೆಯ ಸೂಕ್ಷ್ಮತೆಯನ್ನು ತೋರಿಸುತ್ತದೆ. ಅಂತಹ ಒಂದು ಪ್ರಯತ್ನವಾಗಿ ಪ್ರಸ್ತುತ ಅಧ್ಯಯನವು ಸಹ ಈ ರೀತಿ ಹೆಚ್ಚು ಶೋಷಣೆಗೆ ಒಳಗಾಗಿರುವ ಮಹಿಳಾ ಸಮುದಾಯವನ್ನು ಕುರಿತು ಅಧ್ಯಯನ ಮಾಡಲಾಗುವುದು.

ಇಂದು ಕರ್ನಾಟಕದಾದ್ಯಂತ ಮಹಿಳಾ ಮಾರಾಟ ಎಂಬುದು ಜೀವಂತವಾದ, ಜ್ವಲಂತ ಸಮಸ್ಯೆಯಾಗಿದೆ. ಈ ಸಮಸ್ಯೆ ಕುರಿತು ಅನೇಕ ಪತ್ರಿಕೆಗಳಲ್ಲಿ ಉಲ್ಲೇಖವಾಗುತ್ತಿದೆ. ಈ ಕುರಿತಾಗಿ ಬಂಡವಾಳ ಶಾಹಿ ವ್ಯವಸ್ಥೆ ಶೋಷಣೆಯನ್ನು ಈ ನಿಟ್ಟಿನಲ್ಲಿ ಹೆಚ್ಚು ಹೆಚ್ಚು ಬಳಸುತ್ತಿದೆ. ಮಹಿಳೆಯರ ಮಾರಾಟವನ್ನು ಒಂದು ವ್ಯಾಪಾರದ ಹಿನ್ನೆಲೆಯಲ್ಲಿ ಬೆಳೆಸುತ್ತಿದೆ. ಅದು ಮತ್ತೊಂದು ಕಡೆ ಸಾಮಾನ್ಯ ಮಹಿಳೆಯರಿಗೆ ಬಹುದೊಡ್ಡ ತೊಡಕಾಗಿದೆ. ಮಾರಾಟ ಮಾಡುವವರಿಗೆ ಲಾಭವಾಗಿ, ಅಸಹಾಯಕ ಮಹಿಳೆಯರಿಗೆ ದೊಡ್ಡ ಸಮಸ್ಯೆಯಾಗಿದೆ. ಇದರ ಮೂಲವನ್ನು ಭೇಧಿಸುವಲ್ಲಿ ಪಾಲಕರು ಸಹ ಸೋಲುತ್ತಿದ್ದಾರೆ. ಸಮಾಜವೂ ಕೂಡ ಹಿಂದೆ ಬೀಳುತ್ತಿದೆ. ಕಾನೂನು ಈ ಸಮಸ್ಯೆಗೆ ಪರಿಹಾರ ನೀಡುವಲ್ಲಿ ಸೋಲುತ್ತಿದೆ. ಈ ಎಲ್ಲಾ ಸಂಕೀರ್ಣವಾಗಿರುವ ಸಮಸ್ಯೆಯನ್ನು ಈ ಅಧ್ಯಯನವು ಅಧ್ಯಯನದ ಪ್ರಶ್ನೆಯಾಗಿ, ಈ ಸಮಸ್ಯೆಗಿರುವ ಪರಿಹಾರವನ್ನು ಹುಡುಕುವ ನಿಟ್ಟಿನಲ್ಲಿ ಒಂದು ಗಂಭೀರವಾದ ಪ್ರಯತ್ನ ಮಾಡಲು ಉದ್ದೇಶಿಸುತ್ತದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಮೇಲೆ ಪುರುಷ ಶಾಹಿ ವ್ಯವಸ್ಥೆಯ ದೌರ್ಜನ್ಯದ ಫಲವಾಗಿ ಮಹಿಳೆಯರು ಹಲವಾರು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ್ದಾರೆ. ಸಾಮಾಜಿಕವಾಗಿ ಪ್ರಬಲರಾದವರು ಸಾಂಸ್ಕೃತಿಕವಾಗಿ ಕಡೆಗಣಿಸಲ್ಪಟ್ಟ ದುರ್ಬಲರ ಮೇಲೆ ನಡೆಸುವ ಎಲ್ಲ ಬಗೆಯ ಆಕ್ರಮಣತೆಯನ್ನು ದೌರ್ಜನ್ಯವೆಂದು ಸುಲಭವಾಗಿ ನಿರ್ವಚಿಸಬಹುದು. ದೌರ್ಜನ್ಯವನ್ನು ಹಲವು ರೀತಿಯಿಂದ ವ್ಯಾಖ್ಯಾನಿಸಲಾಗುತ್ತದೆ. ದೌರ್ಜನ್ಯದ ಸ್ವರೂಪ ಒಂದೇ ರೀತಿಯಾಗಿರುವುದಿಲ್ಲ. ದೌರ್ಜನ್ಯದ ನೋಟ, ನಡಾವಳಿ ಹಲವು ತೆರನಾಗಿರುತ್ತದೆ. ದೌರ್ಜನ್ಯ ಎನ್ನುವುದು ಪ್ರಬಲರಾದವರು ದುರ್ಬಲರ ಮೇಲೆ ಅಥವಾ ಅಧಿಕಾರ ಇರುವವರು ಅಧಿಕಾರ ಇಲ್ಲದವರ ಮೇಲೆ ಅಥವಾ ಸಂಪನ್ಮೂಲ ಇರುವವರು ಇಲ್ಲದವರ ಮೇಲೆ ನಡೆಸುವ ಹೇರಿಕೆಯು ದೌರ್ಜನ್ಯವಾಗಿದೆ. ಇದು ಒಂದು ರೀತಿಯಲ್ಲಿ ನಿಸರ್ಗದ ನಿಯಮವೂ ಆಗಿದೆ. ಚರಿತ್ರೆಯಲ್ಲಿಯೂ ಸಹ ಪ್ರಾಣಿ ಸಮುದಾಯಗಳಲ್ಲಿಯೂ ಪ್ರಬಲವಾದ ಪ್ರಾಣಿ ಮತ್ತೊಂದು ಪ್ರಾಣಿಯ ಮೇಲೆ ದಮನ ಮಾಡುವ ನೆಲೆಗಳು ಕೂಡ

ಕಂಡುಬರುತ್ತದೆ. ಆಹಾರ ಸರಪಣಿಯ ವಿಶ್ಲೇಷಣೆಯಲ್ಲಿ ಡಾರ್ವಿನ್ನನ ಜೀವ ವಿಕಾಸದ ಚಿಂತನೆಯಲ್ಲಿಯೂ ಸಹ ಇದನ್ನು ಗುರುತಿಸಬಹುದಾಗಿದೆ. ಹಕ್ಕು ಕರ್ತವ್ಯಗಳ ನೆಲೆಯಲ್ಲಿಯೂ ಸಹ ದಮನವನ್ನು ವಿವರಿಸಬಹುದಾಗಿದೆ. ದಮನ ಎನ್ನುವುದು ಯಾವುದೇ ಜೀವಿಯ ಮೇಲೆ ದಮನ ಮಾಡುವುದು ಅಪರಾಧ ಎಂದು ಅಂತರಾಷ್ಟ್ರೀಯ ಮಾನವ ಹಕ್ಕು ವಿವರಿಸುತ್ತದೆ. ಚರಿತ್ರೆಯನ್ನು ಗಮನಿಸಿದಾಗ ಮಾನವ ಸಂಕುಲದಲ್ಲಿ ಸಹ ಹೆಣ್ಣು ಗಂಡುಗಳ ಮಧ್ಯದಲ್ಲಿಯೂ ಪೈಪೋಟಿ, ಒಬ್ಬರ ಮೇಲೆ ಇನ್ನೊಬ್ಬರು ಹಕ್ಕನ್ನು ಸಾಧಿಸುವ ನೆಲೆಗಳು ಕೂಡ ಸಾಂಸ್ಕೃತಿಕವಾಗಿ ಮಂಡಿಸಲ್ಪಟ್ಟಿದೆ.

ವಸತಿ, ಅನ್ನ, ಆಹಾರಗಳಷ್ಟೇ ಸಹಜವಾದದ್ದು ಲೈಂಗಿಕತೆ ಆಗಿದೆ. ಆದ್ದರಿಂದ ಪುರುಷಾರ್ಥಗಳಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂದು ಗುರುತಿಸಲಾಗುತ್ತದೆ. ಮಾನವ ಸಂಕುಲವು ನಿಸರ್ಗದ ಒಳಗಡೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾದರೆ ಲೈಂಗಿಕತೆಯನ್ನು ಸುವ್ಯವಸ್ಥಿತವಾಗಿ ಪಾಲಿಸಿಕೊಂಡು ಬರುವುದು ಕೂಡ ಮುಖ್ಯ ಹೊಣೆಯಾಗಿರುತ್ತದೆ. ಮನುಕುಲದ ಆರಂಭದಿಂದಲೂ ಲೈಂಗಿಕ ಜೀವನ ಕ್ರಮ ಆಯಾ ಕಾಲಘಟ್ಟಗಳಿಗೆ ಪೂರಕವಾದ ವ್ಯವಸ್ಥೆಯೊಂದಿಗೆ ನಡೆದು ಬಂದಿದೆ.

ಐತಿಹಾಸಿಕ ಸಂದರ್ಭದಲ್ಲಿ ನಿರ್ಮಾಣಗೊಂಡ ಸಾಮಾಜಿಕ ಸಂರಚನೆಗಳು, ಲೈಂಗಿಕ ತತ್ವಗಳು ಪಿತೃಪ್ರಧಾನತೆಯ ಸಾಮಾಜಿಕ ಸಂರಚನೆಯಲ್ಲಿ ಬೇರು ಬಿಟ್ಟಿವೆ. ಇಲ್ಲಿ ಇರುವ ಖುಷಿ, ಸಂತೋಷ ಸೌಲಭ್ಯ, ಆತ್ಮೀಯತೆ ಇವೆಲ್ಲವೂ ವಿಶೇಷ ಅಧಿಕಾರವುಳ್ಳ ಪುರುಷರ ಮರ್ಜಿಯಲ್ಲಿವೆ. ಖಾಸಗಿ ಆಸ್ತಿ ಒಡೆತನ ಮತ್ತು ಪಿತೃತ್ವದ ಸಂರಕ್ಷಣೆ, ಮಹಿಳೆಯ ಸಂತಾನೋತ್ಪತ್ತಿಯ ಜೊತೆಗೆ ಲೈಂಗಿಕ ಸೇವೆಯ ನಿಯಂತ್ರಣವು ಪುರುಷನದೇ ಆಗಿದೆ.

ಹೆಣ್ಣಿನ ಪಾತಿವ್ರತ್ಯವನ್ನು ಘೋಷಿಸುವ ಸಮಾಜ ಗಂಡಿನ ಪತ್ನಿ ವ್ರತವನ್ನು ಘೋಷಿಸುವುದಿಲ್ಲ. ಪುರುಷಶಾಹಿ ವ್ಯವಸ್ಥೆಯಲ್ಲಿ ಹೆಣ್ಣಿನ ಲೈಂಗಿಕತೆಯನ್ನು ತನಗೆ ಬೇಕಾದ ಹಾಗೆ ಬಳಸಿಕೊಳ್ಳುವ ನೆಲೆಗಳು ಸರ್ವೇಸಾಮಾನ್ಯವಾಗಿ ಕೌಟುಂಬಿಕ ನೆಲೆಗಳಲ್ಲಿ, ಆದರ್ಶದ ನೆಲೆಗಳಲ್ಲಿ ಒಪ್ಪಿತವಾಗುತ್ತವೆ. ಪುರುಷನ ವಿವಾಹ ಬಾಹಿರ ಲೈಂಗಿಕ ಸಂಬಂಧಗಳು ನಿರಾಕರಣೆಗೊಳ್ಳುವುದಿಲ್ಲ ಒಪ್ಪಿತ್ತವಾಗುತ್ತವೆ. ಆದರೆ ಹೆಣ್ಣಿಗೆ ತಿರಸ್ಕರಿಸಲಾಗಿದೆ, ಜೊತೆಗೆ ಶಿಕ್ಷೆಯನ್ನು ವಿಧಿಸಲಾಗುತ್ತದೆ.

ಲೈಂಗಿಕತೆಯನ್ನು ಮೂಲಭೂತವಾಗಿ ಮತ್ತು ಪರಿಪೂರ್ಣವಾಗಿ ಸಂತಾನಾಭಿವೃದ್ಧಿಯ ಸಾಧನವಾಗಿ ಮಾತ್ರ ನಮ್ಮ ಸಮಾಜ ಪರಿಗಣಿಸುತ್ತದೆ. ಆದರೆ ಇದು ಎರಡು ಭಿನ್ನ ಭಿನ್ನ ಲಿಂಗಗಳಿಗೆ ಭಿನ್ನ ಭಿನ್ನ ರೀತಿಯಲ್ಲಿ ನಿಯೋಜಿಸಲ್ಪಟ್ಟಿದೆ. ಇದು ಹೆಣ್ಣಿನ ವಿಷಯದಲ್ಲಿ ತಾರತಮ್ಯವನ್ನು ಉಂಟುಮಾಡಿರುವುದರಿಂದ ಸಮಸ್ಯೆಯಾಗಿ ಬಿಂಬಿತವಾಗಿದೆ. ಮಾನವ ತನ್ನ ಪ್ರಾಥಮಿಕ ಅಗತ್ಯತೆ, ಲೈಂಗಿಕ ಚಟುವಟಿಕೆ ಮತ್ತು ಅದರ ಸಂಬಂಧಗಳ ನಿಯಂತ್ರಣಕ್ಕಾಗಿ ಮಾಡಿಕೊಂಡ ಒಪ್ಪಂದಗಳು ಮಾನ್ಯತೆಗಳು, ಕಾಯ್ದೆ ಕಾನೂನುಗಳ ರೂಪವಾಗಿ ವಿವಾಹ ಸಂಸ್ಥೆ ಹುಟ್ಟಿಕೊಂಡಿತು. ಇಂದು ವಿವಾಹವು ಸಾಮಾಜಿಕ ವ್ಯವಸ್ಥೆಯಾಗಿದೆ. ಆದರೆ ಸಾಂಸ್ಕೃತಿಕ ಪ್ರಶ್ನೆ ಇರುವುದು ಈ ವ್ಯವಸ್ಥೆಯಲ್ಲಿ ಲೈಂಗಿಕತೆಯ ವಿಚಾರವಾಗಿ

ಗಂಡಿಗೆ ಇರುವ ಮುಕ್ತತೆ ಮತ್ತು ಹೆಣ್ಣಿಗೆ ಇರುವ ಬಂಧನದಲ್ಲಿ. ವಿವಾಹ ಬಾಹಿರ ಸಂಬಂಧದ ಪ್ರಶ್ನೆಗೆ ಹೋದರೆ ವಿವಾಹ ಸಂಬಂಧದಲ್ಲಿ ಹೆಂಡತಿಯಾದವಳು ಲೈಂಗಿಕತೆಯನ್ನು ಬಯಸುವುದಾಗಲಿ, ಘೋಷಿಸುವುದಾಗಲಿ, ವಿವರಿಸುವುದಾಗಲಿ ಅಪರಾಧವೆಂದು ಪರಿಗಣಿಸುತ್ತದೆ. ಆದರೆ ಇದೇ ಸಂವೇದನೆಯು ಹೆಣ್ಣಿಗೆ ಪಾತಿವ್ರತ್ಯದ ಕೋಟೆ ನಿರ್ಮಿಸುತ್ತದೆ. ಯಾವುದೇ ಅಡೆತಡೆಗಳಿಲ್ಲದೆ ಪುರುಷನಿಗೆ ತನ್ನ ಬದುಕನ್ನು ಬಯಕೆಗಳಿಗೆ ಅನುಗುಣವಾಗಿ ರೂಪಿಸಿಕೊಳ್ಳಲು ಸ್ವಾತಂತ್ರ್ಯ ನೀಡುತ್ತದೆ. ಇದು ಪಿತೃಪ್ರಧಾನ ವ್ಯವಸ್ಥೆಯ ಹಿಡಿತದಲ್ಲಿ ಮುಂದುವರೆಯುತ್ತಿರುವುದನ್ನು ಚಾರಿತ್ರಿಕವಾಗಿ ಗುರುತಿಸಲಾಗಿದೆ.

ಪ್ರಸ್ತುತ ಅಧ್ಯಯನದ ಪ್ರಶ್ನೆ ಇರುವುದು ಹೆಣ್ಣಿನ ವಿವಾಹ ಸಂಬಂಧಿ ಲೈಂಗಿಕತೆಯಲ್ಲಿ ಅಲ್ಲ. ಅದರ ಚರ್ಚೆ ಇಲ್ಲಿ ಇರುವುದಿಲ್ಲ. ಪ್ರಸ್ತುತ ಅಧ್ಯಯನದಲ್ಲಿ ವಿವಾಹ ಸಂಬಂಧಿ ಲೈಂಗಿಕ ವಿಚಾರಗಳನ್ನು ಚರ್ಚೆ ಮಾಡುವ ಬದಲಾಗಿ, ಹೆಣ್ಣಿನ ಮೇಲೆ ದಬ್ಬಾಳಿಕೆ ಮಾಡುವ ವಿವಾಹ ಬಾಹಿರ ಸಂಬಂಧ ವ್ಯವಸ್ಥೆಯನ್ನು ಕುರಿತು ಅಧ್ಯಯನ ಮಾಡುವುದಾಗಿದೆ. ಅದರಲ್ಲೂ ವಿಶೇಷವಾಗಿ ವಿವಾಹ ಬಾಹಿರ ಅನ್ನುವಂತಹದ್ದು ಕೂಡ ಅನೈತಿಕ ಚಟುವಟಿಕೆಯ ನಿಟ್ಟಿನಲ್ಲಿ ಗೌಪ್ಯವಾಗಿ ಮಾರಾಟವಾಗುವ ಚೌಕಟ್ಟಿನಲ್ಲಿ ನಡೆಯುವ ಹಿನ್ನೆಲೆಯದ್ದಾಗಿದೆ. ಇದರ ಸಮಗ್ರ ಸಾಂಸ್ಕೃತಿಕ ಅನಾವರಣವಾಗಿದೆ. ಇದರೊಳಗೆ ಭಾಗವಹಿಸುವ ಪುರುಷ ವರ್ಗ, ವ್ಯಾಪಾರಿ ದೃಷ್ಟಿಕೋನ, ಮುಂತಾದ ಅನೇಕ ಸಂಕೀರ್ಣ ಆಯಾಮಗಳನ್ನು ಒಡೆದು ನೋಡುವುದು. ಅದನ್ನು ಸಾಂಸ್ಕೃತಿಕವಾಗಿ ರಾಜಕೀಯವಾಗಿ ಮತ್ತು ಬಂಡವಾಳಶಾಹಿ ನೆಲೆಯಲ್ಲಿ ವಿವರಿಸುವುದು ಪ್ರಸ್ತುತ ಅಧ್ಯಯನದ ಆಶಯವಾಗಿದೆ.

ಹೆಣ್ಣು ಮಕ್ಕಳ ಹಕ್ಕಿನ ಹೋರಾಟವನ್ನು ಮೊದಲು ಪ್ರಾರಂಭಿಸಿದವರು ಸ್ತ್ರೀವಾದಿಗಳು ಎಂದು ಹೇಳಬಹುದು. ಸಂಪ್ರದಾಯಿಕವಾದ ಪಿತೃ ಪ್ರಧಾನ ವ್ಯವಸ್ಥೆಯ ಮನುಸ್ಮೃತಿ, ಧರ್ಮಗ್ರಂಥಗಳು, ಸಾಹಿತ್ಯ ಕೃತಿಗಳು, ಮೌಲ್ಯಗಳನ್ನು ಪ್ರತಿಷ್ಠಾಪಿಸುವ ಆದರ್ಶಗಳ ಒಂದು ದೊಡ್ಡ ರಾಶಿಯೇ ಬಂದು ನಿಲ್ಲುತ್ತದೆ. ಪಿತೃಪ್ರಧಾನತೆಯನ್ನು ಸ್ಥಾಪಿಸುವ ಅದನ್ನು ಮುಂದುವರಿಸುವ ರಾಜಕಾರಣದ ಹಿನ್ನೆಲೆಯಲ್ಲಿ ತತ್ವಶಾಸ್ತ್ರ, ಧರ್ಮಶಾಸ್ತ್ರ ಮತ್ತು ಪುರಾಣ, ಮಹಾಕಾವ್ಯಾಧಿಯಾಗಿ ಕಾರ್ಯ ನಿರ್ವಹಿಸುತ್ತದೆ. ಇದನ್ನು ಮೊಟ್ಟಮೊದಲಿಗೆ ವಿರೋಧಿಸುವವರು ಸ್ತ್ರೀವಾದಿಗಳು ಎಂದು ಕರೆಸಿಕೊಳ್ಳುತ್ತಾರೆ. ಧರ್ಮಶಾಸ್ತ್ರ, ತತ್ವಶಾಸ್ತ್ರ, ಸಮಾಜಶಾಸ್ತ್ರ ಇತ್ಯಾದಿ ಸಾಂಸ್ಕೃತಿಕ ಮಾನವ ಶಾಸ್ತ್ರಗಳ ಪರಿಧಿಯಲ್ಲಿ ಬರುವ ಎಲ್ಲಾ ಜ್ಞಾನ ಶಾಖೆಗಳು ಕೂಡ ಹೆಣ್ಣು ಗಂಡಿನ ವಿಷಯದಲ್ಲಿ ತಾರತಮ್ಯವೆಸಗಿವೆ. ಒಂದು ಪ್ರಧಾನ ಧಾರೆಯ ಚಿಂತನೆಯಾಗಿ ಗಂಡನ್ನು, ಅದಕ್ಕೆ ಅಧೀನವಾಗಿ ಮಹಿಳಾ ಲೋಕವನ್ನು ಕಟ್ಟುವ ದಿಸೆಯಲ್ಲಿ ಶತ ಶತಮಾನಗಳಿಂದ ಪ್ರಯತ್ನಿಸಿರುವುದನ್ನು ಎಲ್ಲಾ ಧರ್ಮಶಾಸ್ತ್ರಗಳಲ್ಲಿಯೂ ನೋಡಬಹುದಾಗಿದೆ. ಸಾಹಿತ್ಯಿಕ ಕೃತಿಗಳು ಭಾಷೆಯ ಸೃಜನಶೀಲತೆಯ ನೆಲೆಯಲ್ಲಿಯೂ ಸಹ ಮತ್ತೆ ಮತ್ತೆ ಮಹಿಳೆಯ ಅಧೀನ ಸ್ಥಿತಿಯನ್ನು ಸ್ಥಾಪಿಸುವ ಪ್ರಯತ್ನಗಳನ್ನು ಎಲ್ಲ ಕಡೆಯೂ, ಎಲ್ಲ

ಭಾಷೆಗಳಲ್ಲಿಯೂ ನೋಡಬಹುದಾಗಿದೆ. ಇದಕ್ಕೆ ವಿರುದ್ಧವಾಗಿ ಹೀಗೆ ಸಮಸ್ಯೆಗೆ ಸಿಲುಕಿರುವ ಹೆಣ್ಣು ಸಮುದಾಯವನ್ನು ಕುರಿತು ಮೊಟ್ಟ ಮೊದಲನೆ ಪ್ರತಿಭಟನೆಯನ್ನು ಮಾಡಿದವರು ಸ್ತ್ರೀವಾದಿಗಳೆಂದು ಗುರುತಿಸಲಾಗಿದೆ.

ಕರ್ನಾಟಕದಲ್ಲಿ ಅನೈತಿಕ ವ್ಯವಹಾರಗಳಿಗೆ ಕಳ್ಳಸಾಗಾಣಿಕೆಯಾಗುತ್ತಿರುವಂತಹ ಹೆಣ್ಣು ಮಕ್ಕಳು ಮತ್ತು ಮಹಿಳೆಯರು ವೇಶ್ಯಾವಾಟಿಕೆಗೆ ಮಾರಾಟವಾಗುತ್ತಿದ್ದಾರೆ. ಕಾನೂನಿನ ನೆರವಿನಿಂದ ಇವರನ್ನು ಬಿಡಿಸಿ ಸಮಾಜಕ್ಕೆ ಕಳಂಕ ಪ್ರಾಯವಾದ ಈ ವ್ಯವಸ್ಥೆಯನ್ನು ನಿರ್ಮೂಲಗೊಳಿಸಬೇಕೆಂಬ ಆದರ್ಶವನ್ನು ಹೊಂದಿರುವ 'ಒಡನಾಡಿ ಸಂಸ್ಥೆ', 'ಸಂಗಮ' 'ಜನವಾದಿ' ಯಂತಹ ಸರ್ಕಾರೇತರ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಮಹಿಳೆಯರ ಜೀವನ ಸುಧಾರಣೆಗೆ ಶ್ರಮಿಸುತ್ತಿವೆ. ಅನೇಕ ಸಾಮಾಜಿಕ ಕಾರ್ಯಕರ್ತೆಯರು ಅನೈತಿಕ ಸಾಗಾಣಿಕೆಗೆ ಒಳಗಾದ ಹೆಣ್ಣು ಮಕ್ಕಳ ಪರವಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸರ್ಕಾರ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವತಿಯಿಂದ ಉಜ್ವಲ ಎಂಬ ಯೋಜನೆಯನ್ನು ಅನೈತಿಕ ಸಾಗಾಣಿಕೆಗೆ ಒಳಗಾದ ಹೆಣ್ಣು ಮಕ್ಕಳ ರಕ್ಷಣೆ ಮತ್ತು ಪುನರ್ವಸತಿಗಾಗಿ ಆಯೋಜಿಸಿದೆ. ಇವುಗಳ ಮೂಲಕ  ಈ ಸಮಸ್ಯೆಯ ವಿವಿಧ ಮುಖಗಳನ್ನು ಸಮಾಜಕ್ಕೆ ತೆರೆದಿಡುವ ಪ್ರಯತ್ನ ಮಾಡಿಲಾಗುತ್ತಿದೆ.

ಕಾನೂನುಗಳು ಜಾರಿಯಾಗಿದ್ದರೂ, ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳು ಈ ಸಮಸ್ಯೆಯನ್ನು ನಿವಾರಿಸಲು ಕೈ ಜೋಡಿಸಿದ್ದಾರೆ. ಆದರೂ ಸಹ ಈ ಶೋಷಣೆಯ ಪರಿಸ್ಥಿತಿ ಮಾತ್ರ ಉತ್ತಮಗೊಂಡಿಲ್ಲ. ಇದು ನಾಗರೀಕ ಸಮಾಜಕ್ಕೆ ಅವಮಾನದ ಸಂಗತಿ. ವಿಶ್ವ ಸಂಸ್ಥೆಯ ಪ್ರಕಾರ ಪ್ರತಿ ವರ್ಷ ೫ ರಿಂದ ೭ ಮಿಲಿಯನ್ ಡಾಲರ್‌ನಷ್ಟು ವ್ಯವಹಾರ ಮಾನವ ಸಾಗಾಟದಲ್ಲಿ ಆಗುತ್ತಿದೆ. ಜಗತ್ತಿನಾದ್ಯಂತ ವಾರ್ಷಿಕ ೨ಕೋಟಿ ಮಹಿಳೆಯರು ಮತ್ತು ಮಕ್ಕಳು ಲೈಂಗಿಕ ಚಟುವಟಿಕೆಗೆ ದುರ್ಬಳಕೆಯಾಗುತ್ತಿದ್ದು, ಭಾರತವು ಪ್ರಮುಖ ತಾಣವಾಗಿದೆ.

ಪುರಾತನ ನಾಗರೀಕ ಸಮಾಜಗಳಿಂದ ಗ್ರೀಕ್, ರೋಮ್, ಬ್ಯಾಬಿಲೋನಿಯಾದಲ್ಲಿ ಮತ್ತು ನಮ್ಮ ಪ್ರಾಚೀನ ಭಾರತದಲ್ಲಿಯೂ ಹೆಣ್ಣಿನ ಲೈಂಗಿಕ ಶೋಷಣೆಯನ್ನು ಗುರುತಿಸಲಾಗಿದೆ. ಹೆಣ್ಣನ್ನು ಪರಾಧೀನಳನ್ನಾಗಿಸಲು ದೇವದಾಸಿ, ಬಸವಿಯರು, ಪಾತರದವರು, ನಾಯಕಸಾನಿ, ಜೋಗತಿ ಮುಂತಾದ ಹೆಸರುಗಳಲ್ಲಿ ಧಾರ್ಮಿಕ ಆಚರಣೆಗಳಲ್ಲಿ ಹೆಣ್ಣನ್ನು ಸಿಲುಕಿಸಿ ಭೋಗಿಸಲಾಯಿತು. ಪುರುಷಾಧಿಕಾರದ ಧರ್ಮ ಮತ್ತು ಸಮಾಜದ ಸ್ವಾರ್ಥ ಹೆಣ್ಣಿನ ಲೈಂಗಿಕತೆಯನ್ನು ಬಳಸಲು ವೇಶ್ಯಾವಾಟಿಕೆಯ ಸೃಷ್ಟಿಗೆ ಕಾರಣವಾದವು. ಇದನ್ನು ಅಧ್ಯಯನಗಳು ಸಹ ಗುರುತಿಸಿವೆ. ಈ ವೇಶ್ಯಾವಾಟಿಕೆಯ ಕೂಪಕ್ಕೆ ಹೆಣ್ಣಿನ ಸರಬರಾಜು ಸಹ ಪರಂಪರಾಗತವಾಗಿ ನಡೆದುಕೊಂಡು ಬರುತ್ತಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಇಂದಿನ ಸಂದರ್ಭದಲ್ಲಿ ಹೆಣ್ಣು ಮಕ್ಕಳ ಈ ರೀತಿಯ ಲೈಂಗಿಕ ಶೋಷಣೆಯು ಅತ್ಯಂತ ಅಕ್ರಮವಲಯವಾಗಿದ್ದು ಅದನ್ನು ವಿಶೇಷವಾಗಿ ಅನೈತಿಕ

ಸಾಗಾಣಿಕೆಯಾಗಿ ಗುರುತಿಸಲಾಗಿದೆ. ಇದು ಕೇವಲ ಭಾರತದ ಸಮಸ್ಯೆಯಲ್ಲ, ಒಂದು ಅಂತರಾಷ್ಟ್ರೀಯ ಸಮಸ್ಯೆ ಎಂದು ಗ್ರಹಿಸಲಾಗಿದೆ.

ಈ ಸಾಗಾಣಿಕೆಯ ಹಿಂದಿರುವ ಸತ್ಯ ಸಂಗತಿಗಳನ್ನು ಗಮನಿಸಿದರೆ, ಲೈಂಗಿಕ ಸಂಬಂಧಗಳಿಂದ ಮೋಸ ಹೋದವರು, ಇಷ್ಟವಿಲ್ಲದೆ ವಿವಾಹವಾದವರು, ಭವಿಷ್ಯದ ಬಗ್ಗೆ ಅಪರಿಮಿತ ಕನಸುಗಳಿರುವವರು, ಅನಕ್ಷರಸ್ಥರು, ಬಡತನದ ಬೇಗೆಯಲ್ಲಿರುವವರು, ಪ್ರೀತಿ–ಪ್ರೇಮಕ್ಕೆ ಸಿಲುಕಿದವರು, ಕೌಟುಂಬಿಕ ದೌರ್ಜನ್ಯಕ್ಕೆ ಒಳಗಾದವರು, ಮಾಧ್ಯಮದ ಪ್ರಭಾವಕ್ಕೆ ಒಳಗಾದವರು ಮುಂತಾದವರು, ಈ ಸಾಗಾಣಿಕೆಯ ಮದ್ಯವರ್ತಿಗಳಿಗೆ ಸುಲಭವಾಗಿ ದೊರೆಯುತ್ತಾರೆ. ಬೇರೆ ಬೇರೆ ಆಮಿಷಗಳಿಗೆ ಬಲಿಯಾಗಿ ಅಥವಾ ಬಲವಂತವಾಗಿ ಈ ಜಾಲದಲ್ಲಿ ಸಿಲುಕುತ್ತಾರೆ. ಈ ರೀತಿ ಸಾಗಾಣಿಕೆಯಾದವರನ್ನು ಮಾದಕ ವಸ್ತು ಮಾರಾಟ ಮತ್ತು ಸಾಗಾಣಿಕೆಯಲ್ಲಿ, ಮನೆ ಗೆಲಸ, ಪಬ್, ಬಾರ್, ಮಸಾಜ್, ಪಾರ್ಲರ್ ಮತ್ತು ಸೆಕ್ಸ್ ಟೂರಿಸಂಗಳಲ್ಲಿ ಹೀಗೆ ಬೇರೆ ಬೇರೆ ಹೆಸರುಗಳಲ್ಲಿ ಬಲವಂತವಾಗಿ ದುಡಿಸಿಕೊಳ್ಳಲಾಗುತ್ತದೆ. ಇಲ್ಲಿ ಲೈಂಗಿಕ ದಂಧೆಯೇ ಪ್ರಧಾನವಾಗಿರುತ್ತದೆ. 'ಗುಜ್ಜಾರ್' ಎಂಬ ಹೆಸರಿನ ವಧು ಮಾರಾಟವೆಂಬ ಕ್ರೂರ ವಿವಾಹ ಪದ್ಧತಿಯೂ ಸಹ ನಡೆಯುತ್ತಿದೆ. ಹೆತ್ತವರಿಗೆ ಇಂತಿಷ್ಟು ಹಣವನ್ನು ನೀಡಿ ಹೆಣ್ಣನ್ನು ವಿವಾಹ ಮಾಡಿಕೊಂಡು ಹೊರ ರಾಜ್ಯಗಳಲ್ಲಿ ಅಥವಾ ಕೊಲ್ಲಿ ರಾಷ್ಟ್ರಗಳಲ್ಲಿ ಮಾರಾಟ ಮಾಡುವ ದಂದೆ ಹುಟ್ಟಿಕೊಂಡಿದೆ. ಇದು ಯಾವುದೇ ತಕರಾರಿಲ್ಲದೆ ನೈತಿಕವಾದ ವಿವಾಹ ವ್ಯವಸ್ಥೆಯೊಳಗಿನಿಂದಲೇ ಅನೈತಿಕತೆಯತ್ತ ಸಾಗಾಣಿಕೆಯನ್ನು ಮಾಡುವುದೇ ಆಗಿದೆ ಎಂದರೆ ತಪ್ಪಿಲ್ಲ.

ಇಂದಿನ ಜಾಗತೀಕರಣದ ಮಾರುಕಟ್ಟೆ ಕೇಂದ್ರಿತ ಅಭಿವೃದ್ಧಿಯು ಹೆಣ್ಣಿನ ದೇಹವನ್ನು ಮಾಧ್ಯಮದ ಮೂಲಕ ಸರಕಾಗಿ ವಿಜೃಂಭಿಸುವ ಜೊತೆಗೆ ಲೈಂಗಿಕತೆಯನ್ನು ವಿಕೃತವಾಗಿ ಪ್ರಚೋದಿಸಲಾರಂಭಿಸಿದೆ. ಈ ಕಾರಣದಿಂದಾಗಿ ಈ ಜಾಲಕ್ಕೆ ತಳ್ಳುವವರ ಸಂಖ್ಯೆ ಮಿತಿ ಮೀರಿ ಹೆಚ್ಚುತ್ತಿದೆ. ಅಷ್ಟೇ ಅಲ್ಲದೇ ವೇಶ್ಯಾವಾಟಿಕೆಯನ್ನು ಕಾನೂನು ಬದ್ಧಗೊಳಿಸಬೇಕೆಂಬ ಅಭಿಪ್ರಾಯಗಳು ಕೇಳಿ ಬರುತ್ತಿವೆ. ಒಂದು ವೇಳೆ ಕಾನೂನು ಬದ್ಧಗೊಳಿಸಿದರೆ ವೇಶ್ಯಾ ಗೃಹಗಳು ಮತ್ತು ಮಧ್ಯವರ್ತಿಗಳಿಗೆ ಸರ್ಕಾರದಿಂದ ಮುಕ್ತ ಲೈಸನ್ಸ್ ದೊರೆತುಬಿಡುತ್ತದೆ. ಇದರಿಂದ ಈ ಕೂಪದೊಳಗೆ ಮೋಸದಿಂದ ಮತ್ತು ಅನೈತಿಕತೆಯಿಂದ ಮಹಿಳೆಯರನ್ನು ತಳ್ಳುವ ಮತ್ತು ಹೆಣ್ಣು ಮಕ್ಕಳ ಅಕ್ರಮ ಸಾಗಾಟದ ಸಾಧ್ಯತೆಗಳು ಹೆಚ್ಚಾಗುತ್ತವೆ.

ಅನೈತಿಕತೆ ಪದದ ಅರ್ಥ: ಅನೈತಿಕತೆಯು ಸಾಮಾಜಿಕ ನಂಬಿಕೆಯಾಗಿದೆ. ನೀತಿ ಅನೀತಿಯ ಕುರಿತ ನಂಬಿಕೆಗಳು ಬೇರೆ ಬೇರೆ ಸಮಾಜದಲ್ಲಿ ಬೇರೆ ಬೇರೆ ರೀತಿಯಲ್ಲಿ ಇರುತ್ತದೆ. ಯಾವುದನ್ನು ಒಂದು ಸಮಾಜವು ಒಪ್ಪಿಕೊಂಡಿರುತ್ತದೆಯೋ ಅದನ್ನು ನೀತಿಯೆಂದು, ಅದನ್ನು ಹೊರತು ಪಡಿಸಿದ್ದು ಅನೀತಿಯೆಂದು ಕರೆಯಲಾಗುತ್ತದೆ. ಯಾವುದೇ ನೀತಿ ನಿಯಾಮಾವಳಿಯನ್ನು

ನಿರಾಕರಿಸುವುದು ಅನೈತಿಕ ಎಂದು ಕರೆಯಿಸಲ್ಪಡುತ್ತದೆ. ನೈತಿಕತೆ ಎನ್ನುವುದು ಒಂದು ಪ್ರಜ್ಞಾ ಪೂರ್ವಕವಾದ ಹಾಗೂ ನಿಯಮ ಬದ್ಧವಾದ ಪ್ರತಿಕ್ರಿಯೆಯಾಗಿದೆ. ಸಾಮಾಜಿಕ ಒಳ್ಳೆಯತನವು ನೀತಿಯಾದರೆ ಸಾಮಾಜಿಕ ಕೆಡುಕು ಅನೈತಿಕವಾಗಿರುತ್ತದೆ. ಅನೈತಿಕ ಎನ್ನುವುದು ಇನ್ನೊಂದೆಡೆಯಿಂದ ಅಮಾನವೀಯತೆಯ ಮುಖವನ್ನು ಹೊಂದಿರುತ್ತದೆ. ಇದಕ್ಕೆ ಸಾಮಾಜಿಕತೆಯ ಬಗ್ಗೆ ಯಾವ ಗೌರವವೂ ಇಲ್ಲ. ಈ ನೀತಿ – ಅನೀತಿಯ ಪರಿಕಲ್ಪನೆಯನ್ನು ಹೇರುವುದು ಕೂಡ ಸಮಾಜ ಮತ್ತು ರಾಜಕೀಯ ನಿಲುವುಗಳು. ರಾಜಕಾರಣಕ್ಕೆ ನೀತಿ ಸಂಹಿತೆಗಳು ಮುಖ್ಯ. ಹಾಗೆಯೇ ಧಾರ್ಮಿಕ ಸಂಸ್ಥೆಗಳು ಸಹ ಮನುಷ್ಯರನ್ನು ಹದ್ದು ಬಸ್ತಿನಲ್ಲಿಡಲು ನೀತಿ–ನಿಯಮಾವಳಿಗಳನ್ನು ರಚಿಸುತ್ತದೆ. ಅಂದರೆ ಹೆಣ್ಣನ್ನು ಅವಳ ಇಚ್ಚೆಗೆ ವಿರುದ್ದವಾಗಿ ಅನುಮತಿಯಿಲ್ಲದೆ ಸಾಮಾಜಿಕ ನಿಯಮಗಳಿಗೆ ವಿರುದ್ಧವಾಗಿ ಕಾನೂನು ಬಾಹಿರ ಚಟುವಟಿಕೆಗಳಿಗೆ ಬಳಸಲು ಸಾಗಾಣಿಕೆ ಮಾಡಿ ಮಾರಾಟ ಮಾಡುವುದು ಅನೈತಿಕವಾಗುತ್ತದೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬವನ್ನು ನೈತಿಕ ಚೌಕಟ್ಟಿನ ನೆಲೆಯಲ್ಲಿ ರೂಪಿಸಿಕೊಳ್ಳಲಾಗಿದೆ. ಇಲ್ಲಿ ಮದುವೆಯು ಹೆಣ್ಣು ಗಂಡಿನ ನಡುವಿನ ಸಂಬಂಧವನ್ನು ಬೆಸೆಯುತ್ತದೆ. ಲೈಂಗಿಕತೆಯನ್ನು ಹಕ್ಕಾಗಿ ಸ್ವೀಕರಿಸಲಾಗುತ್ತದೆ. ಮಕ್ಕಳ ಹೇರುವುದಕ್ಕಾಗಿ, ಕುಟುಂಬದ ವಂಶವನ್ನು ಬೆಳೆಸುವುದಕ್ಕಾಗಿ ಕುಟುಂಬ ವ್ಯವಸ್ಥೆಯಲ್ಲಿ ಲೈಂಗಿಕತೆಗೆ ಪ್ರಧಾನ್ಯತೆ ಕೊಡಲಾಗಿದೆ. ಇದಕ್ಕೆ ಕಾನೂನಿನ ಸಮ್ಮತವನ್ನು ಅಂತರಾಷ್ಟ್ರೀಯ ಮಟ್ಟದಲ್ಲಿ ನೀಡಲಾಗಿದೆ. ಈ ಕಾನೂನಿನ ಉಲ್ಲಂಘನೆಯಾದರೆ ಅದನ್ನೇ ಕಾನೂನಿನ ಪರಿಭಾಷೆಯಲ್ಲಿ ಅನೈತಿಕತೆ ಎಂದು ಕರೆಯಲಾಗಿದೆ. ಈ ಅರ್ಥದಲ್ಲಿ ಸಾಮಾಜಿಕ, ಆರ್ಥಿಕ ರಾಜಕೀಯ ಮತ್ತು ಧಾರ್ಮಿಕ ಕಾರಣಗಳಿಂದ ಅನೈತಿಕ ದಾರಿಗೆ ಬೀಳುವ ಮುಗ್ಧ ಹೆಣ್ಣುಮಕ್ಕಳ ಕುರಿತು, ಜೊತೆಗೆ ಈ ಅನೈತಿಕತೆಯ ದಂದೆ ಅಥವಾ ಮಾರಾಟ ಜಾಲವನ್ನು ಕುರಿತು ಅಧ್ಯಯನ ಮಾಡುವಾಗ ನನ್ನ ಅಧ್ಯಯನ ವಿಷಯದ ಶೀರ್ಷಿಕೆ 'ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ: ಸ್ತ್ರೀವಾದಿ ಅಧ್ಯಯನ' ದಲ್ಲಿ **ಅನೈತಿಕ** ಪದವನ್ನು ಬಳಕೆ ಮಾಡಲಾಗಿದೆ.

### ೧.೧ ಅಧ್ಯಯನದ ಉದ್ದೇಶಗಳು

೧. ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಹೆಣ್ಣು ಒಂದು ಭೋಗದ ವಸ್ತು, ಮಾರಾಟ ಸಾಮಗ್ರಿಯಾಗಿ ಮತ್ತು ಬಂಡವಾಳದ ಸರಕಾಗಿ ಬಳಕೆಯಾಗುತ್ತಿರುವುದನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಗ್ರಹಿಸಲಾಗಿದೆ.

೨. ಅನೈತಿಕ ಚಟುವಟಿಕೆಗಳಿಗೆ ಮಹಿಳಾ ಬದುಕನ್ನು ಬಲಿಪಶು ಮಾಡುತ್ತಿರುವ ಧಾರ್ಮಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಆಯಾಮಗಳನ್ನು ಶೋಧಿಸಲಾಗಿದೆ.

೩. ವಿವಾಹದ ಏಜೆನ್ಸಿಯಂತೆ, ವರರಂತೆ ನಟಿಸಿ ಮೋಸ ಮಾಡುವುದನ್ನು ಬಯಲಿಗೆಳೆಯಲಾಗಿದೆ.

೪. ರಾಜಕಾರಣ ಮತ್ತು ಕಾನೂನು ವ್ಯವಸ್ಥೆಯ ಮನೋಧರ್ಮವನ್ನು ನಿರೂಪಿಸುವ ಚರ್ಚೆಯನ್ನು ಮಾಡಲಾಗಿದೆ.

೫. ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯನ್ನು ತಡೆಗಟ್ಟುವಲ್ಲಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಪಾತ್ರವನ್ನು ವಿಶ್ಲೇಷಿಸಲಾಗಿದೆ.

೬. ಅನೈತಿಕ ಸಾಗಾಣಿಕೆಯ ಕೃತ್ಯಕ್ಕೆ ಬಲಿಯಾದ ಹೆಣ್ಣು ಮಕ್ಕಳ ಸ್ಥಿತಿಗತಿಯನ್ನು ಸಮಸ್ಯೆಯ ನೈಜತೆಯನ್ನು ಆಧರಿಸಿ ಗ್ರಹಿಸಲಾಗಿದೆ.

೭. ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಸಮಸ್ಯೆ ನಿವಾರಣೆಗೆ ಸಂಬಂಧಿಸಿದಂತೆ ಪರಿಹಾರೋಪಾಯಗಳನ್ನು ಕಂಡುಹಿಡಿಯಲು ಪ್ರಯತ್ನಿಸಲಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ

ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯು ವಿಶ್ವವ್ಯಾಪಿಯಾಗಿದೆ. ಪ್ರಸ್ತುತ ಅಧ್ಯಯನವನ್ನು ಕರ್ನಾಟಕ ರಾಜ್ಯದ ಮೂರು ಜಿಲ್ಲೆಗಳಲ್ಲಿ ಕೈಗೊಳ್ಳಲು ಉದ್ದೇಶಿಸಲಾಗಿ ವ್ಯಾಪ್ತಿಯನ್ನು ಗುರುತಿಸಿಕೊಳ್ಳಲಾಗಿದೆ. ಅಧ್ಯಯನದ ಕ್ಷೇತ್ರಕಾರ್ಯಕ್ಕಾಗಿ ಮೈಸೂರು, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳ ವ್ಯಾಪ್ತಿಯನ್ನು ಬಳಸಿಕೊಳ್ಳಲಾಗಿದೆ.

## ೧.೩ ಅಧ್ಯಯನದ ವೈಧಾನಿಕತೆ

ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಸಮಸ್ಯೆಯನ್ನು ಸ್ತ್ರೀವಾದಿ ಚೌಕಟ್ಟಿನಲ್ಲಿ ಅಧ್ಯಯನ ಮಾಡಲಾಗಿದೆ. ಮುಖ್ಯವಾಗಿ ಕ್ಷೇತ್ರಕಾರ್ಯ ಆಧಾರಿತ ಅಧ್ಯಯನವಾಗಿರುವುದರಿಂದ ಕ್ಷೇತ್ರಕಾರ್ಯದಲ್ಲಿ ದೊರೆಯುವ ಮಾಹಿತಿಗಳ ಆಧಾರದಡಿಯಲ್ಲಿಯೇ ಪ್ರಸ್ತುತ ಅಧ್ಯಯನದ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಯಾವುದೇ ಅಧ್ಯಯನ ವಿಧಾನಗಳು ಮಹಿಳಾ ವಿಷಯಗಳನ್ನು ಕೇವಲ ಆಂಶಿಕವಾಗಿ ನೋಡಿ ಅಧ್ಯಯನದ ಉದ್ದೇಶಕ್ಕೆ ತಕ್ಕಂತೆ ಪರಿಭಾವಿಸಿದ್ದೇ ಆದರೆ ಹೆಣ್ಣಿನ ಜೀವನಕ್ಕೆ ಸಂಬಂಧಿಸಿದ ಸೂಕ್ಷ್ಮ ಸಂಗತಿಗಳು ಬಿಟ್ಟು ಹೋಗುವ ಸಾಧ್ಯತೆಗಳಿವೆ. ಹಾಗಾಗಿ ಹೆಣ್ಣಿನ ಬದುಕಿನ ವಿವಿಧ ಆಯಾಮಗಳನ್ನು ಸೂಕ್ಷ್ಮವಾಗಿ ಗ್ರಹಿಸಲು ಅವಳ ಖಾಸಗಿ ಬದುಕಿನ ವಿವರಗಳಿಗೆ ಹೋಗುವ ಅಗತ್ಯವಿದೆ. ಅವಳ ಬದುಕು ಕಂಡ ನೋವು ನಲಿವು, ಸವಾಲುಗಳನ್ನು ತಿಳಿಯುವುದು ಅವಶ್ಯಕವಾಗಿದೆ. ಆದ್ದರಿಂದ ವಿಶೇಷವಾಗಿ ಪ್ರಕರಣ ಅಧ್ಯಯನವನ್ನು ಸಂಶೋಧನಾ ವಿಧಾನದ ಭಾಗವಾಗಿ ಅವಲಂಬಿಸಲಾಗಿದೆ. ಜೀವನದ ಅನುಭವಗಳು ಮಾತಾದಾಗ ಸಂದರ್ಭ ಹಾಗೂ ಘಟನೆಗಳು ಹೆಚ್ಚು ನಿಖರತೆಯನ್ನು ಪಡೆಯುವುದು ಮತ್ತು ಅಧ್ಯಯನದ ಹಾದಿ ಸರಾಗವಾಗಲು ಸಹಾಯಕವಾಗುತ್ತದೆ. ಸಂದರ್ಶಿಸಿದ ವ್ಯಕ್ತಿಯ ಅನುಭವಗಳನ್ನು ಅವರದೇ ಆದ ಮಾತುಗಳಲ್ಲಿ ದಾಖಲಿಸಲಾಗಿದೆ. ಈ ಮೇಲಿನ ಅಂಶಗಳ ಮೂಲಕ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆ ವ್ಯವಸ್ಥೆಯ ಮತ್ತು ಅದರ ಪರಿಣಾಮದ ಸಂಕೀರ್ಣ ಸ್ವರೂಪವನ್ನು ಅಧ್ಯಯಿಸಲು ಪ್ರಯತ್ನಿಸಲಾಗಿದೆ.

## ಅಧ್ಯಯನದ ಪರಿಕ್ರಮ

ಪ್ರಸ್ತುತ ಅಧ್ಯಯನಕ್ಕೆ ವಕ್ತೃಗಳ ಸಂದರ್ಶನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಈಗಾಗಲೇ ಪ್ರಕಟವಾಗಿರುವ ಲೇಖನಗಳು, ವರದಿಗಳು, ಪುಸ್ತಕಗಳು, ಪತ್ರಿಕೆಗಳು, ವಿಶ್ವಕೋಶಗಳು, ನಿಘಂಟು ಮುಂತಾದ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಒಟ್ಟು ಅಧ್ಯಯನದಲ್ಲಿ ಲಿಖಿತ–ಅಲಿಖಿತ, ಪ್ರಕಟಿತ–ಅಪ್ರಕಟಿತ, ಪ್ರಾಥಮಿಕ ಮತ್ತು ಅನುಷಂಗಿಕ ಮಾಹಿತಿಗಳನ್ನು ಬಳಸಿಕೊಳ್ಳುವುದರ ಜೊತೆಗೆ ಸ್ತ್ರೀವಾದಿ ಸಂಶೋಧನಾ ವಿಧಾನವನ್ನು ಅನ್ವಯಿಸಲಾಗಿದೆ. ಮುಖ್ಯವಾಗಿ ವಸ್ತುನಿಷ್ಠ ಹಾಗೂ ವ್ಯಕ್ತಿ ನಿಷ್ಠ ವಿವರಣೆ, ಸಂದರ್ಶನ ಕೈಪಿಡಿ, ಸಂದರ್ಶನ ವಿಧಾನ , ಮುಖ್ಯವಾಗಿ ಪ್ರಕರಣ ಅಧ್ಯಯನ ಮತ್ತು ಅವಲೋಕನ ವಿಧಾನವನ್ನು ಅಳವಡಿಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

## ೧.೪ ಅಧ್ಯಯನದ ಮಹತ್ವ

ಭಾರತೀಯ ಸಮಾಜದಲ್ಲಿ ಸುಮಾರು ೬೦–೭೦ರ ದಶಕದಲ್ಲಿ ಕಾಣಿಸಿಕೊಂಡ ಸ್ತ್ರೀವಾದವು ಹಲವಾರು ಮಹಿಳಾ ಪರ ಆಲೋಚನೆಗಳನ್ನು ಒಳಗೊಂಡ ಒಂದು ಚಿಂತನೆಯಾಗಿದೆ. ಆಯಾ ಸಂದರ್ಭದ ಮಹಿಳಾ ಶೋಷಣೆ, ಮಹಿಳಾ ಸಮಸ್ಯೆಗಳ ವಿರುದ್ಧ ತನ್ನ ಧ್ವನಿ ಎತ್ತುತ್ತಾ ಮಹಿಳಾ ಅಸ್ತಿತ್ವದ ನೆಲೆಗಳನ್ನು ಹುಡುಕುತ್ತಲೇ ಬರುತ್ತಿದೆ. ಇದೇ ನಿಟ್ಟಿನಲ್ಲಿ ಪ್ರಸ್ತುತ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಸಮಸ್ಯೆಯ ಕುರಿತು ಸ್ತ್ರೀವಾದಿ ನೆಲೆಯಲ್ಲಿ ಅಧ್ಯಯನ ನಡೆಸುವುದು ಮಹತ್ತರವಾದ ವಿಷಯವಾಗಿದೆ.

ನಮ್ಮ ಭಾರತೀಯ ಪುರುಷ ಪ್ರಧಾನ ಸಾಂಪ್ರದಾಯಿಕ ಚಿಂತನೆಗಳಿಂದ ಕೂಡಿದ ಸಾಮಾಜಿಕತೆಯಲ್ಲಿ ಹೆಣ್ಣು ಆಧುನಿಕತೆಗೆ ಎಷ್ಟೇ ಮುಖಾಮುಖಿಯಾಗುತ್ತಿದ್ದರೂ ಸಹ ಅವಳನ್ನು ಎರಡನೆಯ ದರ್ಜೆಯ ಪ್ರಜೆಯಾಗಿಯೇ ಗುರುತಿಸಲಾಗುತ್ತಿದೆ. ಜೊತೆಗೆ ಅವಳು ಭೋಗದ ವಸ್ತು ಎಂದು ಪರಿಗಣಿಸಿರುವ ಪುರುಷ ಪ್ರಧಾನ ಮತ್ತು ಬಂಡವಾಳಶಾಹಿ ಚಿಂತನೆಗಳು ಅವಳನ್ನು ಅರೆಬೆತ್ತಲೆಗೆ ತಂದು ನಿಲ್ಲಿಸಿವೆ. ಪ್ರಾಣಿಗಳ ಹಾಗೇ ಮಾರಾಟದ ವಸ್ತುವಾಗಿ ಪರಿಗಣಿಸಿವೆ. ಅವಳನ್ನು ಅನೈತಿಕ ವ್ಯವಹಾರಗಳಿಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಾಣಿಕೆ ಮಾಡುತ್ತಾ ಅದನ್ನು ಒಂದು ವ್ಯಾಪಾರಿ ದೃಷ್ಟಿಕೋನದ ಉದ್ಯೋಗವಾಗಿ ಪರಿವರ್ತಿಸಿವೆ. ಹೀಗಾಗಿ ಎಲ್ಲ ಮಹಿಳೆಗೆ ಸಮಸ್ಯೆಗಳು, ಶೋಷಣೆಗಳು, ಇವೆಯೋ ಅಲ್ಲಿ ಸ್ತ್ರೀವಾದ ಮತ್ತು ಸ್ತ್ರೀವಾದಿ ಚಿಂತನೆಗಳು ಮಹತ್ವದ ಪಾತ್ರ ವಹಿಸಬೇಕಾಗಿರುವುದರಿಂದ ಈ ಅಧ್ಯಯನವು ತನ್ನದೇ ಆದ ಮಹತ್ವವನ್ನು ಹೊಂದಿದೆ.

## ೧.೫ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನದಲ್ಲಿ **'ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆ: ಸ್ತ್ರೀವಾದಿ ಅಧ್ಯಯನ' (ಮೈಸೂರು, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯಲ್ಲಿ ಈ ಮಹಾಪ್ರಬಂಧದ ಅಧ್ಯಯನದ ಅನುಕೂಲಕ್ಕಾಗಿ ಎಂಟು ಅಧ್ಯಾಯಗಳನ್ನು ಒಳಗೊಂಡಿದೆ. ಈ ಎಂಟು ಅಧ್ಯಾಯಗಳು ಈ ಕೆಳಗಿನಂತಿವೆ.

ಮೊದಲನೆ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ, ಅಧ್ಯಯನದ ಮಹತ್ವ, ಅಧ್ಯಯನದ ವೈಧಾನಿಕತೆ ಮತ್ತು ಅಧ್ಯಯನದ ಸ್ವರೂಪವನ್ನು ಒಳಗೊಂಡಿದೆ.

ಎರಡನೇ ಅಧ್ಯಾಯದಲ್ಲಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಾಹಿತ್ಯ ಸಮೀಕ್ಷೆಯನ್ನು ಒಳಗೊಂಡಿದೆ.

ಮೂರನೇ ಅಧ್ಯಾಯವು ಹೆಣ್ಣಿನ ದೇಹ, ಲೈಂಗಿಕತೆ ಮತ್ತು ಪುರುಷಾಧಿಕಾರ ಎಂಬ ಶೀರ್ಷಿಕೆಯನ್ನು ಹೊಂದಿದ್ದು ಇಲ್ಲಿ ಹೆಣ್ಣಿನ ದೇಹದ ಮೇಲೆ ನಡೆಯುತ್ತಿರುವ ಸಾಂಸ್ಕೃತಿಕ ಯಾಜಮಾನ್ಯ, ಹೆಣ್ಣಿನ ದೇಹ ಮತ್ತು ಲಿಂಗತಾರತಮ್ಯ, ಹೆಣ್ಣು ದೇಹದ ಮೇಲಿನ ಧಾರ್ಮಿಕ ನಿರ್ಬಂಧ, ಹೆಣ್ಣು ದೇಹದ ಮೇಲಿನ ಸಾಮಾಜಿಕ ನಿಷೇಧ, ಹೆಣ್ಣು ಮತ್ತು ಮಾರುಕಟ್ಟೆ, ಹೆಣ್ಣು ದೇಹ ಮತ್ತು ಮಾಧ್ಯಮ, ಹೆಣ್ಣು ದೇಹ ಮತ್ತು ತಂತ್ರಜ್ಞಾನ, ಹೆಣ್ಣಿನ ಲೈಂಗಿಕತೆ ಮತ್ತು ಪುರುಷಾಧಿಕಾರದ ಕುರಿತು ಚರ್ಚಿಸಲಾಗಿದೆ ಮತ್ತು ಮನುಸ್ಮೃತಿಯಲ್ಲಿ ಹೆಣ್ಣಿನ ಲೈಂಗಿಕತೆ ಮತ್ತು ಅಸ್ತಿತ್ವದ ನಿರಾಕರಣೆಯ ವಿಷಯಗಳ ಕುರಿತು ಸ್ತ್ರೀವಾದಿ ಸಂಶೋಧನಾ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯ ಇತಿಹಾಸವನ್ನು ಚರ್ಚಿಸಲಾಗಿದ್ದು, ಅನೈತಿಕ ಸಾಗಾಣಿಕೆಯ ಉದ್ದೇಶ, ಬೇಡಿಕೆ ಮತ್ತು ಪೂರೈಕೆ, ಲಿಂಗ ಆಧಾರಿತ ದುರ್ಬಲತೆಗಳು, ಅನೈತಿಕ ಸಾಗಾಣಿಕೆದಾರ ನಡುವಿನ ಸಂಬಂಧ, ವೇಶ್ಯಾವಾಟಿಕೆಗಾಗಿ ಅನೈತಿಕ ಸಾಗಾಣಿಕೆ,ಲೈಂಗಿಕತೆಗಾಗಿ ಅನೈತಿಕ ಸಾಗಾಣಿಕೆ, ಭಾರತದಲ್ಲಿ ಪ್ರಸ್ತುತ ಅನೈತಿಕ ಸಾಗಾಣಿಕೆ, ಅನೈತಿಕ ಸಾಗಾಣಿಕೆಗೆ ಬಲಿಯಾದವರು, ಅನೈತಿಕ ಸಾಗಾಣಿಕೆ ಮತ್ತು ವಾಣಿಜ್ಯ ಲೈಂಗಿಕ ಶೋಷಣೆಯ ವ್ಯಾಪ್ತಿ ಮತ್ತು ಪ್ರಮಾಣಗಳನ್ನು ಚರ್ಚಿಸಲಾಗಿದೆ.

ಐದನೇ ಅಧ್ಯಾಯವು ಮಾನವ ಕಳ್ಳಸಾಗಾಣಿಕೆಯ ರಾಷ್ಟ್ರೀಯ ಕಾನೂನಿನ ಆಯಾಮವನ್ನು ಹೊಂದಿದೆ. ಮಾನವ ಕಳ್ಳಸಾಗಣೆಯ ವಿಸ್ತಾರ, ರಾಷ್ಟ್ರೀಯ ಅಂದಾಜು, ಮಾನವ ಕಳ್ಳಸಾಗಣೆಗೆ ಸಂಬಂಧಿಸಿದ ಕಾನೂನು ಚೌಕಟ್ಟು, ಅನೈತಿಕ ಸಾಗಣೆ ಕಾಯ್ದೆ ೧೯೫೬, ಅನೈತಿಕ ಸಾಗಣೆ (ತಡೆಯುವಿಕೆ) ಕಾಯ್ದೆ ೧೯೫೬ರ ಸಾಂವಿಧಾನಿಕ ಸಿಂಧುತ್ವ , ಅನೈತಿಕ ಸಾಗಣೆ ಕಾಯ್ದೆ ೧೯೫೬ರ ವಿಮರ್ಶೆ, ಒಡಂಬಡಿಕೆಗಳು, ಕಾರ್ಯಕ್ರಮಗಳು ಮತ್ತು ಯೋಜನೆಗಳು, ಸುತ್ತೋಲೆಗಳು, ಸರ್ಕಾರೇತರ ಸಂಸ್ಥೆಗಳು (ಎನ್.ಜಿ.ಓ) ಪಾತ್ರಗಳನ್ನು ಅಧ್ಯಯನ ಮಾಡಲಾಗಿದೆ.

ಆರನೇ ಅಧ್ಯಾಯವು ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯ ವಸ್ತು ಸ್ಥಿತಿಯ ವಿಶ್ಲೇಷಣೆಯನ್ನು ಒಳಗೊಂಡಿದ್ದು ಕ್ಷೇತ್ರಕಾರ್ಯದ ಸಂಧರ್ಭದಲ್ಲಿ ದೊರೆತ ಪ್ರಕರಣ ಅಧ್ಯಯನಗಳನ್ನು ಪರಿಮಾಣಾತ್ಮಕ ವಿಧಾನ ಮತ್ತು ವಿಶ್ಲೇಷಣಾ ವಿಧಾನವನ್ನು ಬಳಸುವ ಮೂಲಕ ಅನೈತಿಕ ಸಾಗಾಣಿಕೆಗೆ ಒಳಗಾದ ಹೆಣ್ಣುಮಕ್ಕಳ ನಿಜ ಸ್ಥಿತಿಯನ್ನು ತಿಳಿಯಲು ಪ್ರಯತ್ನಿಸಲಾಗಿದೆ.

ಏಳನೇ ಅಧ್ಯಾಯವು ಆಯ್ದ ಪ್ರಕರಣಗಳ ಅಧ್ಯಯನ ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಮೈಸೂರು ಜಿಲ್ಲೆಯ ಪ್ರಕರಣಗಳು, ಬೆಂಗಳೂರು ನಗರ ಜಿಲ್ಲೆಯ ಪ್ರಕರಣಗಳು ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಕರಣಗಳನ್ನು ವಕ್ತೃಗಳ ಮಾತುಗಳಲ್ಲಿಯೇ ನಿರೂಪಣೆ ಮಾಡಿ ನೀಡಲಾಗಿದೆ.

ಎಂಟನೇ ಅಧ್ಯಾಯವು ಕೊನೆಯ ಅಧ್ಯಾಯವಾಗಿದ್ದು ಅಧ್ಯಯನದ ಸಮಾರೋಪವಾಗಿದ್ದು, ಇದರಲ್ಲಿ ಪ್ರಸ್ತುತ ಅಧ್ಯಯನದ ಫಲಿತಗಳು, ಅಧ್ಯಯನದ ಮಿತಿಗಳು, ಅಧ್ಯಯನದ ಸವಾಲುಗಳು ಮತ್ತು ಕೆಲವು ಶಿಫಾರಸ್ಸುಗಳು ನೀಡಲಾಗಿದೆ. ಇದರೊಂದಿಗೆ ಅಧ್ಯಯನಕ್ಕೆ ಪೂರಕವಾಗಿರುವ ಗ್ರಂಥಋಣವನ್ನು ಒದಗಿಸಲಾಗಿದೆ.

**ಕರ್ನಾಟಕದ ಸ್ಥಳಾಕೃತಿ :**

ಭಾರತದ ಐದು ಪ್ರಮುಖ ದಕ್ಷಿಣಾತ್ಯ ರಾಜ್ಯಗಳಲ್ಲಿ ಕರ್ನಾಟಕವು ಅತಿ ದೊಡ್ಡ ರಾಜ್ಯ ಹಾಗೂ ಆರನೇ ದೊಡ್ಡ ರಾಜ್ಯವಾಗಿದೆ. ಕರ್ನಾಟಕ ರಾಜ್ಯದ ಸಮುದ್ರ ಮಟ್ಟ ಸರಾಸರಿ ಎತ್ತರ ೧೫೦೦ ಅಡಿ ಇದ್ದು ಇದು ಭಾರತದಲ್ಲಿ ಅತಿ ಹೆಚ್ಚು ಎತ್ತರವುಳ್ಳ ರಾಜ್ಯಗಳಲ್ಲಿ ಒಂದು.

ವಾಯುವ್ಯದಲ್ಲಿ ಗೋವಾದಿಂದ, ಉತ್ತರದಲ್ಲಿ ಮಹಾರಾಷ್ಟ್ರದಿಂದ, ಪೂರ್ವದಲ್ಲಿ ತೆಲಂಗಾಣ ಮತ್ತು ಆಂದ್ರಪ್ರದೇಶ, ಆಗ್ನೇಯದಲ್ಲಿ ತಮಿಳುನಾಡಿನಿಂದ, ನೈಋತ್ಯದಲ್ಲಿ ಕೇರಳದಿಂದ ಸುತ್ತುವರಿಯಲ್ಪಟ್ಟಿದೆ ಇದರ ಒಟ್ಟು ವಿಸ್ತೀರ್ಣ ೧೯೧೭೯೧ ಚದರ ಕಿಲೋಮೀಟರ್ ಜನಸಂಖ್ಯೆಯ ಸೃಷ್ಟಿಯಿಂದ ಇದು ಭಾರತದ ಒಂಬತ್ತನೇ ದೊಡ್ಡ ರಾಜ್ಯವಾಗಿದೆ ಭವ್ಯವಾದ ನೈಸರ್ಗಿಕ ಸಂಪನ್ಮೂಲಗಳು ಮತ್ತು ಎತ್ತರವಾದ ಪರ್ವತಗಳು, ಕರಾವಳಿ ಬಯಲು ಪ್ರದೇಶಗಳು ಇದೆ. ಕರ್ನಾಟಕ ಅನೇಕ ಅಭಯಾರಣ್ಯಗಳ ತವರು ಮತ್ತು ಪ್ರಸ್ಥಭೂಮಿಯಂತಹ ಸೌಂದರ್ಯದಿಂದ ಆವರಿಸಿದೆ ಕರ್ನಾಟಕವು ಅಭಿವೃದ್ಧಿಗೊಂಡಿದೆ ರಾಜ್ಯಗಳಲ್ಲಿ ಒಂದು ಎಂದು ಪರಿಗಣಿಸಲಾಗಿದೆ ಇದು ದಕ್ಷಿಣ ಭಾರತದ ಪ್ರಮುಖ ರಾಜ್ಯಗಳಲ್ಲಿ ಒಂದಾಗಿದ್ದು ೩೦ ಜಿಲ್ಲೆಗಳನ್ನು ಒಳಗೊಂಡಿದೆ.

**ಕರ್ನಾಟಕದ ಜನಸಂಖ್ಯೆ :**

೨೦೧೧ರ ಜನಗಣತಿ ಪ್ರಕಾರ, ಕರ್ನಾಟಕದ ಜನಸಂಖ್ಯೆಯು ೬೧೦೯೫೨೯೭ ಆಗಿದೆ ಇದರಲ್ಲಿ ಪುರುಷರ ಸಂಖ್ಯೆ ೩೦೯೬೬೬೫೭ (೫೦.೮೦%) ಸ್ತ್ರೀಯರ ಸಂಖ್ಯೆ ೩೦೧೨೮೬೪೦ (೪೯.೧೯%) ಅಂದರೆ ಪ್ರತಿ ೧೦೦೦ ಪುರುಷರಿಗೆ ೯೬೮ ಸ್ತ್ರೀಯರು. ೨೦೧೯ರಲ್ಲಿ ಕರ್ನಾಟಕದ ಒಟ್ಟು ಜನಸಂಖ್ಯೆ ೬೯,೩೭೧,೫೬೭ ಆಗಿದೆ. ೨೦೧೧–೨೦೧೯ರ ವರೆಗೆ ಸುಮಾರು ೮.೨ ಮಿಲಿಯನ್ ಜನರು ಸೇರ್ಪಡೆಯಾಗಿದ್ದಾರೆ ಪ್ರತಿ ವರ್ಷವು ತನ್ನ ಬೆಳೆಯುತ್ತಿರುವ ಜನಸಂಖ್ಯೆಗೆ ಸುಮಾರು/ ಮಿಲಿಯನ್ ಜನರನ್ನು ಸೇರಿಸುತ್ತಿರುವುದು. (India online pages.com Karnataka population 2019/20/12/2019)

೨೦೧೧ರ ಜನಗಣತಿಯ ವರದಿ ಪ್ರಕಾರ ಕರ್ನಾಟಕದಲ್ಲಿ ಸಾಕ್ಷರತಾ ಪ್ರಮಾಣ ೭೫.೬% ರಷ್ಟಿದೆ. ಇದರಲ್ಲಿ ಪುರುಷರ ಸಾಕ್ಷರತೆಯು ೮೨.೮೫% ಮತ್ತು ಸ್ತ್ರೀಯರ ಸಾಕ್ಷರತೆಯು ೬೮.೧೩% ರಷ್ಟಿದೆ. ಜನಸಂಖ್ಯೆಯ ೮೩%% ಹಿಂದೂಗಳು, ೧೧% ಮುಸಲ್ಮಾನರು, ೪% ಕ್ರೈಸ್ತರು, ೦.೭೮% ಜೈನರು, ೦.೭೩% ಬೌದ್ಧರು ಮತ್ತು ಉಳಿದವರು ಅನ್ಯ ಧರ್ಮದವರು.

**ಅಧ್ಯಯನ ಕ್ಷೇತ್ರಗಳ ಸ್ಥಳಾಕೃತಿ :**

ಬೆಂಗಳೂರು ಕರ್ನಾಟಕದ ರಾಜಧಾನಿ, ನಾಡಪ್ರಭು ಕೆಂಪೇಗೌಡರಿಂದ ಕಟ್ಟಿಸಲ್ಪಟ್ಟ ಬೆಂಗಳೂರು ನಗರ, ಹೈದರಾಲಿ, ಟಿಪ್ಪು, ಮೈಸೂರು ರಾಜರಾದಿಯಾಗಿ ಅನೇಕರಿಂದ ಆಳಲ್ಪಟ್ಟಿದೆ. ಬೆಂಗಳೂರು ನಗರ ಇಂದು ಅತ್ಯಂತ ವೇಗವಾಗಿ ಬೆಳೆಯುತ್ತಿರುವ ದೊಡ್ಡನಗರ ಮತ್ತು ಭಾರತದಲ್ಲಿ ಅಷ್ಟೇ ಅಲ್ಲ ಇಡೀ ವಿಶ್ವದಲ್ಲಿಯೇ ಒಂದು ಪ್ರಮುಖ ನಗರವಾಗಿದೆ. ಇಂದಿನ ಕೈಗಾರೀಕರಣ ಸಮಯದಲ್ಲಿ ನಿಲಿಕಾನ್ ಸಿಟಿ ಎಂದು ಗುರುತಿಸಲ್ಪಡುವ ಬೆಂಗಳೂರು ಭಾರತದ ನಗರಗಳಾದ ಮುಂಬೈ, ದೆಹಲಿ, ಕೊಲ್ಕತ್ತಾ, ಹಾಗೂ ಚೆನ್ನೈ ನಂತರದ ಅತಿದೊಡ್ಡ ನಗರವಾಗಿದೆ. ಇದು ಬಹು ಭಾಷೆ, ಬಹು ಜನಾಂಗ ಮತ್ತು ವೈವಿಧ್ಯಮಯ ಸಂಸ್ಕೃತಿಯನ್ನು ಜನರನ್ನು ಒಳಗೊಂಡತಹ ನಗರವಾಗಿದ್ದು, ಮಿನಿ ಇಂಡಿಯಾ ಎಂದೇ ಹೆಸರಿದೆ. ಇಂದು ಬೆಂಗಳೂರು ಬೃಹತ್ತಾಗಿ ಬೆಳೆದಿರುವ ಕಾರಣ ಇದನ್ನು ಬೆಂಗಳೂರು ನಗರ ಜಿಲ್ಲೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಾಗಿ ವಿಂಗಡಿಸಲಾಗಿದೆ.

ಬೆಂಗಳೂರು ನಗರವು ಇಂದು ಏಷ್ಯದಲ್ಲಿಯೇ ಅತಿ ಹೆಚ್ಚು ವೇಗವಾಗಿ ಬೆಳೆಯುತ್ತಿರುವ ನಗರವಾಗಿದ್ದು ೨೦೧೧ರ ಜನಗಣತಿಯಂತೆ ೯೬೨೧೫೫೧ ಜನ ಸಂಖ್ಯೆಯನ್ನು ಹೊಂದಿದೆ. ಈ ಜನಸಂಖ್ಯೆಯಲ್ಲಿ ೫೦೨೨೬೬೧ ಪುರುಷರಿದ್ದಾರೆ, ೪೫೯೮೮೯೦ ಮಹಿಳೆಯರಿದ್ದಾರೆ. ಅಂದರೆ ಪ್ರತಿ ೧೦೦೦ ಪುರುಷರಿಗೆ ೯೦೮ ಮಾತ್ರ ಮಹಿಳೆಯರಿದ್ದಾರೆ. ಎಲೆಕ್ಟ್ರಾನಿಕ್ ಉದ್ಯಾನ ನಗರವಾಗಿ ಇಂದು ಸುಂದರವಾಗಿ ಅಲಂಕರಿಸಿದ ಲಾನ್‌ಗಳ ಮತ್ತು ನಯವಾದ ಕಛೇರಿ ಸಂಕೀರ್ಣಗಳನ್ನು ಹೊಂದಿದ್ದು. ಸಾಫ್ಟವೇರ್ ಸೇವೆಯ ಬೃಹತ್ ಸಂಸ್ಥೆಗಳಿಂದ ಇನ್‌ಫೋಸಿಸ್ ಮತ್ತು ವಿಪ್ರೋ, ಸೇರಿದಂತೆ ಹಲವಾರು ಭಾರತದ ಕಂಪನಿಗಳಿಗೆ ಕೇಂದ್ರವಾಗಿದೆ. ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಇದಕ್ಕೆ ಮತ್ತೊಂದು ಹಿರಿಮೆಯಾಗಿದೆ. "ಬೆಂಗಳೂರು ಸುಂದರ ನಗರ, ಬೆಂಗಳೂರು ಅವಕಾಶಗಳ ನಗರ, ಹಲವಾರು ವರ್ಷಗಳಿಂದ ಬೆಂಗಳೂರು ನಗರ ಲಕ್ಷಾಂತರ ಜನರನ್ನು ಆಕರ್ಷಿಸುತ್ತಿದೆ ಜೊತೆ ಜೊತೆಯಾಗಿ ಸಾವಿರಾರು ಸಾಮಾಜಿಕ ಸಮಸ್ಯೆಗಳನ್ನು ಬೆಳೆಸಿಕೊಂಡು ಬಂದಿದೆ. ನಗರಗಳತ್ತ ಜನರ ವಲಸೆ, ನಗರೀಕರಣ, ಜನ ತಮ್ಮ ಮೂಲ ನಿವಾಸಗಳಿಂದ ದೂರದಲ್ಲಿ ಒಂಟಿಯಾಗಿದ್ದುಕೊಂಡು ಜೀವಿಸುವ ಸಮಸ್ಯೆಗಳು, ಹಣಕಾಸಿನ ಓಡಾಟ, ವಿಕೃತ ಕಾಮನೆಗಳು, ಮೂಡನಂಬಿಕೆಗಳು, ವಿವಾಹ ಸಂಬಂಧದ ಹೊರಗೆ ನಡೆಯುವ ಲೈಂಗಿಕ ಚಟುವಟಿಕೆ, ಇವೆ ಮೊದಲಾದವುಗಳಿಗೆ ಮತ್ತು ಕಾನೂನು ಬಾಹಿರ ಲೈಂಗಿಕ ಚಟುವಟಿಕೆಗಳಿಗೆ ಪರಿಸ್ಪರ ಹತ್ತಿರದ ಸಂಬಂಧವಿದೆ". (ಬೆಂಗಳೂರು ದರ್ಶನ ಸಂಪುಟ–೧, ಪ್ರಧಾನ ಸಂಪಾದಕರು ಎಸ್.ಎಸ್.ಶೇಷಗಿರಿರಾವ್, ಉದಯಭಾನು ಕಲಾಸಂಘ)

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜನಸಂಖ್ಯೆ ೯೯೦೯೨೨೩ ಇದ್ದಾರೆ ಇದರಲ್ಲಿ ೫೦೯೧೭೨ ಪುರುಷರು ಮತ್ತು ೪೮೧೭೫೧ ಮಹಿಳೆಯರಿದ್ದಾರೆ. ಅಂದರೆ ಪ್ರತಿ ೧೦೦೦ ಪುರುಷರಿಗೆ ೯೪೫

ಮಹಿಳೆಯರಿದ್ದಾರೆ. ಮೈಸೂರು ಜಿಲ್ಲೆಯ ಒಟ್ಟು ಜನಸಂಖ್ಯೆ ೩೦೦೧೧೨೭, ಇದರಲ್ಲಿ ೧೫೧೧೬೦೦ ಪುರುಷರು ಮತ್ತು ೧೪೮೯೫೨೭ ಮಹಿಳೆಯರಿದ್ದಾರೆ. ಪ್ರತಿ ೧೦೦೦ ಪುರುಷರಿಗೆ ೯೮೨ ಮಹಿಳೆಯರಿದ್ದಾರೆ.

ವ್ಯಕ್ತಿಯೊಬ್ಬರು ಲೈಂಗಿಕ ಚಟುವಟಿಕೆಗಳಿಗಾಗಿ ಮೈಮಾರುವ ಉದ್ದೇಶದಿಂದ ಸಾರ್ವನಿಕವಾಗಿ ವ್ಯವಹಾರ ಕುದುರಿಸುತ್ತಿದ್ದರೆ ಅದನ್ನು ಸಾಮಾಜಿಕ ಅಪರಾಧ ಎಂದು ಗುರುತಿಸುವ ವಾಡಿಕೆ. ಅದೇ ರೀತಿಯಲ್ಲಿ ಸಾರ್ವಜನಿಕ ಪ್ರದೇಶಗಳಲ್ಲಿ, ವಸತಿ ಪ್ರದೇಶಗಳಲ್ಲಿ ನಾಗರೀಕರಿಗೆ, ನೈತಿಕ, ಸಾಮಾಜಿಕ, ಸಾಂಸ್ಕೃತಿಕವಾಗಿ ತೊಂದರೆಯಾಗುತ್ತಿದ್ದರೆ ಅದನ್ನು ಅಪರಾಧವೆಂದು ಪರಿಗಣಿಸುವುದು ಸಾಮಾನ್ಯ. ಕಾನೂನಿನ ದೃಷ್ಟಿಯಲ್ಲಿಯೂ ಇದೆ ರೀತಿ ಇರುವುದರಿಂದ ಸಾರ್ವಜನಿಕವಾಗಿ ಗೊತ್ತಾಗದ ಜನರಿಗೂ ತಿಳಿಯದ ಅನೇಕ ಬಾರಿ ಜನ ಸಾಮಾನ್ಯರ ಕಲ್ಪನೆಗೂ ಬಾರದ ರೀತಿಯಲ್ಲಿ ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳಲ್ಲಿ ಲೈಂಗಿಕ ವಿಕೃತಿಗಳು ನಡೆಯುತ್ತಿವೆ. ಹಣಕ್ಕಾಗಿ ಅಥವಾ ಇನ್ನಿತರ ರೂಪದಲ್ಲಿ ಪ್ರತಿಫಲ ಪಡೆಯುವ ಉದ್ದೇಶದಿಂದ ತಮ್ಮ ದೇಹವನ್ನು ಲೈಂಗಿಕವಾಗಿ ಬಳಸಲು ಮುಂದಿಡುವುದನ್ನು ವೇಶ್ಯಾವೃತ್ತಿ ಎಂಧು ಅರ್ಥೈಸಬಹುದು. ಬಹಳಷ್ಟು ಕಾಲ ಈ ಪ್ರಕ್ರಿಯೆ ಕೇವಲ ಮದುವೆಯಾಗದ ಇದೇ ವೃತ್ತಿಯಲ್ಲಿ ತೊಡಗಿರುವ ಕೆಲವೇ ಜನರಿಗೆ ಮೀಸಲಾಗಿತ್ತೆಂದು ನಂಬಲಾಗಿತ್ತು. ಆದರೆ ಈಗಿನ ದುರಂತವೆಂದರೆ ಏನೂ ಅರಿಯದ ಮುಗ್ಧ ಹೆಣ್ಣುಮಕ್ಕಳನ್ನು ಈ ರೀತಿಯ ಅನೈತಿಕ ವ್ಯವಹಾರಗಳಿಗೆ ಈ ವಿಷ ವೃತ್ತದಲ್ಲಿ ಸಿಲುಕಿಸಲಾಗುತ್ತಿದೆ.

ಅಧ್ಯಯನ ಕ್ಷೇತ್ರವಾದ ಮೈಸೂರು ಕರ್ನಾಟಕ ರಾಜ್ಯದಲ್ಲಿರುವ ಒಂದು ಪ್ರಸಿದ್ಧ ನಗರ, ಮೈಸೂರು ಅದೇ ಹೆಸರಿನ ಜಿಲ್ಲೆಯ ಆಡಳಿತ ಕೇಂದ್ರ ಮತ್ತು ಹಿಂದಿನ ಮೈಸೂರು ಸಂಸ್ಥಾನದ ಹಳೆಯ ರಾಜಧಾನಿ. ಮೈಸೂರನ್ನು ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎಂದು ಕರೆಯಲಾಗುತ್ತದೆ. ಇಲ್ಲಿ ಅನೇಕ ಅರಮನೆಗಳಿರುವುದರಿಂದ ಮೈಸೂರನ್ನು ಅರಮನೆಗಳ ನಗರ ಎಂದು ಕರೆಯಲಾಗುತ್ತದೆ. ಪ್ರತಿವರ್ಷ ಹತ್ತುದಿನ, ಒಂಬತ್ತು ರಾತ್ರಿಗಳವರೆಗೆ ದಸರಾ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ರಾಜೇಂದ್ರ ವಿಲಾಸ ಅರಮನೆ, ಜಗನ್ಮೋಹನ ಅರಮನೆ, ಜಯಲಕ್ಷ್ಮೀ ವಿಲಾಸ ಅರಮನೆ, ಲಲಿತ ಮಹಲ್ ಅರಮನೆ, ಚಾಮುಂಡಿ ಬೆಟ್ಟ, ಶ್ರೀ ಚಾಮರಾಜೇಂದ್ರ ಝೂವಾಲಾಜಿಕಲ್ ಗಾರ್ಡನ್, ಕೃಷ್ಣರಾಜಸಾಗರ ಅಣೆಕಟ್ಟು, ನಾಗರಹೊಳೆ ಅಭಯಾರಣ್ಯ, ರಂಗನತಿಟ್ಟು ಪಕ್ಷಿಧಾಮ, ಶ್ರೀರಂಗಪಟ್ಟಣ, ಸಂಗಮ, ತಲಕಾಡು, ಬಂಡಿಪುರ ಅಭಯಾರಣ್ಯ, ಮೇಲುಕೋಟೆ ಇನ್ನು ಹಲವಾರು ಪ್ರವಾಸಿ ತಾಣಗಳನ್ನು ಹೊಂದಿದೆ. ಕಾವೇರಿ ನದಿ ಮುಖ್ಯ ಆಕರ್ಷಣೆ. ಸಾಕಷ್ಟು ಶೈಕ್ಷಣಿಕ ಮತ್ತು ಸಂಶೋಧನಾ ಸಂಸ್ಥೆಗಳನ್ನು ಹೊಂದಿರುವುದು ಈ ಜಿಲ್ಲೆಯ ಹೆಗ್ಗಳಿಕೆ. ಇನ್‌ಫೋಸಿಸ್ ಮೈಸೂರು ಜಿಲ್ಲೆಯಲ್ಲಿಯೂ ತನ್ನ ವಿಭಾಗವನ್ನು ಹೊಂದಿದ್ದು ಹಲವಾರು ಉದ್ಯೋಗ ಅವಕಾಶಗಳನ್ನು ನೀಡುತ್ತಿದೆ. ಬೆಂಗಳೂರು ನಗರ ಜಿಲ್ಲೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ಮೈಸೂರು ಜಿಲ್ಲೆಗಳು ಜನತೆಗೆ ಅವಕಾಶಗಳನ್ನು ನೀಡುವ ಜೊತೆಗೆ ಸಾಮಾಜಿಕ ಸಮಸ್ಯೆಗಳನ್ನು ಬೆಳೆಸಿಕೊಂಡು ಬರುತ್ತಿವೆ.

**ಆಯ್ಕೆ ಮಾಡಲು ಕಾರಣ:**

ಬೆಂಗಳೂರು ದೇಶದ ಅತ್ಯಂತ ರೋಮಾಂಚಕ ನಗರವೆಂದು ಪರಿಗಣಿಸಲ್ಪಟ್ಟಿದ್ದು, ತಮ್ಮ ಜೀವಿತಾವಧಿಯಲ್ಲಿ ಈಡೇರಿಸಬೇಕೆಂಬ ಕನಸಿನೊಂದಿಗೆ ಲಾಭದಾಯಕ ಉದ್ಯೋಗವಕಾಶಗಳನ್ನು ಹುಡುಕುತ್ತಾ ಬೆಂಗಳೂರಿಗೆ ಬರಲು ದೇಶಾದ್ಯಂತ ಜನರನ್ನು ಆಕರ್ಷಿಸುತ್ತದೆ. ದೇಶದ ಇತರ ಭಾಗಗಳಿಗೆ ಹೋಲಿಸಿದರೆ ಬೆಂಗಳೂರಿನಲ್ಲಿ ಮಾನವ ಕಳ್ಳ ಸಾಗಾಣಿಕೆ ಹೆಚ್ಚು ಎಂದು ಅಂಕಿಅಂಶಗಳೇ ಹೇಳುತ್ತವೆ. ಹಾಗಾಗಿ ಅಧ್ಯಾಯನ ಕ್ಷೇತ್ರವಾಗಿ ಬೆಂಗಳೂರನ್ನು ಆರಿಸಿಕೊಳ್ಳಲು ಇದು ಒಂದು ಪ್ರಮುಖ ಕಾರಣವಾಗಿದೆ. ಕಳ್ಳಸಾಗಾಣಿಕೆದಾರರು ಬೆಂಗಳೂರಿನಲ್ಲಿ ಉದ್ಯೋಗವಕಾಶಗಳ ಬಗ್ಗೆ ಸುಳ್ಳು ಬರವಸೆ ನೀಡುವ ಮೂಲಕ ಸಮಾಜದ ದುರ್ಬಲ ವರ್ಗದವರ ಅವಶ್ಯಕತೆಗಳನ್ನು ತಮ್ಮ ಲಾಭ ಮಾಡಿಕೊಳ್ಳಲು ಬಳಸುತ್ತಾರೆ. ಮತ್ತು ಅವರ ಅಪರಾಧ ಚಟುವಟಿಕೆಗಳಿಗೆ ಸುಲಭವಾಗಿ ಬೇಟೆಯಾಡುತ್ತಾರೆ. ೨೦೧೨ರಲ್ಲಿ ದಾಖಲಾದ ಮಾನವ ಕಳ್ಳಸಾಗಣೆ ಪ್ರಕರಣಗಳ ಸಂಖ್ಯೆ ೪೧೨ ಆಗಿದ್ದು ಈ ಸಂಖ್ಯೆಯು ಕಳ್ಳಸಾಗಾಣೆ ಆಗುವ ರಾಜ್ಯಗಳಲ್ಲಿ ಕರ್ನಾಟಕವನ್ನು ಮೂರನೇ ಸ್ಥಾನಕ್ಕೇರಿಸಿದೆ. (National Crime Record Bureau Report 2013- Ministory Of Home affaires). ಬೆಂಗಳೂರು ಮತ್ತು ಕರ್ನಾಟಕದ ನಗರ ಮೆಟ್ರೋಪಾಲಿಟನ್ ಪ್ರದೇಶಗಳಲ್ಲಿ ವೇಶ್ಯವಾಟಿಕೆ ವ್ಯವಹಾರವು ವಿಸ್ತರಿಸಿದೆ ಮತ್ತು ಈ ಅನೇಕ ರಾಕೆಟ್‌ಗಳನ್ನು ವಸತಿ ವಸಾಹತುಗಳಿಂದ ಸ್ಥಳಗಳ ಹೆಸರಿನಲ್ಲಿ ನಡೆಸಲಾಗುತ್ತಿದೆ. ಮಸಾಜ್ ಪಾರ್ಲರ್‌ಗಳು ಮತ್ತು ಸ್ನೇಹಕ್ಲಬ್‌ಗಳು, ಹೆಸರಿನಲ್ಲಿ ನಡೆಸಲಾಗುತ್ತಿದೆ. ಈ ಅನೇಕ ಎಸ್ಕಾರ್ಟ್ ಸರ್ವಿಸ್‌ಗಳು ಸೈಬರ್‌ಸ್ಪೈಸ್ ಮೂಲಕ ಕಾರ್ಯ ನಿರ್ವಹಿಸಲು ಪ್ರಾರಂಭಿಸಿವೆ. ಬೆಂಗಳೂರಿನಲ್ಲಿ ವೇಶ್ಯಾವಾಟಿಕೆ ವ್ಯವಹಾರ ಹೈಟೆಕ್ ಆಗಿದೆ. ವೇಶ್ಯಾವಾಟಿಕೆ ನಡೆಸಲು ಬಾಂಗ್ಲಾದೇಶ, ಪಶ್ಚಿಮಬಂಗಾಳ, ಓಡಿಶಾ, ಈಶಾನ್ಯ ಮತ್ತು ನೇಪಾಳದ ಹಲವಾರು ಹೆಣ್ಣುಮಕ್ಕಳನ್ನು ಸಂಗ್ರಹಿಸಲಾಗುತ್ತಿದೆ.

ಮಾನವ ಕಳ್ಳಸಾಗಾಣೆ ವಿಶೇಷವಾಗಿ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯು ಅಪಾಯಕಾರಿ ಪ್ರಮಾಣದಲ್ಲಿ ಬೆಳೆಯುತ್ತಿರುವುದರಿಂದ ಬೆಂಗಳೂರು ನಗರ/ ಗ್ರಾಮಾಂತರ ಜಿಲ್ಲೆ ಮತ್ತು ಮೈಸೂರು ಜಿಲ್ಲೆಯನ್ನು ಪ್ರಕರಣ ಅಧ್ಯಯನದ ಕೇಂದ್ರವಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಕಳ್ಳಸಾಗಾಣಿಕೆದಾರರು, ಕಾನೂನು ಜಾರಿ ಅಧಿಕಾರಿಗಳ ಪಾತ್ರ, ಸರ್ಕಾರ ಕೈಗೊಂಡ ಉಪ ಕ್ರಮಗಳು ಮತ್ತು ಎನ್.ಜಿ.ಓಗಳು ನೀಡಿದ ಕೊಡುಗೆಗಳ ಬಗ್ಗೆ ವಾಸ್ತವಿಕ ಸನ್ನಿವೇಶವನ್ನು ಕಂಡುಕೊಳ್ಳಲು ಈ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅನೈತಿಕ ವ್ಯವಹಾರಗಳ (ಪ್ರತಿಬಂಧ) ಅಧಿನಿಯಮ-೧೯೫೬ರ ಕಾನೂನುನನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ಅಡ್ಡಿಯುಂಟುಮಾಡುವ ಅಂತರಗಳನ್ನು ಮತ್ತು ಲೋಪದೋಷಗಳನ್ನು ಸರಿಪಡಿಸಲು ಪರಿಣಾಮಕಾರಿ ಕ್ರಮಗಳು ಗುರುತಿಸಲು ಈ ವಿಷಯವನ್ನು ಆಯ್ಕೆ ಮಾಡಲಾಗಿದೆ.

ಬೆಂಗಳೂರು ನಗರ/ ಗ್ರಾಮಾಂತರ ಜಿಲ್ಲೆ ಮತ್ತು ಮೈಸೂರು ಜಿಲ್ಲೆಯಲ್ಲಿ ಸಂತ್ರಸ್ತರನ್ನು ಕಾಪಾಡುವುದು ಅವರ ಪುನರ್ವಸತಿ ಮತ್ತು ಮರುಏಕೀಕರಣ ಕಾರ್ಯಚರಣೆಯಲ್ಲಿ ಪ್ರಮುಖ ಪಾತ್ರವಹಿಸುವ ಎನ್.ಜಿ.ಓಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ.

**ಕರ್ನಾಟಕದಲ್ಲಿ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ**

ಭಾರತದಲ್ಲಿ ಮಹಿಳೆಯರ ಮೇಲಿನ ಅಪರಾಧಗಳಿಗೆ ಸಂಬಂಧಿಸಿದಂತೆ ೨೦೧೨ರ ಅಪರಾಧ ದಾಖಲೆಗಳನ್ನು ಪರಿಶೀಲಿಸಿದರೆ. ಭಾರತದಲ್ಲಿ ೧೨,೪೪,೨೭೦, ಕರ್ನಾಟಕದಲ್ಲಿ ೧೦,೩೬೬ ಮತ್ತು ಬೆಂಗಳೂರು ೨,೨೬೩ ಅಪಾರಾಧಗಳು ದಾಖಲಾಗಿಸಿ ಕರ್ನಾಟಕವು ಮಹಿಳೆಯರ ವಿರುದ್ಧ ಅತಿ ಹೆಚ್ಚು ಅಪರಾಧ ಪ್ರಕರಣಣಗಳನ್ನು ಹೊಂದಿರುವ ರಾಜ್ಯಗಳ ಪಟ್ಟಿಯಲ್ಲಿ ಸೇರಿದ್ದು ೧೧ನೇ ಸ್ಥಾನವನ್ನು ಪಡೆದಿದೆ ಹಾಗೆಯೇ ಮೆಗಾ ನಗರಗಳೂ ಬೆಂಗಳೂರು ೫೩ನೇ ಸ್ಥಾನದಲ್ಲಿದೆ. ಈ ಪರಿಸ್ಥಿತಿಯು ಮಹಿಳೆಯರ ಸುರಕ್ಷತೆಯನ್ನು ಪರಿಗಣಿಸಿದಂತೆ, ಮಹಿಳೆಯರ ಜೀವನ ಮತ್ತು ಅವರ ಜೀವಕ್ಕೆ ಅಪಾಯ ಮತ್ತು ಅವರ ಮಾನವ ಹಕ್ಕುಗಳ ಉಲ್ಲಂಘನೆಯ ಅಪರಿಯವನ್ನು ಹೊಂದಿರುತ್ತಾರೆ. (National Crime Records Bureaw 2012, Ministry Of Home Affairs). ಮಹಿಳೆಯರು ಮತ್ತು ಮಕ್ಕಳ ಅನೈತಿಕ ಕಳ್ಳಸಾಗಣಿಕೆ ಪ್ರಕರಣಗಳು ಹೆಚ್ಚಾಗುತ್ತಿರುವುದರಿಂದ ಕರ್ನಾಟಕದಲ್ಲಿ ಮಾನವ ಕಳ್ಳಸಾಗಣಿಕೆಯ ಪ್ರಕರಣಗಳಲ್ಲಿ ಕರ್ನಾಟಕ ಮೂರನೇ ಸ್ಥಾನದಲ್ಲಿದೆ. ಅಂದರೆ ಹೆಚ್ಚು ಪ್ರಕರಣಗಳು ದಾಖಲಾದ ಮೊದಲ ಐದು ರಾಜ್ಯಗಳಲ್ಲಿ ಕರ್ನಾಟಕವೂ ಸೇರಿದೆ. ಕಳೆದ ೧೦ವರ್ಷಗಳಲ್ಲಿ ಕರ್ನಾಟಕವು ೫.೪೪೩ ಮಾನವ ಕಳ್ಳಸಾಗಣಿಕೆ ಪ್ರಕರಣಗಳನ್ನು ವರದಿ ಮಾಡಿದೆ. ಏಕೆಂದರೆ ಕರ್ನಾಟಕವು ಕಳ್ಳಸಾಗಣಿಕೆಗೆ ಮಾಡುವವರ ಕೇಂದ್ರವಾಗಿದೆ. ಇದು ಮಹಿಳೆಯರು ಮತ್ತು ಮಕ್ಕಳ ಕಳ್ಳಸಾಗಣಿಕೆಗೆ ಮೂಲ ಸ್ಥಾನವಾಗಿ ಕಾರ್ಯನಿರ್ವಹಿಸುತ್ತಿದೆ. ೨೦೧೩-೨೦೧೫ರ ಅವಧಿಯಲ್ಲಿ. ೬೫೬ ಪ್ರಕರಣಗಳು ದಾಖಲಾಗಿದ್ದು. ೨೩೫೩ ಕಳ್ಳಸಾಗಣೆದಾರರನ್ನು ಬಂಧಿಸಲಾಗಿದೆ. ೨೦೧೫ರಲ್ಲಿ ಮಾತ್ರ ೧೫೧ ಕಳ್ಳಸಾಗಾಣೆದಾರರನ್ನು ಬಂಧಿಸಲಾಗಿದ್ದು. ಕಳ್ಳಸಾಗಣೆಗೆ ಒಳಗಾದ ೪೨೩ ಜನರನ್ನು ರಕ್ಷಿಸಲಾಗಿದೆ. ಅದರಲ್ಲಿ ೩೦ ಪುರಷರು, ೨೫೨ ಮಹಿಳೆಯರು ಮತ್ತು ೧೪೧ ಮಕ್ಕಳು ಒಳಗೊಂಡಿದ್ದಾರೆ. ಪುರುಷರು ಮತ್ತು ಮಕ್ಕಳೊಂದಿಗೆ ಹೋಲಿಸಿದರೆ ಮಹಿಳೆಯರು ಕಳ್ಳಸಾಗಾಣೆಗೆ ಹೆಚ್ಚು ಗುರಿಯಾಗುತ್ತಾರೆ ಎಂದು ಈ ಅಂಕಿ ಅಂಶ ಸ್ಪಷ್ಟವಾಗಿ ಸಾಬೀತುಪಡಿಸುತ್ತದೆ. ಈ ವರದಿಯು ರಾಜ್ಯದಲ್ಲಿ ಪ್ರತಿದಿನ ೨೭ ಮಹಿಳೆಯರು ಮತ್ತು ಮಕ್ಕಳು ನಾಪತ್ತೆಯಾಗುತ್ತಿದ್ದಾರೆ ಎಂಬ ಆಘಾತಕಾರಿ ಮಾಹಿತಿಯನ್ನು ನೀಡುತ್ತದೆ. ಮತ್ತು ಜೂನ್ ೨೦೧೪ ಮತ್ತು ಮೇ ೨೦೧೫ರಲ್ಲಿ ರಾಜ್ಯದಲ್ಲಿ ೧೪.೩೬೧ ಕಾಣೆಯಾದ ಪ್ರಕರಣಗಳು ವರದಿಯಾಗಿವೆ. ಇದರಲ್ಲಿ ೧೧.೨೮೩ ಜನರು ಮಾತ್ರ ಪತ್ತೆಯಾಗಿದ್ದಾರೆ. (http:// www.Newsgram.Com / human-Traffiking-in-Karnataka-656-cases-registered-2353-people-arrested from-2013till-date/visited on 12/12/2016 @ 2-30pm).

ಮಾನವ ಕಳ್ಳಸಾಗಾಣಿಕೆಯಲ್ಲಿ ಕರ್ನಾಟಕ ಮೂರನೇ ಸ್ಥಾನದಲ್ಲಿದೆ ರಾಜ್ಯ ಮಾನವ ಕಳ್ಳಸಾಗಣೆ ವಿರೋಧಿ ಘಟಕಗಳು ಸಂಗ್ರಹಿಸಿದ ಮಾಹಿತಿಯ ಪ್ರಕಾರ ಕರ್ನಾಟಕವು ಭಾರತದ ಉನ್ನತ ರಾಜ್ಯಗಳಲ್ಲಿ ಒಂದಾಗಿದೆ ೨೦೧೬ರಲ್ಲಿ ಮಾನವ ಕಳ್ಳಸಾಗಾಣೆಗಾಗಿ ರಾಜ್ಯವು ಭಾರತದಲ್ಲಿ ೫ನೇ ಸ್ಥಾನದಲ್ಲಿದೆ, ದಕ್ಷಿಣ ಭಾರತದಲ್ಲಿ ಮೂರನೇ ಸ್ಥಾನದಲ್ಲಿದೆ. ಮಾನವ ಕಳ್ಳಸಾಗಾಣೆಗೆ ಬಲಿಯಾದ ೪೧೬೪ ಜನರೊಂದಿಗೆ ಪಶ್ಚಿಮ ಬಂಗಾಳ ಪ್ರಥಮ ಸ್ಥಾನಗಳಿಸಿದೆ. ರಾಜ್ಯಗಳ ಮಾನವ ಕಳ್ಳಸಾಗಣೆ ವಿರೋಧಿ ಘಟಕಗಳು ರಾಷ್ಟ್ರೀಯ ಅಪರಾಧ ದಾಖಲೆಗಳ ಬ್ಯುರೋಗೆ ನೀಡಿದ ಮಾಹಿತಿಯ ಪ್ರಕಾರ ಮಾನವ ಕಳ್ಳಸಾಗಾಣಿಕೆಗೆ ಬಲಿಯಾಗಿ ವೇಶ್ಯಾವಾಟಿಕೆಯಲ್ಲಿದ್ದ ಒಟ್ಟು ೪,೯೮೦ ಜನರನ್ನು ರಕ್ಷಿಸಲಾಗಿವೆ. ಇತ್ತೀಚಿನ ವರ್ಷಗಳಲ್ಲಿ ದಕ್ಷಿಣ ಭಾರತದ ರಾಜ್ಯಗಳು ದೇಶದಲ್ಲಿ ಮಾನವ ಕಳ್ಳಸಾಗಾಣೆದಾರರಿಗೆ ಹೆಚ್ಚು ಬೇಡಿಕೆಯ ತಾಣಗಳಾಗಿವೆ. ದೇಶಾದ್ಯಂತ ವರದಿಯಾದ ಮಾನವ ಕಳ್ಳಸಾಗಣೆ ಪ್ರಕರಣಗಳ ಅರ್ಧಕ್ಕಿಂತ ಹೆಚ್ಚು ಸಂಖ್ಯೆಗೆ ಈ ರಾಜ್ಯಗಳು ಕೊಡುಗೆ ನೀಡುತ್ತಿವೆ ಎಂದು ಅಂಕಿ ಅಂಶಗಳು ತೋರಿಸುತ್ತವೆ. ಭಾರತದಲ್ಲಿ ಮಾನವ ಕಳ್ಳಸಾಗಾಣಿಕೆಯಲ್ಲಿ ಹೆಣ್ಣಿನ ಸಾಗಾಣಿಕೆಯನ್ನು ಗುರುತಿಸಲು ಮಾನವ ಸಾಗಾಣಿಕೆಯ ವಿವಿಧ ಅಪರಾಧಗಳ ಅಡಿಯಲ್ಲಿ ಪ್ರಯತ್ನಿಸಲಾಗಿದೆ. ಈ ಕೆಳಗಿನ ಕೋಷ್ಟಕವು ಅದನ್ನು ವಿವರಿಸುತ್ತದೆ.

**ಕೋಷ್ಟಕ :**

**ಭಾರತದಲ್ಲಿ ಮಾನವ ಕಳ್ಳಸಾಗಾಣೆ ಅಡಿಯಲ್ಲಿ ವಿವಿಧ ಅಪರಾಧಗಳು ೨೦೧೩-೨೦೧೮**

| ಕ್ರಸಂ | ಅಪರಾಧಗಳು | ವರ್ಷಗಳು | | | | | |
|---|---|---|---|---|---|---|---|
| | | ೨೦೧೩ | ೨೦೧೪ | ೨೦೧೫ | ೨೦೧೬ | ೨೦೧೭ | ೨೦೧೮ |
| ೧. | ಅಪ್ರಾಪ್ತ ಬಾಲಕಿಯರ ಸಂಗ್ರಹ (ಸೆ.೩೬೬.ಎ.ಐ.ಪಿ.ಸಿ) | ೧೨೨೪ | ೨೦೨೦ | ೩೦೮೭ | ೨೪೦೫ | ೩೩೮೨ | ೩೦೯೯ |
| ೨. | ವಿದೇಶದಿಂದ ಹುಡುಗಿಯರ ಆಮದು (ಸೆ. ೬೬.ಬಿ. ಐ.ಪಿ.ಸಿ) | ೩೧ | ೧೩ | ೦೬ | ೫ | ೨ | ೪ |
| ೩. | ವೇಶ್ಯಾಟಿಕೆಗೆ ಅಪ್ರಾಪ್ತರ ಮಾರಾಟ (ಸೆ.೩೭೨. ಐ.ಪಿ.ಸಿ) | ೧೦೦ | ೮೨ | ೧೧೧ | ೧೨೨ | ೮೦ | ೪೦ |
| ೪. | ವೇಶ್ಯಾವಾಟಿಕೆಗೆ ಅಪ್ರಾಪ್ತರನ್ನು ಕೊಳ್ಳುವುದು (ಸೆ.೩೭೩. ಐ.ಪಿ.ಸಿ) | ೬ | ೧೪ | ೧೧ | ೭ | ೮೦ | ೮ |

| | | | | | | | |
|---|---|---|---|---|---|---|---|
| ೫. | ಅನೈತಿಕ ಸಾಗಾಣಿಕೆ (ತಡೆಗಟ್ಟುವಿಕೆ) | ೨೫೭೯ | ೨೬೧೭ | ೨೬೪೧ | ೨೨೧೪ | ೧೫೩೬ | ೧೪೫೯ |
| ೬. | ಮಾನವ ಕಳ್ಳಸಾಗಾಣಿಕೆ (ಸೆ.೩೭೦. ೩೭೦.ಎ.ಐ.ಪಿ.ಸಿ) | ೦ | ೦ | ೧೦೨೧ | ೬೫೯ | ೬೬೨ | ೮೫೪ |
| | ಒಟ್ಟು | ೩೯೪೦ | ೫೪೬೬ | ೬೮೭೭ | ೮೦೬೩ | ೫೭೪೨ | ೫೪೦೪ |

**ಮೂಲ:** ರಾಷ್ಟ್ರೀಯ ಅಪರಾಧ ದಾಖಲೆಗಳ ಬ್ಯುರೋ (N C R B)

ಈ ಮೇಲಿನ ಕೋಷ್ಟಕವನ್ನು ೨೦೧೩ ರಿಂದ ೨೦೧೮ ರ ವರೆಗೆ ರಾಷ್ಟ್ರೀಯ ಅಪರಾಧ ದಾಖಲೆಗಳ ಬ್ಯೂರೋ ನೀಡಿರುವ ಅಂಕಿ ಅಂಶಗಳ ಸಹಾಯದಿಂದ ರಚಿಸಲಾಗಿದೆ. ಅಪ್ರಾಪ್ತ ಬಾಲಕಿಯರ ಸಂಗ್ರಹ (ಸೆ.೩೬೬.ಎ. ಐ.ಪಿ.ಸಿ) ಅಪರಾಧದ ಅಡಿಯಲ್ಲಿ ೨೦೧೩ರಲ್ಲಿ ೧೨೨೪ ಪ್ರಕರಣಗಳು ದಾಖಲಾಗಿವೆ. ಇದು ೨೦೧೪ ಮತ್ತು ೨೦೧೫ರಲ್ಲಿ ದುಪ್ಪಟ್ಟಾಗಿರುವುದನ್ನು ಗಮನಿಸಬಹುದು. ಹಾಗೆಯೇ ೨೦೧೬ರಲ್ಲಿ ಸ್ವಲ್ಪ ಕಡಿಮೆಯಾಗಿದ್ದಾರೂ ೨೦೧೭ ಮತ್ತು ೨೦೧೮ರಲ್ಲಿ ಮತ್ತೆ ಏರಿಕೆಯನ್ನು ಕಂಡಿದೆ ವಿದೇಶದಿಂದ ಹುಡುಗಿಯರ ಸಂಗ್ರಹ ೨೦೧೩ರಲ್ಲಿ ೩೧ ಪ್ರಕರಣಗಳು ದಾಖಲೆಯಾಗಿದ್ದರೆ, ೨೦೧೮ರವರೆಗೆ ಇಳಿಕೆಯನ್ನು ಕಂಡಿದೆ. ವೇಶ್ಯಾವಾಟಿಕೆಗೆ ಅಪ್ರಾಪ್ತ ಬಾಲಕಿಯರ ಮಾರಾಟವು ೨೦೧೩ ರಿಂದ ೨೦೧೮ರವರೆಗೆ ಗಮನಿಸಿದಾಗ ಇಳಿಕೆ ಕ್ರಮವನ್ನು ಹೊಂದಿದೆ. ಆದರೆ ಇದು ಅಪರಾಧಗಳು ಕಡಿಮೆಯಾಗಿವೆ ಎಂದು ತೋರಿಸಿದರೂ ಸಹ ಅದು ನಿಜವಲ್ಲ ಕಾರಣ ಆಧುನಿಕತೆ, ತಂತ್ರಜ್ಞಾನ ಬೆಳೆದಂತೆಲ್ಲಾ ಅಪರಾಧಗಳ ಸ್ವರೂಪಗಳು ಬದಲಾಗುತ್ತಿವೆ. ಮತ್ತು ಅಪರಾಧ ನಡೆದ ಎಲ್ಲಾ ಪ್ರಕರಣಗಳು ದಾಖಲಾಗಿರುವ ನಂಬಿಕೆಯು ಸಹ ಇಲ್ಲಿ ಇನ್ನು ವೇಶ್ಯಾವಾಟಿಕೆಗೆ ಅಪ್ರಾಪ್ತರನ್ನು ಕೊಳ್ಳುವ ಪ್ರಕರಣಗಳು ೨೦೧೩ರಲ್ಲಿ ಕಡಿಮೆ ಇದ್ದು ಕೇವಲ ೬ ಪ್ರಕರಣಗಳು ದಾಖಲಾಗಿವೆ. ಆದರೆ ಇದು ೨೦೧೭ರಲ್ಲಿ ೪೦ ಪ್ರಕರಣಗಳು ದಾಖಲಾಗುವ ಮೂಲಕ ದುಪ್ಪಟ್ಟು ಹೆಚ್ಚಾಗಿದೆ. ಅನೈತಿಕ ಸಾಗಾಣಿಕೆ ಕಾಯ್ದೆ-೧೯೫೬ರ ಅಡಿಯಲ್ಲಿ ದಾಖಲಾಗಿರುವ ಪ್ರಕಣಗಳ ಸಂಖ್ಯೆ ೨೦೧೮ರವರಗೆ ಇಳಿಕೆಯಾಗಿದೆ. ಆದರೆ ಮಾನವ ಕಳ್ಳಸಾಗಾಣಿಕೆ ಅಪರಾಧದ ಅಡಿಯಲ್ಲಿ ದಾಖಲಾದ ಪ್ರಕರಣಗಳ ಸಂಖ್ಯೆಯನ್ನು ಗಮನಿಸಿದರೆ ೨೦೧೩ರಲ್ಲಿ ೩೯೪೦ ಪ್ರಕರಣಗಳಾದರೆ ನಂತರದ ವರ್ಷಗಳಲ್ಲಿ ಏರಿಕೆಯಲ್ಲಿದೆ. ೨೦೧೮ರಲ್ಲಿ ಸ್ವಲ್ಪ ಮಟ್ಟಿಗೆ ಕಡಿಮೆ ಪ್ರಕರಣಗಳು ದಾಖಲಾಗಿವೆ.

ಕರ್ನಾಟಕದಲ್ಲಿ ಅಪ್ರಾಪ್ತ ಬಾಲಕಿಯರ ಸಂಗ್ರಹ ಅಪರಾಧದ ಅಡಿಯಲ್ಲಿ ದಾಖಲಾದ ಪ್ರಕರಣಗಳಲ್ಲಿನ ಹೆಣ್ಣುಮಕ್ಕಳ ಸಂಖ್ಯೆಯು ಹೀಗಿದೆ : ೨೦೧೩ರಲ್ಲಿ ೭೧, ೨೦೧೪ರಲ್ಲಿ ೬೧, ೨೦೧೫ರಲ್ಲಿ ೬೫, ೨೦೧೬ರಲ್ಲಿ ೧, ೨೦೧೭ರಲ್ಲಿ ೧೦೫, ೨೦೧೮ರಲ್ಲಿ ೭೧, ಒಟ್ಟು ೩೭೪ ಜನ ಅಪ್ರಾಪ್ತ ಹೆಣ್ಣುಮಕ್ಕಳು ದೊರೆತಿದ್ದಾರೆ. ವೇಶ್ಯಾವಾಟಿಕೆಗೆ ಅಪ್ರಾಪ್ತರ ಮಾರಾಟ ಅಪರಾಧ ಪ್ರಕರಣದಲ್ಲಿ ೨೦೧೩-೧, ೨೦೧೪-೧, ಮತ್ತು ೨೦೧೮ರಲ್ಲಿ ೧ ಒಟ್ಟು ಮೂರು ಹೆಣ್ಣುಮಕ್ಕಳು ಮಾತ್ರ ಹೊರೆತಿದ್ದಾರೆ. ಆದರೆ ಅನೈತಿಕ ಕಳ್ಳಸಾಗಾಣಿಕೆ (ತಡೆಗಟ್ಟುವಿಕೆ) ಕಾಯ್ದೆ-೧೯೫೬ ಅಪರಾಧ

ಪ್ರಕರಣದಲ್ಲಿ ೨೦೧೩ ರಿಂದ ೨೦೧೮ರವರೆಗೆ ಒಟ್ಟು ೩೩೯ ೨೬೫೭ ಹೆಣ್ಣುಮಕ್ಕಳು ದೊರೆತಿದ್ದಾರೆ. ಹಾಗೆಯೇ ಮಾನವ ಕಳ್ಳಸಾಗಾಣಿಕೆ ಅಪರಾಧದ ಅಡಿಯಲ್ಲಿ ೨೦೧೩ ರಿಂದ ೨೦೧೮ರವರೆಗೆ ಒಟ್ಟು- ೩೩೯ ಹೆಣ್ಣು ಮಕ್ಕಳು ದೊರೆತಿದ್ದಾರೆ. ಆದರೆ ಇದು ನಿಖರವಾದ ಅಂಕಿ ಅಂಶದಲ್ಲಿ ಲೆಕ್ಕಕ್ಕೆ ಸಿಕ್ಕಿರುವುದು ಇಷ್ಟಾದರೂ ದೊರೆಯದಿರುವುದು ಮತ್ತೆಷ್ಟೋ. ಅನ್ಯೆತಿಕ ವ್ಯವಹಾರಗಳಿಗೆ ಮಾಡುವ ಸಾಗಾಣಿಕೆಯ ವಿಧಾನ ಎಲ್ಲವೂ ಅನೌಪಚಾರಿಕವಾಗಿ ನಡೆದು ಹೋಗುತ್ತದೆ. ಐ.ಟಿ. ನಗರವಾದ ಬೆಂಗಳೂರಿನಲ್ಲಿ ಮೊಬೈಲು, ದೂರವಾಣಿ, ವೆಬ್‌ಸೈಟ್‌ಗಳ ಮೂಲಕ ವ್ಯವಹಾರ ನಡೆಸುವವರಿಗೇನು ಕಡಿಮೆ ಇಲ್ಲ. ಕೆಲವರು ಕೇವಲ ಪಾರ್ಟಿಗಳಿಗೆ, ಬೇಡಿಕೆಯಾಗಿ ಬರುವವರಿದ್ದಾರೆ. ಬೇಡಿಕೆಯಾಗಿ ಕೇವಲ ಸಿನಿಮಾ ನೋಡುವ ಗುಂಪು ಇದೆ. ಇನ್ನೂ ಕೆಲವು ವಿಧಗಳಲ್ಲಿ ಅಂದರೆ ಲೈಂಗಿಕ ಛಾಯಾಚಿತ್ರ/ಚಲನಚಿತ್ರ ತೆಗೆಯುವ ಗುಂಪುಗಳು, ಮಕ್ಕಳನ್ನು (ಗಂಡು ಮತ್ತು ಹೆಣ್ಣು) ಮಾತ್ರ ಸರಬರಾಜು ಮಾಡುವವರು, ವಿಚಿತ್ರವಾಗಿ ಪ್ರಾಣಿಗಳೊಂದಿಗೆ ಲೈಂಗಿಕ ಚಟುವಟಿಕೆಗಳನ್ನು ನಡೆಸಿಕೊಡುವವರು ಇದ್ದಾರೆ. ಇದೆಲ್ಲಾ ವ್ಯವಸ್ಥಿತವಾಗಿ ನಡೆದಿದ್ದರೂ ಸಾಕಷ್ಟು ಗೋಪ್ಯವಾಗಿ ನಡೆಯುವ ಬ್ರಾಥಲ್‌ಗಳು ಹೆಚ್ಚು, ಅಧಿಕೃತವಾಗಿ ಎಲ್ಲಿಯೂ ಬ್ರಾಥಲ್‌ಗಳು ಇಲ್ಲವಾದರೂ ರಾಜ್ಯದ ವಿವಿಧ ಭಾಗಗಳಿಂದ, ಹೊರ ರಾಜ್ಯಗಳಿಂದ ಬಂದು ಹೆಣ್ಣುಗಳನ್ನು ಕರೆತಂದು ಅಥವಾ ಹಿಡಿದು ತಂದು ಆಗ್ಗಾಗೆ ಮನೆ ಅಥವಾ ನೆಲೆಗಳನ್ನು ಬದಲಿಸುತ್ತಾ ವ್ಯವಹಾರ ನಡೆಸುವ ವ್ಯವಸ್ಥಿತ ಗುಂಪುಗಳು ಬೆಂಗಳೂರು ಮತ್ತು ಮೈಸೂರಿನಲ್ಲಿವೆ.

ಹೊರ ದೇಶಗಳಲ್ಲಿ ಇರುವಂತೆ ಬೆಲೆವೆಣ್ಣುಗಳು/ವೇಶ್ಯೆಯರನ್ನು ಸರಬರಾಜು ಮಾಡುವ ಅಧಿಕೃತ ಸಂಸ್ಥೆಗಳು ಅಥವಾ ವ್ಯಕ್ತಿಗಳು ಬೆಂಗಳೂರು ಮತ್ತು ಮೈಸೂರಿನಲ್ಲಿ ಇಲ್ಲ. ಕೆಲವು ಪ್ರತಿಷ್ಟಿತರು ತಮ್ಮ ತಮ್ಮಲ್ಲಿಯೇ ಗಂಡ ಹೆಂಡತಿಯರನ್ನು ವಿನಿಯಮ ಮಾಡಿಕೊಳ್ಳುವ (ಇಷ್ಟ ವಿದ್ದರೂ / ಇಲ್ಲದಿದ್ದರೂ) ಪದ್ಧತಿಗಳು ಹುಟ್ಟಿಕೊಂಡಿವೆ. ಭಾರಿ ಸಂಖ್ಯೆಯಲ್ಲಿ ಜನ ಕೆಲಸ ಮಾಡುವ ಪ್ರದೇಶಗಳಲ್ಲಿ ಲೈಂಗಿಕ ಶೋಷಣೆ ಹೆಚ್ಚು. ಅನಿವಾರ್ಯ ಒಪ್ಪಿಗೆಯ ಮೇರೆಗೆ ಹಲವರೊಡನೆ ಲೈಂಗಿಕ ಸಂಪರ್ಕ ಇಟ್ಟುಕೊಳ್ಳವವರ ಸಂಖ್ಯೆ ಹೆಚ್ಚಾಗುತ್ತಿರುವುದನ್ನು ಕೆಲವು ಸಂಸ್ಥೆಗಳು ಗುರುತಿಸಿವೆ. ಹಾಗೆಯೇ ಲೈಂಗಿಕವಾಗಿ ಹರಡುವ ರೋಗಗಳು, ಸುರಕ್ಷಿತ ಲೈಂಗಿಕ ಸಂಬಂಧ ಸಂಪರ್ಕಗಳ ಬಗ್ಗೆ ವ್ಯಾಪಕ ಪ್ರಚಾರ, ಮಾಹಿತಿ ನೀಡುವಲ್ಲಿ ಬೆಂಗಳೂರಿನಲ್ಲಿ ಈ ಸಮಸ್ಯೆಯನ್ನು ಎದುರಿಸಿ ಹತ್ತಾರು ಸಂಸ್ಥೆಗಳು ಕೆಲಸ ಮಾಡುತ್ತಿವೆ. ಸಾಮಾನ್ಯವಾಗಿ ಅವರು ಹೇಳುವಂತೆ ಈ ಸಮಸ್ಯೆ ಇಷ್ಟೊಂದು ಅಗಾಧವಾಗಿ ಬೆಳೆಯಲು ಸಂಪಾದನೆ ಒಂದೇ ಕಾರಣವಲ್ಲ. ಜಾಗತೀಕರಣ ಪ್ರಭಾವದಿಂದ ಕಾಲ ಸಾಗಿದಂತೆ ದೈಹಿಕ, ಲೈಂಗಿಕ ಮನರಂಜನೆ, ಸುಖದ ಹೊಸ ಹೊಸ ವ್ಯಾಖ್ಯಾನಗಳು, ಮಾಧ್ಯಮಗಳಲ್ಲಿ ಯಾವುದೇ ಎಗ್ಗಿಲ್ಲದೆ ಜಗಜ್ಜಾಹೀರಾಗುತ್ತಿರುವ ಲೈಂಗಿಕ ವಿಚಾರ, ವಿಕೃತಿಗಳು ಇಡೀ ಸಮಸ್ಯೆಗೆ ಹೊಸ ಹೊಸ ಆಯಾಮಗಳನ್ನು ಮತ್ತು ಬಿಡಿಸಲಾಗದ ಕಗ್ಗಂಟುಗಳನ್ನು ಸೃಷ್ಟಿಸುತ್ತಿದೆ.

ಬೆಂಗಳೂರಿನಲ್ಲಿ ವ್ಯವಸ್ಥಿತವಾದ ಕೆಂಪುದೀಪ ಪ್ರದೇಶವಿಲ್ಲ, ಇದರಿಂದಾಗಿ ಬೆಂಗಳೂರಿನಲ್ಲಿ ಎಲ್ಲಿ ಯಾವ ವಿಧದ ಲೈಂಗಿಕ ವ್ಯವಹಾರದಲ್ಲಿ ಎಷ್ಟು ಜನ ತೊಡಗಿಕೊಂಡಿದ್ದಾರೆ ಮತ್ತು ಅಲ್ಲಿ ಸಾಗಾಣಿಕೆಗೊಂಡ ಹೆಣ್ಣುಮಕ್ಕಳು ಯಾರು ಎಂಬುದನ್ನು ಮತ್ತು ಅವರ ಸಮಸ್ಯೆಗಳೇನು ಎಂಬುದನ್ನು ತಿಳಿಯುವುದು ಕಷ್ಟವಾಗಿದೆ. ಇದು ಲೈಂಗಿಕ ವ್ಯವಹಾರ ಉದ್ದೇಶದಿಂದ ಕೆಲಸ ಮಾಡುತ್ತಿರುವ ಕೆಲವು ಸ್ವಯಂ ಸೇವಾ ಸಂಘಟನೆಗಳ ಅಭಿಪ್ರಾಯ. ಬೆಂಗಳೂರು ಜಿಲ್ಲೆಯಲ್ಲಿ ಲೈಂಗಿಕ ವ್ಯವಹಾರ ಶೋಷಣೆಗೆ ಒಳಗಾಗಿರುವ ಬಹುತೇಕ ಹೆಣ್ಣುಮಕ್ಕಳು ಸದಾ ವಲಸಿಗರೆಂದು ಹೇಳಬಹುದು. ದೂರದ ಊರುಗಳಿಂದ ಬಂದು ಸಂಜೆ ವೇಳೆಗೆ ಊರು ಸೇರಿಕೊಳ್ಳುವ ಗುಂಪು ಇವೆ. ಇವರ ವ್ಯವಹಾರದಲ್ಲಿ ಹಗಲಿನಲ್ಲಿಯೇ ಜನಭರಿತ ಪ್ರದೇಶಗಳಲ್ಲಿ. ನಗರ ಕೇಂದ್ರ ಬಸ್ಸ್‌ನಿಲ್ದಾಣ, ರೈಲು ನಿಲ್ದಾಣ, ಕೆಂಪೇಗೌಡ ರಸ್ತೆಯ ಸುತ್ತಮುತ್ತ, ಶಿವಾಜಿನಗರ, ಕೃಷ್ಣರಾಜ ಮಾರುಕಟ್ಟೆ, ಚಿಕ್ಕಪೇಟೆ, ಎಲೆಕ್ಟ್ರಾನಿಕ್ ಸಿಟಿ, ಮಾಲ್‌ಗಳು ಇರುವ ಕಡೆ ನಡೆದು ಹೋಗುತ್ತದೆ. ಅವರದೇ ಒಂದು ರೀತಿಯ ಸಂಪರ್ಕ ವ್ಯವಸ್ಥೆ, ತಲೆಹಿಡುಕರ ಗುಂಪು, ನಿಗದಿಯಾದ ಕಾನೂನು ಬಾಹಿರ (ರೌಡಿ) ರಕ್ಷಣಾಪಡೆ, ನಿರ್ದಿಷ್ಟ ವಸತಿಗಳು, ಪೋಲೀಸರು, ನ್ಯಾಯಾಲಯ, ಕಾನೂನು ತೊಡಕಾದಲ್ಲಿ ಬಿಡಿಸಿಕೊಳ್ಳುವ ಸಮಾಲೋಚನೆಗಳನ್ನು ನಡೆಸುತ್ತಿವೆ. ಈ ಎಲ್ಲವನ್ನು ಸಂಪೂರ್ಣವಾಗಿ ತಿಳಿಯಲು ಹೋಗುವುದು ಜೇನುಗೂಡಿಗೆ ಕೈ ಹಾಕಿದಂತೆಯೇ ಸರಿ ಆಗಾಗ್ಗೆ ಕೆಲವು ಪತ್ರಿಕೆಗಳಲ್ಲಿ ಈ ಪ್ರಕರಣಗಳ ಕುರಿತು ಪ್ರಕಟವಾಗುವ ತನಿಖಾ ವರದಿಗಳು ಅವರು ಕೊಡುವ ಅಂಕಿ ಅಂಶಗಳು, ಕಾನೂನಿನ ಕ್ರಮ ಕೈಗೊಂಡಾಗ ಹೊರ ಬೀಳುವ ಪ್ರಭಾವಿಗಳ ದೊಡ್ಡ ಹೆಸರುಗಳು ಇಡೀ ಪ್ರಕರಣವನ್ನು ವೈಭವೀಕರಿಸಿ ವರ್ಣಿಸುವ ರೀತಿ ಜನ ಸಾಮಾನ್ಯರನ್ನು ಮಾನಸಿಕವಾಗಿ ವಿಚಲಿತರನ್ನಾಗಿಸುತ್ತದೆ. ಬೆಂಗಳೂರು ಮತ್ತು ಮೈಸೂರು ಜಿಲ್ಲೆಗಳಲ್ಲಿ ನಡೆಯುತ್ತಿರುವ ಕಾನೂನು ಬಾಹಿರ ಲೈಂಗಿಕ ಚಟುವಟಿಕೆಗಳ ಬಗ್ಗೆ ಯಾರಿಗೂ ನಿರ್ದಿಷ್ಟವಾದ ಅಂಕಿ-ಸಂಖ್ಯೆ, ವ್ಯಾಪ್ತಿ, ಆಳ-ಅಗಲವನ್ನು ತಿಳಿಸಲು ಇನ್ನೂ ಸಾಧ್ಯವಾಗಿಲ್ಲ.

ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ ಮತ್ತು ಮೈಸೂರು ಜಿಲ್ಲೆಗಳಲ್ಲಿ ಸದಾಕಾಲಕ್ಕೂ ವಿವಾಹ ಸಂಬಂಧದ ಹೊರಗಿನ ಲೈಂಗಿಕ ಸಂಪರ್ಕಕ್ಕಾಗಿ ಬೇಡಿಕೆ ಬೆಳೆಯುತ್ತಲೇ ಇದೆ. ಇಪ್ಪತ್ತನೇಯ ಶತಮಾನದ ಎಂದರೆ ದಶಕದ ತನಕ ಸಾರ್ವಜನಿಕ ಉದ್ದಿಮೆಗಳ ಭರಾಟೆ, ವಾಣಿಜ್ಯ ವ್ಯವಹಾರಗಳಿಗೆ ಮತ್ತು ಪ್ರವಾಸೋದ್ಯಮಕ್ಕೆ ಬರುವವರ ಸಂಖ್ಯೆ, ಹಣವಿರುವವರ ಹಾಗೂ ಹೊಸ ಅನುಭವಗಳಿಗೆ ತುಡಿಯುವವರಿಂದಾಗಿ ನಗರಗಳು ವೇಶ್ಯೆಯರಿಗೆ ಸ್ಥಾನ ಒದಗಿಸಿದ್ದವು. ಆದರೆ ಇಂದಿನ ದಿನಗಳಲ್ಲಿ ಮಾಹಿತಿ ತಂತ್ರಜ್ಞಾನದ ಉದ್ದಿಮೆಗಳ ಫಲವಾಗಿ ಕಾನೂನು ಬಾಹಿರ ಚಟುವಟಿಕೆಗಳಿಗೆ ಹೆಚ್ಚು ಬೇಡಿಕೆಯಿದೆ. ಬೀದಿಯಲ್ಲಿ ಬದುಕುವ ಅನಾಥ ಮಕ್ಕಳು ಈ ಸಮಸ್ಯೆಯ ಮೊದಲ ಬಲಿ. ಹಾಗೆಂದು ಕೌಟುಂಬಿಕ ವ್ಯವಸ್ಥೆಯಲ್ಲಿರುವ ಹಾಗೂ ಇನ್ನಾರದೋ ರಕ್ಷಣೆಯಲ್ಲಿರುವ ಮಕ್ಕಳು ಹೆಣ್ಣುಮಕ್ಕಳ ಮೇಲೆ ಪ್ರಭಾವ ಬೀರದೆ ಇರುವುದಿಲ್ಲ. ಈಗಿರುವ ಈ ಅನಿಷ್ಟ ಬೇಡಿಕೆಗೆ ಪೂರೈಕೆಗಳನ್ನು ಗಮನಿಸಿದರೆ ಇಡೀ ಸರ್ಕಾರ, ಸಮಾಜ ನಮ್ಮ ಮಕ್ಕಳನ್ನು, ಹೆಣ್ಣು ಮಕ್ಕಳನ್ನು ರಕ್ಷಿಸುವ, ತಮ್ಮನ್ನು

ತಾವು ರಕ್ಷಿಸಿಕೊಳ್ಳುವ ವಿಧಾನ, ಇವುಗಳನ್ನು ಒದಗಿಸುವ ತಿಳಿಸುವ ತರಬೇತಿ ನೀಡುವ ಬೃಹತ್ ವ್ಯವಸ್ಥೆಯನ್ನೇ ಮಾಡಬೇಕಿದೆ. ಹೆಣ್ಣು ಮಕ್ಕಳನ್ನು ಅಪಹರಿಸಿ ಇಲ್ಲವೇ ಆಮಿಷ ತೋರಿಸಿ, ಅನೈತಿಕ ಸಾಗಾಣಿಕೆ ಮಾಡುವ ಜಾಲಗಳನ್ನು, ಲೈಂಗಿಕ ಶೋಷಣೆಗೆ ದೂಡುವ ಗುಂಪುಗಳನ್ನು ಪತ್ತೆ ಹಚ್ಚಿ ಕಠಿಣ ಶಿಕ್ಷೆಗೆ ಗುರಿಪಡಿಸಬೇಕಾಗಿದೆ.

ಶೋಷಣೆಯೇ ಪ್ರಧಾನವಾಗಿರುವ ಈ ಅನೈತಿಕ ಸಾಗಾಣಿಕೆಯಲ್ಲಿ ಯಾರೋ ಮೂರನೆಯವರು ಲಾಭ ಮಾಡುವವರೆ ಪ್ರಭಾವಿಗಳು ಎಂದರೆ ತಪ್ಪಿಲ್ಲ ಇಂತಹ ಬದುಕಿನ ಸುಳಿಯಲ್ಲಿ ಸಿಲುಕಿದವರಿಗೆ ದುಃಖ ಹಂಚಿಕೊಳ್ಳಲು, ಸಮಾಲೋಚನೆ ಮಾಡಲು, ಆರೋಗ್ಯ ತಪಾಸಣೆ ಮಾಡಲು, ಸಲಹೆ ನೀಡಲು, ರಕ್ಷಿಸಲು, ಹೊಸ ಬದುಕು ರೂಢಿಸಿಕೊಳ್ಳಲು ಸಹಾಯ ಮಾಡಲೆಂದೇ ಕೆಲವು ಸಂಸ್ಥೆಗಳು ಇವೆ. ಸಂರಕ್ಷಾ, ಸುರಕ್ಷಾ, ಜಾಗ್ರತಿ, ನೆಲೆ, ಡಿಸ್ಕ್ ನವಜೀವನ್, ಸ್ಪಾಡ್ ಅಪ್ಸಾ, ಬೋರೂಕಾ ಚಾರಿಟಬಲ್ ಟ್ರಸ್ಟ್, ವಿಮೋಚನಾ, ಹೆಂಗಸರ ಹಕ್ಕಿನ ಸಂಘ, ಪ್ರೇರಣಾ ವಿಕಾಸ ವೇದಿಕೆ, ಪಯಣ, ಜನವಾದಿ ಮಹಿಳಾ ಸಂಘಟನೆ, ಒಡನಾಡಿ ಸೇವಾ ಟ್ರಸ್ಟ್, ದೇವದಾಸಿ ವಿಮೋಚನ ಕೇಂದ್ರ, ಕರ್ನಾಟಕ ರಾಜ್ಯ ಮಹಿಳಾ ದೌರ್ಜನ್ಯ ವಿರೋಧಿ ಒಕ್ಕೂಟ ಮುಂತಾದವು ಲೈಂಗಿಕ ದೌರ್ಜನ್ಯಕ್ಕೊಳಗಾದ ಮಹಿಳೆಯರು ಮತ್ತು ಮಕ್ಕಳನ್ನು ರಕ್ಷಿಸುವುದು ಅವರಿಗೆ ಅಗತ್ಯವಾದ, ಪಾಲನೆ, ಪೋಷಣೆ, ಆರೋಗ್ಯ ಶಿಕ್ಷಣ, ವೃತ್ತಿ ತರಬೇತಿ ಮೂಲಕ ಮತ್ತು ಸುರಕ್ಷಿತ ಲೈಂಗಿಕತೆಯ ಬಗ್ಗೆ ಮನನ ಮಾಡಿಸುವ ಪ್ರಯತ್ನ ಮಾಡುತ್ತಿವೆ.

ಪ್ರಜಾವಾಣಿ ಪತ್ರಿಕೆಯಲ್ಲಿ ವರದಿಯಾದಂತೆ ಹುಡುಗಿಯರು ಮತ್ತು ಮಹಿಳೆಯರ ನಾಪತ್ತೆ, ಅಪಹರಣ ಪ್ರಕರಣಗಳು ರಾಜ್ಯದಲ್ಲಿ ಹೆಚ್ಚುತ್ತಿದ್ದು ಇದನ್ನು ನಿಯಂತ್ರಿಸುವ ಸಲುವಾಗಿ ಒಂಬತ್ತು ಜಿಲ್ಲೆಗಳಲ್ಲಿ ಮಾನವ ಕಳ್ಳಸಾಗಾಣೆ ತಡೆ ಘಟಕಗಳನ್ನು ಆರಂಭಿಸಲಾಗಿದೆ ಎಂದು ೨೦೧೬ರಲ್ಲಿ ಗೃಹ ಸಚಿವ ಕೆ.ಜೆ.ಜಾರ್ಜ್ ವಿಧಾನಸಭೆಗೆ ತಿಳಿಸಿದರು. ೨೦೧೪ ಹಾಗೂ ೨೦೧೫ರಲ್ಲಿ ಒಟ್ಟು ೪,೨೪೯ ಹೆಣ್ಣು ಮಕ್ಕಳ ಹಾಗೂ ೧೦,೧೧೨ ಮಹಿಳೆಯರ ನಾಪತ್ತೆ, ಅಪಹರಣ ಪ್ರಕರಣಗಳು ದಾಖಲಾಗಿವೆ. ಈ ಪೈಕಿ ೧೧,೨೮೩ ಮಂದಿ ಪತ್ತೆಯಾಗಿದ್ದಾರೆ, ಕಾಣೆಯಾದವರಲ್ಲಿ ೭೧ಮಂದಿ ಮೃತಪಟ್ಟಿದ್ದಾರೆ. ಮಾನವ ಕಳ್ಳಸಾಗಾಣೆ ತಡೆ ಘಟಕಗಳ ಅಧೀನದಲ್ಲಿ, ಪೊಲೀಸ್ ಠಾಣಾ ಮಟ್ಟದಿಂದ ಜಿಲ್ಲಾ ಮಟ್ಟದವರೆಗೆ ನೋಡಲ್ ಅಧಿಕಾರಿಗಳನ್ನು ನೇಮಿಸಿ, ಇಂತಹ ಪ್ರಕರಣಗಳನ್ನು ನಿಭಾಯಿಸುವ ಬಗ್ಗೆ ತರಬೇತಿ ನೀಡುವುದಾಗಿ ಅಪಹರಿಸಿದವರನ್ನು ಅನೈತಿಕ ಚಟುವಟಿಕೆಗೆ, ಭಿಕ್ಷಾಟನೆಗೆ ದೂಡಿರುವುದೂ ಕಂಡು ಬಂದಿದೆ ಸ್ವಯಂ ಸೇವಾ ಸಂಘಟನೆಗಳ ನೆರವಿನಿಂದ ಇಂತಹವರನ್ನು ಪತ್ತೆ ಹಚ್ಚಿ, ಪುನರ್ವಸತಿ ಕಲ್ಪಿಸಲು ಅಥವಾ ಪೋಷಕರಿಗೆ ಒಪ್ಪಿಸಲು ಸರ್ಕಾರ ಕಾರ್ಯಕ್ರಮ ಹಮ್ಮಿಕೊಂಡಿದೆ. ನಾಪತ್ತೆಯಾದ ಮಕ್ಕಳ ಪತ್ತೆಗಾಗಿ ೨೦೧೫ರ ಜನವರಿಯಲ್ಲಿ 'ಆಪರೇಷನ್ ಸ್ಮೈಲ್' ಹಾಗೂ ಜುಲೈನಲ್ಲಿ 'ಆಪರೇಷನ್ ಮುಸ್ಕಾನ್' ಎಂಬ ವಿಶೇಷ ಕಾರ್ಯಕ್ರಮವನ್ನು ಮಾಡಿದೆ.

ಕೌಟುಂಬಿಕ ದೌರ್ಜನ್ಯ, ದ್ವೇಷ, ಐಷಾರಾಮಿ, ಜೀವನದ ತುಡಿತ, ಬಡತನ, ಪರೀಕ್ಷೆಯಲ್ಲಿ ಅನುತ್ತೀರ್ಣವಾಗುವುದು, ಪ್ರೇಮ ಪ್ರಕರಣ, ಬಲವಂತದ ಮದುವೆ, ಪೋಷಕರ ಜೊತೆ ವೈಮನಸ್ಸು ಮುಂತಾದವು ನಾಪತ್ತೆ ಪ್ರಕರಣಗಳಿಗೆ ಪ್ರಮುಖ ಕಾರಣಗಳು. ಅಪ್ರಾಪ್ತ ವಯಸ್ಸಿನವರು ನಾಪತ್ತೆಯಾದರೆ ಅಪಹರಣ ಎಂದೇ ಎಫ್.ಐ.ಆರ್ ದಾಖಲಿಸಲಾಗುತ್ತದೆ. ಅಪಹರಣಕ್ಕೊಳಗಾದವರ ಪೈಕಿ ಹೆಚ್ಚಿನವರು ೧೮ ವರ್ಷದೊಳಗಿನವರು ಅಂದರೆ ಅಪಹರಣದ ಹಿಂದೆ ಯಾವುದೇ ಜಾಲ ಇರುವುದು ಕಂಡುಬಂದಿಲ್ಲ ಎಂದು ಸರ್ಕಾರ ಹೇಳುತ್ತದೆ.

ಕರ್ನಾಟಕ ಸರ್ಕಾರವು ಕರ್ನಾಟಕ ಅನೈತಿಕ ಸಾಗಾಣಿಕೆ (ತಡೆಗಟ್ಟುವಿಕೆ) ನಿಯಮಗಳು ೧೯೮೯, ಮಾನವ ಕಳ್ಳಸಾಗಾಣೆ ವಿರೋಧಿ ಕೋಶಗಳನ್ನು ರೂಪಿಸಿದೆ. ಬೆಂಗಳೂರು ನಗರ, ಹುಬ್ಬಳ್ಳಿ, ಧಾರವಾಡ, ಮೈಸೂರು, ಬೆಳಗಾವಿ, ದಕ್ಷಿಣ ಕನ್ನಡ, ಕಲಬುರ್ಗಿ, ರಾಯಚೂರು, ಬಿಜಾಪುರ ಮತ್ತು ದಾವಣಗೆರೆಗಳಲ್ಲಿ ನೋಡಲ್ ಅಧಿಕಾರಗಳನ್ನು ನೇಮಿಸಿದೆ. ಮಾನವ ಕಳ್ಳಸಾಗಾಣೆ ಪ್ರಕರಣಗಳನ್ನು ಎದುರಿಸಲು ೪೦ ಪೋಲೀಸ್ ಠಾಣೆ ಮಿತಿಗಳಲ್ಲಿ ವಿಶೇಷ ಕಾರ್ಯಪಡೆ ಸಮಿತಿಯನ್ನು ರಚಿಸಲಾಗಿದೆ. ೨೦೧೬ರಲ್ಲಿ ಗೃಹ ಸಚಿವರಾಗಿದ್ದ. ಡಾ.ಜಿ.ಪರಮೇಶ್ವರರು ನೀಡಿದ ಹೇಳಿಕೆಯ ಪ್ರಕಾರ ಮಾನವ ಕಳ್ಳಸಾಗಾಣೆಗಾಗಿ ಬಂಧಿಸಿದ ಕಳ್ಳಸಾಗಾಣೆದಾರರ ಸಂಖ್ಯೆ ೨೦೧೪-೨೦೧೬ರ ವರೆಗೆ ೧೦೬೧ ಆಗಿದೆ. ಮಹಿಳೆಯರು ಮತ್ತು ಮಕ್ಕಳ ಕಳ್ಳಸಾಗಾಣೆ ಸಮಸ್ಯೆಗಳನ್ನು ಎದುರಿಸಲು ವಿಶೇಷ ಕಾರ್ಯ ಘಟಕದ ಸ್ಥಾಪನೆಗೆ ಅವರು ಶಿಫಾರಸು ಮಾಡಿದರು (ಸಂಯುಕ್ತ ಕರ್ನಾಟಕ ಬೆಂಗಳೂರು ಸಂಚಿಕೆ ನಂ.೩೦ ೨೦೧೬, ಪುಟ-೬).

ಮಾನವ ಕಳ್ಳಸಾಗಾಣೆ ಸಮಸ್ಯೆಯನ್ನು ನಿಭಾಯಿಸುವಲ್ಲಿ ಕಾನೂನು ಜಾರಿ ಅಧಿಕಾರಿಗಳು ಪ್ರಮುಖ ಪಾತ್ರ ವಹಿಸುತ್ತಾರೆ. ಕಳ್ಳಸಾಗಾಣೆ ಸಮಸ್ಯೆಯನ್ನು ಸಮರ್ಥವಾಗಿ ಮತ್ತು ಪರಿಣಾಮಕಾರಿಯಾಗಿ ನಿಭಾಯಿಸಲು ಮತ್ತು ಶಿಕ್ಷೆಯನ್ನು ವಿಧಿಸಲು ಪೋಲೀಸರು, ಎನ್.ಜಿ.ಒಗಳು ಸರ್ಕಾರಗಳ ನಡುವೆ ಸಮನ್ವಯವು ಬಹಳ ಅತ್ಯಗತ್ಯ.

**ಉಪಸಂಹಾರ**

ವೇಶ್ಯಾವೃತ್ತಿಯು ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಮೂಲವಾಗಿದೆ. ಇದೊಂದು ಮೋಜು ಭರಿತ, ಲಾಭದಾಯಿಕ ಉದ್ಯಮವಾಗಿ ವಿಸ್ತರಿಸಿಕೊಳ್ಳುತ್ತಲೇ ಇದೆ. ತಂತ್ರಜ್ಞಾನಗಳಲ್ಲಿನ ನವೀನ ರೀತಿಯ ಶೋಧನೆಗಳು ಈ ಸಮಸ್ಯೆಯ ಸ್ವರೂಪ ಭಿನ್ನ ಆಯಾಮಗಳಲ್ಲಿ ಕಾಣಿಸಿಕೊಳ್ಳಲು ಕಾರಣವಾಗಿದೆ. ಮೊಬೈಲ್, ಅಂತರ್ಜಾಲಗಳ ದುರ್ಬಳಕೆಯಿಂದ ಈ ಸಮಸ್ಯೆಯು ಮತ್ತಷ್ಟು ಹೆಚ್ಚಾಗುತ್ತಿದೆ. ಆದರೆ ಲೈಂಗಿಕ ಉದ್ದೇಶಗಳಿಗಾಗಿ ಹೆಣ್ಣು ಮಕ್ಕಳ ಅನೈತಿಕ ಮಾರಾಟ ಸಂಗತಿಗಳು ಸಾಮಾನ್ಯವಾಗಿ ವರದಿಯಾಗುವುದಿಲ್ಲ. ಏಕೆಂದರೆ, ಇದು ಗೌಪ್ಯವಾಗಿ ನಡೆಯುತ್ತಿರುವ ಚಟುವಟಿಕೆಯಾಗಿದೆ. ಆದ್ದರಿಂದ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆ ಬಗ್ಗೆ ನಿಖರವಾದ ಅಂಕಿ-

ಅಂಶಗಳು, ಸಾಕ್ಷಾಧಾರಗಳು ದೊರೆಯುವುದು ಕಷ್ಟಸಾಧ್ಯವಾಗಿದೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿನ, ಲಿಂಗಸಂಬಂಧಿ ತಾರತಮ್ಯ, ಸಾಂಪ್ರದಾಯಿಕ ಮತ್ತು ಧಾರ್ಮಿಕ ಆಚರಣೆಗಳು, ಮೂಢನಂಬಿಕೆ, ಪುರುಷಶಾಹಿ ಕುಟುಂಬ ವ್ಯವಸ್ಥೆ ಮತ್ತು ಮೌಲ್ಯಗಳು ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಗೆ ಕಾರಣಗಳಾಗುತ್ತಿವೆ. ಆದ್ದರಿಂದ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಗೆ ಕಾರಣವಾಗಿರುವ ವಿವಿಧ ಆಯಾಮಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಅಭ್ಯಸಿಸುವುದು ಮುಖ್ಯವಾಗಿದೆ. ಇದರ ಮೂಲಕ ಸಾಮಾಜಿಕ ಸಂರಚನೆಯಲ್ಲಿ ಅಂಚಿಗೆ ತಳ್ಳಲ್ಪಟ್ಟ ಮಹಿಳೆಯರ ಮೇಲಿನ ಶೋಷಣೆಯ ಸ್ವರೂಪವನ್ನು ಸಮಾಜದ ಮುಖ್ಯವಾಹಿನಿ ಗಮನಕ್ಕೆ ತರಬೇಕು. ಈ ಸಮಸ್ಯೆಯ ನಿವಾರಣೆಗೆ ಪೂರಕವಾದ ಕಾರ್ಯ ಚಟುವಟಿಕೆಗಳನ್ನು ಜಾರಿಗೆ ತರಲು ಪ್ರಯತ್ನಿಸುವುದು ನಮ್ಮ ಕರ್ತವ್ಯವಾಗಿದೆ.

**ಪರಾಮರ್ಶನ ಗ್ರಂಥಗಳು**


೧. ಕನ್ನಡ ಸಂಶೋಧನೆಯ ವೈಧಾನಿಕತೆಗಳು, ಅಮರೇಶ ನುಗಡೋಣಿ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೮

೨. ಸ್ತ್ರೀವಾದಿ ಸಂಶೋಧನೆ ವಿಧಿ-ವಿಧಾನಗಳು, ಎಚ್. ಎಸ್. ಶ್ರೀಮತಿ, ಪ್ರಗತಿ ಗ್ರಾಫಿಕ್ಸ, ಬೆಂಗಳೂರು, ೨೦೧೨.

೩. ಮಹಿಳಾ ಜಾಗೃತಿಯ ಪ್ರಕಟಣೆ, ಮಂಜುಶ್ರೀ ಆಫಸೆಟ್ ಪ್ರಿಂಟರ್ಸ್, ಬೆಂಗಳೂರು, ೧೯೯೯.

೪. ಚಹರೆ, ಎಚ್. ಎಸ್. ಶ್ರೀಮತಿ, ಇಳಾ ಮುದ್ರಣ, ಚಾಮರಾಜಪೇಟೆ, ಬೆಂಗಳೂರು.

೫. ಪಾತರದವರು, ಶೈಲಜಾ ಹಿರೇಮಠ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೬ ದಿ ಸೆಕೆಂಡ ಸೆಕ್ಸ, ಎಚ್. ಎಸ್. ಶ್ರೀಮತಿ (ಅನು), ಅಧ್ಯಯನ ಮಂಡಳಿ, ಬೆಂಗಳೂರು, ೨೦೦೭.

೭ ಭೂಮಿಕಾ, ಪ್ರಜಾವಾಣಿ ಪತ್ರಿಕೆ, ೨೭, ಏಪ್ರಿಲ್ ೨೦೧೩.

ಅಧ್ಯಾಯ : ಎರಡು

# ಅಧ್ಯಯನಕ್ಕೆ ಸಂಬಂಧಿಸಿದ ಸಾಹಿತ್ಯ ಸಮೀಕ್ಷೆ

ವಿಶ್ವದಾದ್ಯಂತ ಅನೈತಿಕ ಸಾಗಾಣಿಕೆಯು ನಡೆಯುತ್ತಿದ್ದು, ಔಷಧಿಗಳು ಮತ್ತು ಶಸ್ತ್ರಾಸ್ತ್ರಗಳ ನಂತರ ಮೂರನೇ ದೊಡ್ಡ ಕ್ರಿಮಿನಲ್ ವ್ಯಾಪಾರವಾಗಿ ಮಾರ್ಪಟ್ಟಿದೆ. ಬಲವಂತದ ಕಾರ್ಮಿಕರನ್ನಾಗಿಸಲು ಮತ್ತು ಸೇವೆಗಳಿಗೆ, ಒತ್ತಾಯದ ಮದುವೆಗೆ, ಅಂಗಾಂಗ ವ್ಯಾಪಾರಕ್ಕೆ, ಜೀತದಾಳುಗಳಾಗಿ ಮತ್ತು ಹೆಚ್ಚಿನ ಪ್ರಮಾಣದಲ್ಲಿ ಲೈಂಗಿಕ ಚಟುವಟಿಕೆಗಳಿಗೆ ಬಳಸಲಾಗುತ್ತಿದೆ. ಹೀಗೆ ಸಾಗಾಣಿಕೆಯ ಮೂಲಕ ಕಾಣೆಯಾಗುತ್ತಿರುವ ಹೆಣ್ಣುಮಕ್ಕಳು, ಮಹಿಳೆಯರ ಬಗ್ಗೆ ಮಕ್ಕಳ ಹಕ್ಕುಗಳಿಗಾಗಿ ಹೋರಾಟ ಮಾಡುತ್ತಿರುವ ನಾಗರೀಕ ಸಂಸ್ಥೆಗಳು, ಮಹಿಳಾ ಸಂಘಟನೆಗಳು ಮತ್ತು ಆಸಕ್ತ ನಾಗರೀಕರು ಧ್ವನಿ ಎತ್ತುತ್ತಲೇ ಇದ್ದರೂ, ಈ ಸಮಸ್ಯೆಯನ್ನು ಕುರಿತಂತೆ ಸಮಾಜದ ಹಾಗೂ ಆಡಳಿತಾತ್ಮಕ ವ್ಯವಸ್ಥೆಯ ಪ್ರಕ್ರಿಯೆ ನೀರಸವಾಗಿದೆ. ಈ ಸಮಸ್ಯೆಯನ್ನು ಮಾನವ ಹಕ್ಕುಗಳು ಹಾಗೂ ಮಾನವ ಸಂಬಂಧಗಳ ಜೊತೆಗೆ ಸ್ತ್ರೀವಾದಿ ದೃಷ್ಟಿಕೋನದ ಚೌಕಟ್ಟಿನಲ್ಲಿಯೂ ವಿಶ್ಲೇಷಿಸಬೇಕಾದ ಅಗತ್ಯವಿದೆ.

ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯು ಲೈಂಗಿಕ ಉದ್ದೇಶಗಳಿಗಾಗಿ ನಡೆಯುತ್ತಿರುವುದರಿಂದ ಇದಕ್ಕೆ ಸಂಬಂಧಿಸಿದ ಸಂಗತಿಗಳು ಸಾಮಾನ್ಯವಾಗಿ ವರದಿಯಾಗುವುದಿಲ್ಲ. ಏಕೆಂದರೆ, ಇದು ಗೌಪ್ಯವಾಗಿ ನಡೆಯುವಂತ ಕೃತ್ಯವಾಗಿದೆ. ಆದ್ದರಿಂದ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯ ಬಗ್ಗೆ ನಿಖರವಾದ ಅಂಕಿ ಅಂಶಗಳು, ಸಾಕ್ಷಾಧಾರಗಳು ದೊರೆಯುವುದು ಕಷ್ಟ ಮತ್ತು ಹೆಚ್ಚಿನ ಅಧ್ಯಯನಗಳು ಸಹ ಈ ವಿಷಯಕ್ಕೆ ಸಂಬಂಧಿಸಿದಂತೆ ನಡೆದಿಲ್ಲದಿರುವುದರಿಂದ ಈ ವಿಷಯದ ಕುರಿತು ಮಾಹಿತಿ ಸಂಗ್ರಹಿಸುವುದು ಬಹಳ ಕಷ್ಟದ ಹಾದಿಯಾಗಿದೆ.

ನಮ್ಮ ಭಾರತೀಯ ಪುರುಷ ಶಾಹಿ ಸಾಂಪ್ರದಾಯಿಕ ಚಿಂತನೆಗಳಿಂದ ಕೂಡಿದ ಸಾಮಾಜಿಕತೆಯಲ್ಲಿ ಹೆಣ್ಣು ಆಧುನಿಕತೆಗೆ ಎಷ್ಟೇ ಮುಖಾಮುಖಿಯಾಗುತ್ತಿದ್ದರೂ ಸಹ ಅವಳನ್ನು ಎರಡನೆಯ ದರ್ಜೆಯ ಪ್ರಜೆಯಾಗಿಯೇ ಗುರುತಿಸಲಾಗುತ್ತಿದೆ. ಜೊತೆಗೆ ಅವಳು ಭೋಗದ ವಸ್ತು ಎಂದು ಪರಿಗಣಿಸಿರುವ ಪುರುಷ ಪ್ರಧಾನ ಮತ್ತು ಬಂಡವಾಳಶಾಹಿ ಚಿಂತನೆಗಳು ಅವಳನ್ನು ಅರೆಬೆತ್ತಲೆಗೆ ತಂದು ನಿಲ್ಲಿಸಿವೆ. ಪ್ರಾಣಿಗಳ ಹಾಗೇ ಮಾರಾಟದ ವಸ್ತುವಾಗಿ ಪರಿಗಣಿಸಿವೆ. ಅವಳನ್ನು ಅನೈತಿಕ ವ್ಯವಹಾರಗಳಿಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಾಣಿಕೆ ಮಾಡುತ್ತಾ ಅದನ್ನು ಒಂದು ವ್ಯಾಪಾರಿ

ದೃಷ್ಟಿಕೋನದ ಉದ್ಯೋಗವಾಗಿ ಪರಿವರ್ತಿಸಿವೆ. ಹೀಗಾಗಿ ಎಲ್ಲ ಮಹಿಳೆಗೆ ಸಮಸ್ಯೆಗಳು, ಶೋಷಣೆಗಳು, ಇವೆಯೋ ಅಲ್ಲಿ ಸ್ತ್ರೀವಾದ ಮತ್ತು ಸ್ತ್ರೀವಾದಿ ಚಿಂತನೆಗಳು ಮಹತ್ವದ ಪಾತ್ರ ವಹಿಸಬೇಕಾಗಿರುವುದರಿಂದ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯ ಕುರಿತ ಸಾಹಿತ್ಯ ಸಮೀಕ್ಷೆಯನ್ನು ಕೈಗೊಂಡಿದ್ದು ಅವುಗಳನ್ನು ಮುಂದೆ ತಿಳಿಸಲಾಗುತ್ತದೆ.

**ಮಹಿಳಾ ಚಳುವಳಿ: ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ;** ಮಾನವ ಹಕ್ಕುಗಳ ಹೋರಾಟದ ಹಿನ್ನಲೆಯಲ್ಲಿ ಮಹಿಳೆಯರನ್ನು, ಮನುಷ್ಯ ಇತಿಹಾಸ ಕಂಡಿರುವ ಬಗೆಯನ್ನು ಮತ್ತು ನಮ್ಮ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ತರದಲ್ಲಿ ಮಹಿಳೆಗಾಗಿರುವ ಅನ್ಯಾಯವನ್ನು ಸಮಕಾಲೀನ ಆಲೋಚನೆಯೊಂದಿಗೆ **ಡಾ.ಹಾಲತಿ ಸೋಮಶೇಕರ್** ರವರು ಈ ಪುಸ್ತಕದಲ್ಲಿ ಚರ್ಚಿಸಿದ್ದಾರೆ. ಇದೇ ಸಂದರ್ಭದಲ್ಲಿ ಹೆಣ್ಣು ಮಕ್ಕಳನ್ನು ವಿವಿಧ ಕಾಲಘಟ್ಟಗಳಲ್ಲಿನ ದಾನದ ರೂಪದಲ್ಲಿ ಕೊಡುತ್ತಿದ್ದ ಬಗೆಯನ್ನು, ಮಾರಾಟ ಮಾಡುವ ಅಂಶಗಳನ್ನು ತಿಳಿಸುವ ಮೂಲಕ ಹೆಣ್ಣಿನ ದೇಹವನ್ನು ಒಂದು ವಸ್ತುವಿನಂತೆ ನಿರೂಪಿಸಿದ ಪುರುಷ ಪ್ರಧಾನ ಸಮಾಜದ ಮೌಲ್ಯಗಳನ್ನು ವಿವರಿಸಿದ್ದಾರೆ.

**ಮಹಿಳೆ ಮತ್ತು ಸವಾಲುಗಳು:** ಇತ್ತೀಚಿನ ದಿನಗಳಲ್ಲಿ ಎಲ್ಲಾ ವರ್ಗದ ಮಹಿಳೆಯರು ಸಾಮಾನ್ಯವಾಗಿ ಎದುರಿಸುತ್ತಿರುವ ಅತ್ಯಾಚಾರ, ಕೌಟುಂಬಿಕ ದೌರ್ಜನ್ಯ, ವರದಕ್ಷಿಣೆ, ಹೆಣ್ಣು ಶಿಶುಹತ್ಯೆ ಮತ್ತು ಅನೈತಿಕ ಸಾಗಾಣಿಕೆ ಹಾಗೂ ಲೈಂಗಿಕ ಕಿರುಕುಳದಂತಹ ಕ್ರೂರ ವರ್ತನೆಗಳಿಂದಾಗಿ ಮಹಿಳೆ ಮತ್ತು ಸಮಾಜದ ಮೇಲಾಗುವ ದುಷ್ಪರಿಣಾಮಗಳು ಹೇಗೆ ಭವಿಷ್ಯದ ಸಮಾಜವನ್ನು ದುಸ್ಥಿತಿಯತ್ತ ಕೊಂಡೊಯ್ಯುಬಹುದು ಎಂಬ ಎಚ್ಚರಿಕೆಯ ಅಂಶಗಳನ್ನು **ಡಾ.ಎಸ್.ಇಂದಿರಾ** ಅವರು ಸೂಕ್ಷ್ಮವಾಗಿ ತಿಳಿಸಿದ್ದಾರೆ.

**ಮಹಿಳೆ ಕಾನೂನು ಮತ್ತು ರಾಜಕಾರಣ:** ಲೇಖಕಿ **ಗೀತಾ ಕೃಷ್ಣಮೂರ್ತಿಯವರು** ಮಹಿಳೆ ಸಮಾಜದ ಅವಿಭಾಜ್ಯ ಅಂಗವಾದಂತೆ ಕಾನೂನು ಹಾಗೂ ರಾಜಕಾಣಗಳೂ ಹೌದು. ಇವೆರೆಡು ಮಹಿಳೆಯ ಜೀವನದಲ್ಲಿ ಅತಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಮಹಿಳೆಯು ಜೀವನದಲ್ಲಿ ಉನ್ನತಿಯನ್ನು ಸಾಧಿಸುವಲ್ಲಿ ಕಾನೂನಿನ ಪಾತ್ರವನ್ನು ತಿಳಿಸುತ್ತಾ ಯಾವ ಯಾವ ಸ್ಥರಗಳಲ್ಲಿ ಯಾವ ರೀತಿ ಮಹಿಳೆಯ ಮುನ್ನಡೆಯನ್ನು ತಡೆಯಲು ಈ ಕಾನೂನುಗಳು ಮತ್ತು ರಾಜಕಾಣಗಳು ಕಾರಣವಾಗಿವೆ ಎಂಬುದನ್ನು ವಿಶ್ಲೇಷಿಸಿದ್ದಾರೆ.

**ಮಹಿಳೆ ಸಮಾಜ ಮತ್ತು ಕಾನೂನು:** ಮಹಿಳೆಯನ್ನು ಭೋಗದ ವಸ್ತುವೆಂದು, ಕಾಮದ ಗೊಂಬೆ ಎಂದು ಭಾವಿಸುತ್ತಿರುವ ಇಂದಿನ ಆಧುನಿಕ ಸಮಾಜದಲ್ಲಿ ಮಹಿಳೆಯರ ವಿರುದ್ಧ ನಡೆಯುತ್ತಿರುವ ವಿವಿಧ ಬಗೆಯ ಅಪರಾಧಗಳಾದ ಅತ್ಯಾಚಾರ, ಅಪಹರಣ, ಚುಡಾಯಿಸುವಿಕೆ, ಅಸಭ್ಯ ವರ್ತನೆ, ಮಾನಭಂಗ, ಲೈಂಗಿಕ ಕಿರುಕುಳ ಮುಂತಾದ ಅಪರಾಧ ವ್ಯಾಪ್ತಿಯಲ್ಲಿ ಬರುವ ವಿಷಯಗಳ ಕುರಿತು **ಶ್ರೀ.ಬೆ.ಕಾ ಮೂತೀಶ್ವರಯ್ಯ**ರವರು ಈ ಪುಸ್ತಕದಲ್ಲಿ ಕೂಲಂಕುಶವಾಗಿ ಚರ್ಚಿಸಿದ್ದಾರೆ.

ಈ ಮೇಲಿನ ಉಲ್ಲೇಕಿಸಿದ ಪುಸ್ತಕಗಳ ಅಧ್ಯಯನದ ಮೂಲಕ ಮಹಿಳೆಯ ಕುರಿತು ಪುರುಷ ಪ್ರಧಾನ ಸಮಾಜದಲ್ಲಿ ಇರುವಂತಹ ಅಸಮಾನತೆ ಮತ್ತು ಮಹಿಳೆ ಅನುಭವಿಸುತ್ತಿರುವ ದೈಹಿಕ ಮತ್ತು ಮಾನಸಿಕ ಹಿಂಸೆಯನ್ನು ಅಂದಾಜಿಸಬಹುದಾಗಿದೆ. ಮಹಿಳೆಯರು ಎದುರಿಸುತ್ತಿರುವ ದೌಜನ್ಯವನ್ನು ಮತ್ತು ಕಾನೂನು ಹಾಗೂ ರಾಜಕಾರಣಗಳೂ ಸಹ ಮಹಿಳೆಯನ್ನು ಹೇಗೆ ಕಡೆಗಣಿಸಿ ನ್ಯಾಯದ ವಿಚಾರದಲ್ಲಿಯೂ ಅನ್ಯಾಯ ಮಾಡುತ್ತಿರುವುದನ್ನು ತಿಳಿಯಬಹುದು. ಆದರೆ ಯಾವುದೇ ಅಧ್ಯಯನಗಳು ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯ ಕುರಿತಾಗಿ, ಅದರ ಪ್ರಮಾಣದ ಕುರಿತಾಗಿ ತಿಳಿಸುವಲ್ಲಿ ಮತ್ತು ಅದು ಒಳಗೊಂಡಿರುವ ಸಂಪೂರ್ಣ ವ್ಯವಸ್ಥೆಯನ್ನು ಗುರುತಿಸುವಲ್ಲಿ, ವಿವರಿಸುವಲ್ಲಿ ವಿಫಲವಾಗಿವೆ. ಆದರೆ ಇವು ಪ್ರಾಥಮಿಕ ಮಾಹಿತಿಯನ್ನು ಗ್ರಹಿಸಲು ಉಪಯುಕ್ತವಾಗಿವೆ.

**ಎಲ್.ಜಿ.ಮೀರಾ**ರವರು ತಮ್ಮ **'ಸ್ತ್ರೀ-ಸಂವೇಧನೆಯಲ್ಲಿ ಕನ್ನಡ ಕಥನ'** ಎಂಬಾ ವಿಮರ್ಶಾ ಗ್ರಂಥದಲ್ಲಿ **ಡಾ. ಅನುಪಮಾ ನಿರಂಜನ** ರವರ **'ಮಾಧವಿ: ಪೌರಾಣಿಕ ಕಥೆ'** ಯಲ್ಲಿ ಸ್ತ್ರೀಯನ್ನು ಸರಕಿನಂತೆ ಕೊಳ್ಳುವ ಮಾರುವ, ದಾನ ನೀಡುವ ಮತ್ತು ಸ್ತ್ರೀ ಶೋಷಣೆಯ ವರ್ಣನೆಯನ್ನು ತಿಳಿಸಿದ್ದಾರೆ. ಹುಟ್ಟುತ್ತಲೇ ತಾಯಿಯನ್ನು ಕಳೆದುಕೊಂಡು, ತಂದೆಯ ಅವಜ್ಞೆಗೆ ತುತ್ತಾಗಿ ಪರಿಚಾರಿಕೆಯರ ಶುಶ್ರೂಷೆಯಲ್ಲಿ ಬೆಳೆದ ಮಾಧವಿ ಅಪ್ಸರೆ. ಗಾಲವ ಋಷಿ ತನ್ನ ಗುರು ವಿಶ್ವಾಮಿತ್ರನಿಗೆ ಗುರುಕಾಣಿಕೆಯಾಗಿ ವಿಶಿಷ್ಟ ಜಾತಿಯ ೮೦೦ ಕುದುರೆಗಳನ್ನು ಮಾಧವಿಯ ತಂದೆ ಯಯಾತಿಯ ಬಳಿ ದಾನ ಬೇಡಿದಾಗ, ಅದು ಸಾಧ್ಯವಾಗದ ಯಯಾತಿ, ಅದಕ್ಕೆ ಬದಲಾಗಿ ತನ್ನ ಮಗಳನ್ನು ದಾನ ನೀಡುತ್ತಾನೆ. ನಂತರ ಗಾಲವ ಋಷಿಯು ಬೇರೆ ಬೇರೆ ರಾಜರಲ್ಲಿ ಮಾಧವಿಯನ್ನು ಅಡವಿಟ್ಟು ಕುದುರೆಗಳನ್ನು ಸಂಪಾದಿಸುತ್ತಾನೆ. ಕೊನೆಗೆ ಕುದುರೆಗಳ ಸಂಖ್ಯೆ ಪೂರ್ಣವಾಗದಿದ್ದಾಗ ಮಾಧವಿಯನ್ನು ವಿಶ್ವಾಮಿತ್ರನ ಬಳಿ ಬಿಡುವುದು ಮತ್ತು ಮಾಧವಿ ತಾನು ಸಂಸರ್ಗ ಹೊಂದಿದ ನಾಲ್ಕೂ ಪುರುಷರಿಗೆ ಒಂದೊಂದು ಗಂಡು ಮಗುವನ್ನು ಹೆತ್ತು ಕೊಡುವುದು. ಕೊನೆಗೆ ಮಾಧವಿ ಜೀವನದ ಬಗೆಗೆ ವೈರಾಗ್ಯ ತಾಳಿ ತಂದೆ ಸ್ವಯಂವರ ಮಾಡಿದಾಗ ಅದನ್ನು ಧಿಕ್ಕರಿಸಿ ತಪಸ್ಸಿಗೆ ಹೊರಟು ಬಿಡುವುದು ಇದಿಷ್ಟು ಕಥಾವಸ್ತು. ಪಿತೃ ಪ್ರಧಾನತೆ ವ್ಯವಸ್ಥೆಯಲ್ಲಿರುವ ಪ್ರತ್ಯಕ್ಷ ಸ್ತ್ರೀ ಶೋಷಣೆಗೆ ಇದಕ್ಕಿಂದ ದೊಡ್ಡ ನಿದರ್ಶನ ಬೇಕಿಲ್ಲ. ಹೆಣ್ಣನ್ನು ಪುರುಷರು ವಸ್ತುವಿನಂತೆ, ಕೊಂಡು, ಮಾರಿ, ಬಳಸಿ ಮತ್ತು ಮಕ್ಕಳನ್ನು ಒತ್ತೆ ಇಡುವುದಕ್ಕೆ ಮಾತ್ರ ಸೀಮಿತಗೊಂಡಿರಲಿಲ್ಲ. ಬದಲಾಗಿ ಅವರ ಜೀವನದ ಮೇಲೂ ಪರಿಪೂರ್ಣವಾದ ಅಧಿಕಾರ ಸ್ಥಾಪಿಸುತ್ತದೆ. ಹೆಣ್ಣುಮಕ್ಕಳನ್ನು ಅನೈತಿಕತೆಗೆ ತಳ್ಳುವ ಈ ಕ್ರಮವು ಕುಟುಂಬದಿಂದಲೇ ಸೃಷ್ಟಿಯಾದಂತೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿದುಬರುತ್ತದೆ.

**ಸ್ತ್ರೀ ಪರ; ಡಾ. ಹಾಲತಿ ಸೋಮಶೇಖರ್** ರವರು ಬರೆದಿರುವ ಈ ಪುಸ್ತಕವು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯಗಳನ್ನು ತಡೆಯಲು ನಡೆದ ಪ್ರಯತ್ನಗಳನ್ನು ತಿಳಿಸುವುದು. ಜೊತೆಗೆ ದೇಶದ ಸ್ವಾತಂತ್ರ್ಯ ನಂತರ ಮಹಿಳೆಯ ಶೋಷಣೆಯನ್ನು ತಡೆಯಲು ನಿರ್ಮಿಸಲಾದ ಕಾನೂನುಗಳ ಸ್ಪಂದನವನ್ನು ತಿಳಿಸಿದ್ದಾರೆ. ಸರ್ಕಾರ, ಸಾರ್ವಜನಿಕ ರಂಗ ಮತ್ತು

ಖಾಸಗಿ ವ್ಯಕ್ತಿಗಳು, ಸಂಸ್ಥೆಗಳು, ಮಹಿಳೆಯ ಜೀವನ ಸುಧಾರಣೆಗೆ ಪ್ರಯತ್ನಿಸುತ್ತಿದ್ದರೂ ಸಹ ಮಹಿಳೆಯರ ಮೇಲೆ ನಡೆಯುತ್ತಿರುವ ಕ್ರೌರ್ಯ ನಿಂತಿಲ್ಲ. ಅದು ನಿರಂತರವಾಗಿದೆ. ಈ ಹಿನ್ನೆಲೆಯಲ್ಲಿ ಕಾನೂನುಗಳು ಮಾತ್ರ ಹೆಣ್ಣಿನ ಕಷ್ಟಗಳನ್ನು ಸುಧಾರಿಸಲಾರವು, ಕಾನೂನಿನ ಕಾರ್ಯಾನುಷ್ಠಾನ ಮತ್ತು ಕಾನೂನನ್ನು ಗೌರವಿಸುವ ಮತ್ತು ಮನುಷ್ಯ ಪ್ರೀತಿಗೆ ಮಣಿಯುವ ಮನಸ್ಸು ಮುಖ್ಯವಾಗಿ ಬೇಕು ಎಂಬುದನ್ನು ಗಮನಿಸುವ ಮೂಲಕ ಕಾನೂನುಗಳು ಮತ್ತು ಅದರ ಅನುಷ್ಠಾನದ ಅಂಗ ಸಂಸ್ಥೆಗಳು ಪರಸ್ಪರ ಕೈ ಜೋಡಿಸುವ ಬಗೆಯನ್ನು ದಾಖಲಿಸಿದ್ದಾರೆ. ಸ್ತ್ರೀಪರ ಕಾನೂನುಗಳು ಮತ್ತು ಸ್ತ್ರೀಪರ ಸಂಘಟನೆಗಳ ಕಾರ್ಯಕ್ಷೇತ್ರ, ಕಾರ್ಯ ವೈಖರಿ ಮತ್ತು ವಿವರಣಾತ್ಮಕ ಪರಿಚಯವನ್ನು, ಮಾಹಿತಿಯನ್ನು ನೀಡಿದ್ದಾರೆ.

ಅನೈತಿಕ ವ್ಯವಹಾರಗಳಿಗೆ ಕಳ್ಳ ಸಾಗಾಣಿಕೆ ಆಗುತ್ತಿರುವಂತಹ ಹೆಣ್ಣುಮಕ್ಕಳು ಮತ್ತು ಮಹಿಳೆಯರನ್ನು ವೇಶ್ಯಾವಾಟಿಕೆಗಳಿಗೆ, ಮಾರಾಟವಾದವರನ್ನು ಕಾನೂನು ನೆರವಿನಿಂದ ಬಿಡಿಸಿ ಸಮಾಜಕ್ಕೆ ಕಳಂಕ ಪ್ರಾಯವಾದ ವೈಶ್ಯಾವಾಟಿಕೆಯನ್ನು ನಿರ್ಮೂಲನಗೊಳಿಸಬೇಕೆಂಬ ಆದರ್ಶವನ್ನು ಹೊಂದಿರುವ ಒಡನಾಡಿ, ವಿಮೋಚನಾ ಮುಂತಾದ ಸಂಘಟನೆಗಳ ಪರಿಚಯವನ್ನು ನೀಡಿರುವುದು ಪ್ರಾಥಮಿಕ ಮಾಹಿತಿಗೆ ಪೂರಕವಾಗಿದೆ. ಇದರ ಜೊತೆಗೆ ಮಹಿಳೆಯರ ಜೀವನ ಸುಧಾರಣೆಗೆ ಶ್ರಮಿಸುತ್ತಿರುವ ಹಲವಾರು ಸರ್ಕಾರಿ ಸಂಸ್ಥೆಗಳು ಮತ್ತು ಸರ್ಕಾರೇತರ ಸಂಸ್ಥೆಗಳ ಪರಿಚಯವನ್ನು ನೀಡಿರುವುದು ಸಂಶೋಧಕರಿಗೆ ಮಾಹಿತಿ ಆಕರವನ್ನು ಒದಗಿಸುವುದರ ಜೊತೆಗೆ ನಾಗರೀಕ ಸಮಾಜದಲ್ಲಿ ಅರಿವಿನ ಜಾಗೃತಿ ಮೂಡಿಸುತ್ತಿದೆ.

ಜಾತಿ ವರ್ಗ, ಲಿಂಗ, ಅಂತಸ್ತು, ಅಧಿಕಾರ ಇವುಗಳು ಸಾಮಾಜಿಕ ವ್ಯವಸ್ಥೆಯನ್ನು ಛಿದ್ರವಾಗಿ ಒಡೆದುಹಾಕಿ ಮಾನವ ಸಮಾಜದಲ್ಲಿ ಹಾಸು ಹೊಕ್ಕಾಗಿರುವ ಅಸಮಾನತೆಯ ಬೇರುಗಳನ್ನು ಮತ್ತಷ್ಟು ಭದ್ರಗೊಳಿಸುತ್ತಿದೆ, ಎಲ್ಲಾ ಸಮಾಜಗಳಲ್ಲಿ ಎಲ್ಲ ಬಗೆಯ ಅಸಮಾನತೆಗಳನ್ನು ಮೆಟ್ಟಿನಿಂತದ್ದು ಲಿಂಗ ಆಧಾರಿತ ಅಸಮಾನತೆ, ಲಿಂಗಭೇದ ನಾನಾ ರೂಪಗಳಲ್ಲಿ, ನಾನಾ ಪ್ರಮಾಣಗಳಲ್ಲಿ ಎಲ್ಲ ಸಾಮಾಜಿಕ ಸಂಸ್ಥೆಗಳಲ್ಲಿ ಅಸ್ತಿತ್ವದಲ್ಲಿದೆ. ಅದನ್ನು ಕುರಿತಾದ ಅಸಮಾಧಾನ, ಆಕ್ರೋಶ, ಆತಂಕ, ಪ್ರಶ್ನೆ, ಪ್ರತಿಭಟನೆಗಳನ್ನು ಬರವಣಿಗೆಯ ಮೂಲಕ **'ಮಾನುಷಿ'** ಎಂಬ ಪುಸ್ತಕದಲ್ಲಿ **ಆರ್.ಇಂದಿರಾ**ರವರು ವ್ಯಕ್ತಪಡಿಸಿದ್ದಾರೆ. ಅದರಲ್ಲಿನ **'ಹಣದಾಸೆಗಾಗಿ ಹೆಣ್ಣುಮಕ್ಕಳನ್ನು ಮಾರುವವರು'** ಎಂಬ ಬರಹವು ಹೆಣ್ಣನ್ನು ಅನವಶ್ಯಕ, ಅಪ್ರಯೋಜಕ ಎಂದು ತಿಳಿದು ಅವರನ್ನು ಪೋಷಕರೇ ಮಾರಾಟ ಮಾಡುತ್ತಾರೆ. ಬಡತನದ ಕಾರಣ ಮುಂದಿಟ್ಟು, ಹಣದ ಅವಶ್ಯಕತೆಗಾಗಿ ಹೆಣ್ಣು ಮಕ್ಕಳನ್ನು ಮಾರಿ ನಂತರ ಆ ಹೆಣ್ಣುಮಕ್ಕಳ ಜವಾಬ್ದಾರಿಯನ್ನು ಕಳೆದುಕೊಂಡು ಅವರು ಮುಂದಿನ ಜೀವನದಲ್ಲಿ ಹೇಗೆ ಬದುಕುತ್ತಿದ್ದಾರೆ ಎಂದು ತಿಳಿಯಲು ಬಯಸದ ಪೋಷಕರ ಪ್ರವೃತ್ತಿಯನ್ನು ವಿಷದಪಡಿಸಿದ್ದಾರೆ. ಹೀಗೆ ಹೆಣ್ಣು ಹೆತ್ತವರಿಗೆ ಹಣವನ್ನು ನೀಡಿ ಹೆಣ್ಣನ್ನು ವಿವಾಹವಾಗಿ ಅಂದರೆ ವಿವಾಹದ

ನಾಟಕವಾಡಿ ನಂತರ ಕೊಲ್ಲಿ ರಾಷ್ಟ್ರಗಳಲ್ಲಿ ಮತ್ತು ಕೆಂಪು ದೀಪ ಪ್ರದೇಶಗಳಲ್ಲಿ ಮಾರುವಂತಹ ಮತ್ತು ಅನೇಕ ಶ್ರೀಮಂತ ಜನಾನಗಳಿಗೆ ಬಲವಂತವಾಗಿ ತಳ್ಳುತ್ತಿರುವ ಹೊಸ ರೀತಿಯ ಕುತಂತ್ರವನ್ನು ವಿವರಿಸಿದ್ದಾರೆ. ಇದು ಸಂಶೋಧನಾ ವಿಷಯಕ್ಕೆ ಮಾಹಿತಿಯನ್ನು ಒಳಗೊಂಡಿದ್ದು, ಇದು ಅನೈತಿಕ ಸಾಗಾಣಿಕೆಯ ಆಯಾಮವನ್ನು ತಿಳಿಸುತ್ತದೆ.

ಮಹಿಳಾ ಪರ ಕಾನೂನುಗಳನ್ನು ಕುರಿತಂತೆ **ಡಾ.ಗೀತಾ ಕೃಷ್ಣಮೂರ್ತಿ** ಅವರು **'ಮಹಿಳಾ ಹಕ್ಕುಗಳು ಮಾನವ ಹಕ್ಕುಗಳ ನೆಲೆಯಲ್ಲಿ'** ಎಂಬ ಕೃತಿಯಲ್ಲಿ ಅನುಷ್ಠಾನದಲ್ಲಿರುವ ಕಾನೂನುಗಳಲ್ಲಿನ ಮಹಿಳಾ ಹಕ್ಕುಗಳನ್ನು ಮಾನವ ಹಕ್ಕುಗಳ ದೃಷ್ಟಿಕೋನದಿಂದ ವಿಶ್ಲೇಷಿಸಿದ್ದಾರೆ. ಇಂದಿನ ಪರಿಸ್ಥಿತಿಯಲ್ಲಿ ಮಾನವ ಹಕ್ಕುಗಳು ಹಾಗೂ ಮಹಿಳಾ ಹಕ್ಕುಗಳು ಪದೇ ಪದೇ ಉಲ್ಲಂಘನೆಯಾಗುತ್ತಿರುವುದರಿಂದ ಅವುಗಳ ಬಗ್ಗೆ ಅರಿವನ್ನು ಹೊಂದಬೇಕಾದ ಅನಿವಾರ್ಯತೆಯನ್ನು ಮಂಡಿಸುತ್ತದೆ. ಲಿಂಗಾಧಾರಿತ ಹಿಂಸೆಯಿಂದಾಗಿ ಮಹಿಳಾ ಹಕ್ಕುಗಳೆಲ್ಲವೂ ಮಾನವ ಹಕ್ಕುಗಳಾಗಿದ್ದರೂ ಅತ್ಯಂತ ನಿರ್ಲಕ್ಷ್ಯಕ್ಕೊಳಗಾಗಿರುವುದರಿಂದ ಮಹಿಳಾ ಹಕ್ಕುಗಳಿಗೆ ಸಂಬಂಧಿಸಿದಂತೆ ಮಾನವ ಹಕ್ಕುಗಳ ವಿವಿಧ ಆಯಾಮಗಳನ್ನು ಗ್ರಹಿಸಲು ನೆರವಾಗಿದೆ.

**ಸುಡುಬಿಸಿಲ ಹುಡಿಹಾದಿ; ಡಾ.ಶ್ರೀದೇವಿ ವಿ ಆಲೂರ** ಅವರ ಪ್ರಕಟಿತ ಸಂಶೋಧನಾ ಗ್ರಂಥವು ಸ್ತ್ರೀವಾದಿ ಸಂಶೋಧನಾ ವೈಧಾನಿಕತೆಯನ್ನು ಸಮರ್ಥವಾಗಿ ಬಳಸಿಕೊಳ್ಳುವ ಮೂಲಕ ಮಹಿಳಾ ದೌರ್ಜನ್ಯವನ್ನು ಸೈದ್ಧಾಂತಿಕವಾಗಿ ನಿರ್ವಚಿಸಿಕೊಳ್ಳುವಾಗ ಈವರೆಗಿನ ಜ್ಞಾನ ಪರಂಪರೆಯಲ್ಲಿ ವ್ಯಾಖ್ಯಾನಿಸಲಾದ ಅರ್ಥವನ್ನು ಗ್ರಹಿಸುವುದರ ಜೊತೆಗೆ, ಸಮಕಾಲೀನ ಮಹಿಳಾ ಅಸ್ತಿತ್ವದ ನೆಲೆಯಲ್ಲಿ ಗ್ರಹಿಸಬೇಕಾದ ಅರ್ಥವನ್ನು ನಿರ್ವಚಿಸಿದ್ದಾರೆ. ಮಹಿಳಾ ದೌರ್ಜನ್ಯ, ಹಿಂಸೆಯನ್ನು ನಿರ್ಮೂಲನಾ ಮಾಡುವ ಉದ್ದೇಶದಿಂದ ಕಾನೂನಿನ ಅರ್ಥಗಳನ್ನು ಗಮನಿಸುವುದರ ಜೊತೆಗೆ ಈಗ ನಾವು ಮಹಿಳಾ ಅಧ್ಯಯನದಲ್ಲಿ ದೌರ್ಜನ್ಯವನ್ನು ಗ್ರಹಿಸಬೇಕಾದ ರೀತಿಯನ್ನು ನಿರೂಪಿಸಿದ್ದಾರೆ.

**'ಮಹಿಳೆಯ ಮೇಲಿನ ದೌರ್ಜನ್ಯ ಹಿನ್ನೆಲೆಯಲ್ಲಿ; ಮಹಿಳಾ ಅಪರಾಧಗಳು ವ್ಯಾಖ್ಯೆ ಮತ್ತು ಶಿಕ್ಷೆ'; ಸುಮಲತಾ ಆಕಳವಾಡಿ** ಅವರ ಅಪ್ರಕಟಿತ ಸಂಶೋಧನಾ ಗ್ರಂಥವು ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ ತಮ್ಮ ಪಿ.ಹೆಚ್.ಡಿ ಪದವಿಗಾಗಿ ಪ್ರಸ್ತುತ ಪಡಿಸಿದ ಸಂಶೋಧನಾ ಗ್ರಂಥವಾಗಿದೆ. ಇವರು, ಮಹಿಳೆಯರು ಶಾರೀರಿಕವಾಗಿ ಮತ್ತು ಮಾನಸಿಕವಾಗಿ ದುರ್ಬಲರಾಗಿರುವ ಕಾರಣ ಅವರು ಅಪರಾಧ ಎಸಗುವುದು ಕಡಿಮೆ ಎಂದು ಸಾಮಾಜಿಕ ಮನೋಭಾವ ಹೇಳುತ್ತದೆ. ಆದರೆ ಪುರುಷ ದೌರ್ಜನ್ಯ ದಬ್ಬಾಳಿಕೆ, ಸಮಾಜದ ತಾರತಮ್ಯಗಳಿಂದ ರೋಸಿ ಹೋದ ಮಹಿಳೆಯರು ಸಮಾಜದ ವಿರೋಧಿಗಳಾಗಿ ಅಪರಾಧ ಜಗತ್ತಿಗೆ ಪ್ರವೇಶ ಮಾಡಿದ್ದಾರೆ ಎಂದು ವಿಶ್ಲೇಷಿಸಿದ್ದಾರೆ. ಅವರ ಅಧ್ಯಯನದಲ್ಲಿ ಮಹಿಳೆ ಅಪರಾಧ ಎಸಗುವ ಸಂದರ್ಭ ಸ್ವರೂಪಗಳನ್ನು ಅರ್ಥೈಸಲು ಪ್ರಯತ್ನಿಸಿದ್ದಾರೆ. ಇದನ್ನು ಸಾಮಾಜಿಕ, ಪ್ರಭುತ್ವ ನೆಲೆಗಳಲ್ಲಿ ಪ್ರಕರಣ ಅಧ್ಯಯನಗಳ ಮೂಲಕ

ಗಮನಿಸಿದ್ದಾರೆ. ಅಪರಾಧ ಶಾಸ್ತ್ರ ಸಿದ್ಧಾಂತಗಳನ್ನು ಸ್ತ್ರೀವಾದಿ ಸಮೀಕ್ಷೆಗೆ ಒಳಪಡಿಸಿದ್ದು ಮಹಿಳೆ ಅಪರಾಧಗಳ ಸ್ವರೂಪವನ್ನು ಗುರುತಿಸಿದ್ದಾರೆ. 'ಮಹಿಳಾ ಲೈಂಗಿಕತೆ, ಅಪರಾಧ ಮತ್ತು ಸಾಮಾಜಿಕ ಸಂದರ್ಭ' ಎಂಬ ಅಧ್ಯಾಯದಲ್ಲಿ ಮಹಿಳೆಯ ಸಾಮಾಜಿಕ ಸ್ಥಾನಮಾನಗಳ ಸ್ಥಿತ್ಯಂತರಗಳನ್ನು ಸಮಾಜ, ಕುಟುಂಬ, ಖಾಸಗಿ ಆಸ್ತಿ ಮತ್ತು ರಾಜ್ಯ ಇವುಗಳ ಉಗಮ, ವಿಕಾಸಗಳ ಹಿನ್ನೆಲೆಯಲ್ಲಿ ಮಹಿಳಾ ಲೈಂಗಿಕತೆ ಪುರುಷಾಧೀನಗೊಂಡ ಬಗೆಯನ್ನು ವಿವರಿಸಿದ್ದಾರೆ. ಇವೆಲ್ಲಾ ಅಂಶಗಳೂ ಪ್ರಸ್ತುತ ಸಂಶೋಧನಾ ವಿಷಯ ವಸ್ತುವಾದ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಗೆ ಸಂಬಂಧಿಸಿದಂತೆ ಅಪರಾಧ ಜಗತ್ತಿನ ಕುರಿತು ಒಂದು ತಾತ್ವಿಕ ನೆಲೆಯನ್ನು ರೂಪಿಸಲು ಸಹಾಯಕವಾಗಿವೆ.

**ಮಹಿಳೆ ಮತ್ತು ಸಮೂಹ ಮಾಧ್ಯಮಗಳು; ಡಾ.ಕೆ ಸರೋಜ** ರವರು ಇಂದಿನ ವೇಗವಾಗಿ ಬದಲಾಗಿತ್ತಿರುವ ಜಾಗತಿಕ ಜಗತ್ತಿನಲ್ಲಿ ಎಲ್ಲಾ ಸಮಾಜಗಳಲ್ಲಿ ಆಗುತ್ತಿರುವ ಮುಖ್ಯ ಬದಲಾವಣೆಗಳಲ್ಲಿ ಕಡೆಗಣಿಸಲ್ಪಟ್ಟಿರುವ ಹಲವು ಸಮುದಾಯಗಳಲ್ಲಿಯೇ ಅತಿದೊಡ್ಡ ಸಮುದಾಯವೆಂದರೆ ವಿಶ್ವದ ಸ್ತ್ರೀ ಸಮುದಾಯ. ಆದ್ದರಿಂದ, ಇಂದಿನ ಮಾಧ್ಯಮಗಳ ಬದಲಾಗುತ್ತಿರುವ ಕ್ರಿಯೆಗಳು ಹಾಗೂ ನೆಲೆಗಳು ಯಾವ್ಯಾವ ರೀತಿಯಲ್ಲಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುತ್ತಿದೆ. ಮುಂದೆ ಬೀರಬಹುದಾದಂತಹ ಪರಿಣಾಮಗಳೇನು ಎಂಬುದರ ಪರಿಶೀಲನೆಯನ್ನು ಈ ಮೂಲಕ ಮಾಡಿದ್ದಾರೆ. ಸಮೂಹ ಮಾಧ್ಯಮಗಳನ್ನು ಮಹಿಳಾ ದೃಷ್ಟಿಕೋನದಿಂದ ಪರಿಶೀಲಿಸುವ ಪ್ರಯತ್ನವನ್ನು ಮಾಡಿರುವುದು ಸಂಶೋಧನೆಗೆ ಬೇಕಾದ ಮತ್ತೊಂದು ಆಯಾಮವನ್ನು ತೋರಿಸಿಕೊಟ್ಟಿದೆ.

**ಮಹಿಳಾ ಸಂಘಟನೆ ಹೋರಾಟ; ಡಾ.ಸಬಿಹಾ ಭೂಮೀಗೌಡ** ರವರ ಈ ಪುಸ್ತಕದಲ್ಲಿ ಇಂದಿನ ದಿನಮಾನಗಳಲ್ಲಿ ಮಹಿಳೆಯ ಮೇಲಾಗುತ್ತಿರುವ ದೌರ್ಜನ್ಯದ ಹಲವು ಕೋನಗಳು ಬದಲಾಗುತ್ತಿದ್ದು ಅವುಗಳನ್ನು ಗ್ರಹಿಸುವ ಮತ್ತು ನಿವಾರಿಸುವ ನಿಟ್ಟಿನಲ್ಲಿ ಸಂಘಟನೆಯು ಎಷ್ಟು ಮುಖ್ಯ ಹಾಗೂ **ಸಮತಾ ಅಧ್ಯಯನ ಕೇಂದ್ರ, ಜನವಾದಿ ಮಹಿಳಾ ಸಂಘಟನೆ,** ಮುಂತಾದ ಪ್ರಮುಖವಾದ ಸಂಘಟನೆಗಳ ಪರಿಚಯವನ್ನು ನೀಡಿರುವುದು ಸಂಶೋಧನೆಗೆ ಪೂರಕವಾಗಿದೆ.

**ಪಾತರದವರು:** ಪ್ರಾಚೀನ ಕರ್ನಾಟಕದ ದೇವಾಲಯ ಸಂಸ್ಕೃತಿಯ ರಂಗಭೋಗದ ಅವಶೇಷವೆನಿಸಿ ಬಹಳ ಉಪೇಕ್ಷೆಗೆ ಗುರಿಯಾಗಿರುವ ಈ ಕಲಾವಿದೆಯರನ್ನು ಕುರಿತು ಅಧ್ಯಯಿಸಿ ಹೊರತಂದ ಸಾಂಸ್ಕೃತಿಕ ಪುಸ್ತಕವಾಗಿದೆ. ಪುರೋಹಿತಶಾಹಿ ವ್ಯವಸ್ಥೆಯ ಒಂದು ಭಾಗವಾಗಿ ಬೆಳೆದು ಬಂದ ಪಾತರದವರನ್ನು ಇಂದು ಕಡೆಗಣಿಸುವುದರ ಮೂಲಕ ಅವರನ್ನು ಸಂಸ್ಕೃತಿಯಿಂದ ಹೊರಗಿಡಲಾಗಿದೆ. ಪುರುಷರ ಹುಚ್ಚು ಕಾಮನೆಯ ಫಲವಾಗಿ ಬೆಳೆದು ಬಂದು ಲೈಂಗಿಕದಾಸಿಯರ ರೂಪ ಪಡೆದಿರುವ ಪಾತರದವರ ಬದುಕಿನ ವಿವರಗಳು, ಧಾರ್ಮಿಕ, ರಾಜಕೀಯ ಮತ್ತು ಸಾಮಾಜಿಕ ಸ್ಥಾನಮಾನ, ಶೋಷಣೆಗಳನ್ನು **ಡಾ.ಶೈಲಜಾ ಹಿರೇಮಠ** ರವರು ವಿಶ್ಲೇಷಿಸಿದ್ದಾರೆ. ಹಿಂದೆ ಪ್ರಮುಖವಾಗಿದ್ದ ಪಾತರ ಪರಂಪರೆ ಇಂದಿಗೂ ಹಲವಾರು ಕಾನೂನು ನಿಷೇಧಗಳ

ನಡುವೆಯೂ ಅಲ್ಲಲ್ಲಿ ಜೀವಂತವಾಗಿರುವುದನ್ನು ಗುರುತಿಸಿರುವುದು ಸ್ತ್ರೀಯರ ಮೇಲಿನ ಲೈಂಗಿಕ ದೌರ್ಜನ್ಯವನ್ನು ಮತ್ತೆ ಸಾಬೀತು ಪಡಿಸಿದೆ. ಈ ಚಾರಿತ್ರಿಕ ಸತ್ಯವನ್ನು ಅರ್ಥೈಸಿಕೊಳ್ಳುವ ಮೂಲಕ ವರ್ತಮಾನದ ಸಂಕೀರ್ಣ ಶೋಷಣೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಲು ಈ ಕೃತಿಯು ಮಾದರಿಯಾಗಿದೆ. ಪಾತರ ವ್ಯವಸ್ಥೆಯು ಜೀವಂತವಾಗಿರುವ ಸ್ಥಳಗಳಲ್ಲಿ ಕ್ಷೇತ್ರಕಾರ್ಯ ನಡೆಸಿ ಪಾತರದವರೊಂದಿಗೆ ಒಟ್ಟು ಸ್ತ್ರೀ ಜನಾಂಗದ ಮೇಲೆ ನಡೆದ ಶೋಷಣೆಯನ್ನು ಗುರುತಿಸಲು ಕ್ಷೇತ್ರಕಾರ್ಯದ ಮೂಲಕ ಪ್ರಾಮಾಣಿಕ ಪ್ರಯತ್ನ ನಡೆಸಿರುವುದು ನನ್ನ ಪ್ರಸ್ತುತ ಸಂಶೋಧನೆಯ ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಕ್ಷೇತ್ರಕಾರ್ಯಕ್ಕೆ ಮಾರ್ಗಸೂಚಿಯಾಗಿದೆ.

**ಟ್ರಾನ್ಸ್‌ನ್ಯಾಷನಲ್ ಪ್ರಾಸ್ಟಿಟ್ಯೂಷನ್; ಚೇಜಿಂಗ್ ಗ್ಲೋಬಲ್ ಪ್ಯಾಟ್ರನ್ಸ್; (Transnational Prostitution – Changing Global patterns) ಸೂಸಾನ್ ಥೋರ್ಬೇಕ್** ಮತ್ತು **ಬಂದನ್ ಪಟ್ನಾಯಕ್** ರವರ ಆಂಗ್ಲಭಾಷೆಯ ಸಂಪಾದನಾ ಗ್ರಂಥವು ವಲಸೆ ಮತ್ತು ಸಾಗಾಣಿಕೆಯ ಮೂಲಕ ವೇಶ್ಯಾವೃತ್ತಿಗೆ ತಳ್ಳಲ್ಪಟ್ಟ ಮಹಿಳೆಯರ ಪ್ರಕರಣ ಅಧ್ಯಯನವನ್ನು ಒಳಗೊಂಡಿದೆ. ವಲಸೆ ಮತ್ತು ಸಾಗಾಣಿಕೆಯ ಮೂಲಕ ಹೆಣ್ಣು ಮಕ್ಕಳನ್ನು ಜರ್ಮನಿ, ಥಾಯ್ಲಾಂಡ್, ಆಸ್ಟ್ರೇಲಿಯಾ ಹಾಗೂ ಯೂರೋಪನಂತಹ ಪ್ರವಾಸಿ ದೇಶಗಳಲ್ಲಿ ಹೇಗೆ ಬಳಸಿಕೊಳ್ಳುತ್ತಿದ್ದಾರೆ ಮತ್ತು ಯಾವ ಯಾವ ವಿಧಾನಗಳ ಮೂಲಕ ಸಾಗಾಣಿಕೆಯನ್ನು ಮಾಡಲಾಗುತ್ತಿದೆ. ಇದರ ಮೂಲಕ ಅವರ ವೇಶ್ಯಾವೃತ್ತಿಗೆ, ಕಾರ್ಮಿಕರಾಗಿ ಹೇಗೆ ಸುವ್ಯವಸ್ಥಿತ ಜಾಲದ ಮೂಲಕ ಅವರ ರಕ್ಷಣೆಗೂ ಅವಕಾಶವಿಲ್ಲದಂತೆ ಬಂಧಿಸಿರುವ ಸ್ಥಿತಿಯನ್ನು ವಿವರವಾಗಿ ತಿಳಿಸಿದ್ದಾರೆ. ಇದರಿಂದ ಅಂತರಾಷ್ಟ್ರೀಯ ಮಟ್ಟದಲ್ಲಿನ ಅನೈತಿಕ ಸಾಗಾಣಿಕೆಯ ಆಯಾಮಗಳನ್ನು ಗಮನಿಸಲು ಸಹಾಯಕವಾಗಿದೆ.

**ಕ್ರಿಮಿನಲ್ ಅಬ್ಯೂಸ್ ಆಫ್ ವಿಮೆನ್ ಅಂಡ್ ಚಿಲ್ಡ್ರನ್– ಆನ್ ಇಂಟರ್‌ನ್ಯಾಷನಲ್ ಪರ್ಸ್‌ಪೆಕ್ಟೀವ್ (Criminal Abuse of Women and Children- An International Perspective)** ಪುಸ್ತಕವು **ಒಬಿ ಎನ್ ಐ ಎಬ್ಬೆ** ಮತ್ತು **ದಿಲಿಪ್ ಕೆ ದಾಸ್** ರವರ ಸಂಪಾದಕೀಯವಾಗಿದ್ದು ಇದರಲ್ಲಿನ **trafficking of women and children in Nigeria; slavery in the modern era** ಲೇಕನವು ಇಂದು ಪ್ರಪಂಚದಾದ್ಯಂತ ಒಂದರಿಂದ ಎರಡು ಮಿಲಿಯನ್‌ನಷ್ಟು ಜನರು ಕಳ್ಳಸಾಗಾಣಿಕೆಗೆ ಒಳಗಾಗುತ್ತಿದ್ದಾರೆ. ಇದರಲ್ಲಿ ಹೆಣ್ಣು ಮಕ್ಕಳ ಕಳ್ಳಸಾಗಾಣಿಕೆಯು ಹೆಚ್ಚಾಗಿ ವೇಶ್ಯಾವಾಟಿಕೆಗೆ ಮತ್ತು ಒತ್ತಾಯ ಪೂರ್ವಕವಾಗಿ ಕಾಮಿಕ ವಲಯಕ್ಕೆ ತಳ್ಳಲು ನಡೆಯುತ್ತಿದೆ. ಇದು ಒಂದು ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಅಂತಾರಾಷ್ಟ್ರೀಯ ಅಪರಾಧ ಚಟುವಟಿಕೆಯ ವಲಯವಾಗಿದೆ. ಈ ರೀತಿಯ ಕಳ್ಳಸಾಗಾಣಿಕೆಯು ಸಂಘಟಿತ ಅಪರಾಧ ವಲಯದ ೩ನೇ ಅತಿ ದೊಡ್ಡ ಲಾಭದ ಮೂಲವಾಗಿದೆ. ಆದರೆ ಈ ರೀತಿಯ ಅಪರಾಧ ಕೃತ್ಯಗಳು ಅಧಿಕೃತವಾದ ಅಕ್ರಮವಾಗಿ ಪರಿಣಮಿಸುತ್ತಿರುವುದು ಜಾಗತೀಕರಣ ಪ್ರಕ್ರಿಯೆಯ ಪ್ರಭಾವವಾಗಿದೆ ಎಂದು ವಿಶ್ಲೇಷಿಸಿದ್ದಾರೆ.

ನೈಜೀರಿಯಾದ ಪರಿಸ್ಥಿತಿಯನ್ನು ನಮ್ಮ ಭಾರತ ದೇಶದ ಪರಿಸ್ಥಿತಿಯ ಜೊತೆಗೆ ತುಲನೆ ಮಾಡಲು ಈ ಮಾಹಿತಿಯು ಉಪಯುಕ್ತವಾಗಿದೆ.

**ಹ್ಯೂಮನ್ ಟ್ರ್ಯಾಫಿಕಿಂಗ್ ಇನ್ ದಿ ರಷ್ಯನ್ ಫೆಡರೇಶನ್; ಆನ್ ಎಕ್ಸಾಮಿನೇಷನ್ ಆಫ್ ದಿ ಹ್ಯಾಂಟಿ–ಟ್ರಾಫಿಕಿಂಗ್ ಎಫರ್ಟ್ಸ್ ಆಫ್ ದಿ ಫೆಡರಲ್ ಗೌವರ್ನಮೆಂಟಲ್ ಆರ್ಗನೈಜೇಷನ್ ಅಂಡ್ ದಿ ಇಂಟರ್‌ನ್ಯಾಷನಲ್ ಆರ್ಗನೈಜೇಷನ್ ಆಫ್ ಮೈಗ್ರೇಷನ್;( Human Trafficking in the Russion Federation; An Examination of the Anti Trafficking Efforts of the Federal govt, non govt organization and the International organization for migration)** ಈ ಸಂಶೋಧನಾ ಗ್ರಂಥವು ರಷ್ಯಾ ರಾಷ್ಟ್ರದಲ್ಲಿನ ಮಾನವ ಸಾಗಾಣಿಕೆಯನ್ನು ಕುರಿತು ಇದೆ. ರಷ್ಯಾ ರಾಷ್ಟ್ರವು ತನ್ನ ಆರ್ಥಿಕ ಪ್ರಗತಿಗಾಗಿ ತನ್ನ ಪ್ರಜೆಗಳನ್ನೇ ಶಿಕಾರಿಗಳನ್ನಾಗಿಸಿದೆ. ಸುಲಭವಾಗಿ ಸಿಗುವ ಮತ್ತು ಹೆಚ್ಚಿನ ಲಾಭವನ್ನು ತಂದುಕೊಡುವ ಮಾನವ ಕಳ್ಳಸಾಗಾಣಿಕೆಯನ್ನು ಅಲ್ಲಿನ ಸರ್ಕಾರ, ರಾಜಕೀಯ ಪಕ್ಷಗಳು, ಶ್ರೀಮಂತರು, ಬಂಡವಾಳಶಹಿಗಳು, ಕಾನೂನು ಪರಿಪಾಲಕರು ಹೇಗೆ ಎಲ್ಲರೂ ಪರೋಕ್ಷವಾಗಿ ಭಾಗಿಯಾಗಿ ಈ ಧಂದೆಯನ್ನು ಪೋಷಿಸುತ್ತಿದ್ದಾರೆ, ಇದರಿಂದ ಅಲ್ಲಿಯ ಜನತೆಯ ಮೇಲೆ ಆಗುತ್ತಿರುವ ಪರಿಣಾಮಗಳನ್ನು ವಿವರಿಸಿದ್ದಾರೆ. ಅಲ್ಲಿನ ವ್ಯವಸ್ಥೆಯೊಳಗಿನ ಅವ್ಯವಸ್ಥೆಯನ್ನು ಅರಿತುಕೊಳ್ಳುವ ಮೂಲಕ ನಮ್ಮ ಸಮಾಜದಲ್ಲಿನ ಅಂತಹುದೇ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸಲು ಸಾಧ್ಯವಾಗಬಹುದು.

**ರಿಸರ್ಚ್ ಸ್ಟಡಿ ಆನ್ ಆನ್ ಹ್ಯೂಮನ್ ರೈಟ್ ವೈಲೇಷನ್ ಆಫ್ ಟ್ರಾಫಿಕಿಂಗ್ (Research Study on Human Right Violation of Victims of Trafficking)** ಎಂಬ ಸಂಶೋಧನಾ ವರದಿಯು ದೆಹಲಿಯ ವಕೀಲರ ಸರ್ಕಾರೇತರ ಸಂಘಟನೆಯ ಮೂಲಕ ಸಿದ್ಧಪಡಿಸಲಾಗಿದೆ. ದೆಹಲಿಯಲ್ಲಿನ ಲೈಂಗಿಕ ಕಾರ್ಯಕರ್ತೆಯರ ಕುರಿತಾದ ವರದಿಯಾಗಿದ್ದು, ಮಾನವ ಹಕ್ಕುಗಳ ನೆಲೆಯಲ್ಲಿ ಸಾಗಾಣಿಕೆಗೆ ಒಳಗಾದ ಮಹಿಳೆಯರನ್ನು ಕುರಿತು ಅಧ್ಯಯನ ನಡೆಸಲಾಗಿದೆ. ಪ್ರಾಥಮಿಕ ಆಕರವನ್ನು ಸಂಗ್ರಹಿಸುವಾಗಿನ ಸಮಸ್ಯೆಗಳನ್ನು ಮತ್ತು ತೊಂದರೆಗಳನ್ನು ಪ್ರಚುರಪಡಿಸಿದ್ದಾರೆ. ಆ ಮಹಿಳೆಯರ ಸದ್ಯದ ಪರಿಸ್ಥಿತಿಯನ್ನು, ಅವರು ಎದುರಿಸುತ್ತಿರುವ ತೊಂದರೆಗಳನ್ನು ಮತ್ತು ಅವರ ರಕ್ಷಣೆಗೆ ಬೇಕಾದ ಅವಶ್ಯಕತೆಗಳನ್ನು ವಿವರಿಸಿದ್ದಾರೆ. ತಮ್ಮ ಕಾನೂನು ವ್ಯವಸ್ಥೆ ಹೇಗೆ ಆ ಮಹಿಳೆಯರ ಸಾಗಾಣಿಕೆಗೆ ಕಾರಣವಾದವರನ್ನು ಬಿಟ್ಟು ಬಿಪಶುವಾದ ಮಹಿಳೆಯರಿಗೆ ತೊಂದರೆ ಹಿಂಸೆಯನ್ನು ನೀಡುತ್ತಿವೆ ಎಂಬುದನ್ನು ವಿವರಿಸಿದ್ದಾರೆ. ಮತ್ತು ಮಹಿಳೆಯರ ರಕ್ಷಣೆಗೆ ಇರುವ ಕಾನೂನುಗಳನ್ನು ಕುರಿತು ಸಂಪೂರ್ಣ ವಿವರಣೆಯನ್ನು ನೀಡಿದ್ದಾರೆ. ಸಂಶೋಧನೆಗೆ ಬೇಕಾದ ಹಲವು ಮಾಹಿತಿಗಳನ್ನು ಸಲಹೆಗಳನ್ನು ನೀಡಿರುವುದು ಬಹಳ ಉಪಯುಕ್ತವಾಗಿದೆ.

**ಎ ರಿಪೋರ್ಟ್ ಆನ್ ಟ್ರಾಫಿಕಿಂಗ್ ಇನ್ ವಿಮೆನ್ ಅಂಡ್ ಚಿಲ್ಡ್ರನ್ ಇನ್ ಇಂಡಿಯಾ (A Report on Trafficking in Women and children in India)** ಇದು **ISS**ನ ಯೋಜನಾ

ವರದಿಯಾಗಿದ್ದು, ೨೦೦೨-೦೩ರ ಅವಧಿಯಲ್ಲಿನ ಅಂಕಿ ಅಂಶಗಳನ್ನು ಒಳಗೊಂಡಿದೆ. ಸಾಹಿತ್ಯ ಸಮೀಕ್ಷೆ, ಸಂದರ್ಶನ,ಗುಂಪು ಸಂದರ್ಶನ, ಪ್ರಕರಣ ಅಧ್ಯಯನ ಮುಂತಾದ ಸಂಶೋಧನಾ ವಿಧಾಗಳನ್ನು ಅಳವಡಿಸಿಕೊಳ್ಳುವ ಮೂಲಕ ಸಾಗಾಣಿಕೆಯಾದ ಮಹಿಳೆಯರ ಬಗ್ಗೆ ಅಧ್ಯಯನ ನಡೆಸಲು ಬೇಕಾದ ತಯಾರಿಯನ್ನು ವಿವರಿಸಿದ್ದಾರೆ. ಮತ್ತು ಈ ರೀತಿಯ ಸಂಕೀರ್ಣ ವಿಷಯದ ಕ್ಷೇತ್ರಾಧ್ಯಯನಕ್ಕೆ ಬೇಕಾದ ತಯಾರಿ, ಮುನೆಚ್ಚರಿಕೆ ಕ್ರಮಗಳನ್ನು ತಿಳಿಸಿದ್ದಾರೆ. ಕರ್ನಾಟಕದ ಬಿಜಾಪುರ, ಗುಲ್ಬರ್ಗಾ, ಗದಗ, ಧಾರವಾಢ, ಬಳ್ಳಾರಿ, ಬೆಳಗಾಂ ಮತ್ತು ಮೈಸೂರು, ಬೆಂಗಳೂರು ಪ್ರದೇಶಗಳಿಂದ ಬೇರೆ ಬೇರೆ ರಾಜ್ಯಗಳಿಗೆ ಯಾವ ಮಾರ್ಗವಗಿ ಮತ್ತು ಎಷ್ಟು ಪ್ರಮಾಣದಲ್ಲಿ ಸಾಗಾಣಿಕೆ ಮಾಡಲಾಗಿತ್ತಿದೆ ಎಂಬುದನ್ನೂ ವಿವರಿಸಿದ್ದಾರೆ. ಕರ್ನಾಟಕದಿಂದ ಆಂಧ್ರಪ್ರದೇಶ, ಗೋವಾ, ಮಹಾರಾಷ್ಟ್ರ, ಕೇರಳಾ, ತಮಿಳುನಾಡುಗಳಿಗೆ ಅನೈತಿಕ ಸಾಗಾಣಿಕೆ ನಡೆಯುತ್ತಿದೆ ಎಂದು ಉಲ್ಲೇಖಿಸಿದ್ದಾರೆ. ಮುಂದಿನ ಸಂಶೋಧನೆಗೆ ಈ ಮಾಹಿತಿಗಳು ಉಪಯುಕ್ತ ಮತ್ತು ಅಂಕಿಸಂಖ್ಯೆಗಳ ಲಭ್ಯತೆಯ ಕಡೆ ಹೆಚ್ಚಿನ ಗಮನ ಹರಿಸಲು ಸಾಧ್ಯವಾಗುತ್ತದೆ.

**ಇಷ್ಯೂಸ್ ಅಂಡ್ ಕನ್ಸರ್ನ್ಸ್ ಆಫ್ ಗರ್ಲ್ಸ್ ಇನ್ ಕರ್ನಾಟಕ- ಎ ಕೇಸ್ ಸ್ಟಡಿ ಆಫ್ ಮೈಸೂರ್ ಡಿಸ್ಟ್ರಿಕ್ಟ್ (Issues and Concerns of Missing Girls in Karnataka-A Case study of Mysore District)** ಇದು ಯೋಜನಾ ವರದಿಯಾಗಿದ್ದು, **ಕರ್ನಾಟಕ ಮಹಿಳಾ ಆಯೋಗ ಪ್ರಾಯೋಜಿತ CSSEP, ಮೈಸೂರು ವಿಶ್ವವಿದ್ಯಾಲಯ**ದ ವತಿಯಿಂದ ಸರ್ಕಾರಕ್ಕೆ ಸಲ್ಲಿಸಲ್ಪಟ್ಟ ವರದಿಯಾಗಿದೆ. ಮೈಸೂರು ನಗರದಲ್ಲಿ ಹೆಚ್ಚುತ್ತಿದ್ದ ಹೆಣ್ಣುಮಕ್ಕಳ ನಾಪತ್ತೆ ಪ್ರಕರಣದ ಕುರಿತಾಗಿ ನಡೆಸಿದ ಅಧ್ಯಯನವಾಗಿದೆ. ನಾಪತ್ತೆಯಾದ ಹೆಣ್ಣುಮಕ್ಕಳ ಮತ್ತು ಗಂಡು ಮಕ್ಕಳ ಕುರಿತಾಗಿ ಅವರ ಸಾಮಾಜಿಕ, ಆರ್ಥಿಕ, ಆರೋಗ್ಯ ಮತ್ತು ಶಿಕ್ಷಣದ ಸ್ಥಿತಿಗತಿಗಳನ್ನು ವಿಶ್ಲೇಷಿಸಿದ್ದಾರೆ. ಹಾಗೂ ನಾಪತ್ತೆಯಾಗಲು ಹೆಣ್ಣುಮಕ್ಕಳಿಗೆ ಕಾರಣವಾದ ಅಂಶಗಳನ್ನು ಹುಡುಕಲು ಪ್ರಯತ್ನಿಸಿದ್ದಾರೆ ಮತ್ತು ಕಾರ್ಯನೀತಿ ಶಿಫಾರಸ್ಸುಗಳನ್ನು ನೀಡಿದ್ದಾರೆ. ಪರಿಮಾಣಾತ್ಮಕ ಸಂಶೋಧನಾ ವರದಿಯಾಗಿದೆ. ಕರ್ನಾಟಕದಲ್ಲಿ ಇದುವರೆಗೂ ಕಾಣೆಯಾದವರ, ನಾಪತ್ತೆಯಾದವರ ಬಗ್ಗೆ ಯಾವುದೇ ಸಂಶೋಧನೆಗಳೂ ಸಹ ನಿರೀಕ್ಷಿತ ಮಟ್ಟದಲ್ಲಿ ನಡೆದಿಲ್ಲವಾಗಿ ಇದು ಮಹತ್ವದ ಸಂಶೋಧನೆಯಾಗಿದೆ. ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಗೆ ನಾಪತ್ತೆ ಪ್ರಕರಣಗಳೂ ಸಹ ಪೂರಕವಾವು ಎಂಬ ಅಂಶವನ್ನು ಸೂಕ್ಷ್ಮವಾಗಿ ಗಮನಿಸಲು ಈ ವರದಿಯು ಸಹಾಯಕವಾಗಿದೆ.

**ವೇಶ್ಯೆಯರು ಮತ್ತು ಲೈಂಗಿಕ ಅಲ್ಪಸಂಖ್ಯಾತರು ನಡೆದು ಬಂದ ದಾರಿ:** ಆಧುನಿಕ ವೇಶ್ಯಯರ/ ಲೈಂಗಿಕ ಕಾರ್ಯಕತೆಯರ ಮತ್ತವರ ಲೋಕದ ಪರಿಚಯವನ್ನು, ಅದರ ಹಿನ್ನೆಲೆಯಂತೆ ಪೂರಕವಾಗಿ ನಮ್ಮ ಪ್ರಾಚೀನ ಕಾವ್ಯಪುರಾಣ-ಇತಿಹಾಸಗಳಲ್ಲಿ ಅಂತರ್ಗತವಾಗಿರುವ ವೇಶ್ಯಾ ಲೋಕದ ದರ್ಶನವನ್ನು **ಪ್ರೊ.ಶಿವರಾಮಯ್ಯ** ಅವರು ಈ ಕೃತಿಯಲ್ಲಿ ತೆರೆದಿಡುತ್ತಾರೆ. ತಮ್ಮ ಅಧ್ಯಯನಕ್ಕೆ ಪರಾಮರ್ಶಿಸಿದ ಗ್ರಂಥಗಳಿಂದ ಸೂಕ್ತ ಉದ್ಧರಣೆಗಳನ್ನೆತ್ತಿ ವಿಶ್ಲೇಷಿಸುವ ಮೂಲಕ ವೇಶ್ಯಾ ಲೋಕದ ಪೂರ್ವ

ಕಾಲದ ಚಿತ್ರಣಗಳನ್ನು ನೀಡಿದ್ದಾರೆ. ಅಂದಿನ ವೇಶ್ಯಾವೃತ್ತಿ ವ್ಯವಸ್ಥೆಯ ಹೇರಿಕೆಯಾದರೂ, ಸಾಮಾಜಿಕವಾಗಿ ಒಂದು ಒಪ್ಪಿದ ಮೌಲ್ಯವೇ ಆಗಿದ್ದರೂ ಇಂದು ಅದೇ ವೃತ್ತಿ ಹೆಣ್ಣಿಗೆ ಒಂದು ಅಮಾನುಷ ಕ್ರೌರ್ಯವಾಗಿ ಹೀನಾಯವಾದ ಶೋಷಣೆಗೆ ಸೊತ್ತಾಗಿರುವುದನ್ನು ತೌಲನಿಕವಾಗಿ ಚರ್ಚಿಸಿದ್ದಾರೆ. ಈ ಕೃತಿಯು ಸಾಹಿತ್ಯಿಕ ನೆಲೆಯಲ್ಲಿ ಮಾತ್ರವಲ್ಲದೇ ಸಾಮಾಜಿಕ ನೆಲೆಯಲ್ಲಿಯೂ ನಮ್ಮನ್ನು ಯೋಚಿಸುವಂತೆ ಮಾಡುತ್ತದೆ. ಮಾನವ ವಿರೋಧಿ ಸಂಗತಿಗಳನ್ನು ವಿಶಿಷ್ಟ ಒಳನೋಟದಿಂದ ನಮ್ಮ ಸಾಮಾಜಿಕ ಸಾಂಸ್ಕೃತಿಕ ಸಂದರ್ಭದ ಹಿನ್ನೆಲೆಯಲ್ಲಿ ವಿಶ್ಲೇಷಿಸಲು ಸಹಾಯಕವಾಗಿದೆ. ಬದುಕಿನ ನರಕವನ್ನು ಹಾದು ಬಂದ ಮೂರು ಜನರಾದ ಕೇರಳದ ನಳಿನಿ ಜಮೀಲಾ, ತಮಿಳಿನ ಲಿವಿಂಗ್ ಸ್ಮೈಲ್ ವಿದ್ಯಾ ಮತ್ತು ಎಂ.ರೇವತಿಯವರ ದಾರುಣ ಅನುಭವಗಳ ಸೆಕ್ಸ್‌ವರ್ಕರ್ ಒಬ್ಬಳ ಆತ್ಮಕಥನ, ನಾನು ಅವನಲ್ಲ ಅವಳು ಮತ್ತು ಬದುಕು ಬಯಲು ಎಂಬ ನಾಗರೀಕ ಲೋಕ ತಲ್ಲಣಿಸಿ ನಾಚುವಂತಹ ಕೃತಿಗಳನ್ನು ಪರಿಚಯಿಸಿದ್ದಾರೆ. ಅವುಗಳ ಜೊತೆಗೆ ಅದೇ ಸಮಸ್ಯೆಗಳನ್ನು ಕುರಿತು ಕನ್ನಡದ ಲೇಖಕರಾದ ಮುದೇನೂರು ಸಂಗಣ್ಣ (ಸೂಳೆಸಂಕವ್ವ), ಚಂದ್ರಶೇಖರ ಕಂಬಾರ(ಶಿವರಾತ್ರಿ), ಹನುಮಂತ ಹಾಲಗೇರಿ (ಕೆಂಗುಲಾಬಿ) ಮತ್ತು ಡಾ.ಸಿ.ಎಸ್.ದ್ವಾರಕಾನಾಥ್ (ಸಂಕುಲ) ಅವರು ಬರೆದಿರುವ ಕೃತಿಗಳನ್ನು ಸ್ಥೂಲವಾಗಿ ಪರಾಮರ್ಶಿಸಿದ್ದಾರೆ.

**ಹೆಣ್ಣುಸಿರ ತಲ್ಲಣಗಳು: ರೂಪ ಹಾಸನ**ರವರ ಸಂಪಾದಕೀಯ ಕೃತಿಯಾಗಿದ್ದು, ಹೆಣ್ಣುಮಕ್ಕಳ ಉಸಿರನ್ನು ತಲ್ಲಣಿಸುತ್ತಿರುವ ಬಗೆಗಳು ಸೂಕ್ಷ್ಮವಾಗುತ್ತಿರುವ ಇಂದಿನ ಸಂದರ್ಭದ ಆಯಾಮಗಳನ್ನು ತಿಳಿಸಿಕೊಡುತ್ತದೆ. ನಾಡಿನ ವಿವಿಧ ಲೇಕಕ/ಲೇಖಕಿಯರರಿಂದ ವಿಭಿನ್ನ ವಿಷಯಗಳ ಕುರಿತಾದ ಲೇಖನಗಳನ್ನು ಒಳಗೊಂಡಿದೆ. ಲೇಖಕಿ ರೂಪ ಹಾಸನ ಅವರ **'ಲೈಂಗಿಕಜೀತ–ಅಪರಾಧಿ ಯಾರು?'** ಎಂಬ ಲೇಖನ ವೇಶ್ಯಾವಾಟಿಕೆಯನ್ನು ಕಾನೂನುಬದ್ಧಗೊಳಿಸಿದರೆ ಎದುರಾಗುವ ತೊಂದರೆಗಳನ್ನು ವಿವರಿಸುವ ಕುರಿತಾಗಿದೆ. ವೇಶ್ಯಾವಾಟಿಕೆಯನ್ನು ಕಾನೂನುಬದ್ಧಗೊಳಿಸಿದರೆ ವೇಶ್ಯಾಗೃಹಗಳು, ತಲೆಹಿಡುಕರು ಮತ್ತು ಮಧ್ಯವರ್ತಿಗಳಿಗೆ ಸರ್ಕಾರದಿಂದ ಮುಕ್ತ ಪರವಾನಗಿ ದೊರೆತು ಈಗ ಗೋಪ್ಯವಾಗಿ ನಡೆಯುತ್ತಿರುವ ಚಟುವಟಿಕೆಗಳೆಲ್ಲಾ ಬಹಿರಂಗವಾಗಿಯೇ ನಮ್ಮ ಸುತ್ತಮುತ್ತಲೇ, ರಾಜಾರೋಷವಾಗಿಯೇ ನಡೆಯುವುದರ ಜೊತೆಗೆ ವಾಣೀಜ್ಯೀಕೃತ ಲೈಂಗಿಕ ಚಟುವಟಿಕೆಗೆ ಮುಕ್ತ ಚಲನೆ ದೊರೆಯುತ್ತದೆ. ಈ ಕೆಟ್ಟ ಜಾಲಕ್ಕೆ ಮೋಸದಿಂದ ಮತ್ತು ಅನೈತಿಕತೆಯಿಂದ ಮಹಿಳೆ ಮತ್ತು ಮಕ್ಕಳನ್ನು ಬಲವಂತದಿಂದ ತಳ್ಳುವ ಸಾಧ್ಯತೆಗಳು ಹೆಚ್ಚಾಗಿ ಹೆಣ್ಣುಮಕ್ಕಳ ಅಕ್ರಮ ಸಾಗಾಟದ ಸಾಧ್ಯತೆಗಳೂ ಸಹ ವಿಪರೀತವಾಗಿ ಹೆಚ್ಚಾಗುತ್ತದೆ ಎಂಬ ಅಂಶದ ವಿಶ್ಲೇಷಣೆಯನ್ನು ಒಳಗೊಂಡಿದೆ. ಇದೇ ಕೃತಿಯಲ್ಲಿ **ಡಾ.ಅನುಸೂಯ ಕಾಂಬ್ಳೆ** ಅವರ **'ಹೆಣ್ಣು ಮತ್ತು ದೇಹರಾಜಕಾರಣ'** ಎಂಬ ಲೇಖನವು ಮಹಿಳೆಯ ಪಾತ್ರ ಅಧೀನತೆ ಮತ್ತು ಹೊಣೆಗಾರಿಕೆಯ ಹೇರಿಕೆಯಲ್ಲಿ ನಲುಗಿದ್ದರಿಂದ ನಿತ್ಯವೂ ದೌರ್ಜನ್ಯಕ್ಕೊಳಗಾಗುತ್ತಿದ್ದಾಳೆ. ಭಾರತೀಯ ಸಮಾಜದ ಕುಟುಂಬ ವ್ಯವಸ್ಥೆ ಸ್ತ್ರೀ ಪಾತಿವ್ರತ್ಯವನ್ನು ಒಂದು ಮೌಲ್ಯವಾಗಿ ಗುರುತಿಸಿ ಮಹಿಳೆಯ ಲೈಂಗಿಕ ನಿಯಂತ್ರಣ ಮಾಡುವುದರ ಜೊತೆಗೆ

ಪುರುಷಾಧೀನ ಮತ್ತು ಅವಳ ದೇಹದ ಮೇಲೆ ಪುರುಷಾಧಿಪತ್ಯವನ್ನು ಸ್ಥಾಪಿಸುವ ಹುನ್ನಾರದ ತಂತ್ರವನ್ನು ವಿವರಿಸಿದೆ. ಪಾತಿವ್ರತ್ಯ ಮತ್ತು ದೇವದಾಸಿ ಪದ್ಧತಿ ಇವರೆಡೂ ಹೆಣ್ಣಿನ ದೇಹ ಮತ್ತು ಮನಸ್ಸಿನ ಮೇಲೆ ಪುರುಷ ಸ್ಥಾಪಿಸಿದ ಅಧಿಕಾರ ಕೇಂದ್ರಗಳೆ ಆಗಿವೆ ಎಂಬುದನ್ನು ವಿವರಿಸಿದ್ದಾರೆ. ಪ್ರಭುತ್ವ, ಮಾರುಕಟ್ಟೆ ಮತ್ತು ಮಾಧ್ಯಮ ಪರಸ್ಪರ ಪೂರಕವಾಗಿರುವುದನ್ನು ವಿಮರ್ಶಿಸಿದ್ದಾರೆ. **'ವಾರೀಸುದಾರರಿಲ್ಲದ ಗದ್ದೆಗಳು' ಎಂಬ ಬಿ.ಎಂ.ರೋಹಿಣಿ** ಯವರ ಲೇಖನವು ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹವಾಗದೆ ಉಳಿದ ಅವಿವಾಹಿತ ಮಹಿಳೆಯರ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಮಸ್ಯೆಗಳ ಕುರಿತಾಗಿದೆ. ಅವರನ್ನು 'ವಾರೀಸುದಾರರಿಲ್ಲದ ಗದ್ದೆಗಳು' ಎಂದೇ ಸಮಾಜ ಹೇಗೆ ವ್ಯವಹರಿಸುತ್ತದೆ ಎಂಬುದನ್ನು ವಿವರಿಸಿದ್ದಾರೆ. **'ಮಹಿಳಾ ದೌರ್ಜನ್ಯದಿಂದ ಸಮಾನತೆಗಿರುವ ತಡೆಗೋಡೆಗಳು' ಎಂಬ ಸಾವಿತ್ರಿ ಮುಜುಮದಾರ** ಅವರ ಲೇಖನವು ಮಹಿಳಾ ದೌರ್ಜನ್ಯದ ವಿವಿಧ ಮುಖಗಳನ್ನು ಗಮನಿಸಿದಾಗ ಸರ್ಕಾರ ಯಾವುದೇ ಕ್ರಮ ಜಾರಿಮಾಡಿದ್ದರೂ ಸಹ ಸಮಸ್ಯೆಯ ಹತೋಟಿಗೆ ಸಾಧ್ಯವಾಗಿಲ್ಲ. ದೌರ್ಜನ್ಯದಿಂದಾಗಿ ಮಹಿಳೆಯರು ಮುಖ್ಯವಾಹಿನಿಗೆ ಬರದೆ ಸಮಾಜದಿಂದ ದೂರ ಸರಿಯುತ್ತಿರುವ ಸತ್ಯವನ್ನು ಬಿಚ್ಚಿಟ್ಟಿದ್ದಾರೆ. ಸಮಾನತೆ ಎಂಬ ಆಶಯಕ್ಕೆ ತಡೆಗೋಡೆಯಾಗಿ ಮಹಿಳಾ ದೌರ್ಜನ್ಯ ನಿಂತಿರುವುದನ್ನು ತಿಳಿಯಬಹುದಾಗಿದೆ. **'ನೀಲಾಂಜನೆಯರು ಮತ್ತು ಅರಿವಿನ ಮಾರ್ಗ' ಎಂಬ ಆರ.ಪವಿತ್ರ ಪ್ರಿಯಭಾಷಿಣಿ** ಲೇಖನವು ಸಾಮಾಜಿಕ ಕೆಡುಕಿನ ಸಂದರ್ಭದಲ್ಲಿ ಲೈಂಗಿಕತೆಯ ಪಾತ್ರವನ್ನು ವಿವರಿಸುತ್ತದೆ.

**ಸ್ತ್ರೀವಾದ: ಆನ್ವಯಿಕತೆ: ಎಚ್.ಎಸ್.ಶ್ರೀಮತಿ**ಯವರ ಕೃತಿಯಾಗಿದ್ದು ಸಮಾಜದಲ್ಲಿ ಹೆಣ್ಣಿನ ಸ್ಥಿತಿ ಇಷ್ಟೊಂದು ಹೀನಾಯಗೊಂಡಿದ್ದು ಏಕೆ ಮತ್ತು ಹೇಗೆ ಎಂಬುದನ್ನು ತಿಳಿಯಲು ಹಾಗೂ ಹೆಣ್ಣು ಈ ಪರಿಸ್ಥಿತಿಯಿಂದ ಹೊರಬರಲು ಸಾಧ್ಯವೇ ಎಂಬ ಪ್ರಶ್ನೆಗೆ ಉತ್ತರ ಹುಡುಕಲು ದಾರಿ ಮಾಡಿಕೊಡುತ್ತದೆ. ಈ ಕೃತಿಯಲ್ಲಿನ ಬರಹಗಳು ವ್ಯಕ್ತಿ, ದಾಂಪತ್ಯ, ಕುಟುಂಬ ಹಾಗೂ ಸಮಾಜ ಎಂಬ ಸ್ತ್ರೀ ಪರಿಸರ ಸಂದರ್ಭ ಹಾಗೂ ಸಂಬಂಧಗಳ ಸುತ್ತ ಹೆಣ್ಣಿನ ಬದುಕಿನ ಸ್ಥಿತಿಗತಿಗಳನ್ನು ಗುರುತಿಸಲು ಯತ್ನಿಸಿವೆ.

**ಸ್ತ್ರೀವಾದಿ ಪರಿಕಲ್ಪನೆಗಳು: ಕೇಶವಶರ್ಮ ಕೆ** ಅವರ ಈ ಕೋಶವು ಸ್ತ್ರೀವಾದಕ್ಕೆ ಸಂಬಂಧಿಸಿದ ಕೆಲವು ಪರಿಕಲ್ಪನೆಗಳನ್ನು ಒಳಗೊಂಡಿದೆ ಇದು ನನ್ನ ಸಂಶೋಧನೆಗೆ ಅಗತ್ಯವಾಗಿದ್ದು ಪದಗಳ ಅರ್ಥ ತಿಳಿಯುವಲ್ಲಿ ಸಹಕಾರಿಯಾಗಿದೆ.

**ಹೆಣ್ಣು–ಸಂಕರ ಕಾಲದ ಆತ್ಮಪ್ರಜ್ಞೆ: ಡಾ.ಎಚ್.ಎಸ್.ಅನುಪಮಾ** ಅವರ ಲೇಖನಗಳ ಸಂಗ್ರಹವಾಗಿದ್ದು ಹೆಣ್ಣನ್ನು ಉಸಿರುಗಟ್ಟಿಸುವ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಅತ್ಯಾಚಾರವು ಕೇವಲ ಬಲವಂತದ ಲೈಂಗಿಕ ಕ್ರಿಯೆಯಲ್ಲ, ಒಬ್ಬ ವ್ಯಕ್ತಿಯಾಗಿ ಹೆಣ್ಣನ್ನು ನಾಶಮಾಡುವ ಹೆಣ್ಣನ್ನು ನೀನು ಹೆಂಗಸು ಎಂದು ಬೆದರಿಸುವ ಅಧಿಕಾರದ ಹಿಡಿತದಲ್ಲಿಡುವ ರಾಜಕೀಯ ಸಾಧನವಾಗಿದೆ. ಸಮಾಜ ಹೆಣ್ಣನ್ನು

ಶರಣಾಗತ ಸ್ಥಿತಿಯಲ್ಲಿಡಲು ಅತ್ಯಾಚಾರ ಎಂಬ ಅಸ್ತ್ರವನ್ನು ಬಳಸಿಕೊಂಡುಬಂದಿದೆ. ಲಿಂಗತಾರತಮ್ಯದ ಆತ್ಯಂತಿಕ ದೌರ್ಜನ್ಯ ಶೀಲ ಎಂಬ ಪರಿಕಲ್ಪನೆಯಲ್ಲಿಟ್ಟು ಒಂದು ಕಡೆ ಪಾತಿವ್ರತ್ಯ ಮತ್ತೊಂದು ಕಡೆ ಹೆಣ್ಣಿನ ದೇಹದ ಮಾರಾಟದ ಮೂಲಕ ಇಬ್ಬಗೆಯ ನಿಯಮವನ್ನು ಅನುಸರಿಸುತ್ತಿರುವ ಪುರುಷಪ್ರಧಾನ ವ್ಯವಸ್ಥೆಯನ್ನು ಬಿಂಬಿಸುವ ಲೇಖನಗಳನ್ನು ಒಳಗೊಂಡಿದೆ. ಇದು ನನ್ನ ಸಂಶೋಧನಾ ವಿಷಯದ ವಿಸ್ತರಣೆಗೆ ಅನುಕೂಲಕರವಾಗಿದೆ.

**ಮಹಿಳೆ– ದಲಿತ ಮತ್ತು ರಾಜಕೀಯ ಪ್ರಜ್ಞೆ : ಡಾ.ಎಚ್.ಎಸ್.ಅನುಪಮಾ** ಅವರ ಆಯ್ದ ಬರಹಗಳನ್ನು ಒಳಗೊಂಡಿರುವ ಈ ಕೃತಿಯು ಪುರುಷ ಪ್ರಧಾನತೆ ಮತ್ತು ಜಾತಿ ಅಸಮಾನತೆ ಪ್ರಭುತ್ವದ ಸ್ವರೂಪವನ್ನು ಗ್ರಹಿಸಲು ಸಹಾಯಕವಾಗಿದೆ. ಮಹಿಳಾ ಚಳುವಳಿಗೆ ಪೂರಕವಾಗಿಟ್ಟುಕೊಂಡು ಮಹಿಳಾ ಚಳುವಳಿಗೆ ಬೇಕಾಗಿರುವ ಸಮತೋಲನ, ತಾತ್ವಿಕತೆ, ಅದು ವಿಸ್ತರಿಸಿಕೊಳ್ಳಬೇಕಾದ ಬಗೆಗಳನ್ನು ರೂಪಿಸಿದ್ದಾರೆ. ಜಾತಿ ತಾರತಮ್ಯದ ಅವಮಾನದ ಜೊತೆಗೆ ಪುರುಷರಿಂದಾಗುವ ಕಿರುಕುಳವನ್ನೂ, ಯಾತನೆಯನ್ನು ಅನುಭವಿಸುವ ಮಹಿಳೆಯರ ಸ್ಥಿತಿಯನ್ನು ವಿವರಿಸಿದ್ದಾರೆ.

**ದೇವದಾಸಿ ಮತ್ತು ಬೆತ್ತಲೆ ಸೇವೆ: ಮರಾಠಿ ಮೂಲದ ಉತ್ತಮ ಕಾಂಬಳೆ** ಯವರು ರಚಿಸಿರುವ ಕೃತಿಯನ್ನು ಕನ್ನಡಕ್ಕೆ **ಡಾ.ಸಿದ್ರಾಮ ಕಾರಣಿಕರವರು** ಅನುವಾದಿಸಿದ ಕೃತಿಯಾಗಿದೆ. ಈ ಕೃತಿಯಲ್ಲಿ ದೇವದಾಸಿ ಪದ್ಧತಿಯ ಎಳೆಗಳನ್ನು ತುಂಬಾ ಆಳವಾದ ಅಧ್ಯಯನದ ಮೂಲಕ ಬಿಡಿಸಿಟ್ಟಿದ್ದಾರೆ. ತಮ್ಮ ಅನುಭವದ ವಿವರಗಳನ್ನು ನೀಡಿದ್ದಾರೆ. ಸರಕು ಸಂಸ್ಕೃತಿಯ ಈ ದಿನದಲ್ಲಿ ದೇವರು, ದೇವಮಾನವರು, ವ್ಯಾಪಾರಿಗಳು, ರಾಜಕಾರಣಿಗಳು, ಅಧಿಕಾರಿಗಳು, ಸೇನೆ, ಪೋಲೀಸ್ ವ್ಯವಸ್ಥೆ, ಪ್ರವಾಸೋದ್ಯಮ ಹೀಗೆ ಎಲ್ಲ ಕಡೆಯೂ ಮಹಿಳೆಯರನ್ನು ಕೀಳಾಗಿ ನೋಡಲಾಗುತ್ತಿದೆ. ಕೇವಲ ಮಾರುಕಟ್ಟೆ ವಿಸ್ತರಿಸುವ ದಳ್ಳಾಳಿಯಾಗಿ ಅವಳನ್ನು, ಅವಳ ದೇಹವನ್ನು ಬಳಸಿಕೊಳ್ಳಲಾಗುತ್ತಿದೆ. ಕುಸಿಯುತ್ತಿರುವ ಲಿಂಗಾನುಪಾತ, ಹೆಚ್ಚುತ್ತಿರುವ ಅತ್ಯಾಚಾರ, ಬಡತನ, ಹಸಿವು, ಬಾಲವೇಶ್ಯೆಯರ ಸಂಖ್ಯೆಯ ಹೆಚ್ಚಳ, ನಿರುದ್ಯೋಗ ಸಮಸ್ಯೆ, ಜಾತಿ ದೌರ್ಜನ್ಯ ಮತ್ತಿತರ ಸಾಮಾಜಿಕ ಸಮಸ್ಯೆಗಳ ಕುರಿತಾಗಿ ಸಮಾಜದ ಮಹಿಳೆಯರಿಗೆ ಜಾಗೃತಿ ಮೂಡಿಸುವ ಪ್ರಯತ್ನದ ಕೃತಿಯಾಗಿದ್ದು ನನ್ನ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ನೀಡುವಂತಹ ಕೃತಿಯಾಗಿದೆ.

**ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ (ಒಂದು ಸಾಂಸ್ಕೃತಿಕ ಅಧ್ಯಯನ): ಡಾ. ಕಮಲಾ ಹೆಮ್ಮಿಗೆ**ಯವರ ಸಂಶೋಧನಾ ಕೃತಿಯಾಗಿದ್ದು, ಸಮಕಾಲೀನ ಜ್ವಲಂತ ಬಹುಮುಖ್ಯವಾದ ಸಮಸ್ಯೆಗಳಲ್ಲಿ ಒಂದಾದ ಎಲ್ಲಮ್ಮನ ಹೆಸರಿನಲ್ಲಿ ನಡೆದು ಬಂದ ದೇವದಾಸಿ ಪದ್ಧತಿಯನ್ನು ಸಂಶೋಧನೆಗೆ ತೆಗೆದುಕೊಂಡು, ತಮ್ಮ ವೈಚಾರಿಕ ಹಿನ್ನೆಲೆಯಲ್ಲಿಯೇ ಪರಿಹಾರ ಸೂಚಿಸುತ್ತಾ ಜಾನಪದೀಯ ಅಂಶಗಳನ್ನು ನಿರೂಪಿಸಿರುವ ಸಂಶೋಧನಾ ಮಹಾ ಪ್ರಬಂಧವಾಗಿದೆ. ಕ್ಷೇತ್ರಕಾರ್ಯದ ಅನುಭವಗಳನ್ನು, ಆ ಸಮಯದಲ್ಲಿ ಎದುರಾದ ಸಮಸ್ಯೆ ಸವಾಲುಗಳನ್ನು ನಮೂದಿಸಿರುವುದು ನನ್ನ

ಸಂಶೋಧನಾ ಕ್ಷೇತ್ರಕಾರ್ಯಕ್ಕೆ ಬೇಕಾದ ಮುನ್ನೆಚ್ಚರಿಕೆಗಳನ್ನು ಕೈಗೊಳ್ಳಲು ಸಹಾಯಕವಾಗಿದೆ. ಪ್ರಸ್ತುತ ದೇವದಾಸಿ ಪದ್ಧತಿಯ ಹುಟ್ಟು ಬೆಳವಣಿಗೆ ಆಚರಣೆಗಳ ಆಳ ಹರವುಗಳನ್ನು, ದೇವದಾಸಿ ಪದ್ಧತಿಯನ್ನು ಉಳಿಸಿಬೆಳೆಸಿಕೊಂಡು ಬಂದ ಜಾನಪದ ಸಾಹಿತ್ಯ ಪುರಾಣ-ಕಾವ್ಯಗಳ ವೈಚಾರಿಕ ಹಾಗೂ ವೈಜ್ಞಾನಿಕ ಅಧ್ಯಯನದ ಸಾಧ್ಯತೆಗಳನ್ನು ಈ ಪ್ರಬಂಧ ನಿರೂಪಿಸುತ್ತದೆ.

**ಮುಳ್ಳ ಮೇಲಿನ ಸೆರಗು, ಅತ್ಯಾಚಾರ ಮತ್ತು ಕಾನೂನು: ಇಣುಕು ನೋಟ: ಡಾ.ಎಚ್ ಎಸ್ ಅನುಪಮಾ** ಅವರ ಈ ಕೃತಿಯು ದಿನೇದಿನೇ ಹೆಚ್ಚುತ್ತಿರುವ ಅತ್ಯಾಚಾರ ಪ್ರಕರಣಗಳ ಕುರಿತ ಸಮಗ್ರ ಮಾಹಿತಿಯನ್ನು ಒಳಗೊಂಡಿದೆ. ಅಕ್ಷರಸ್ಥರಲ್ಲಿಯೂ ಸಹ ಕಾನೂನು ಪ್ರಕ್ರಿಯೆ ಬಗ್ಗೆ, ಪ್ರಕರಣಗಳ ನಡೆಯ ಬಗ್ಗೆ, ಅವಶ್ಯ ಕ್ರಮಗಳ ಬಗ್ಗೆ ತಿಳಿವು ಇಲ್ಲದಿರುವುದು ಕಂಡುಬರುತ್ತದೆ. ಇಂದು ಸಾಮಾನ್ಯವೆಂಬಂತೆ ನಡೆಯುತ್ತಿರುವ, ಸಾಮಾನ್ಯವೆಂಬಂತೆ ಜನ ಮರೆತುಬಿಡುತ್ತಿರುವ ಅತ್ಯಾಚಾರ ಪ್ರಕರಣಗಳ ಕುರಿತು, ಅದರ ಕಾನೂನು ಅಂಶಗಳ ಕುರಿತ ಲಿಂಗಸೂಕ್ಷ್ಮತೆಯನ್ನೂ ತಿಳಿಸುವ ಹೊತ್ತಿಗೆಯಾಗಿದೆ.

**ಪುರುಷ ಅಹಂಕಾರಕ್ಕೆ ಸವಾಲ್: ತಾರಾಬಾಯಿ ಶಿಂಧೆ** ಅವರ ಮರಾಠಿ ಮೂಲದ ಈ ಕೃತಿಯನ್ನು **ಬಿ.ಸುಜ್ಞಾನಮೂರ್ತಿ** ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಕೃತಿಯಲ್ಲಿ ಹಿಂದೂ ಸಮಾಜದ ಜಾತಿವ್ಯವಸ್ಥೆಯಲ್ಲಿರುವ ಅಸಮಾನತೆ, ಪಿತೃಪ್ರಧಾನ ವ್ಯವಸ್ಥೆಯ ದಬ್ಬಾಳಿಕೆ, ಮಹಿಳೆಯರ ಮೇಲೆ ಆಗುತ್ತಿದ್ದ ದೌರ್ಜನ್ಯವನ್ನು ವಿಧವೆಯರು ಅನುಭವಿಸುವ ಕಷ್ಟಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಪುರುಷಾಧಿಪತ್ಯವು ಬಾಲ್ಯವಿವಾಹವನ್ನು ಅನುಮೋಧಿಸಿ, ವಿಧವಾ ವಿವಾಹವನ್ನು ಅನುಮೋಧಿಸದಿರುವ ಹಿಂದಿನ ರಾಜಕಾರಣವನ್ನು ಮತ್ತು ಹೆಣ್ಣಿನ ದೇಹದ ಮೇಲಿನ ಪುರುಷ ರಾಜಕಾರಣವನ್ನು ವಿವರಿಸುತ್ತದೆ.

**ಕುಟುಂಬ ವ್ಯವಸ್ಥೆ ; ಮಾರ್ಕ್ಸ್‌ವಾದ-ಸ್ತ್ರೀವಾದ: ತೆಲುಗಿನಲ್ಲಿ ಓಲ್ಗಾ** ಕನ್ನಡಕ್ಕೆ **ಬಿ.ಸುಜ್ಞಾನಮೂರ್ತಿಯವರು** ಅನುವಾದಿಸಿದ್ದಾರೆ. ಈ ಕೃತಿಯಲ್ಲಿನ ಲೇಖನಗಳು ಮಹಿಳೆ, ಕುಟುಂಬ ಮತ್ತು ಸಾಮಾಜಿಕ ಸಂಬಂಧಗಳನ್ನು ಪರಿಶೀಲಿಸುವಲ್ಲಿ ಯಶಸ್ವಿಯಾಗಿವೆ. ಮಾರ್ಕ್ಸ್‌ವಾದಿ ದೃಷ್ಟಿಕೋನ ಮತ್ತು ಮಾರ್ಕ್ಸವಾದಿ ಚಿಂತನೆಗಳನ್ನು ಒಳಗೊಂಡಿದೆ. ಆರ್ಥಿಕತೆ ಎಂಬುದರಲ್ಲಿ ಉತ್ಪಾದನೆ, ಸಂತಾನೋತ್ಪತ್ತಿ ಮತ್ತು ಲೈಂಗಿಕಕತೆ ಸಹ ಬೆರೆತಿದೆ. ಆದ್ದರಿಂದ ಮಹಿಳಾ ಸಮೂಹದ ಸಮಸ್ಯೆಗಳು ಪರಿಹಾರವಾಗಬೇಕಾದರೆ ಒಟ್ಟಾಗಿ ಸಮಾಜದ ಆರ್ಥಿಕ ಬುನಾದಿಯನ್ನೆ ಬದಲಾಯಿಸಬೇಕು ಎಂಬ ದೃಷ್ಟಿಕೋನದ ಆಲೋಚನೆಗಳನ್ನು ಈ ಸಂಕಲನದ ಲೇಖನಗಳು ಒಳಗೊಂಡಿವೆ.

**ಇಬ್ಬನಿಯ ಕಾವು: ಬಾನು ಮುಷ್ತಾಕ್** ಅವರ ಬರಹಗಳ ಸಂಗ್ರಹವಾಗಿದೆ. ಈ ಬರಹಗಳು ವರ್ತಮಾನದ ತಲ್ಲಣಗಳನ್ನು ಸೂಕ್ಷ್ಮವಾಗಿ ಗ್ರಹಿಸಿವೆ. ಹೆಣ್ಣಿನ ಪರದೇಶಿತನದ ವಾಸ್ತವತೆ ಮತ್ತು ಅಸಹಾಯಕತೆಯ ಚಿತ್ರಣವನ್ನು ನೀಡಿದ್ದಾರೆ. ಮುಸ್ಲಿಂ ಮಹಿಳೆ, ಹಜ್ ಕಮಿಟಿಯ ಅವ್ಯವಹಾರಗಳ

ಕುರಿತು ಮತ್ತು ಧರ್ಮ–ರಾಜಕಾರಣ–ಲೈಂಗಿಕತೆ ಎಂಬ ಮೂರು ವಿಷಯಗಳ ಬಗೆಗೆ ಮುಕ್ತವಾಗಿ ಚರ್ಚಿಸುತ್ತಾರೆ.

**ದೇವಾಲಯಗಳು ಮತ್ತು ಲೈಂಗಿಕ ಶಿಲ್ಪ: ತಾಪಿ ಧರ್ಮಾರಾವ್** ಅವರ ಈ ಕೃತಿಯನ್ನು **ಎಸ್.ಆರ್.ಶಾಸ್ತ್ರಿಯವರು** ಕನ್ನಡಕ್ಕೆ ಅನುವಾದಿಸಿದ್ದಾರೆ. ದೇವಾಲಯಗಳಲ್ಲಿನ ಲೈಂಗಿಕ ಶಿಲ್ಪಗಳ ಕುರಿತ ಚಿತ್ರಣವನ್ನು ನೀಡುವ ಮೂಲಕ ಮಾನವ ನಾಗರೀಕತೆಯು ಅಭಿವೃದ್ದಿಯಾಗುತ್ತಾ ಬಂದಂತೆ ಹೆಣ್ಣು ಗಂಡಿನ ಲೈಂಗಿಕತೆಗೆ ನೀಡಿದ ಪ್ರಾಶಸ್ತ್ಯ ಹಾಗೂ ಆಚಾರ ವಿಚಾರಗಳ ಕುರಿತಾದ ವಿವರಣೆಯನ್ನು ನೀಡಿದ್ದಾರೆ . ಇದರಿಂದ ಅನಾದಿಕಾಲದ ಕಾಲಘಟ್ಟದಲ್ಲಿನ ಲೈಂಗಿಕತೆ ಬಗ್ಗೆ ಇದ್ದ ವಾಸ್ತವ ಸಂಗತಿಗಳನ್ನು ಚರ್ಚಿಸಿದ್ದಾರೆ.

**ಹೇಳುತೇನೆ ಕೇಳು– ಹೆಣ್ಣಿನ ಆತ್ಮಕಥೆಗಳು: ಸುಕನ್ಯಾ ಕನಾರಳ್ಳಿ** ಅವರ ಅನುವಾದಿತ ಕೃತಿಯಾಗಿದೆ. ಪ್ರಸ್ತುತ ಸಂಕಲನವು ಹೆಣ್ಣಿನ ಆತ್ಮಕಥನಕ್ಕೆ, ಕಥಾನಕಗಳಿಗೆ ಸಂಬಂಧಪಟ್ಟ ಹಲವಾರು ಪ್ರಶ್ನೆಗಳ ಮೂರ್ತರೂಪವಾಗಿದೆ. ಇದಕ್ಕೆ ದೇಶ, ಭಾಷೆಗಳ ಮಿತಿಯಿಲ್ಲ, ಹಂಸಾ ವಡಕರ್, ಬಿನೋದಿನಿ ದಾಸಿ, ರಮಾಬಾಯಿ ರಾನಡೆ, ಜೆನೆಟ್ ಫ್ರೇಂ, ಕಮಲಾ ದಾಸ್, ಸಿಲ್ವಿಯಾ ಪ್ಲಾತ್ ಹೀಗೆ ಹಲವಾರು ಮಹಿಳೆಯರ ಆತ್ಮಕಥನಗಳನ್ನು ಒಳಗೊಂಡಿದೆ. ಹೆಣ್ಣಿನ ಬದುಕಿನ ನೋವಿನ ನಲಿವಿನ, ಅಡೆತಡೆಗಳ ಬದುಕಿನ ಚಿತ್ರಣವನ್ನು ನೀಡುತ್ತದೆ. ಹೆಣ್ಣಿನ ನೈಜ ವಾಸ್ತವ ಬದುಕಿನ ಚಿತ್ರಣವನ್ನು ಅರಿಯಲು ಇದು ಸಹಾಯಕವಾಗಿದೆ.

**ಸಾಕಾರದತ್ತ ಸಮಾನತೆಯ ಕನಸು– ಮಹಿಳಾ ಪ್ರತಿರೋಧದ ನೆಲೆಗಳು: ಡಾ.ಪ್ರೀತಿ ಸುಬಚಂದ್ರ** ಮತ್ತು **ಎಂ.ಎನ್.ಸುಮನಾ** ಅವರ ಸಂಪಾದಕೀಯ ಕೃತಿಯಲ್ಲಿ ವಿಚಾರ ಸಂಕಿರಣ ಹಾಗೂ ಸಮಾವೇಶ ಸಂದರ್ಭದ ನುಡಿಗಳನ್ನು ಸಂಕಲಿಸಿ ದಾಖಲಿಸಲಾಗಿದೆ. ದಿನದಿನಕ್ಕೂ ಮಹಿಳೆಯರ ಸಮಸ್ಯೆಗಳು ಹೊಸ ಹೊಸ ರೂಪ ತಾಳುತ್ತಿರುವ ಸಂದರ್ಭದಲ್ಲಿ ಮಹಿಳಾ ಹೋರಾಟಕ್ಕೆ ಹೊಸ ಬಿಕ್ಕಟ್ಟು ಸವಾಲುಗಳು ಎದುರಾಗುತ್ತಿವೆ ಇವುಗಳನ್ನು ಎದುರಿಸಲು ಚರಿತ್ರೆಯಾಗಿ ದಾಖಲಿಸಲಾಗಿದೆ. ಇತಿಹಾಸದಿಂದ ಕಾಣೆಯಾಗಿರುವ ಹೆಣ್ಣಿನ ದನಿಯನ್ನು ವಿವಿಧ ನೆಲೆಗಳಿಂದ ಶೋಧಿಸಲು ಸಹಕಾರಿಯಾಗಿದೆ. **ಅಕ್ಕೈ ಪದ್ಮಶಾಲಿ** ಅವರ **ಲೈಂಗಿಕ ಹಿಂಸೆ–ಒಂದು ಭಿನ್ನ ಆಯಾಮ, ಡಾ.ವಸುಂದರಾ ಭೂಪತಿಯವರ ನಾಗರೀಕ ಸಮಾಜದ ಅನಾಗರೀಕ ವರ್ತನೆ, ದು.ಸರಸ್ವತಿಯವರ ಜಾತಿ ಮತ್ತು ವರ್ಗ ದೌರ್ಜನ್ಯ: ಮಹಿಳಾ ಪ್ರತಿರೋಧದ ನೆಲೆಗಳು: ಕೇಳಲೇಬೇಕಾದ ದನಿ ದಲಿತ ಸೋದರಿಯರದು** ಲೇಖನಗಳು ಹೆಣ್ಣಿನ ಮೇಲೆ ಪುರುಷಾಧಿಕಾರದ ಹಿಂಸೆಯ ನೆಲೆಗಳನ್ನು ವಿವರಿಸುತ್ತವೆ.

**ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ: ಡಾ.ಎಂ.ಚಿದಾನಂದ ಮೂರ್ತಿ** ಯವರ ಈ ಪುಸ್ತಕವು ವಚನ ಸಾಹಿತ್ಯವನ್ನೂ , ಕರ್ನಾಟಕದ ಸಾಮಾಜಿಕ ಚರಿತ್ರೆಯನ್ನು ಮತ್ತು ಅಸ್ಪೃಶ್ಯತೆಯನ್ನು ಕುರಿತಾದ ಸಮಸ್ಯೆಯನ್ನು ಅಭ್ಯಸಿಸಲು ಉತ್ತಮ ಸಾಮಗ್ರಿಯನ್ನು ಒದಗಿಸಿದೆ. ಈ ಕೃತಿಯ

**ಅನುಬಂಧ- III** ರಲ್ಲಿ ಪ್ರಾಚೀನ ಕರ್ನಾಟಕದಲ್ಲಿನ ದಾಸ್ಯ ಪದ್ಧತಿಯನ್ನೂ, ಸಂತೆಗಳಲ್ಲಿ ಪ್ರಾಣಿಗಳ ಜೊತೆ ಮನುಷ್ಯರನ್ನು ಮಾರಾಟ ಮಾಡುತ್ತಿದ್ದ ಉಲ್ಲೇಖವಿರುವ ಕ್ರಿ.ಶ. ೧೪೩೦ರ ಒಂದು ಶಾಸನದ ಮತ್ತು ತೊತ್ತುಗಳಾಗಿದ್ದ ಹೊಲೆಯರ ಮಾರಾಟದ ಮೂರು ಕ್ರಯ ಪತ್ರಗಳನ್ನು ನೀಡಿದ್ದಾರೆ. ಶೃಂಗೇರಿ ಮಠದ ಕಡತಗಳಲ್ಲಿರುವ ಈ ಕ್ರಯ ಪತ್ರಗಳಲ್ಲಿ ಜಮೀನುದಾರರು ತಮ್ಮ ಸ್ವಂತ ಪಿತ್ರಾರ್ಜಿತ ಆಸ್ತಿ ಗಳನ್ನು ಹೊಲೆಯರನ್ನು ಇತರರಿಗೆ ಮಾರಾಟಮಾಡಿ ಕ್ರಯಚೀಟಿಗಳನ್ನು ಬರೆದು ಕೊಟ್ಟ ವಿಷಯವಿದೆ. ಇದರಲ್ಲಿ ಒಬ್ಬ ವಿಧವೆಯನ್ನು ಮಾರಾಟ ಮಾಡಿದ ನಿದರ್ಶನವಿದೆ. ಆ ಹೆಣ್ಣಿಗೆ ತನ್ನ ಮಕ್ಕಳ ಮೇಲು ಸಹ ಒಡೆತನವಿರುವುದಿಲ್ಲ. ಮಲೆನಾಡಿನ ಸೌಂದರ್ಯ, ತುಂಗಾ ನದಿಯ ಪ್ರಶಾಂತ ವಾತಾವರಣ ಮತ್ತು ಅದ್ವೈತ ದರ್ಶನ ಹಿನ್ನೆಲೆ ಹೊಂದಿರುವ ಶೃಂಗೇರಿ ಮಠಕ್ಕೂ ಅಲ್ಲಿ ನಡೆಯುತ್ತಿದ್ದ ಹೊಲೆಯರ ಮತ್ತು ಹೆಣ್ಣುಗಳ ಮಾರಾಟದ ಕ್ರಿಯೆಗೂ ಹೊಂದಾಣಿಕೆಯಾಗುವುದು ಕಷ್ಟವಾಗಿದೆ. ಆದರೆ ಧರ್ಮ-ಜಾತಿ-ಅಧಿಕಾರದ ನೆಲೆಗಳನ್ನು ಗುರುತಿಸಲು ನೇರ ನಿದರ್ಶನಗಳಾಗಿವೆ.

**ನೋಯುವ ಹಲ್ಲಿಗೆ ಹೊರಳುವ ನಾಲಿಗೆ: ಡಾ.ಎಚ್.ಎಸ್.ಅನುಪಮ** ಅವರ ಅಂಕಣ ಬರಹಗಳ ಸಂಗ್ರಹವಾಗಿರುವ ಈ ಕೃತಿಯಲ್ಲಿನ ಕೆಲವು ಬರಹಗಳು ಅಲೆಮಾರಿ, ಲೈಂಗಿಕ ಅಲ್ಪಸಂಖ್ಯಾತರು, ಲೈಂಗಿಕ ಕಾರ್ಯಕರ್ತರ ಕುರಿತಾಗಿ ಇವೆ. ಇವು ಇತ್ತೀಚಿನ ವಿಷಯಗಳನ್ನು ಒಳಗೊಂಡಿದ್ದು ನನ್ನ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸಿವೆ.

**ನೀರ ದಾರಿ- ಸಲಿತ ಮಹಿಳಾ ಪ್ರಜ್ಞೆ ವಿಭಿನ್ನ ನೆಲೆಗಳಿಂದ: ದು.ಸರಸ್ವತಿಯವರ** ಸಂಪಾದಕೀಯ ಕೃತಿಯಾಗಿದ್ದು ಮಹಿಳ ಅಧ್ಯಯನ ಕುರಿತ ಅದರಲ್ಲಿಯೂ ದಲಿತ ಹೆಣ್ಣುಮಕ್ಕಳ ಜೀವನದ ಬವಣೆಗಳನ್ನು ಕುರಿತಾಗಿದೆ. ಜಾತಿ,ಲಿಂಗ ಮತ್ತು ವರ್ಗ ತಾರತಮ್ಯಗಳಲ್ಲಿ ಸಿಲುಕಿ ನಲುಗುತ್ತಿರುವ ದಲಿತ ಮಹಿಳೆಯರ ಅನುಭವ, ಅರಿವು, ಜಾಣ್ಮೆ ಮತ್ತು ಪ್ರತಿರೋಧದ ನೆಲೆಗಳನ್ನು ಗುರುತಿಸಿದ್ದಾರೆ. ದಲಿತ ಸಾಧಕಿಯರ ನೆಲೆ, ದಲಿತ ಸಂಘಟಕರ ನೆಲೆ, ದಲಿತ ಸಂಘಟನೆಯ ನೆಲೆಯಲ್ಲಿ ಗುರುತಿಸಿದ್ದಾರೆ. ವಿಮೋಚನಾ ಮಹಿಳಾ ಹಕ್ಕುಗಳ ವೇದಿಕೆ, ಸಮತಾ ಮಹಿಳಾ ವೇದಿಕೆ, ಮೈಸೂರು, ಜನವಾದಿ ಮಹಿಳ ಸಂಘಟನೆ ಕುರಿತಾಗಿ ಮಾಹಿತಿ ನೀಡಿರುವುದು ನನ್ನ ಅಧ್ಯಯನಕ್ಕೆ ಸಹಕಾರಿಯಾಗಿದೆ. ಇದರಲ್ಲಿನ ಹಲವಾರು ಪ್ರಸಿದ್ಧ ಲೇಖಕರ ಲೇಖನಗಳನ್ನು ನನ್ನ ಅಧ್ಯಯನಕ್ಕೆ ಪರಾಮರ್ಶಿಸಲು ಸಾಧ್ಯವಾಗಿದೆ.

**ಮಹಿಳೆ ಇಂದಿನ ಸವಾಲುಗಳು: ಡಾ.ಸಬಿಹಾ ಭೂಮೀಗೌಡ** ಅವರ ಈ ಪುಸ್ತಕದಲ್ಲಿ ಜಾತಿ ಮರ್ಯಾದೆ ಕಾಪಾಡುವ ನೆಪದಲ್ಲಿ ಆಗುತ್ತಿರುವ ಮರ್ಯಾದ ಹತ್ಯೆಗಳು, ಜಾತಿ-ಧರ್ಮಗಳು ಯುವ ಪೀಳಿಗೆಯ ಮದುವೆಯ ಆಯ್ಕೆಗೆ ಹೇಗೆ ತೊಡಕಾಗಿವೆ ಎಂದು ಚರ್ಚಿಸುತ್ತಾ, ಲೈಂಗಿಕ ದೌರ್ಜನ್ಯ, ವೃತ್ತಿ ಆಯ್ಕೆಯಲ್ಲಿ , ಶಿಕ್ಷಣ ಕ್ಷೇತ್ರದಲ್ಲಿ ಲಿಂಗತಾರತಮ್ಯ, ಆಧುನಿಕ ಸಂದರ್ಭದಲ್ಲಿನ ಮಹಿಳೆಯರ ವರ್ತಮಾನದ ಸೂಕ್ಷ್ಮ ತಲ್ಲಣಗಳನ್ನು ಗುರುತಿಸಿದ್ದಾರೆ.

**ಬಾಳ ಕೌದಿ: ಕೆ.ನೀಲಾ** ಅವರ ಅಂಕಣ ಬರಹಗಳನ್ನು ಒಳಗೊಂಡಿರುವ ಈ ಪುಸ್ತಕವು ತಳಸಮುದಾಯದ ಮಹಿಳೆಯರ ಸಂಕಟಗಳನ್ನು ಪ್ರತಿಸಿಧಿಸಿದೆ. ಶೋಷಿತ ಹೆಣ್ಣುಮಕ್ಕಳ ನ್ಯಾಯಕ್ಕಾಗಿ ಅವರನ್ನು ಸಂಘಟಿಸುವುದು ಮತ್ತು ಹೋರಾಡಿ ನ್ಯಾಯವನ್ನು ದಕ್ಕಿಸಿದ ಅನುಭವಗಳ ಬರವಣಿಗೆಯಾಗಿದ್ದು ಮಹಿಳಾ ಲೋಕದಲ್ಲಿ ಎಂಬ ಅಂಕಣದಲ್ಲಿನ ಜಾಗತೀಕರಣದ ತಕ್ಕಡಿಯಲ್ಲಿ ಈಗ ಹೆಣ್ಣುಮಕ್ಕಳ ಮಾರಾಟದ ಸರದಿ, ಹೆಣ್ಣುಕಾಯದ ಮೇಲೆರಗುವ ಕತ್ತಲೆಯ ಕ್ರೌರ್ಯಗಳು ಎಂಬ ಲೇಖನಗಳು ನನ್ನ ಸಂಶೋಧನಾ ವಿಷಯಕ್ಕೆ ನೆರವಾಗಿವೆ.

**ಅನುಪಮಾ ನಿರಂಜನ ಅವರ ಕಾದಂಬರಿಗಳು ಒಂದು ಸಾಹಿತ್ಯಕ ಅಧ್ಯಯನ: ಡಾ. ವಿಜಯಶ್ರೀ ಸಬರದ** ಅವರ ಸಂಶೋಧನಾ ಗ್ರಂಥದಲ್ಲಿ **ಡಾ. ಅನುಪಮಾ ನಿರಂಜನ** ರವರ **'ಪೌರಾಣಿಕ ಕಾದಂಬರಿ : ಮಾಧವಿ'** ಯಲ್ಲಿ ಸ್ತ್ರೀಯನ್ನು ಸರಕಿನಂತೆ ಕೊಳ್ಳುವ ಮಾರುವ, ದಾನ ನೀಡುವ ಸ್ತ್ರೀ ಶೋಷಣೆಯ ವರ್ಣನೆಯನ್ನು ತಿಳಿಸಿದ್ದಾರೆ. ಊಳಿಗ ಮಾನ್ಯ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣನ್ನು ಕೊಳ್ಳುವುದು, ಮಾರುವುದು, ದಾನ ಮಾಡುವುದು ಸಾಧಾರಣ ಪದ್ಧತಿಯಾಗಿತ್ತು. ಯಯಾತಿ ಮಹಾರಾಜ ತನ್ನ ಮಗಳನ್ನು(ಮಾಧವಿ) ದಾನದ ರೂಪದಲ್ಲಿ ಗಾಲವ ಋಷಿಗೆ ನೀಡಿದ್ದನ್ನು ಮತ್ತು ಗಾಲವ ಮಾಧವಿಯನ್ನು ತನ್ನ ಕಾರ್ಯಸಾಧನೆಗಾಗಿ ರಾಜರುಗಳಿಗೆ ಬಾಡಿಗೆಗೆ ಕೊಟ್ಟದ್ದನ್ನು ಮಹಾಭಾರತದ ಉದ್ಯೋಗ ಪರ್ವದ ಕಥೆಯಲ್ಲಿ ಚಿತ್ರವಾಗಿರುವುದನ್ನು ಈ ಪೌರಾಣಿಕ ಕಾದಂಬರಿಯಲ್ಲಿ ಉಲ್ಲೇಖಿಸಿದ್ದಾರೆ. ಪ್ರಾಚೀನ ಕಾಲದಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ ಸಾಂಸ್ಥೀಕರಣಗೊಂಡಿದ್ದ ಸ್ತ್ರೀ ವಿರೋಧಿ ಧೋರಣೆಯ ದರ್ಶನ ಮಾಡಿಸಲೆತ್ನಿಸಿದ್ದಾರೆ. ಹುಟ್ಟುತ್ತಲೇ ತಾಯಿಯನ್ನು ಕಳೆದುಕೊಂಡು, ತಂದೆಯ ಅವಜ್ಞೆಗೆ ತುತ್ತಾಗಿ ಪರಿಚಾರಿಕೆಯರ ಶುಶ್ರೂಷೆಯಲ್ಲಿ ಬೆಳೆದ ಮಾಧವಿ ಅಪ್ಸರೆ, ಗಾಲವ ಋಷಿ ತನ್ನ ಗುರು ವಿಶ್ವಾಮಿತ್ರನಿಗೆ ಗುರುಕಾಣಿಕೆಯಾಗಿ ವಿಶಿಷ್ಟ ಜಾತಿಯ ೮೦೦ ಕುದುರೆಗಳನ್ನು ಮಾಧವಿಯ ತಂದೆ ಯಯಾತಿಯ ಬಳಿ ದಾನ ಬೇಡಿದಾಗ, ಅದು ಸಾಧ್ಯವಾಗದ ಯಯಾತಿ. ಅದಕ್ಕೆ ಬದಲಾಗಿ ತನ್ನ ಮಗಳನ್ನು ದಾನ ನೀಡುತ್ತಾನೆ. ನಂತರ ಗಾಲವ ಋಷಿಯು ಬೇರೆ ಬೇರೆ ರಾಜರಲ್ಲಿ ಮಾಧವಿಯನ್ನು ಅಡವಿಟ್ಟು ಕುದುರೆಗಳನ್ನು ಸಂಪಾದಿಸುತ್ತಾನೆ, ಕೊನೆಗೆ ಕುದುರೆಗಳ ಸಂಖ್ಯೆ ಪೂರ್ಣವಾಗದಿದ್ದಾಗ ಮಾಧವಿಯನ್ನು ವಿಶ್ವಾಮಿತ್ರನ ಬಳಿ ಬಿಡುವುದು ಮತ್ತು ಮಾಧವಿ ತಾನು ಸಂಸರ್ಗ ಹೊಂದಿದ ನಾಲ್ಕೂ ಪುರುಷರಿಗೆ ಒಂದೊಂದು ಗಂಡು ಮಗುವನ್ನು ಹೆತ್ತು ಕೊಡುವುದು. ಕೊನೆಗೆ ಮಾಧವಿ ಜೀವನದ ಬಗೆಗೆ ವೈರಾಗ್ಯ ತಾಳಿ ತಂದೆ ಸ್ವಯಂವರ ಮಾಡಿದಾಗ ಅದನ್ನು ಧಿಕ್ಕರಿಸಿ ತಪಸ್ಸಿಗೆ ಹೊರಟು ಬಿಡುವುದು ಇದಿಷ್ಟು ಕಥಾವಸ್ತು. ಪಿತೃ ಪ್ರಧಾನತೆ ವ್ಯವಸ್ಥೆಯಲ್ಲಿರುವ ಪ್ರತ್ಯಕ್ಷ  ಸ್ತ್ರೀ ಶೋಷಣೆಗೆ ಇದಕ್ಕಿಂದ ದೊಡ್ಡ ನಿದರ್ಶನ ಬೇಕಿಲ್ಲ. ಹೆಣ್ಣನ್ನು ಪುರುಷರು ವಸ್ತುವಿನಂತೆ, ಕೊಂಡು, ಮಾರಿ, ಬಳಸಿ ಮತತು ಮಕ್ಕಳನ್ನು ಒತ್ತೆ ಇಡುವುದಕ್ಕೆ ಮಾತ್ರ ಸೀಮಿತಗೊಂಡಿರಲಿಲ್ಲ. ಬದಲಾಗಿ ಅವರ ಜೀವನದ ಮೇಲೂ ಪರಿಪೂರ್ಣವಾದ ಅಧಿಕಾರ

ಸ್ಥಾಪಿಸುತ್ತದೆ. ಹೆಣ್ಣುಮಕ್ಕಳನ್ನು ಅನೈತಿಕತೆಗೆ ತಳ್ಳುವ ಈ ಕ್ರಮವು ಕುಟುಂಬದಿಂದಲೇ ಸೃಷ್ಟಿಯಾದಂತೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿದುಬಂದಿದೆ.

**ಸ್ತ್ರೀ ಪರ; ಡಾ. ಹಾಲತಿ ಸೋಮಶೇಖರ್** ರವರು ಬರೆದಿರುವ ಈ ಪುಸ್ತಕವು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯಗಳನ್ನು ತಡೆಯಲು ನಡೆದ ಪ್ರಯತ್ನಗಳನ್ನು ತಿಳಿಸುವ ಜೊತೆಗೆ ದೇಶದ ಸ್ವಾತಂತ್ರ್ಯ ನಂತರ ಮಹಿಳೆಯ ಶೋಷಣೆಯನ್ನು ತಡೆಯಲು ನಿರ್ಮಿಸಲಾದ ಕಾನೂನುಗಳ ಸ್ಪಂದನವನ್ನು ತಿಳಿಸಿದ್ದಾರೆ. ಸರ್ಕಾರ, ಸಾರ್ವಜನಿಕ ರಂಗ ಮತ್ತು ಖಾಸಗಿ ವ್ಯಕ್ತಿಗಳು, ಸಂಸ್ಥೆಗಳು, ಮಹಿಳೆಯ ಜೀವನ ಸುಧಾರಣೆಗೆ ಪ್ರಯತ್ನಿಸುತ್ತಿದ್ದರೂ ಸಹ ಮಹಿಳೆಯರ ಮೇಲೆ ನಡೆಯುತ್ತಿರುವ ಕ್ರೌರ್ಯ ನಿಂತಿಲ್ಲ. ಅದು ನಿರಂತರವಾಗಿದೆ. ಈ ಹಿನ್ನೆಲೆಯಲ್ಲಿ ಕಾನೂನುಗಳು ಮಾತ್ರ ಹೆಣ್ಣಿನ ಕಷ್ಟಗಳನ್ನು ಸುಧಾರಿಸಲಾರವು, ಕಾನೂನಿನ ಕಾರ್ಯಾನುಷ್ಠಾನ ಮತ್ತು ಕಾನೂನನ್ನು ಗೌರವಿಸುವ ಮತ್ತು ಮನುಷ್ಯ ಪ್ರೀತಿಗೆ ಮಣಿಯುವ ಮನಸ್ಸು ಮುಖ್ಯವಾಗಿ ಬೇಕು ಎಂಬುದನ್ನು ಗಮನಿಸುವ ಮೂಲಕ ಕಾನೂನುಗಳು ಮತ್ತು ಅದರ ಅನುಷ್ಠಾನದ ಅಂಗ ಸಂಸ್ಥೆಗಳು ಪರಸ್ಪರ ಕೈ ಜೋಡಿಸುವ ಬಗೆಯನ್ನು ದಾಖಲಿಸಿದ್ದಾರೆ. ಸ್ತ್ರೀಪರ ಕಾನೂನುಗಳು ಮತ್ತು ಸ್ತ್ರೀಪರ ಸಂಘಟನೆಗಳ ಕಾರ್ಯಕ್ಷೇತ್ರ, ಕಾರ್ಯ ವೈಖರಿ ಮತ್ತು ವಿವರಣಾತ್ಮಕ ಪರಿಚಯವನ್ನು, ಮಾಹಿತಿಯನ್ನು ನೀಡಿದ್ದಾರೆ.

**ಒಲಂಪಿಕ್ಸ್ ಎಂಬ ಕೆಂಪು ದೀಪ: ಡಾ.ಲೀಲಾ ಸಂಪಿಗೆ**ಯವರ ಈ ಕಿರು ಹೊತ್ತಿಗೆಯಲ್ಲಿ ಒಲಂಪಿಕ್ಸ್ ಕ್ರೀಡಾ ಕೂಟದಲ್ಲಿ ವೇಶ್ಯಾವಾಟಿಕೆಯ ಪ್ರಭಾವವನ್ನು, ಹೆಣ್ಣು ಮಕ್ಕಳ ಮಾರಾಟದ ವಿಧಾನವನ್ನು ಚರ್ಚಿಸಿದ್ದಾರೆ. ಲೈಂಗಿಕ ಕಾರ್ಯಕರ್ತೆಯರ ಜೀವನವನ್ನು ಬಿಚ್ಚಿಟ್ಟಿದ್ದಾರೆ. ಎದು ನನ್ನ ಅಧ್ಯಯನ ವಿಷಯವನ್ನು ಆಳವಾಗಿ ಗ್ರಹಿಸಲು ಸಹಕಾರಿಯಾಗಿದೆ.

**Trafficking of women for sexual purpose : Fiona David ರವರು ಈ ಪುಸ್ತಕದಲ್ಲಿ** ಇಂದು ಪ್ರಪಂಚದಾದ್ಯಂತ ಒಂದರಿಂದ ಎರಡು ಮಿಲಿಯನ್‌ನಷ್ಟು ಜನರು ಕಳ್ಳಸಾಗಾಣಿಕೆಗೆ ಒಳಗಾಗುತ್ತಿದ್ದಾರೆ. ಇದರಲ್ಲಿ ಹೆಣ್ಣು ಮಕ್ಕಳ ಕಳ್ಳಸಾಗಾಣಿಕೆಯು ಹೆಚ್ಚಾಗಿ ವೇಶ್ಯಾವಾಟಿಕೆಗೆ ಮತ್ತು ಒತ್ತಾಯ ಪೂರ್ವಕವಾಗಿ ಕಾರ್ಮಿಕ ವಲಯಕ್ಕೆ ತಳ್ಳಲು ನಡೆಯುತ್ತಿದೆ. ಇದು ಒಂದು ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಅಂತಾರಾಷ್ಟ್ರೀಯ ಅಪರಾಧ ಚಟುವಟಿಕೆಯ ವಲಯವಾಗಿದೆ. ಈ ರೀತಿಯ ಕಳ್ಳಸಾಗಾಣಿಕೆಯು ಸಂಘಟಿತ ಅಪರಾಧ ವಲಯದ ಙನೇ ಅತಿ ದೊಡ್ಡ ಲಾಭದ ಮೂಲವಾಗಿದೆ. ಆದರೆ ಈ ರೀತಿಯ ಅಪರಾಧ ಕೃತ್ಯಗಳು ಅಧಿಕೃತವಾದ ಅಕ್ರಮವಾಗಿ ಪರಿಣಮಿಸುತ್ತಿರುವುದು ಜಾಗತೀಕರಣ ಪ್ರಕ್ರಿಯೆಯ ಪ್ರಭಾವವಾಗಿದೆ ಎಂದು ವಿಶ್ಲೇಷಿಸಿದ್ದಾರೆ. ಈ ಮಾಹಿತಿಯು ಉಪಯುಕ್ತವಾಗಿದೆ.

**Indian Country Report- To Prevent And Combat Trafficking And Commercial Sexual Exploitation Of Children And Women : World Congress III, Against Sexual Exploitation Of Children And Adolescents ನ ವರದಿಯು** ಮಾನವ ಸಾಗಾಣಿಕೆಯನ್ನು ಕುರಿತು ಇದೆ. ರಷ್ಯಾ ರಾಷ್ಟ್ರವು ತನ್ನ ಆರ್ಥಿಕ ಪ್ರಗತಿಗಾಗಿ ತನ್ನ ಪ್ರಜೆಗಳನ್ನೇ ಶಿಕಾರಿಗಳನ್ನಾಗಿಸಿದೆ. ಸುಲಭವಾಗಿ ಸಿಗುವ ಮತ್ತು ಹೆಚ್ಚಿನ ಲಾಭವನ್ನು ತಂದುಕೊಡುವ ಮಾನವ ಕಳ್ಳಸಾಗಾಣಿಕೆಯನ್ನು ಅಲ್ಲಿನ ಸರ್ಕಾರ, ರಾಜಕೀಯ ಪಕ್ಷಗಳು, ಶ್ರೀಮಂತರು, ಬಂಡವಾಳಶಹಿಗಳು, ಕಾನೂನು ಪರಿಪಾಲಕರು ಹೇಗೆ ಎಲ್ಲರೂ ಪರೋಕ್ಷವಾಗಿ ಭಾಗಿಯಾಗಿ ಈ ಧಂದೆಯನ್ನು ಪೋಷಿಸುತ್ತಿದ್ದಾರೆ, ಇದರಿಂದ ಅಲ್ಲಿಯ ಜನತೆಯ ಮೇಲೆ ಆಗುತ್ತಿರುವ ಪರಿಣಾಮಗಳನ್ನು ವಿವರಿಸಿದ್ದಾರೆ. ಅಲ್ಲಿನ ವ್ಯವಸ್ಥೆಯೊಳಗಿನ ಅವ್ಯವಸ್ಥೆಯನ್ನು ಅರಿತುಕೊಳ್ಳುವ ಮೂಲಕ ನಮ್ಮ ಸಮಾಜದಲ್ಲಿನ ಅಂತಹುದೇ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸಲು ಸಾಧ್ಯವಾಗಬಹುದು.

ರಾಜ್ಯದ ಜಿಲ್ಲೆಗಳಿಂದ ಯುವತಿಯರು ಮತ್ತು ಮಹಿಳೆಯರು ಕಾಣೆಯಾದ ಬಗ್ಗೆ ದಾಖಲಾದ ಪ್ರಕರಣಗಳು, ಪತ್ತೆಯಾದ ಮತ್ತು ಪತ್ತೆಯಾಗದ ೨೦೧೪ರ ಅಂಕಿಅಂಶವನ್ನು ಗುರುತಿಸಲಾಗಿದೆ. ೦-೧೮ ವರ್ಷದವರು ವರದಿಯಾದ ಪ್ರಕರಣಗಳು-೧೩೧೧, ಇದರಲ್ಲಿ ಪತ್ತೆಯಾದ ಪ್ರಕರಣಗಳು-೫೬೨, ೧೮ ವರ್ಷದ ಮೇಲಿನವರು ವರದಿಯಾದ ಪ್ರಕರಣಗಳು-೬೭೬೬, ಪತ್ತೆಯಾದ ಪ್ರಕರಣಗಳು-೨೭೫೮. ಬೆಂಗಳೂರು ನಗರದಲ್ಲಿ ಅತಿ ಹೆಚ್ಚು ೨೮೧ ಯುವತಿಯರು ಮತ್ತು ೨೭೧೪ ಮಹಿಳೆಯರು ಕಾಣೆಯಾಗಿದ್ದಾರೆ. ಇದರಲ್ಲಿ ೧೬೯ ಯುವತಿಯರು ಹಾಗೂ ೧೪೧೯ ಮಹಿಳೆಯರನ್ನು ಪತ್ತೆ ಮಾಡಲಾಗಿದೆ. ಯಾದಗಿರಿ ಜಿಲ್ಲೆಯಲ್ಲಿ ಅತಿ ಕಡಿಮೆ ೩ ಯುವತಿಯರು ಮತ್ತು ೧೭ ಮಹಿಳೆಯರು ಕಾಣೆಯಾದ ಬಗ್ಗೆ ವರದಿಯಾಗಿದೆ. ಇದರಲ್ಲಿ ಒಬ್ಬ ಯುವತಿ ಮತ್ತು ೫ ಮಹಿಳೆಯರುನ್ನು ಮಾತ್ರ ಪತ್ತೆ ಮಾಡಲು ಸಾಧ್ಯವಾಗಿದೆ. ಬಡತನವನ್ನೆ ಅಸ್ತ್ರವಾಗಿ ಬಳಸಿಕೊಂಡು ಹೆಣ್ಣುಮಕ್ಕಳನ್ನು ಸಾಗಾಣಿಕೆ ಮಾಡಿ ವೇಶ್ಯಾವಾಟಿಕೆಗೆ ದೂಡುವ ಜಾಲದ ಬಗ್ಗೆ ಸರಿಯಾದ ಕ್ರಮವಹಿಸುವ ಅವಶ್ಯಕತೆ ಇದೆ.

**ಅರ್ಧನಾರೀಶ್ವರ: ತಮಿಳು ಮೂಲ ಪೆರುಮಾಳ್ ಮುರುಗನ್, ಕನ್ನಡ ಅನುವಾದ: ಕೆ.ನಲ್ಲತಂಬಿ,** ಈ ಕೃತಿಯು ಸ್ಪಷ್ಟವಾದ ಪುರುಷ ಪ್ರಾಧಾನ್ಯತೆಯ ರಾಜಕೀಯ ಆಶಯಗಳ ಸಾಮಾಜಿಕ ಕಾದಂಬರಿಯಾಗಿದೆ. ಜಗತ್ತಿನ ಯಾವುದೇ ನಾಗರೀಕತೆಯಲ್ಲು ಗಂಡು-ಹೆಣ್ಣಿನ ಸಂಬಂಧ ಸಹಜವಾಗಿಯೇ ಸಂಕೀರ್ಣವಾದ ಮತ್ತು ನಿರ್ಣಾಯಕವಾದ ಸಂಬಂಧ ಸಂಸ್ಥೆ. ಅದು ಪಿತೃಸಂಸ್ಕೃತಿಯಲ್ಲಂತೂ ಅಧಿಕಾರ ಸಂಬಂಧವೂ ಆಗಿದೆ. ಪ್ರಾಕೃತಿಕವಾದ ಈ ಸಂಬಂಧದ ಸಾಮಾಜಿಕ ಮತ್ತು ರಾಜಕೀಯ ನೆಲೆಗಳನ್ನು ಈ ಕೃತಿಯು ಬಿಚ್ಚಿಡುತ್ತದೆ. ಒಂದು ಹೆಣ್ಣು ಸರಿ ತಪ್ಪುಗಳ ಗೊಡವೆಯಿಲ್ಲದೆ ತಾಯ್ತನದ ದಟ್ಟ ಹಂಬಲದಲ್ಲಿ ನೈತಿಕತೆಯ ಸರಹದ್ದನ್ನು ದಾಟುವಳು.

ಊರಿನ ಜಾತ್ರೆಯಲ್ಲೊಂದು ದಿನದ ರಾತ್ರಿ ಯಾವ ಗಂಡೂ ಯಾವ ಹೆಣ್ಣಿನ ಜೊತೆಗೂ ಕಳೆಯಬಹುದಾದ ವಿಲಕ್ಷಣ ಆಚರಣೆಯನ್ನು ವಿವರಿಸುತ್ತದೆ. ಇಲ್ಲಿ ಇದು ಹೆಣ್ಣಿನ ಹಕ್ಕನ್ನು ಎತ್ತಿ ಹಿಡಿಯುತ್ತಿದೆಯೋ? ಗಂಡಿನ ಅವಕಾಶಗಳನ್ನು ತೆರೆಯುತ್ತಿದೆಯೊ? ಅಥವಾ ಮಕ್ಕಳಾಗದ ಹೆಣ್ಣು ಗಂಡುಗಳಿಗೆ ಅವಕಾಶವನ್ನು ತೆರೆಯುತ್ತಿದೆಯೋ? ಎಂಬ ಪ್ರಶ್ನೆ ಮೂಡುತ್ತದೆ.

**ಹೆಣ್ಣುತನ ಎಂಬ ಕಣ್ಕಟ್ಟು: ಬೆಟ್ಟಿ ಫ್ರಿಡನ್ ಅವರ ದ ಫೆಮಿನೈನ್ ಮಿಸ್ಟಿಕ್ ಈ** ಕೃತಿಯನ್ನು ಕನ್ನಡಕ್ಕೆ ಎಚ್.ಎಸ್.ಶ್ರೀಮತಿ ಅವರು ಅನುವಾದಿಸಿದ್ದಾರೆ. ನಮ್ಮ ಬದುಕಿನ ಸನ್ನಿವೇಶದಲ್ಲಿ ಹೆಣ್ಣನ್ನು ಅರಿಯುವ, ಹೆಣ್ಣನ್ನು ಸಾಮಾಜಿಕ ಜೀವಿಯಾಗಿ ತೋರ್ಪಡಿಸುವ ಮತ್ತು ತೊಡಗಿಸಿಕೊಳ್ಳುವಲ್ಲಿ ಇರುವ ತೊಡಕುಗಳನ್ನು ನಿವಾರಿಸಿಕೊಳ್ಳವ ಅವಶ್ಯಕತೆಯ ತಿಳುವಳಿಕೆಯನ್ನು ಈ ಕೃತಿಯು ತಿಳಿಸುತ್ತದೆ. ಲೈಂಗಿಕತೆಯೇ ಪರಮ ಸತ್ಯ ಎಂದ ಸಿಗ್ಮಂಡ್ ಫ್ರಾಯ್ಡ್, ಲೈಂಗಿಕ ನೆಲೆಯಿಂದ ಪ್ರೇರಿತ ರಾದ ಶಿಕ್ಷಣ ತಜ್ಞರು, ಲೈಂಗಿಕ ಮಾರಟ, ಕಾಮಾರ್ಥಿಗಳು, ಒತ್ತೆಯಿಟ್ಟ ಸ್ವಂತಿಕೆ, ಮುಂತಾದ ಲೇಖನಗಳು ಪ್ರಸ್ತುತ ಅಧ್ಯಯನದ ವಿಷಯದ ಹೆಚ್ಚು ಸ್ಪಷ್ಟತೆಯನ್ನು ಹೊಂದಲು ಸಹಾಯಕವಾಗಿದೆ.

**ಹೆಣ್ಣು ಹೆಜ್ಜೆ: ಸಾವಿತ್ರಿ ಮುಜುಮದಾರ** ಅವರ ಈ ಕೃತಿಯಲ್ಲಿ ಜಾಗತೀಕರಣದ ಹೊಡೆತದಿಂದಾಗಿ ಮೌಲ್ಯಗಳನ್ನು ಕಳೆದುಕೊಂಡ ಪುರುಷವರ್ಗ, ಮಹಿಳೆಯರನ್ನು ಹತಾಶರನ್ನಾಗಿ ಮಾಡುತ್ತಿದೆ. ಸೌಲಭ್ಯಕ್ಕಾಗಿ ಹೆಣಗಾಡುವ, ಸಂಬಂದಗಳನ್ನು ಗಟ್ಟಿಗೊಳಿಸಿಕೊಳ್ಳಲು ಹೆಣಗಾಡುವ ಮಹಿಳೆಯರ ಸತ್ಯಘಟನೆಗಳನ್ನು ಒಳಗೊಂಡಿರುವುದರಿಂದ ನನ್ನ ಅಧ್ಯಯನಕ್ಕೆ ಉಪಯುಕ್ತವಾಗಿದೆ.

**ಅಂಬೇಡ್ಕರ್ ದೃಷ್ಟಿಯಲ್ಲಿ ಮನು:** ಕೆ.ಮಾಯಿಗೌಡ ಈ ಪುಸ್ತಕದಲ್ಲಿ ಸ್ತ್ರೀ ಸಮುದಾಯಕ್ಕೆ ಮನು ಮಾಡಿದ ಮಹಾನ್ ದ್ರೋಹದ ಸಂಪೂರ್ಣ ಪರಿಚಯವನ್ನು ಅಂಬೇಡ್ಕರ ಅವರು ಮಾಡಿದ್ದಾರೆ.

**ಮಹಿಳೆ ಮತ್ತು ಮೌಢ್ಯ:** ಡಾ.ವಸುಂದರಾ ಭೂಪತಿಯವರ ಈ ಕೃತಿಯಲ್ಲಿ ಈ ಸಮಾಜ ಸೃಷ್ಟಿಸಿದ ಮೂಢನಂಬಿಕೆಗಳಿಗೆ ಮಹಿಳೆ ಬಲಿಯಾಗುತ್ತಲೇ ಅವುಗಳ ಪೋಷಕಳೂ ಆಗಿರುವ ವೈರುಧ್ಯದ ಸಂಗತಿಯನ್ನು ಪರಿಚಯಿಸುತ್ತದೆ.

**ಮನುಸ್ಮೃತಿ–ಅಪರಾಧ–ಶಿಕ್ಷೆ:** ಬಿ.ಸುಜ್ಞಾನಮೂರ್ತಿ ಯವರ ಈ ಕೃತಿಯಲ್ಲಿ ಮನುಸ್ಮೃತಿಯಲ್ಲಿ ಬರುವ ರಾಜ್ಯ, ರಾಜ, ರಾಜಪ್ರಭುತ್ವ, ಅಧಿಕಾರ , ನ್ಯಾಯವ್ಯವಸ್ಥೆ, ಲೈಂಗಿಕ ಅಪರಾಧಗಳು, ಆರ್ಥಿಕ ಜೀವನ ದಲ್ಲಿನ ಸ್ತ್ರೀಯರ ಸ್ಥಿತಿಗತಿಯನ್ನು ವಿವರಿಸುವ ವಿಷಯಗಳು ಸಂಶೋಧನೆಗೆ ಉಪಯುಕ್ತವಾಗಿವೆ.

**ಅನಾವರಣ: ಸಾ.ರಾ.ಅಬೂಬಕ್ಕರ್**. ಅವರ ಹಲವು ಲೇಖನಗಳ ಕೃತಿಯಾಗಿದ್ದು, ಇವರು 'ಭಾರತೀಯ ಸಮಾಜ, ಸಂಸ್ಕೃತಿ, ಮಹಿಳೆ' ಎಂಬ ಲೇಖನದಲ್ಲಿ ಭಾರತೀಯ ಸಮಾಜದಲ್ಲಿ ಎಂಥಹ ಪರಿಸ್ಥಿತಿಯಿಂದ ಮಹಿಳೆ ಬದುಕುತ್ತಿದ್ದಾಳೆ ಎಂಬುದನ್ನು ತಿಳಿದ್ದಾರೆ. 'ಹಿಂದಿನ ಕಾಲದಲ್ಲಿ

ಸೊಸೆಯಿಂದ ಸೇವೆಯನ್ನು ನಿರೀಕ್ಷಿಸುತ್ತಿದ್ದ ಗಂಡನ ಮನೆಯವರು ಇಂದು ಆಕೆಯಿಂದ ಆರ್ಥಿಕ ಲಾಭವನ್ನು ಬಯಸುತ್ತಾರೆ. ಎರಡು ಹೃದಯಗಳನ್ನು ಬೆಸೆಯಬಹುದಾಗಿದ್ದ ಎರಡು ಕುಟುಂಬಗಳನ್ನು ಒಂದುಗೂಡಿಸ  ಬಹುದಾಗಿದ್ದ ಮದುವೆ ಎಂಬ ಮಧುರ ಭಾಂಧವ್ಯಕ್ಕೆ  ನಾಂದಿ ಹಾಡಬಹುದಾಗಿದ್ದ ಘಟನೆ ಇಂದು ಕೊಡು-ಕೊಳುವ ವ್ಯವಹಾರವಾಗಿ ಮಾರ್ಪಾಡು ಹೊಂದಿದೆ. ಹೆಣ್ಣಿನ ಗುಣ, ವಿದ್ಯಾಭ್ಯಾಸ, ಸೌಂದರ್ಯ ಇವೆಲ್ಲವೂ ಗೌಣವಾಗಿ ಆಕೆ ತರಬಹುದಾದ ಆರ್ಥಿಕ ಮೊತ್ತಷ್ಟೆ ಮದುವೆಯ ಮಾರುಕಟ್ಟೆಯಲ್ಲಿ ಚಲಿಸುವ ನಾಣ್ಯವಾಗಿದೆ' ಮುಸ್ಲಿಂ ಮಹಿಳೆಯರ ಸಂವೇದನೆಯನ್ನು ಇವರು ವಿವರಿಸುತ್ತಾ ಎಲ್ಲಾ ಸಮುದಾಯದ ಮದುವೆಯ ಮಾರುಕಟ್ಟೆಯಲ್ಲಿ ಚಲಿಸುವ ನಾಣ್ಯವಾಗುತ್ತಾಳೆ. ಒಟ್ಟಾಗಿ ಮಹಿಳಾ ಪ್ರಶ್ನೆಗಳು ಮತ್ತು ಮಾರುಕಟ್ಟೆಯ ವಿಷಯವಾಗಿ ಏಕಕಾಲದಲ್ಲಿ ಚರ್ಚಿಸಿದ್ದಾರೆ.

**ಮಹಿಳೆ ಮತ್ತು ಸವಾಲುಗಳು: ಡಾ. ಎಸ್ ಇಂದಿರಾ** ಇವರು ಈ ಕೃತಿಯಲ್ಲಿ 'ಮಹಿಳೆಯು ಇಂದು ಕ್ಷೇತ್ರಗಳಲ್ಲಿ ಕಾಲಿರಿಸಿ ಔದ್ಯೋಗಿಕ ದೃಷ್ಟಿಯಿಂದ ದಿನದ ಬಹುಪಾಲು ಸಮಯವನ್ನು ಹೊರಗೇ ಕಳೆಯಬೇಕಾದ ಪರಿಸ್ಥಿತಿ ಇದೆ. ಕೆಲಸಕ್ಕಾಗಿ ಮನೆಬಿಟ್ಟು ಹೊರಗೆ ಬರುವ ಹೆಣ್ಣು ಹಲವು ಸಂದರ್ಭಗಳಲ್ಲಿ ಪುರುಷರಿಂದ ಕೀಟಲೆ, ಕಿರುಕುಳಗಳಿಗೆ ಒಳಗಾಗಬೇಕಾಗುತ್ತದೆ. ಇದಕ್ಕೆಲ್ಲ ಕಡಿವಾಣ ಹಾಕಲೆಂದೇ ಇರುವ ಸೆಕ್ಷೆನ್ ೩೫೪ ಕಾನೂನು ಮಹಿಳೆ ನಿರಾತಂಕಿಗಳನ್ನಾಗಿಸ ಬಹುದು.  ಅವರು ಮುಂದುವರಿದು ಹೇಳುತ್ತಾರೆ 'ಸ್ವಾವಲಂಬಿ ಹೆಣ್ಣು ಸ್ವಸ್ಥಸಮಾಜದ ಕಣ್ಣು ಎಂದು ತಿಳಿದು ದುಡಿಮೆಯು ಅನಿವಾರ್ಯವಾದಾಗ ಮಹಿಳೆ ವಿವಿಧ ವೃತ್ತಿಗಳಲ್ಲಿ ಸಂಬಳ ಅಥವಾ ಮಂಜೂರಿಗಾಗಿ ಕೆಲಸನಿರ್ವಹಿಸುತ್ತಿದ್ದಾಳೆ. ಗ್ರಾಮಗಳಿಗಿಂತ ನಗರಗಳಲ್ಲಿಯೇ ದುಡಿಯುವ ಮಹಿಳೆಯರ ಸಂಖ್ಯೆ ಹೆಚ್ಚಾಗಿರುತ್ತದೆ'. ಇವರು ಹೇಳು ಹಾಗೆ ಕಾನೂನು, ಕಾಯ್ದೆಯಿಂದ ಮಹಿಳೆಯರು ನೆಮ್ಮದಿಯಿಂದಿರಬಹುದು ಎಂಬುದಾಗಿ ಆದರೆ ಈ ಎಲ್ಲಾ ಮಹಿಳೆಯರು ನೆಮ್ಮದಿಯಿಂದ ಇದ್ದಾರೆ? ಇದ್ದರೆ ಅವರು ಯಾವ ವರ್ಗದ ಮಹಿಳೆಯರಿಗೆ ಸಾಧ್ಯವಾಗಿದೆ? ಎಂದು. ಕೆಲಸ ಮಾಡುವ ಮಹಿಳೆಯರ ಬಗ್ಗೆ ಮಾಡುವಾಗ ನಗರಗಳಲ್ಲಿಯೇ ಮಹಿಳೆಯರ ಸಂಖ್ಯೆ ಹೆಚ್ಚಾರುತ್ತದೆ ಎಂಬ ವಾಕ್ಯವನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಅಂದರೆ ಗ್ರಾಮೀಣ ಮಹಿಳೆಯರು ಹೆಚ್ಚು ಕೆಲಸವಿಲ್ಲದೆಯೆ, ಸುಭದ್ರತೆಯಿಂದ ಇದ್ದಾರೆಯೆ? ಈ ಮಹಿಳೆಯರಿಗೆ ಸಮಸ್ಯೆಯೆ ಇಲ್ಲವೇನೋ ಎನ್ನುವಂತೆ ಕಾಣುತ್ತದೆ.

**ಒಡಲ ಬೆಂಕಿ ಆರದಿರಲಿ(ಕಳ್ಳು-ಬಳ್ಳಿ ಬರಹಗಳು); ಡಾ. ವಸುಮಳಲಿ** ಅವರ ಈ ಹೊತ್ತಿಗೆಯಲ್ಲಿ ಕೇವಲ ಸಾಹಿತ್ಯಿಕ ಮತ್ತು ಸಾಮಾಜಿಕವಾಗಿ ನೋಡದೆಯೆ, ಮಹಿಳೆಯರು, ತಳಸಮುದಾಯಗಳು, ತೃತೀಯ ಲಿಂಗಿಗಳ ಬಗೆಗೂ ತಮ್ಮ ಲೇಖನಗಳಲ್ಲಿ ಬೆಳಕು ಚೆಲ್ಲಿದ್ದಾರೆ. ಚರಿತ್ರೆಯಲ್ಲಿನ ಬೇರೆಬೇರೆ ಮಜಲುಗಳನ್ನ ಈ ಹೊತ್ತಿಗೆಯಲ್ಲಿ ಮನದಟ್ಟು ಮಾಡಿದ್ದಾರೆ. ವಾಸ್ತವ ಬದುಕಿನ ಚಿತ್ರಣವನ್ನು ಇವರ ಲೇಖನಗಳು ಚಿತ್ರಿಸಿವೆ. ಇದು ಸಂಶೋಧನೆಯ ಅಧ್ಯಯನಕ್ಕೆ ಪೂರವಾಗಿದೆ.

**'ಮಹಿಳೆ, ಚಳುವಳಿ ಮತ್ತು ರಾಜಕಾರಣ' ಕೆ ಷರೀಫಾ** ಅವರ ಈ ಕೃತಿ ವೈಚಾರಿಕ ಮತ್ತು ಮಹಿಳಾ ಚಳುವಳಿ ಹಾಗೂ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳನ್ನು ಒಳಗೊಂಡಿದೆ. ಮನೆಯೊಳಗೆ ಮಹಿಳೆಯ ದುಡಿಮೆಯನ್ನು ಅಪಮೌಲ್ಯಗೊಳಿಸುವ ರೀತಿ, ಮುಸ್ಲಿಂ ಮಹಿಳೆಯರು ಅನುಭವಿಸುತ್ತಿರುವ ದುಃಖ ದುಮ್ಮಾನಗಳ ಪತ್ರಿಕಾ ವರದಿಗಳ ಅಂಕಿ ಸಂಖ್ಯೆಗಳನ್ನು ನೀಡಿದ್ದಾರೆ. ದೇಶ ವಿಭಜನೆಯ ಕಾಲದಲ್ಲಿ ಹೆಣ್ಣಿನ ಮೇಲೆ ಸಾಧಿಸಿದ ದ್ವೇಷವನ್ನು ತಿಳಿಸಿದ್ದಾರೆ. ಹೆಣ್ಣು ತನ್ನ ಶತ್ರುಗಳನ್ನು ಗುರುತಿಸಲಾಗದ ನಿಸ್ಸಾಹಾಯಕ ಸ್ಥಿತಿ ಹಾಗೂ ಅವಳಿಗೆ ಸಲ್ಲಬೇಕಾದ ಸಾಮಾಜಿಕ, ರಾಜಕೀಯ ಪ್ರಾತಿನಿಧ್ಯಗಳ ಅಗತ್ಯಗಳ ಬಗ್ಗೆ ವಿವರಿಸಿದ್ದಾರೆ. ಲಿಂಗತಾರತಮ್ಯ, ಭ್ರೂಣಹತ್ಯೆ, ಮರಿಯಾದ ಹತ್ಯೆ, ಲೈಂಗಿಕ ಶೋಷಣೆ ಮತ್ತು  ಹಿಂಸೆ ಹೇಗೆ ರಾಜಕೀಯ ಸ್ವರೂಪ ಪಡೆಯುತ್ತವೆ ಎಂಬುದನ್ನು ವಿವರಿಸಿದ್ದಾರೆ. 'ಗುಜ್ಜಾರ್ ಕಿ ಶಾದಿ' ಎಂಬ ಕಳ್ಳ ಮದುವೆಗಳು ನಮ್ಮ ರಾಜ್ಯವೂ ಸೇರಿದಂತೆ ಹಲವು ರಾಜ್ಯಗಳಲ್ಲಿ ರೂಢಿಯಲ್ಲಿದ್ದು ನಿರಂತರವಾಗಿ ಅಪಾಯಕ ಹೆಣ್ಣುಮಕ್ಕಳನ್ನು ಬಲಿತೆಗೆದುಕೊಳ್ಳುವುದನ್ನು ಲೇಖನಗಳಲ್ಲಿ ದಾಖಲಿಸಿರುವುದು ನನ್ನ ಸಂಶೋಧನೆಗೆ ಉಪಯುಕ್ತ ಮಾಹಿತಿಯನ್ನು ನೀಡಿದೆ.

**'ಮಹಿಳೆ ಮತ್ತು ಕೋಮುವಾದ' ಡಾ.ಮಾಧವಿ ಎಸ್ ಭಂಡಾರಿ** ಇವರ ಕೃತಿಯಾಗಿದ್ದು ಇದರಲ್ಲಿ ಕೋಮುವಾದ ಮಹಿಳೆಯನ್ನು ಹೇಗೆ ಧರ್ಮದ ಸರಹದ್ದಿನೊಳಗೆ ಶೋಷಿಸುತ್ತದೆ ಎಂಬುದನ್ನು ವಿವರಿಸಿದ್ದಾರೆ. ಇತ್ತೀಚಿನ ಸಾಮಾಜಿಕ ರಾಜಕೀಯ ಬದಲಾವಣೆಗಳು ಸಂಕೀರ್ಣ ಧಾರ್ಮಿಕ ಬೆಳವಣಿಗೆಗಳತ್ತ ನಮ್ಮನ್ನು ಕೊಂಡೊಯ್ಯುತ್ತಿರುವ ಹಿನ್ನೆಲೆಯಲ್ಲಿ ಮಹಿಳೆಯರು ಸಂಘಟಿತರಾಗಲೇಬೇಕು ಎಂಬ ಅನಿವಾರ್ಯತೆಯ ಸ್ಥಿತಿಯನ್ನು ಹೇಳುತ್ತಾ ಮಹಿಳಾ ಚಳುವಳಿಗಳ ಅವಶ್ಯಕತೆಯನ್ನು ವಿವರಿಸಿದ್ದಾರೆ.

**'ಅಸಮಾನತೆಯ ಬಣ್ಣಗಳು'  ಜಿ.ರಾಜಶೇಖರ ಮತ್ತು ಕೆ ಫಣಿರಾಜ** ಇವರ ಸಂಪಾದನೆ ಕೃತಿಯಾಗಿದ್ದು ಹರ್ಷ ಮಂದರ್ ಅವರು 'ದಿ ಹಿಂದು' ಪತ್ರಿಕೆಯಲ್ಲಿ ಬರೆದ ಅಂಕಣ ಮಾಲಿಕೆ 'ಬೇರ್ ಫೂಟ್' ನಿಂದ  ಆಯ್ದ ಲೇಖನಗಳ ಕನ್ನಡ ಅನುವಾದ ಕೃತಿಯಾಗಿದೆ. ಇದರಲ್ಲಿ ಮನೆಯ ಒಳಗು ಹೊರಗೂ ನಡೆಯುವ ಪ್ರತಿದಿನ, ಪ್ರತಿಕ್ಷಣದ ಹಿಂಸೆಗೆ ಬಹು ದೊಡ್ಡ  ಸಂಖ್ಯೆಯಲ್ಲಿ ಬಲಿಯಾಗುವುದು ಹೆಣ್ಣಾಗಿದೆ ಎಂದು ಚರ್ಚಿಸಿದ್ದಾರೆ. ಪ್ರಸ್ತುತ ಸಂಕಲನದ ಒಂದು ಬರಹ, ತಮ್ಮ ಹೆಣ್ಣು ಮಗು ಉಪವಾಸ ಇರುವುದು ನೋಡಲಾಗದೆ, ಒರಿಸ್ಸಾದ ಆದಿವಾಸಿ ಸಮುದಾಯದ ದಂಪತಿಗಳು ಅದನ್ನು ಮಾರಿಕೊಂಡದ್ದು, ತರುಣಿಯ ಪ್ರತಿದಿನ ಹಿಂಸೆ ಕೊಡುವ ಕುಡುಕು ಗಂಡನ ಆಕಾಲ ಮರಣ ಅವಳಿಗೆ ಏಕಕಾಲದಲ್ಲಿ ಬಿಡುಗಡೆ ಮತ್ತು ಶಾಪವಾಗುವ ವಿಪರ್ಯಾಸದ ಚಿತ್ರಣಗಳು ಮುಂದಿಡುತ್ತದೆ. ಇಲ್ಲಿ  ಹಸಿವು, ಬಡತನವು ಮಹಿಳೆಯನ್ನು ಮಾರಾಟದ ಸರಕಾಗಿಸುತ್ತದೆ. ಈ ಸಮಸ್ಯೆಗಳೆ ಮಹಿಳೆಯರ ಮೂಲ ಸಮಸ್ಯೆಗೆ ಕಾರಣವಾಗಿವೆ ಎಂಬುದನ್ನು ಈ ಕೃತಿಯಲ್ಲಿ ಗ್ರಹಿಸಲಾಗಿದೆ.

**'ಸುಡಿ ರಂಗೋಲಿ' ಡಾ. ವಿಜಯಾ** ಅವರ ಲೇಖನಗಳ ಕುರಿತ ಕೃತಿಯಾಗಿದೆ. ಇಲ್ಲಿ ಸಾಹಿತ್ಯ ಮತ್ತು ಸಮಾಜಶಾಸ್ತ್ರೀಯ ಬರಹಗಳಲ್ಲಿ ಮಹಿಳೆಯನ್ನು ಗ್ರಹಿಸಿರುವ ಬಗೆಯನ್ನು ಚರ್ಚಿಸಲಾಗಿದೆ. ಹಾಗೇಯೆ ಸಮಾಜದಲ್ಲಿ ಮಹಿಳೆಯರನ್ನು ಯಾವಬಗೆಯಲ್ಲಿ ನಡೆಸಿಕೊಳ್ಳಲಾಗಿದೆ ಎಂಬುದನ್ನು ಅನೇಕ ಲೇಖನದಲ್ಲಿ ಚಾರಿತ್ರಿಕವಾಗಿ ಗುರುತಿಸಿದ್ದಾರೆ. ಮಹಿಳೆ- ರಾಜಕೀಯ ಪ್ರಜ್ಞೆ ಲೇಖದಲ್ಲಿ ಅವರು ಸಮಾಜದ ಆರ್ಥಿಕ ವ್ಯವಸ್ಥೆ ಉತ್ಪಾದನೆ, ಹಂಚಿಕೆಯಲ್ಲಿ ಇರುವ ತಾರತಮ್ಯವು ಹುಟ್ಟು ಹಾಕಿರುವ ಹಿತಾಸಕ್ತಿಯು ಜನರ ಪ್ರಜ್ಞೆಯನ್ನು ನಿಯಂತ್ರಿಸುವ ಚಾಲಕಶಕ್ತಿಗಳೆಂದು ಗುರುತಿಸುತ್ತಾರೆ. ರಾಜಕೀಯ ಹಲವು ಅರ್ಥದಲ್ಲಿ ಬಳಕೆಯಾಗುತ್ತಿದೆ, ಅದು ವ್ಯಂಗ್ಯಕ್ಕೆ ಬಳಕೆಯಾಗುತ್ತಿದೆ. ರಾಜಕಾರಣದ ಅರಿವು ಇಲ್ಲದ ಜನರನ್ನು ಅಪ್ರಜ್ಞಾಪೂರ್ವಕವಾಗಿ ನಿಯಂತ್ರಸಲಾಗುತ್ತಿದೆ ಎಂದು ಗುರುತ್ತಿಸಿದ್ದಾರೆ. ಇಲ್ಲಿ ರಾಜಕಾರಣ ಎಂದರೆ ಘಟಿಂಗರ -ಪುಢಾರಿಗಳ ಚಿತ್ರ ಮಾತ್ರ ಕಣ್ಣು ಮುಂದೆ ಬರುವಂತ ಸ್ಥಿತಿಗೆ ರಾಜಕಾರಣವನ್ನು ನೋಡಲಾಗುತ್ತಿದೆ. ಆದರೆ ಮಹಿಳೆಯು ರಾಜಕೀಯ ಪ್ರಜ್ಞೆ ಇಲ್ಲ, ಇವರು ಬರೆಯುವುದ ಕಳಪೆ ಎಂದು ದೊಡ್ಡ ಮಟ್ಟದ ರಾಜಕೀಯ ಡಾಮಿನೇಟ್‌ನ್ನು ಪುರುಷ ಪ್ರಧಾನ ವ್ಯವಸ್ಥೆ ಮಾಡುತ್ತಿರುವುದನ್ನು ಸೂಕ್ಷ್ಮವಾಗಿ ಈ ಲೇಖನದಲ್ಲಿ ಗುರುತಿಸಿದ್ದಾರೆ. ಇದರ ಜೊತೆಗೆ ಅನೇಕ ಲೇಖನಗಳು ಮಹಿಳಾ ಸಮಸ್ಯೆಗಳನ್ನು ಬಿಡಿ ಬಿಡಿಯಾಗಿ ಗುರುತಿಸಿವೆ.

**'ಮಹಿಳೆ ಸಂಘಟನೆ ಹೋರಾಟ' ಡಾ. ಸಬಿಹಾ ಭೂಮೀಗೌಡ** ಅವರ ಕೃತಿಯಲ್ಲಿ ಮಹಿಳೆಯರ ಮೇಲೆ ದೌರ್ಜನ್ಯ ಮತ್ತು ಶೋಷಣೆಯು ಎಲ್ಲಾ ವಲಯದಲ್ಲಿ ನಡೆಯುತ್ತಿರುವುದನ್ನು ಗುರುತಿಸಿದ್ದಾರೆ. ಇದರ ವಿರುದ್ಧದ ಹೋರಾಟ ಮತ್ತು ಸಂಘಟನೆಯ ಅಗತ್ಯತೆ ಕುರಿತು ಚರ್ಚಿಸಲಾಗಿದೆ. ಮಹಿಳಾ ಹೋರಾಟವು ಎದುರಿಸುತ್ತಿರುವ ಸಮಸ್ಯೆಗಳನ್ನು ಇಲ್ಲಿ ಮುಖ್ಯವಾಗಿ ಗುರುತಿಸಲಾಗಿದೆ. ಉದ್ಘಾಟನಾ ಭಾಷಣದಲ್ಲಿ ಹೆಣ್ಣಿಗಿಂತ ಗಂಡು ಶ್ರೇಷ್ಠ ಎಂಬ ತಾರತಮ್ಯವು ಎಳೆಯ ವಯಸ್ಸಿನಿಂದಲೇ ಕೀಳರಿಮೆ ಹುಟ್ಟಿ ಹಾಕಿದೆ, ಇದು ಅವರ ಹಕ್ಕುಗಳನ್ನು ವಂಚಿಸಲು ಕಾರಣವಾಗಿದೆ ಎಂದು ಗುರುತಿಸಿದ್ದಾರೆ. ಹೆಣ್ಣೊಬ್ಬಳನ್ನು ಅವಹೇಳನ ಮಾಡುವುದು, ಕೆಲಸಕ್ಕೆ ಹೋಗು ಅಥವಾ ಬೇಡ ಎಂದು ಹೇಳುವುದು, ಸೌಂದರ್ಯವನ್ನು ಕುರಿತು ಅವಹೇಳನ ಮಾಡುವುದು ಇವೆಲ್ಲವು ದೌರ್ಜನ್ಯದ ಭಾಗವಾಗಿಯೇ ಇವೆ. ಲೈಂಗಿಕವಾಗಿ ಕಿರುಕುಳವನ್ನು ಅವಳು ದುಡಿಯುವ ಎಲ್ಲಾ ಕ್ಷೇತ್ರದಲ್ಲಿ ಮಾಡಲಾಗುತ್ತಿದೆ ಎಂದು ಲಕ್ಷ್ಮಿಯವರು ಗುರುತಿಸಿದ್ದಾರೆ. 'ಮಹಿಳಾ ಹೋರಾಟಗಳು- ಸಮಕಾಲೀನ ವಿಷಯಗಳು' ಲೇಖನದಲ್ಲಿ ಮೀರಾ ನಾಯಕ್ ಅವರು ಮಹಿಳೆಯರ ಹಕ್ಕು ಮತ್ತು ಹೋರಾಟವನ್ನು ಕುರಿತು ಚರ್ಚಿಸಿದ್ದಾರೆ. ೧೮೮೮ರ ಮಾರ್ಚ್ ಎಂಟನೆಯ ತಾರೀಖು ಮಹಿಳೆಯರು ತಮಗೆ ಸಮಾನ ಹಕ್ಕುಗಳು ಬೇಕು ಎಂದು ಘೋಷಣೆ ಮಾಡಿದರು. ಅಂದಿನಿಂದ ಇಲ್ಲಿಯ ವರೆಗೆ ಮಹಿಳೆ ಅನೇಕ ಹೋರಾಟಗಳ ಮೂಲಕ ಅನೇಕ ಹಕ್ಕೊತ್ತಾಯಗಳನ್ನು ಮುಂದಿಡುತ್ತಾ ಬಂದಿರುವುದನ್ನು ಗುರುತಿಸುತ್ತ, ಮಾನವ ಸಂಸ್ಕೃತಿ, ನಾಗರಿಕತೆಯು ಚರಿತ್ರೆಯ ಹೆಚ್ಚಿನ ಭಾಗವು ಪುರುಷರು ನಡೆಸುತ್ತ ಬಂದ ಹೋರಾಟದ ಕಥೆಯೇ ಆಗಿದೆ. ಈ ಹೋರಾಟಗಳು ಪುರುಷರು ಪುರುಷರ ವಿರುದ್ಧವೇ ನಡೆಸಿದ ಹೋರಾಟಗಳಾಗಿವೆ.

ಇವು ಮಹಿಳೆಯರನ್ನು ಪುರುಷರ ಸಮಾನವಾಗಿ ಅನ್ವಹಿಸಿಕೊಳ್ಳಲಿಲ್ಲ. ಇಲ್ಲಿ ಮಾರ್ಕ್ಸ್ ಅವರ ವರ್ಗ ಸಿದ್ಧಾಂತವನ್ನು ಕುರಿತು ಸಮಾನತೆಯ ಪ್ರಶ್ನೆಯ ಜೊತೆಗೆ ನಮಗೆ ಸ್ವಾತಂತ್ರ್ಯದ ಪ್ರಶ್ನೆಯು ಮುಖ್ಯ ಎಂದು ಹೇಳಿದರೆ. ವರದಕ್ಷಣೆ, ಲಿಂಗಾನುಪಾತ, ರಾಜಕೀಯ ಸ್ಥಾನಮಾನಗಳು, ಇಲ್ಲಿ ಗುರುತಿಸಲಾಗಿದೆ.

**'ಸರಹದ್ದುಗಳ ಆಚೆ-ಈಚೆ' ಡಾ.ಬಿ.ಎನ್.ಸುಮಿತ್ರಾಬಾಯಿ** ಯವರ ವಿಮರ್ಶಾ ಕೃತಿಯಾಗಿದ್ದು ಸ್ತ್ರೀವಾದಿ ನೆಲೆಯಿಂದ ಸಾಹಿತ್ಯವನ್ನು ಸಂಸ್ಕೃತಿಯನ್ನು ಅರ್ಥೈಸುತ್ತಾ, ಸಾಹಿತ್ಯಕ್ಕೂ, ರಾಜಕೀಯಕ್ಕೂ, ಸಂಸ್ಕೃತಿಗೂ ಇರುವ ಸಂಕೀರ್ಣವಾದ ಸಂಬಂಧದ ಬಗ್ಗೆ ಅನೇಕ ಒಳನೋಟಗಳನ್ನು ಕೊಡುತ್ತದೆ. ಪಂಪನ ಆದಿಪುರಾಣದ ವಿಶ್ಲೇಷಣೆಯನ್ನು ಒಳಗೊಂಡಂತೆ, ವಚನ ಸಾಹಿತ್ಯ , ಶೂನ್ಯ ಸಂಪಾದನೆ, ಕುವೆಂಪು ಸಾಹಿತ್ಯ, ಆಧುನಿಕ ಕನ್ನಡ ಸಾಹಿತ್ಯದ ಬಗ್ಗೆ ಲೇಖನಗಳಿವೆ. ಮಹಿಳೆಗೂ ಇತಿಹಾಸಕ್ಕೂ ಇರುವ ವಿಪರ್ಯಾಸಾತ್ಮಕ ನಂಟಿನ ಬಗ್ಗೆ ಅನೇಕ ಮೂಲಭೂತ ಪ್ರಶ್ನೆಗಳನ್ನು ಎತ್ತುವ ಲೇಖನವಿದೆ. ಮಹಿಳಾ ಚಳುವಳಿಗೆ ಮಹಿಳಾ ಕೊಡುಗೆಗಳ ಬಗ್ಗೆ ದೀರ್ಘವಾದ ಸಾಂಸ್ಕೃತಿಕ ದಾಖಲೆಯನ್ನು ನಮ್ಮ ಮುಂದಿಡುವ ಲೇಖನವು ಬಹಳ ಉಪಯುಕ್ತವಾದುದು.

**'ಬದಲಾಗುತ್ತಿರುವ ಕರ್ನಾಟಕ' ಎಂ. ಚಂದ್ರಪೂಜಾರಿ** ಅವರ ಈ ಕೃತಿಯಲ್ಲಿ ಕುಟುಂಬ ಮತ್ತು ಮಹಿಳೆಯರ ವೃತ್ತಿಗಳು ಬದಲಾಗುತ್ತಿರುವುದನ್ನು ಗುರುತ್ತಿಸಿದ್ದಾರೆ. ಕುಟುಂಬಕ್ಕೆ ಮಾತ್ರ ಮಹಿಳೆಯು ಸೀಮಿತ ಎನ್ನುವ ಆಲೋಚನೆಯು ಬದಲಾಗುತ್ತಿದೆ. ಮಹಿಳೆ ದುಡಿಮೆ ಮನೆಗೆ ಸೀಮಿತ, ಪುರುಷರ ದುಡಿಮೆ ಹೊರಕ್ಕೆ ಸೀಮಿತ ಎನ್ನುವ ನಿಲುವು ಬದಲಾಗಿದೆ. ಪತಿಯೇ ಪರದೈವ ಎನ್ನುವ ನಂಬಿಕೆ ಹುಸಿಯಾಗಿದೆ. ಮನೆಯ ಕೆಲಸವನ್ನು ಗಂಡ-ಹೆಂಡತಿಯು ಸಮನಾಗಿ ಮಾಡುವಂತ ವಾತಾವರಣ ಸೃಷ್ಟಿಯಾಗುತ್ತಿದೆ. ಮಹಿಳೆಯ ಅನೇಕ ಕಾನೂನುಗಳು ಅವಳ ಸ್ಥಾನಮಾನವನ್ನು ಹೆಚ್ಚುತ್ತಿರುವುದನ್ನು ಗುರುತ್ತಿಸಿದ್ದಾರೆ.

**'ಮಹಿಳಾ ಅಸಮಾನತೆ' ಹೆಚ್.ಎನ್ ನಾಗಮೋಹನದಾಸ್** ಅವರ ಕೃತಿಯಾಗಿದ್ದು ಮಹಿಳಾ ಅಸಮಾನತೆಯ ಕಾರಣಗಳು, ಅವುಗಳ ಪರಿಹಾರಾರ್ಥವಾಗಿ ಜಾಗತಿಕವಾಗಿಯೂ ನಮ್ಮ ದೇಶದಲ್ಲೂ ಹುಟ್ಟಿದ ಸಾಮಾಜಿಕ ಚಲುವಳಿಗಳು, ಕಾನೂನುಗಳು, ಇತರ ಸರ್ಕಾರಿ ಕ್ರಮಗಳು, ಈ ಎಲ್ಲದರ ಸಾಧನೆ-ವೈಫಲ್ಯಗಳ ಸ್ಥೂಲ ಚಿತ್ರಣ ಮತ್ತು ವಿಶ್ಲೇಷಣೆಯನ್ನು ನೀಡಿದ್ದಾರೆ. 'ಅವಳು' ಇಲ್ಲದ ಚರಿತ್ರೆಯನ್ನೆ ಓದಿದ ಸಮಾಜಕ್ಕೆ 'ಅವಳ' ಮಹತ್ವವನ್ನು ಮನನ ಮಾಡಿಸುವ ಹಾಗೂ ದೌರ್ಜನ್ಯದ ಅಂಕಿಸಂಖ್ಯೆಗಳೊಂದಿಗೆ, ಮಹಿಳೆಯರ ಮೇಲೆ ಚಾರಿತ್ರಿಕವಾಗಿ ನಡೆಸಿದ ದೌರ್ಜನ್ಯಗಳಿಗೆ ಸಾಕ್ಷಾಧಾರಗಳನ್ನು ಒದಗಿಸಿರುವುದು ನನ್ನ ಅಧ್ಯಯನಕ್ಕೆ ಬಹಳ ಉಪಯುಕ್ತ ಮಾಹಿತಿಯಾಗಿದೆ. ಸಮಾಜದ ವಿವಿದ ಸ್ತರಗಳಲ್ಲಿ, ವಿವಿಧ ಕಾಲಘಟ್ಟಗಳಲ್ಲಿ ಚಾಲ್ತಿಯಲ್ಲಿದ್ದ ಲಿಂಗತಾರತಮ್ಯ ಹಾಗೂ ಅದರ ಪರಿಣಾಮಗಳನ್ನು ತಿಳಿಸಿದ್ದಾರೆ. ಆದಿಮಾನವನಿಂದ ಇಲ್ಲಿಯವರೆಗಿನ ಮಹಿಳಾಲೋಕದ ತಾರತಮ್ಯದ ನೆಲೆಗಳನ್ನು ಅಭ್ಯಸಿಸಲು ಉತ್ತಮವಾದ ಮಾಹಿತಿಯನ್ನು ಈ ಪುಸ್ತಕ ಒದಗಿಸಿದೆ.

**'ಮಾಧ್ಯಮ ಮಾರುಕಟ್ಟೆ-ಮಹಿಳೆ' ವಿಜಯ ಕುಮಾರ್ ಹೆಚ್** ಅವರ ಕೃತಿಯಾಗಿದ್ದು ವರ್ತಮಾನದ ಸಂದರ್ಭದಲ್ಲಿ ಅತ್ಯಂತ ಶೀಘ್ರಗತಿಯಲ್ಲಿ ಮುಖಾಮುಖಿಯಾಗುವ ಮತ್ತು ಅಸ್ತಿತ್ವದ ನೆಲೆಯಲ್ಲಿ ಪೈಪೋಟಿಯ ಮೂಲಕ ಜಾಗರೂಕವಾಗುವ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಒಳಸುಳಿಗಳನ್ನು ದಾಳವಾಗಿಟ್ಟುಕೊಂಡು ಜಾಹೀರಾತು, ಸಿನಿಮಾ ಪ್ರಪಂಚ ಮತ್ತು ರಿಯಾಲಿಟಿ ಶೋ ಮುಂತಾದ ಕ್ಷೇತ್ರಗಳು ಮಹಿಳೆಯರನ್ನು ದುಡಿಸಿ, ನಡೆಸಿಕೊಳ್ಳುವ ವಿಚಾರಗಳ ಸೂಕ್ಷ್ಮಗ್ರಹಿಕೆಯ ಒಳನೋಟವನ್ನು ಈ ಕೃತಿಯು ನೀಡುತ್ತದೆ. ಮಹಿಳೆಯನ್ನು ಬಂಡವಾಳವು ತನ್ನ ಮಾರುಕಟ್ಟೆಯನ್ನು ವಿಸ್ತರಿಸಿಕೊಳ್ಳಲು ಬಳಸಿಕೊಳ್ಳುತ್ತದೆ ಹಾಗೆಯೇ ಮಹಿಳೆಯನ್ನೇ ಗ್ರಾಹಕಳಾಗಿ ನೋಡುವ ಮಾರುಕಟ್ಟೆಯ ಜೊತೆಗಿನ ಎರಡು ರೀತಿಯ ಸಂಬಂಧವನ್ನು ವಿವರಿಸಿದ್ದಾರೆ.

'Trafficking Women and children for Sexual exploitation-hand book for Law enforcement agencies in India', ಯುನಿಫೆಮ್ ಪ್ರಾಯೋಜಿತ ಕೃತಿಯಾಗಿದ್ದು ಡಾ.ಪಿ.ಎಂ.ನಾಯರ್ ಅವರು ಪ್ರಸ್ತುತ ಪಡಿಸಿದ್ದಾರೆ. ಈ ಕೃತಿಯಲ್ಲಿ ಮಾನವ ಸಾಗಾಣಿಕೆಗೆ ಕುರಿತಾದ ಪರಿಕಲ್ಪನೆಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಬೇಕಾದಂತಹ ಮಾಹಿಯನ್ನು ನೀಡಿದ್ದಾರೆ. ಇದು ನನ್ನ ಸಂಶೋಧನಾ ವಿಷಯವನ್ನು ಸರಿಯಾಗಿ ಗ್ರಹಿಸಲು ಸಹಾಯಕವಾಗಿದೆ.

'Equality Now' ಪತ್ರಿಕೆಯಲ್ಲಿ bemard Henin ಅವರ 'India: Reform Anti-Trafficking Laws to better protect sex trafficking victims' ಲೇಖನವು ಪ್ರಕರಣ ಅಧ್ಯಯನದ ವಿಶ್ಲೇಷಣೆಯನ್ನು ಒಳಗೊಂಡಿದೆ. ಇದು ನನ್ನ ಸಂಶೋಧನೆಗೆ ಸಂಬಂಧಿಸಿದ ಪ್ರಕರಣಗಳನ್ನು ಅಧ್ಯಯನಕ್ಕೆ ಒಳಪಸಬಹುದಾದ ವಿಧಾನವನ್ನು ತಿಳಿಯಲು ಸಾಧ್ಯವಾಯಿತು.

India's Human Trafficking Laws and Policies and the UN Trafficking Protocol: Achiving Clarity, ಈ ಕೃತಿಯು Jindal Global Law School ನ ವತಿಯಿಂದ ನಡೆದಂತಹ ಸಂಶೋಧನಾ ಕೃತಿಯಾಗಿದೆ. ಭಾರತದಲ್ಲಿನ ಮಾನವ ಸಾಗಾಣಿಕೆ ಕುರಿತ ಅಧ್ಯಯನವಾಗಿದೆ. ಮಾನವ ಸಾಗಾಣಿಕೆಯ ಪ್ರಭುತ್ವ, ಪ್ರವೃತ್ತಿ, ಅದರ ಬೇರುಗಳು ಮತ್ತು ಅದಕ್ಕೆ ಕಾರಣಗಳನ್ನು ಸ್ಪಷ್ಟಪಡಿಸಲಾಗಿದೆ.

Crime in India-2010 Statistics – National Crime Record Bureau ministry of home affairs ಇದು ಭಾರತದ ಅಪರಾಧ ಪ್ರಕರಣಗಳ ವಾರ್ಷಿಕ ಚಿತ್ರಣವನ್ನು ಅಂಕಿಸಂಖ್ಯೆಗಳ ಮೂಲಕ ನೀಡಿದೆ. ೨೦೧೦ನೇ ವರ್ಷದಲ್ಲಿ ಮಾನವ ಸಾಗಾಣಿಕೆಯ ಒಟ್ಟು ೩೪೨೨ ಪ್ರಕರಣಗಳು ದಾಖಲಾಗಿವೆ. ಕರ್ನಾಟಕದಲ್ಲಿ ೨೪೨ ಪ್ರಕರಣಗಳು, ಇದರಲ್ಲಿ ಬೆಂಗಳೂರಿನಲ್ಲಿ ಮಾನವ ಸಾಗಾಣಿಕೆಯ ೧೧೧ ಪ್ರಕರಣಗಳು ದಾಖಲಾಗಿವೆ.

Crime in India-2012 Copendium – National Crime Record Bureau ministry of home affairs - ೨೦೧೨ನೇ ವರ್ಷದಲ್ಲಿ ಭಾರತದಲ್ಲಿ ಮಾನವ ಸಾಗಾಣಿಕೆಯ ಒಟ್ಟು ೩೫೫೪ ಪ್ರಕರಣಗಳು ದಾಖಲಾಗಿವೆ. ಕರ್ನಾಟಕದಲ್ಲಿ ಹೆಣ್ಣುಮಕ್ಕಳ ಆಮದಿಗೆ ಸಂಬಂಧಿಸಿದಂತೆ ೩೨ ಪ್ರಕರಣಗಳು ದಾಖಲಾಗಿವೆ.

Crime in India-2014 Copendium – National Crime Record Bureau ministry of home affairs- ೨೦೧೪ನೇ ವರ್ಷದಲ್ಲಿ ಭಾರತದಲ್ಲಿ ಮಾನವ ಸಾಗಾಣಿಕೆಯ ಒಟ್ಟು ೫೪೬೬ ಪ್ರಕರಣಗಳು ದಾಖಲಾಗಿವೆ. ಶೇ೩೮.೭% ನಷ್ಟು ಮಾನವ ಸಾಗಾಣಿಕೆಯಲ್ಲಿ ಹೆಚ್ಚಳವಾಗಿರುವುದು ವಿಪರ್ಯಾಸ. ಕರ್ನಾಟಕದಲ್ಲಿ

Crime in India-2015 Copendium – National Crime Record Bureau ministry of home affairs-೨೦೧೫ನೇ ವರ್ಷದಲ್ಲಿ ಮಾನವ ಸಾಗಾಣಿಕೆಯ ಒಟ್ಟು ಪ್ರಕರಣಗಳು ದಾಖಲಾಗಿವೆ. ಶೇ೨೫.೮% ನಷ್ಟು ಮಾನವ ಸಾಗಾಣಿಕೆಯಲ್ಲಿ ಹೆಚ್ಚಳವಾಗಿದೆ. ಕರ್ನಾಟಕದಲ್ಲಿ ಹೆಣ್ಣುಮಕ್ಕಳ ಸಾಗಾಣಿಕೆಗೆ ಸಂಬಂಧಿಸಿದಂತೆ ೫೦೭ ಪ್ರಕರಣಗಳು ದಾಖಲಾಗಿವೆ.

ಈ ಮೇಲಿನ ಎಲ್ಲಾ ಅಂಶಗಳು ನನ್ನ ಸಂಶೋಧನಾ ಮಹಾಪ್ರಬಂಧ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆ: ಸ್ತ್ರೀವಾದಿ ಅಧ್ಯಯನ (ಮೈಸೂರು ಮತ್ತು ಬೆಂಗಳೂರು ನಗರ/ಗ್ರಾಮೀಣ ಜಿಲ್ಲೆಗಳನ್ನು ಅನುಲಕ್ಷಿಸಿ) ಎಂಬ ಅಧ್ಯಯನಕ್ಕೆ ಪೂರಕವಾಗಿರುವುದರಿಂದ ಈ ಎಲ್ಲಾ ಕೃತಿಗಳು, ಸಂಶೋಧನಾ ಬರಹಗಳು ಮತ್ತು ವರದಿಗಳ ಸಾಹಿತ್ಯ ಅಧ್ಯಯನವನ್ನು ಮಾಡಿರುತ್ತೇನೆ.

ಎ ರಿಪೋರ್ಟ್ ಆಫ್ ಟ್ರಾಫಿಕಿಂಗ್ ಇನ್ ವಿಮೆನ್ ಅಂಡ್ ಚಿಲ್ಡ್ರನ್ ಇನ್ ಇಂಡಿಯಾ (A Report on Trafficking in women and Children in India) ಇದು ISSನ ಯೋಜನಾ ವರದಿಯಾಗಿದ್ದು. ೨೦೦೨–೨೦೦೩ರ ಅವಧಿಯಲ್ಲಿನ ಅಂಕಿ ಅಂಶಗಳನ್ನು ಒಳಗೊಂಡಿದೆ. ಕರ್ನಾಟಕ ರಾಜ್ಯದಲ್ಲಿ ಹೆಣ್ಣುಮಕ್ಕಳನ್ನು ಬಿಜಾಪುರ, ಗುಲಬರ್ಗಾ, ಗದಗ ಧಾರವಾಡ, ಬಳ್ಳಾರಿ, ಬೆಳಗಾಂ, ಮೈಸೂರು ಮತ್ತು ಬೆಂಗಳೂರು ಪ್ರದೇಶಗಳಿಂದ ಬೇರೆ ಬೇರೆ ರಾಜ್ಯಗಳಿಗೆ ಯಾವ ಮಾರ್ಗವಾಗಿ ಮತ್ತು ಎಷ್ಟು ಪ್ರಮಾಣವಾಗಿ ಸಾಗಾಣಿಕೆ ಮಾಡಲಾಗುತ್ತದೆ ಎಂಬುದನ್ನು ವಿವರಿಸಿದ್ದಾರೆ.

ಇಷ್ಯೂಸ್ ಆಂಡ್ ಕನ್ಸರ್ನ್ಸ್ ಆಫ್ ಮಿಸ್ಸಿಂಗ್ ಗರ್ಲ್ಸ್ ಇನ್ ಕರ್ನಾಟಕ ಎ ಕೇಸ್ ಸ್ಟಡಿ ಆಫ್ ಮೈಸೂರು ಡಿಸ್ಟ್ರಿಕ್ಟ್ ಇದು ಕರ್ನಾಟಕ ರಾಜ್ಯ ಮಹಿಳಾ ಆಯೋಗ ಪ್ರಾಯೋಜಿತ CSSEIP ಮೈಸೂರು ವಿಶ್ವವಿದ್ಯಾಲಯದ ವತಿಯಿಂದ ಸರ್ಕಾರಕ್ಕೆ ಸಲ್ಲಿಸಲ್ಪಟ್ಟ ವರದಿಯಾಗಿದೆ. ಮೈಸೂರು ನಗರದಲ್ಲಿ ಹೆಚ್ಚುತ್ತಿರುವ ಹೆಣ್ಣುಮಕ್ಕಳ ನಾಪತ್ತೆ ಪ್ರಕರಣ ಕುರಿತಾಗಿ ನಡೆಸಿದ ಅಧ್ಯಯನವಾಗಿದೆ. ನಾಪತ್ತೆಯಾದ ಹೆಣ್ಣುಮಕ್ಕಳ ಹಾಗೂ ಗಂಡುಮಕ್ಕಳ ಕುರಿತಾಗಿ ಅವರ ಸಾಮಾಜಿಕ, ಆರ್ಥಿಕ, ಆರೋಗ್ಯ, ಶಿಕ್ಷಣ ಸ್ಥಿತಿಗತಿಗಳನ್ನು ವಿಶ್ಲೇಷಿಸಿದ್ದಾರೆ. ನಾಪತ್ತೆಯಾಗಲು ಹೆಣ್ಣುಮಕ್ಕಳಿಗೆ ಕಾರಣವಾದ

ಅಂಶಗಳನ್ನು ಹುಡುಕಲು ಪ್ರಯತ್ನಿಸಿದ್ದಾರೆ. ಹಾಗೂ ಕಾರ್ಯನೀತಿ ಶಿಫಾರಸ್ಸುಗಳನ್ನು ನೀಡಿದ್ದಾರೆ. ಕರ್ನಾಟಕದಲ್ಲಿ ಇದುವರೆಗೂ ಕಾಣೆಯಾದವರ ಬಗ್ಗೆ ಯಾವುದೇ ಸಂಶೋಧನೆಗಳು ಸಹ ನಿರೀಕ್ಷಿತ ಮಟ್ಟದಲ್ಲಿ ನಡೆದಿಲ್ಲ. ಹಾಗೆಯೇ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ ಕುರಿತಾಗಿ ಅಧ್ಯಯನಗಳು ಸಂಶೋಧನೆಗಳು ಸಹ ನಡೆದಿಲ್ಲ.

**ಪರಾಮರ್ಶನ ಗ್ರಂಥಗಳು**


೧ ಮಹಿಳಾ ಚಳುವಳಿ: ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಡಾ.ಹಾಲತಿ ಸೋಮಶೇಖರ್, ಅಭಿರುಚಿ ಪ್ರಕಾಶನ, ಮೈಸೂರು, ೨೦೦೭

೨ ಮಹಿಳೆ ಮತ್ತು ಸವಾಲುಗಳು. ಎಸ್.ಇಂದಿರಾ, ಶ್ರುತಿಲೋಕ ಪ್ರಕಾಶನ ಮೈಸೂರು, ೨೦೧೦.

೩ ಮಹಿಳೆ ಮತ್ತು ಕಾನೂನು ಮತ್ತು ರಾಜಕಾರಣ, ಗೀತಾ ಕೃಷ್ಣಮೂರ್ತಿ, ಪ್ರಸಾರಾಂಗ, ಕವಿಹಂ, ೨೦೦೧

೪ ಮಹಿಳೆ ಸಮಾಜ ಮತ್ತು ಕಾನೂನು, ಬೆ.ಕಾ. ಮೂರ್ತಿಶ್ವರಯ್ಯ.

೫ ಸ್ತ್ರೀ ಸಂವೇಧನೆಯಲ್ಲಿ ಕನ್ನಡ ಕಥನ, ಎಲ್.ಜಿ.ಮೀರಾ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲೀಷರ್ಸ್, ಬೆಂಗಳೂರು, ೨೦೦೪.

೬ ಸ್ತ್ರೀಪರ, ಹಾಲತಿ ಸೋಮಶೇಖರ್, ವಿಸ್ಮಯ ಪ್ರಕಾಶನ, ಮೈಸೂರ್, ೨೦೦೮.

೭ ಮಾನುಷಿ, ಆರ್.ಇಂದಿರಾ, ಸಾರಾ ಎಂಟರ್ ಪ್ರೈಸಸ್, ಮೈಸೂರು, ೨೦೦೬

೮ ಮಹಿಳಾ ಹಕ್ಕುಗಳು– ಮಾನವ ಹಕ್ಕುಗಳ ನೆಲೆಯಲ್ಲಿ, ಗೀತಾ ಕೃಷ್ಣಮೂರ್ತಿ, ಮಹಿಳಾ ಅಧ್ಯಯನ ಕೇಂದ್ರ, ಪ್ರಸಾರಾಂಗ, ಕವಿಹಂ, ೨೦೦೯.

೯ ಸುಡುಬಿಸಿಲ ಹುಡಿಹಾದಿ, ಸಂಶೋಧನಾ ಗ್ರಂಥ (ಪ್ರಕಟಿತ), ಶ್ರೀದೇವಿ ವಿ ಆಲೂರ, ಶ್ರೀ ವಿಕಾಸ್ ಪಬ್ಲಿಕೇಷನ್ಸ್, ಕಮಲಾಪುರ, ೨೦೧೩.

೧೦ ಮಹಿಳೆಯ ಮೇಲಿನ ದೌರ್ಜನ್ಯ ಹಿನ್ನೆಲೆಯಲ್ಲಿ ಮಹಿಳಾ ಅಪರಾಧಗಳು: ವ್ಯಾಖ್ಯೆ ಮತ್ತು ಶಿಕ್ಷೆ, ಸಂಶೋಧನಾ ಗ್ರಂಥ(ಅಪ್ರಕಟಿತ), ಸುಮಲತಾ ಆಕಳವಾಡಿ, ಮಹಿಳಾ ಅಧ್ಯಯನ ವಿಭಾಗ, ಕವಿಹಂ, ೨೦೦೯

೧೧ ಮಹಿಳೆ ಮತ್ತು ಸಮೂಹ ಮಾಧ್ಯಮಗಳು, ಕೆ. ಸರೋಜಾ, ಪ್ರಸಾರಾಂಗ, ಕವಿಹಂ, ೨೦೦೪.

೧೨ ಮಹಿಳಾ ಸಂಘಟನೆ ಹೋರಾಟ, ಸಬಿಹಾ ಭೂಮೀಗೌಡ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಬೆಂಗಳೂರು, ೨೦೦೮.

೧೩ ಪಾತರದವರು, ಶೈಲಜಾ ಹಿರೇಮಠ, ಪ್ರಸಾರಾಂಗ, ಕವಿಹಂ, ೧೯೯೯.

೧೪ ವೇಶ್ಯೆಯರು ಮತ್ತು ಲೈಂಗಿಕ ಅಲ್ಪಸಂಖ್ಯಾತರು ನಡೆದು ಬಂದ ದಾರಿ, ಶಿವರಾಮಯ್ಯ, ಸೃಷ್ಟಿ ಪಬ್ಲಿಕೇಷನ್ಸ, ಬೆಂಗಳೂರು, ೨೦೧೨

೧೫ Transnational Prostitution : changing patterns in a global patterns , Susanne Thorbek and Bandana Pattanaik, Zed books , 2003.

೧೬ Criminal Abuse of Women and Children- An International Perspective, OBI, N I Ebbe and others, CRC Press, united States.

೧೭ Human Trafficking in the Russion Federation; Examination of the Anti-Trafficking Efforts of the Federal Government, Non Government Organization and the International Organization for Migration, Master of Arts Thesis, Jennifer Ann Hartl, Graduate College of the University of IOWA. IOWA, Russia.

೧೮ Research Study on Human Right Violation of Victims of Trafficking – A Research Study (Project Roshini), Social Action Forum for Manavaadhikar, NGO(LAWYERS), Delhi.

೧೯ Issues and Concerns of Missing Girls in Karnataka – A case Study of Mysore District ( Mysore City), Centre for the Study of Social Exclusion and Inclusive Policy, University of Mysore, Manasagangothri, Mysore, 2012.

೨೦ ವೇಶ್ಯೆಯರು ಮತ್ತು ಲೈಂಗಿಕ ಅಲ್ಪಸಂಖ್ಯಾತರು ನಡೆದು ಬಂದ ದಾರಿ, ಶಿವರಾಮಯ್ಯ, ಸೃಷ್ಟಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೨



೨೧ ಹೆಣ್ಣುಸಿರ ತಲ್ಲಣಗಳು, ರೂಪ ಹಾಸನ, ಅಭಿರುಚಿ ಪ್ರಕಾಶನ, ಮೈಸೂರು, ೨೦೧೫.

೨೨ ಸ್ತ್ರೀವಾದ: ಆನ್ವಯಿಕತೆ, ಶ್ರೀಮತಿ ಎಚ್.ಎಸ್, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨

೨೩ ಸ್ತ್ರೀವಾದಿ ಪರಿಕಲ್ಪನೆಗಳು, ಕೇಶವಶರ್ಮ.ಕೆ, ದೇಸಿ ಪುಸ್ತಕ ಮಾಲೆ, ಬೆಂಗಳೂರು, ೨೦೧೫

೨೪ ಹೆಣ್ಣು–ಸಂಕರ ಕಾಲದ ಆತ್ಮಪ್ರಜ್ಞೆ, ಎಚ್.ಎಸ್.ಅನುಪಮಾ, ಲಡಾಯಿ ಪ್ರಕಾಶನ, ಗದಗ, ೨೦೧೩.

೨೫ ಮಹಿಳೆ– ದಲಿತ ಮತ್ತು ರಾಜಕೀಯ ಪ್ರಜ್ಞೆ , ಎಚ್.ಎಸ್.ಅನುಪಮಾ, ಲಡಾಯಿ ಪ್ರಕಾಶನ, ಗದಗ, ೨೦೧೨.

೨೬ ದೇವದಾಸಿ ಮತ್ತು ಬೆತ್ತಲೆ ಸೇವೆ, ಮೂಲ ಉತ್ತಮ ಕಾಂಬಳೆ, ಕನ್ನಡಕ್ಕೆ ಡಾ.ಸಿದ್ರಾಮ ಕಾರಣಿಕ, ಲಡಾಯಿ ಪ್ರಕಾಶನ, ಗದಗ, ೨೦೧೩.

೨೭ ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ (ಒಂದು ಸಾಂಸ್ಕೃತಿಕ ಅಧ್ಯಯನ)( ಸಂಶೋದನಾ ಗ್ರಂಥ), ಕಮಲಾ ಹೆಮ್ಮಿಗೆ, ವಿಮೋಚನಾ ಪ್ರಕಾಶನ, ಅಥಣಿ, ೧೯೯೮.

೨೮ ಮುಳ್ಳ ಮೇಲಿನ ಸೆರಗು, ಅತ್ಯಾಚಾರ ಮತ್ತು ಕಾನೂನು: ಇಣುಕು ನೋಟ, ಡಾ.ಎಚ್ ಎಸ್ ಅನುಪಮಾ, ಲಡಾಯಿ ಪ್ರಕಾಶನ, ಗದಗ, ೨೦೧೪.

೨೯ ಪುರುಷ ಅಹಂಕಾರಕ್ಕೆ ಸವಾಲ್, ಮೂಲ ತಾರಾಬಾಯಿ ಶಿಂಧೆ, ಕನ್ನಡಕ್ಕೆ ಬಿ.ಸುಜ್ಞಾನಮೂರ್ತಿ, ಲಡಾಯಿ ಪ್ರಕಾಶನ, ಗದಗ, ೨೦೧೧.

೩೦ ಕುಟುಂಬ ವ್ಯವಸ್ಥೆ ; ಮಾರ್ಕ್ಸ್‌ವಾದ-ಸ್ತ್ರೀವಾದ, ತೆಲುಗಿನಲ್ಲಿ ಓಲ್ಗಾ, ಕನ್ನಡಕ್ಕೆ ಬಿ.ಸುಜ್ಞಾನಮೂರ್ತಿ, ಪಲ್ಲವ ಪ್ರಕಾಶನ, ಚನ್ನಪಟ್ಟಣ, ೨೦೧೦.

೩೧ ಇಬ್ಬನಿಯ ಕಾವು, ಬಾನು ಮುಷ್ತಾಕ್, ಲಡಾಯಿ ಪ್ರಕಾಶನ, ಗದಗ, ೨೦೧೩.

೩೨ ದೇವಾಲಯಗಳು ಮತ್ತು ಲೈಂಗಿಕ ಶಿಲ್ಪ, ತಾಪಿ ಧರ್ಮಾರಾವ್, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೨.

೩೩ ಹೇಳುತೇನೆ ಕೇಳು- ಹೆಣ್ಣಿನ ಆತ್ಮಕಥೆಗಳು, ಸುಕನ್ಯಾ ಕನಾರಳ್ಳಿ, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೧೨.

೩೪ ಸಾಕಾರದತ್ತ ಸಮಾನತೆಯ ಕನಸು- ಮಹಿಳಾ ಪ್ರತಿರೋಧದ ನೆಲೆಗಳು, ಪ್ರೀತಿ ಶುಭಚಂದ್ರ ಮತ್ತು ಎಂ.ಎನ್.ಸುಮನಾ, ಲಡಾಯಿ ಪ್ರಕಾಶನ, ಗದಗ, ೨೦೧೫.

೩೫ ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ, ಎಂ.ಚಿದಾನಂದ ಮೂರ್ತಿ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೧೧.

೩೬ ನೋಯುವ ಹಲ್ಲಿಗೆ ಹೊರಳುವ ನಾಲಿಗೆ, ಎಚ್.ಎಸ್.ಅನುಪಮ, ಸೃಷ್ಟಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೪.

೩೭ ನೀರ ದಾರಿ- ಸಲಿತ ಮಹಿಳಾ ಪ್ರಜ್ಞೆ ವಿಭಿನ್ನ ನೆಲೆಗಳಿಂದ, ದು.ಸರಸ್ವತಿ, ಕವಿ ಪ್ರಕಾಶನ, ಕವಲಕ್ಕಿ, ಉತ್ತರ ಕನ್ನಡ, ೨೦೧೪.

೩೮ ಮಹಿಳೆ ಇಂದಿನ ಸವಾಲುಗಳು, ಸಬಿಹಾ ಭೂಮೀಗೌಡ, ಲಡಾಯಿ ಪ್ರಕಾಶನ, ಗದಗ, ೨೦೧೪.

೩೯ ಬಾಳ ಕೌದಿ, ಕೆ.ನೀಲಾ, ಪಲ್ಲವ ಪ್ರಕಾಶನ, ಚನ್ನಪಟ್ಟಣ, ಬಳ್ಳಾರಿ, ೨೦೧೪.

೪೦ ಅನುಪಮಾ ನಿರಂಜನ ಅವರ ಕಾದಂಬರಿಗಳು ಒಂದು ಸಾಹಿತ್ಯಕ ಅಧ್ಯಯನ, ಡಾ. ವಿಜಯಶ್ರೀ ಸಬರದ, ಡಿ.ವಿ.ಕೆ ಮೂರ್ತಿ ಪ್ರಕಾಶಕರು, ಮೈಸೂರು, ೧೯೯೪.

೪೧ ಸ್ತ್ರೀ ಪರ; ಡಾ. ಹಾಲತಿ ಸೋಮಶೇಖರ್, ವಿಸ್ಮಯ ಪ್ರಕಾಶನ, ಮೈಸೂರ್, ೨೦೦೮.

೪೨ ಒಲಂಪಿಕ್ಸ್ ಎಂಬ ಕೆಂಪು ದೀಪ , ಲೀಲಾ ಸಂಪಿಗೆ, ಪ್ಯಾಪಿರಸ್ ಮೇಫ್ಲವರ್ ಮೀಡಿಯಾ ಹೌಸ್, ಬೆಂಗಳೂರು, ೨೦೦೮.

೪೩ Trafficking of women for sexual purpose , Fiona David, research and public policy series no-95, Australian Institute of Criminology, 2008.

೪೪ Indian Country Report- To Prevent And Combat Trafficking And Commercial Sexual Exploitation Of Children And Women : World Congress III, Against

Sexual Exploitation Of Children And Adolescents, Ministry of Women and Child Development, Rio.De, Janeiro, Brazil, 2008.

೪೫ ಅರ್ಧನಾರೀಶ್ವರ: ತಮಿಳು ಮೂಲ ಪೆರುಮಾಳ್ ಮುರುಗನ್, ಕನ್ನಡ ಅನುವಾದ: ಕೆ.ನಲ್ಲತಂಬಿ, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೧೬.

೪೬ ಹೆಣ್ಣುತನ ಎಂಬ ಕಣ್ಕಟ್ಟು: ಎಚ್.ಎಸ್.ಶ್ರೀಮತಿ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೦.

೪೭ ಹೆಣ್ಣು ಹೆಜ್ಜೆ: ಸಾವಿತ್ರಿ ಮುಜುಮದಾರ, ಜನದನಿ ಪ್ರಕಾಶನ, ಅಳವಂಡಿ, ೨೦೧೪.

೪೮ ಅಂಬೇಡ್ಕರ್ ದೃಷ್ಟಿಯಲ್ಲಿ ಮನು: ಕೆ.ಮಾಯಿಗೌಡ, ನೇಗಿಲಯೋಗಿ ಪ್ರಕಾಶನ, ಮಂಡ್ಯ, ೨೦೦೬.

೪೯ ಮಹಿಳೆ ಮತ್ತು ಮೌಢ್ಯ: ಡಾ.ವಸುಂದರಾ ಭೂಪತಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೪.

೫೦ ಮನುಸ್ಮೃತಿ–ಅಪರಾಧ–ಶಿಕ್ಷೆ: ಬಿ.ಸುಜ್ಞಾನಮೂರ್ತಿ, ಲಡಾಯಿ ಪ್ರಕಾಶನ, ಗದಗ, ೨೦೧೫.

೫೧ ಅನಾವರಣ, ಸಾ.ರಾ.ಅಬೂಬಕ್ಕರ್, ಚಂದ್ರಗಿರಿ ಪ್ರಕಾಶನ ಮಂಗಳೂರು, ೨೦೦೨.

೫೨ ಒಡಲಬೆಂಕಿ ಆರದಿರಲಿ, ಡಾ. ವಸು ಮಳಲಿ, ಚಿಂತನ ಪುಸ್ತಕ ಬೆಂಗಳೂರು, ೨೦೧೫.

೫೩ ಮಹಿಳೆ, ಚಳುವಳಿ ಮತ್ತು ರಾಜಕಾರಣ, ಷರೀಫಾ.ಕೆ, ಸಿರಿವರ ಪ್ರಕಾಶನ ಬೆಂಗಳೂರು. ೨೦೧೫

೫೪ ಮಹಿಳೆ ಮತ್ತು ಕೋಮುವಾದ, ಮಾಧವಿ ಎಸ್ ಭಂಡಾರಿ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ೨೦೦೬,

೫೫ ಅಸಮಾನತೆಯ ಬಣ್ಣಗಳು, ಜಿ ರಾಜಶೇಖರ, ಕೆ.ಫಣಿರಾಜ, ಅಹರ್ನಿಶಿ ಪ್ರಕಾಶನ ಶಿವಮೊಗ್ಗ. ೨೦೧೩,

೫೬ ನುಡಿ ರಂಗೋಲಿ, ವಿಜಯಾ, ನಾಕುತಂತಿ ಪ್ರಕಾಶನ ಬೆಂಗಳೂರು, ೨೦೧೭

೫೭ ಮಹಿಳೆ ಸಂಘಟನೆ ಹೋರಾಟ, ಸಬಿಹಾ ಭೂಮಿಗೌಡ ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ೨೦೦೮.

೫೮ ಸರಹದ್ದುಗಳ ಆಚೆ –ಈಚೆ, ಸುಮಿತ್ರಾಬಾಯಿ ಬಿ.ಎನ್, ಇಳಾ ಪ್ರಕಾಶನ ಬೆಂಗಳೂರು, ೨೦೦೯.

೫೯ ಬದಲಾಗುತ್ತಿರುವ ಕರ್ನಾಟಕ, ಚಂದ್ರ ಪೂಜಾರಿ ಎಂ, ಗಾಯಿತ್ರಿ ಪ್ರಕಾಶನ ಬಳ್ಳಾರಿ. ೨೦೧೪.

೬೦ ಮಹಿಳಾ ಅಸಮಾನತೆ , ಹೆಚ್.ಎನ್ ನಾಗಮೋಹನದಾಸ್, ,ಚಿಂತನ ಪುಸ್ತಕ, ಬೆಂಗಳೂರು.

೬೧ ವಿಜಯ ಕುಮಾರ್ ಹೆಚ್, ೨೦೧೨, ಮಾಧ್ಯಮ ಮಾರುಕಟ್ಟೆ–ಮಹಿಳೆ, ಗೀತಾಂಜಲಿ ಪುಸ್ತಕ ಪ್ರಕಾಶನ, ೨೦೧೪.

೬೨ Trafficking Women and children for Sexual exploitation-hand book for Law enforcement agencies in India, Nayar, P.M,UNIFEM,New Delhi, 2007.

୬୩ Equality Now, Bemard Henin, may 2013.

୬୪ India's Human Trafficking Laws and Policies and the UN Trafficking Protocol: Achiving Clarity, Jindal Global Law School, 2015.

୬୫ Crime in India-2010 Statistics, 2011, National Crime Record Bureau ministry of home affairs, new delhi.

୬୬ Crime in India-2012 Copendium, 2013, National Crime Record Bureau ministry of home affairs, new delhi.

୬୭ Crime in India-2014 Copendium, 2015, National Crime Record Bureau ministry of home affairs, New Delhi.

୬୮ Crime in India-2015 Copendium, 2016, National Crime Record Bureau ministry of home affairs. New Delhi.

ಅಧ್ಯಾಯ : ಮೂರು

# ಹೆಣ್ಣಿನ ದೇಹ, ಲೈಂಗಿಕತೆ ಮತ್ತು ಪುರುಷಾಧಿಕಾರ

೩.೧ ಸಾಂಸ್ಕೃತಿಕ ಯಾಜಮಾನ್ಯ

೩.೨ ಹೆಣ್ಣಿನ ದೇಹ ಮತ್ತು ಲಿಂಗತಾರತಮ್ಯ

೩.೩ ಹೆಣ್ಣು ದೇಹದ ಮೇಲಿನ ಧಾರ್ಮಿಕ ನಿರ್ಬಂಧ

೩.೪ ಹೆಣ್ಣು ದೇಹದ ಮೇಲಿನ ಸಾಮಾಜಿಕ ನಿಷೇಧ

೩.೫ ಹೆಣ್ಣು ಮತ್ತು ಮಾರುಕಟ್ಟೆ

೩.೬ ಹೆಣ್ಣು ದೇಹ ಮತ್ತು ಮಾಧ್ಯಮ

೩.೭ ಹೆಣ್ಣು ದೇಹ ಮತ್ತು ತಂತ್ರಜ್ಞಾನ

೩.೮ ಹೆಣ್ಣಿನ ಲೈಂಗಿಕತೆ

೩.೯ ಮನುಸ್ಮೃತಿಯಲ್ಲಿ ಹೆಣ್ಣಿನ ಲೈಂಗಿಕತೆ ಮತ್ತು ಅಸ್ತಿತ್ವದ ನಿರಾಕರಣೆ

ಅಧ್ಯಾಯ : ಮೂರು

# ಹೆಣ್ಣಿನ ದೇಹ, ಲೈಂಗಿಕತೆ ಮತ್ತು ಪುರುಷಾಧಿಕಾರ

## ಪ್ರಸ್ತಾವನೆ

ಸಮಾಜದಲ್ಲಿನ ವ್ಯವಸ್ಥೆಯ ಶ್ರೇಷ್ಠತೆಯನ್ನು ಆ ಸಮಾಜದಲ್ಲಿ ಮಹಿಳೆಯರಿಗೆ ನೀಡಲಾಗುತ್ತಿರುವ ಸ್ಥಾನಮಾನಗಳಿಗೆ ಅನ್ವಯಿಸಿ ಮೌಲ್ಯಮಾಪನ ಮಾಡಿದಾಗ ತಿಳಿಯುತ್ತದೆ ಎನ್ನುವ ಪ್ರಸಿದ್ಧ ಸೂಕ್ತಿ ಇದೆ. ಈ ಮಾನದಂಡವನ್ನು ಆಧರಿಸಿ ಆ ಸಮಾಜದ ಘನತೆಯನ್ನು ಅಳೆಯಲು ಸಾಧ್ಯ. ಸಮಾಜದ ಅಂಚಿನ ಸಮುದಾಯಗಳು ಮತ್ತು ಅಸ್ಪೃಶ್ಯರಿಗೂ ವಿಸ್ತರಿಸಿ ನೋಡುವುದಾದರೆ ಅದು ಸ್ವಾಗತಾರ್ಹ. ಆದರೆ ಇಲ್ಲಿ ಈ ಉಲ್ಲೇಖವನ್ನು ಧಾರ್ಮಿಕ ಸಂಸ್ಥೆಗಳ ಚೌಕಟ್ಟುಗಳಲ್ಲಿ ಹೆಣ್ಣನ್ನು ಕುರಿತಾದ ಯೋಚನಾ ಕ್ರಮವು ಇರುವ ಸ್ವರೂಪವನ್ನು ಗ್ರಹಿಸಲು ಹಾಗೂ ಪುರುಷಾಧಿಕಾರವು ಹೆಣ್ಣಿನ ದೇಹವನ್ನು ಗ್ರಹಿಸುವ ರೀತಿಯನ್ನು ಹಾಗೂ ವಿವಿಧ ಧಾರ್ಮಿಕ, ಸಾಮಾಜಿಕ ನಿಷೇಧ, ಲಿಂಗತಾರತಮ್ಯಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ವಿಶ್ಲೇಷಿಸುವ ಮೂಲಕ ಚರ್ಚೆಗೆ ಒಳಪಡಿಸಲು ಪೂರಕವಾಗಿ ಉದ್ಧರಿಸಲಾಗಿದೆ.

ಹೆಣ್ಣು ಮತ್ತು ಗಂಡಿನ ಲಿಂಗ ಸಂಬಂಧಗಳ ಹಿನ್ನೆಲೆಯಲ್ಲಿ ಹೆಣ್ಣಿನ ದೇಹದ ಕುರಿತು ವಿಶೇಷವಾಗಿ ಗಮನವನ್ನು ನೀಡಬೇಕಾದ ಅವಶ್ಯಕತೆಯಿದೆ. ಇದನ್ನು ಸಾಮಾಜಿಕ, ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಮತ್ತು ಆರ್ಥಿಕ ನೆಲೆಗಳಿಂದ ಗ್ರಹಿಸಬೇಕಾದ ಅವಶ್ಯಕತೆಯಿದೆ. ಹೆಣ್ಣಿನ ದೇಹದ ಬಗ್ಗೆ ಧರ್ಮ ಮತ್ತು ಸಂಸ್ಕೃತಿಯ ವಿಶಾಲ ಹರವಿನಲ್ಲಿ ಅನೇಕ ನಂಬಿಕೆಗಳಿವೆ. ಲಿಂಗ ಸಂಬಂಧವನ್ನು ದೇಹದ ಮೂಲಕವೇ ಪುರುಷ ಪ್ರಾಧಾನ್ಯತೆಯು ನಿರ್ಧರಿಸುತ್ತದೆ. ಹೆಣ್ಣಿನ ಜೈವಿಕ ಗುಣಗಳು ಆಕೆಯ ದೇಹಕ್ಕೆ ಒಂದು ರೂಪ ನೀಡಿದ್ದರೂ, ಅದೇ ರೂಪಕ್ಕೆ ಪುರುಷ ಸಮಾಜ ನೀಡುವ ತೀರ್ಪು ಹೆಣ್ಣಿನ ದೇಹ ಕೆಳದರ್ಜೆಯದು ಮತ್ತು ಎರಡನೇ ಸ್ಥಾನದ್ದು ಎಂದು.

ಮಾತೃ ಪ್ರಧಾನ ಕುಟುಂಬದಲ್ಲಿ ಇದ್ದ ಅನೇಕ ನಂಬಿಕೆಗಳು ಈಗಲೂ ಸಂಸ್ಕೃತಿಯ ರೂಪ ಧರಿಸಿ ಉಳಿದುಕೊಂಡಿವೆ. ಪಿತೃಪ್ರಧಾನ ಪುರುಷಾಧಿಕಾರವು ಅಸ್ತಿತ್ವಕ್ಕೆ ಬಂದ ನಂತರ ಹೆಣ್ಣಿನ ದೇಹದ ಬಗ್ಗೆ ಪೂರ್ವಾಗ್ರಹಗಳು ಮೂಡಿದವು. ಪ್ರಾಕೃತಿಕವಾದ ದೇಹದ ಕಲ್ಪನೆಯಲ್ಲಿ ತಾರತಮ್ಯ ಮೊಳೆದದ್ದು ಮೊದಲಿಗೆ ಪುರುಷನಿಂದಲೇ ಖ್ಯಾತ ಮಹಿಳಾ ಚಿಂತಕಿಯರಲ್ಲಿ ಒಬ್ಬರಾದ ಪ್ರಸಿದ್ಧ

ಚಿಂತಕಿ ಸಿಮೋನ್ ದ ಬುವಾ ಅವರು ತಮ್ಮ ಕೃತಿ 'ದಿ ಸೆಕೆಂಡ್ ಸೆಕ್ಸ್' ನಲ್ಲಿ ಈ ವಿಷಯವನ್ನು ಕುರಿತು ಗಂಭೀರವಾಗಿ ಚರ್ಚಿಸಿದ್ದಾರೆ. ಬಹಳಷ್ಟು ಎಲ್ಲಾ ಭೌತಿಕ ಮತ್ತು ಸಾಂಸ್ಕೃತಿಕ ಮಾನವ ಶಾಸ್ತ್ರಜ್ಞರು ಹೆಣ್ಣಿನ ದೇಹದ ಬಗೆಗಿನ ನಂಬಿಕೆಗಳನ್ನು ಲಿಂಗ ಸಂಬಂಧಗಳ ಹಿನ್ನೆಲೆಯಲ್ಲಿಯೇ ವಿಶ್ಲೇಷಿಸುತ್ತಾರೆ.

ಮಾನವ ಜೀವಿಯ ಬದುಕನ್ನು ಇತರ ಜೀವಿಗಳ ಬದುಕಿನೊಂದಿಗೆ ಹೋಲಿಸಲು ಸಾಧ್ಯವಿಲ್ಲ. ಅನೇಕ ಜೀವಿಗಳಲ್ಲಿ ಗಂಡು ಹೆಣ್ಣುಗಳು ಬೇರೆ ಬೇರೆಯಾಗಿ ಬದುಕುತ್ತವೆ. ಮಾನವರಲ್ಲಿ ಗಂಡು ಹೆಣ್ಣು ವಿರುದ್ಧವಲ್ಲ, ಅವು ಬಿಡಿಸಲಾಗದ ಅವಳಿಗಳಂತೆ ಒಮ್ಮೆ ಬಿಡಿಯಾಗಿ ಕಂಡುಬಂದರೆ ಮತ್ತೊಮ್ಮೆ ಒಂದೇ ಅನ್ನುವಂತಿರುತ್ತದೆ. ಜೀವಿ ವರ್ಗಕ್ಕೆ ಗಂಡು ಹೆಣ್ಣುಗಳಲ್ಲಿ ಯಾವುದು ಹೆಚ್ಚು ಅಗತ್ಯ ಎನ್ನುವಂತಹ ಪ್ರಶ್ನೆ ಅಸಮಂಜಸವಾದುದು, ಎರಡೂ ಪ್ರಮುಖವಾದವು. ಆದರೆ ಅವುಗಳು ನಿರ್ವಹಿಸುವ ಕಾರ್ಯಗಳು ವಿಭಿನ್ನವಾಗಿರುತ್ತವೆ. ಗಂಡು ಸೃಷ್ಟಿ ಕ್ರಿಯೆಗೆ ಚಾಲನೆ ನೀಡಿದರೆ ಹೆಣ್ಣು ಅದನ್ನು ಪೋಷಿಸುತ್ತಾಳೆ. ಎರಡೂ ಕಾರ್ಯಗಳು ಪೂರಕವಾದವು. ಒಂದಿಲ್ಲದಿದ್ದರೂ ಅಪೂರ್ಣ ಎರಡೂ ಸಮವಾದ ಮಹತ್ವನ್ನು ಹೊಂದಿವೆ. ಜೈವಿಕ ಕ್ರಿಯೆಯನ್ನಾಧರಿಸಿದ ಸಮಾಜದಲ್ಲಿ ಕೆಲಸದ ಹಂಚಿಕೆಯಾಗಿದೆ. ಉತ್ಪಾದನೆ ಮತ್ತು ವಂಶೋತ್ಪಾದನೆಗಳ ನಡುವೆ ಸಮತೋಲನ ಕಾಪಾಡಿಕೊಂಡು ಬರಲಾಗಿದೆ. ಇದೆ ಅವರ ಸಂಬಂಧದ ಸ್ವರೂಪವನ್ನು ನಿರ್ಧರಿಸುತ್ತವೆ. ಇಲ್ಲಿ ಜೀವಶಾಸ್ತ್ರ ಏನನ್ನು ಹೇಳುವುದಿಲ್ಲ. ಇದರ ಹಿನ್ನೆಲೆಯಲ್ಲಿ ಲಿಂಗತಾರತಮ್ಯ ಅಥವಾ ಸಮಾಜದ ಕಟ್ಟುಪಾಡುಗಳನ್ನು ವಿವರಿಸಲು ಸಾಧ್ಯವಿಲ್ಲ. ಸಾಮಾಜಿಕ ಕಟ್ಟುಪಾಡುಗಳನ್ನು ರೂಪಿಸಿದವರಿಗೆ ನೈಸರ್ಗಿಕ ಒತ್ತಡಗಳಿರುವುದಿಲ್ಲ. ಸಾಮಾಜಿಕ ಕಟ್ಟುಪಾಡುಗಳ ಚೌಕಟ್ಟಿನಲ್ಲಿ ತಮ್ಮ ಆಶಯಗಳನ್ನು ಈಡೇರಿಸಿಕೊಳ್ಳುತ್ತಾರೆ. ಆಗ ಅವರು ಕೇವಲ ಜೈವಿಕ ದೇಹಗಳಲ್ಲಿ, ಪ್ರಜ್ಞೆ ನಿಯಮ, ಮೌಲ್ಯಗಳುಳ್ಳ ದೇಹಗಳು, ಮೌಲ್ಯಗಳು ಲಿಂಗರಚನೆಯಿಂದ ನಿರ್ದೇಶಿತವಾದುದಲ್ಲ. ಸಾಮಾಜಿಕ ನಿಯಮಗಳು, ಮೌಲ್ಯಗಳು, ಕಟ್ಟು ಪಾಡುಗಳು ಜೀವಶಾಸ್ತ್ರದ ತಿಳಿವಳಿಕೆಯನ್ನು ಪ್ರಭಾವಿಸುತ್ತವೆ. ಉದಾ: ಹೆಣ್ಣಿನ ಬಗ್ಗೆ ಭಯ ಗೌರವ ಇದ್ದರೆ ಹಿಂಸಾ ಪ್ರೌವೃತ್ತಿಯನ್ನು ತೋರಿಸಲು ಗಂಡಿಗೆ ಸಾಧ್ಯವಿಲ್ಲ. ಆಗ ಗಂಡಿನ ದೈಹಿಕ ಬಲಕ್ಕೆ ಮೌಲ್ಯವಿರುವುದಿಲ್ಲ.

ಹೆಣ್ಣಿನ ಅಸ್ತಿತ್ವವನ್ನು ನಿರ್ಧರಿಸುವಲ್ಲಿ ಅವಳ ದೇಹವು ಪ್ರಮುಖವಾದುದು. ಆದರೆ ಅದೊಂದೇ ನಿರ್ಧಾರಿತ ಅಂಶವಲ್ಲ. ಇದರ ಜೊತೆಗೆ ಸಾಮಾಜಿಕ ಅಂಶಗಳು ಅವಳನ್ನು ರೂಪಿಸುತ್ತವೆ. ಮತ್ತು ಅರ್ಥೈಸುತ್ತವೆ. "ಮಾನವರ ಮನಸ್ಥಿತಿಗೂ ಅವರ ಅಸ್ತಿತ್ವಕ್ಕೂ ಸಂಬಂಧವಿದೆ. ದೇಹವು ಕಣ್ಣಿಗೆ ಕಾಣುವ ವಸ್ತುವಷ್ಟೇ ಅಲ್ಲ, ಕಣ್ಣಿಗೆ ಕಾಣದ ಮಾನಸಿಕ ಸ್ಥಿತಿಯೂ ಹೌದು. ಇದರಿಂದ ದೇಹ ಅನುಭೋಗಿಯಷ್ಟೇ ಅಲ್ಲ ನಿಯೋಗಿಯೂ ಹೌದು. ಯಾವಾಗ ಸ್ತ್ರೀ ತನ್ನನ್ನು ನಿಯೋಗಿ ಎಂದು ಗುರುತಿಸಿಕೊಳ್ಳುತ್ತಾಳೋ ಆವಾಗ ಅವಳು ಪೂರ್ಣ ವ್ಯಕ್ತಿಯಾಗುತ್ತಾಳೆ. ಅವಳಲ್ಲಿ ಜಗತ್ತಿನ ಅರಿವಿಗೆ ಬಾರದ ಎಷ್ಟೋ ಅನುಭವಗಳಿವೆ. ಈ ಅನುಭವಗಳು ಜೈವಿಕವಾಗಿ ಮುಖ್ಯವಾಗದೆ ಇರಬಹುದು. ಆದರೆ ಅವಳ ಅನುಭವದ ಜಗತ್ತಿನಲ್ಲಿ ಅದು ಮಹತ್ವದ್ದಾಗಿರುತ್ತದೆ"[?]. ಮನೋವಿಶ್ಲೇಷಣ ಕಾರನಾದ

ಸಿಗ್ಮಂಡ್ ಫ್ರಾಯ್ಡ್ ಲೈಂಗಿಕ ಭಾವನೆಗಳು ಹೇಗೆ ದೇಹ ಮತ್ತು ಮನಸ್ಸಿನ ಮೂಲಕ ಸಮಾಜ ಮತ್ತು ಸಂಸ್ಕೃತಿಗಳನ್ನು ರೂಪಿಸಿದೆ ಎಂಬುದನ್ನು ಚರ್ಚಿಸಿದ್ದಾರೆ. ಫ್ರಾಯ್ಡ್ ಹೇಳುವಂತೆ ಮುಖ್ಯವಾಗಿ ದೇಹ ಮತ್ತು ಮನಸ್ಸಿನ ಸಂಬಂಧಗಳಿಂದಲೇ ಹೆಣ್ಣು ಗಂಡಿನ ವಿಕಾಸ ಮತ್ತು ಆಕರ್ಷಣೆಗಳನ್ನು ಸಮರ್ಥಸಿದ್ದಾರೆ. ಲೈಂಗಿಕ ವಾಂಚೆಯನ್ನು ಫ್ರಾಯ್ಡ್ ಹೆಣ್ಣು ದೇಹದ ಮೂಲಕ ಗ್ರಹಿಸುತ್ತಾರೆ. ಮೋಹ ಭಾವವು ಅತ್ಯಂತಿಕವಾದ ಜೈವಿಕ ಗುಣ, ಇದು ವಿಕಾಸಕ್ಕೆ ಖಡ್ಡಾಯವಾಗಿ ಇರಬೇಕಾದ ನೀತಿ ಎರಡು ವಿಭಿನ್ನ ಲಿಂಗಗಳ ನಡುವೆ ಮೋಹವೇ ಇಲ್ಲವಾದರೆ ಯಾವ ಜೈವಿಕ ಪ್ರಕ್ರಿಯೆಯಾಗುವುದಿಲ್ಲ. ಜೀವಜಾಲದ ಮೋಹ ಕ್ರಿಯೆಗೆ ಹೆಣ್ಣುಲಿಂಗ ಮತ್ತು ಗಂಡುಲಿಂಗ ಸಮಾಗಮವಾಗಲೇಬೇಕು. ಇದು ಪ್ರಕೃತಿ ನಿಯಮ. ಈ ನಿಯಮದ ಅನುಸರಣೆಯಲ್ಲೇ ಹೆಣ್ಣು ಗಂಡಿನ ಕೌಟುಂಬಿಕ ಸಂಬಂಧಗಳು ನಿರ್ಧರಿತವಾಗಿ ಸಂಸ್ಕೃತಿ ಮತ್ತು ಲಿಂಗಸಂಬಂಧ ಬೆಳೆದಿರುವುದು. ಇಂತಹ ಹಿನ್ನೆಲೆಯನ್ನು ಆಧರಿಸಿ ಅಂತರಂಗದಲ್ಲಿರುವ ಮನಸ್ಸನ್ನು ಫ್ರಾಯ್ಡ್ ಪರಿಶೀಲಿಸಿದರು. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ, ಫ್ರಾಯ್ಡ್‌ರವರು ತಮ್ಮ ಆಲೋಚನೆಯ ಪರಿಶೀಲನೆಗೆ ಹಾಗೂ ಸಂಶೋಧನೆಗೆ ಆಯ್ಕೆ ಮಾಡಿಕೊಂಡದ್ದು ಮಾತ್ರ ಪುರುಷ ಮನಸ್ಸಿನಲ್ಲಿರುವ ಸ್ತ್ರೀ ಮೋಹದ ಭಾವನೆಗಳನ್ನೇ ಹೊರತು ಸ್ವತಃ ಸ್ತ್ರೀಯ ಭಾವನೆಗಳನ್ನಲ್ಲ. ಸ್ತ್ರೀಯ ದೇಹದ ಮೇಲೆ ಗಂಡಿಗೆ ಇರುವ ಬಯಕೆಗಳನ್ನು ವಿಶೇಷವಾಗಿ ಗಮನಿಸಿದ್ದಾರೆ. ಗಂಡು ಹೇಗೆ ಹೆಣ್ಣಿನ ಲೈಂಗಿಕ ಮೋಹಕ್ಕೆ ಒಳಗಾಗುತ್ತಾನೆ, ಅವಳೊಂದಿಗೆ ದೈಹಿಕ ಸಂಬಂಧಕ್ಕಾಗಿ ಆತ ಹೇಗೆ ಕಾತರಿಸುತ್ತಾನೆ, ಎಂತಹ ರೀತಿಯಲ್ಲಿ ಆತ ಬಯಕೆಗಳನ್ನು ಪೂರೈಸಿಕೊಳ್ಳಬಲ್ಲನು ಎಂಬುದನ್ನು ವಿಶ್ಲೇಷಿಸಿದ್ದಾರೆ. ಫ್ರಾಯ್ಡ್ ಆಲೋಚನೆಯನ್ನೇ ಹಲವು ಕವಲುಗಳಲ್ಲಿ ಅನೇಕ ಮನೋವಿಜ್ಞಾನಿಗಳು ವಿಶ್ಲೇಷಿಸಿ ವಿಸ್ತರಿಸಿದ್ದರೂ ಹೆಣ್ಣು ದೇಹ ಮತ್ತು ಲೈಂಗಿಕ ಸಂಬಂಧಗಳ ವಿಚಾರಗಳು ಈಗಲೂ ಹಳೆಯ ಮಾದರಿಯಲ್ಲಿಯೇ ಮುಂದುವರೆದಿದೆ. ಹೆಣ್ಣಿನ ಮೇಲಿನ ದೌರ್ಜನ್ಯಗಳನ್ನು ವಿಶ್ಲೇಷಿಸಲು ಫ್ರಾಯ್ಡ್‌ನ ಪರಿಕಲ್ಪನೆಗಳು ಪರಿಪೂರ್ಣವಲ್ಲ ಆದರೆ ಗಂಡಸಿನ ಆಸಕ್ತಿಗಳನ್ನು ತಿಳಿಯಲು ಸಹಕಾರಿಯಾಗುತ್ತದೆ.

ಅನೈತಿಕ ಸಾಗಾಣಿಕೆಗೆ ಒಳಪಟ್ಟ ಹೆಣ್ಣಿನ ಮನಸ್ಸಿನ ವೇದನೆಗೂ ಆ ಕೃತ್ಯಕ್ಕೆ ಕಾರಣನಾದ ಪುರುಷ ಭಾವನೆಗಳಿಗೂ ಅಗಾದವಾದ ಅಂತರವಿದೆ. ಕೇವಲ ಲೈಂಗಿಕ ಇಚ್ಛೆಗಳ ಬೇರುಗಳನ್ನು ಹುಡುಕಿದರೆ ಪುರುಷ ಮನಸ್ಸಿನ ಪಾತಕ ಕ್ರಿಯೆಯನ್ನು ನಿಯಂತ್ರಿಸಲು ಸಾಧ್ಯವಿಲ್ಲ. ಬದಲಿಗೆ ಹೆಣ್ಣಿನ ವೇದನೆಯ ಮೂಲಕ ಇಡೀ ಪುರುಷ ಸಮಾಜದ ತಾರತಮ್ಯ ಮತ್ತು ಆಕ್ರಮಣವನ್ನು ವಿಶ್ಲೇಷಿಸಬೇಕಾಗುತ್ತದೆ. ಹೆಣ್ಣು ದೇಹದ ಮೇಲಿನ ಹಲ್ಲೆಯ ಬಹುರೂಪಿ ಧಾರ್ಮಿಕ, ಸಾಂಸ್ಕೃತಿಕ ನಿಯಂತ್ರಣಗಳನ್ನು ಬಹುಶಿಸ್ತೀಯ ನೆಲೆಗಳಿಂದ ವಿಶ್ಲೇಷಿಸಬೇಕಾಗುತ್ತದೆ.

ದೇಹದ ರಚನೆಯ ಸ್ವರೂಪವನ್ನೇ ಮುಖ್ಯವಾಗಿಸಿ ಗಂಡು ಹೆಣ್ಣುಗಳ ನಡುವೆ ಅಸಮಾನತೆಯನ್ನು ಸೃಷ್ಟಿಸಿ ಆ ಕಾರಣದಿಂದಲೇ ಪುರುಷನಂತೆ ಸರಿಸಮವಾಗಿ ಸಾಮಾಜಿಕ ವ್ಯವಸ್ಥೆಗಳಲ್ಲಿ ಭಾಗವಹಿಸಲು

ಸಾಧ್ಯವಿಲ್ಲ ಎಂಬ ಸುಳ್ಳು ನಂಬಿಕೆಯನ್ನು ಸ್ತ್ರೀವಾದಿಗಳು ತೀವ್ರವಾಗಿ ವಿರೋಧಿಸುತ್ತಾರೆ. ೧೯೬೮ರಲ್ಲಿ ನಡೆದ ಪ್ಯಾರೀಸ್ ಸಮಾವೇಶದಲ್ಲಿ ತೀವ್ರವಾದಿ ಸ್ತ್ರೀವಾದಿಗಳು 'ಬ್ರಾ' ಸುಡುವುದರ ಮೂಲಕ ತಮ್ಮ ಆಕ್ರೋಶ ವ್ಯಕ್ತಪಡಿಸಿದರು. ಮಾರ್ಕ್ಸ್ ಮತ್ತು ಏಂಗೆಲ್ಸ್‌ರು ಹೆಣ್ಣಿನ ಶೋಷಣೆಯ ಮೂಲವನ್ನು ಉತ್ಪಾದನೆಯ ನೆಲೆಯಲ್ಲಿ ಗುರುತಿಸಿದರೆ ಸ್ತ್ರೀವಾದಿಗಳು ದೇಹದ ನೆಲೆಯಲ್ಲಿ ಗುರುತಿಸುತ್ತಾರೆ. ಆ ಹೆಣ್ಣಿನ ದೈಹಿಕ ರಚನೆ ಹಾಗೂ ಅವಳಿಂದ ನಿರೀಕ್ಷಿಸಿದ ವಿಶಿಷ್ಟ ಕರ್ತವ್ಯಗಳೇ ಇದಕ್ಕೆ ಮೂಲ ಕಾರಣ ಎಂದು ವಿವರಿಸುತ್ತಾರೆ. ಹೆಣ್ಣನ್ನು ಹೊರುವ ಹೆರುವ ಯಂತ್ರವಾಗಿ ಪರಿಗಣಿಸಿದ್ದೇ ಅವಳ ಶೋಷಣೆಯ ಮೂಲವಾಯಿತು. ತನಗಿಲ್ಲದ ವಿಶಿಷ್ಟ ಶಕ್ತಿ ಹೆಣ್ಣಿನಲ್ಲಿದ್ದುದರಿಂದ ಅವಳ ಮೇಲೆ ಪುರುಷ ತನ್ನ ನಿಯಂತ್ರಣ ಒಡ್ಡಲಾರಂಭಿಸಿದ. ಹೆಣ್ಣಿನ ದೇಹ ಫಲವತ್ತತೆಯ, ಸಮೃದ್ಧಿಯ, ಸೃಷ್ಟಿ ಶೀಲತೆಯ ರೂಪಕವಾಗಿತ್ತು. ಬೆತ್ತಲಾಗಿದ್ದ ಮಾನವ ಬೆತ್ತಲೆಯಿಂದ ದೂರ ಸಾಗಿ ಮೈಮುಚ್ಚಿಕೊಳ್ಳಲು ಮಾಡಿದ ಯತ್ನವೇ ಸಂಸ್ಕೃತಿಯ, ನಾಗರೀಕತೆಯ ವಿಕಾಸ. ಆದರೆ ಅದೇ ಮಾನವ ಹೆಣ್ಣನ್ನು ಮಾತ್ರ ಮತ್ತೆ ಮತ್ತೆ ಬೆತ್ತಲೆಗೊಳಿಸುತ್ತ ಅವಳನ್ನು ವ್ಯಭಿಚಾರಕ್ಕೆ ಅನೈತಿಕ ಸಾಗಾಣಿಕೆಗೆ ಒಳಪಡಿಸಿರುವುದು ವಿಪರ್ಯಾಸವೇ ಸರಿ.

### ೩.೧. ಸಾಂಸ್ಕೃತಿಕ ಯಾಜಮಾನ್ಯ

ಸಂಸ್ಕೃತಿಯು ಇಡೀ ಸಮಾಜವು ಒಪ್ಪಿಕೊಳ್ಳುವಂತಹ ಕೆಲವು ರಚನೆಗಳನ್ನು ರೂಪಿಸಿರುತ್ತದೆ. ಆ ರಚನೆಗಳಿಗೆ ಅನುಸಾರವಾಗಿಯೇ ಪ್ರತಿಯೊಂದು ಸಮಾಜವು ನಡೆದುಕೊಳ್ಳಬೇಕು ಎನ್ನುವ ಹಾಗೆ ಇಡೀ ಸಮಾಜವನ್ನು ರೂಪಿಸುವುದು ಸಾಂಸ್ಕೃತಿಕ ಯಾಜಮಾನ್ಯದಿಂದ ಮಾತ್ರ ಸಾಧ್ಯ ಎನ್ನುವುದನ್ನು ಕಾಣಬಹುದಾಗಿದೆ. ಇಂತಹ ಸಾಂಸ್ಕೃತಿಕ ಯಾಜಮಾನ್ಯದ ಮೂಲಕ ಪ್ರತಿಯೊಬ್ಬರನ್ನು ನಿಯಂತ್ರಣಕ್ಕೆ ಒಳಪಡಿಸಿಕೊಂಡು ತನಗೆ ಬೇಕಾದಂತೆ ಅದನ್ನು ರೂಪಿಸುವ ಒಂದು ವರ್ಗ ಪ್ರತಿಯೊಂದು ಸಮಾಜದಲ್ಲಿಯೂ ಇರುತ್ತದೆ. ಯಾವುದೇ ಸಮಾಜವು ಆಧುನಿಕ ಪರಿಭಾಷೆಗಳಾದ ಸಮಾನತೆ, ಸ್ವಾತಂತ್ರ್ಯ, ಭ್ರಾತೃತ್ವಗಳ ಆಧಾರದ ಮೇಲೆ ರೂಪಿತವಾಗಿರದೆ, ವರ್ಗ, ಜಾತಿ, ಲಿಂಗ, ಸಮುದಾಯಗಳ ಆಧಾರದ ಮೇಲೆ ವರ್ಗೀಕರಣ ಆಗುವುದನ್ನು ಪ್ರತಿಯೊಂದು ಕಾಲಘಟ್ಟದಲ್ಲಿಯೂ ನಾವು ಗುರುತಿಸಬಹುದಾಗಿದೆ.

ಸಾಂಸ್ಕೃತಿಕ ಯಾಜಮಾನ್ಯ ಎನ್ನುವುದು ಸಮಾಜದಲ್ಲಿನ ಪ್ರಬಲ ವರ್ಗ, ಪ್ರಬಲ ಜಾತಿ, ಪ್ರಬಲ ಲಿಂಗಗಳೇ ರೂಪಿಸಿರುವುದನ್ನು ಪರಂಪರೆಯುದ್ದಕ್ಕೂ ಕಾಣಬಹುದಾಗಿದೆ. ಮೇಲ್ವರ್ಗದ, ಪ್ರಬಲ ವರ್ಗಗಳು ತಮಗೆ ಬೇಕಾದಂತೆ ನೀತಿ, ನಿಯಮಗಳನ್ನು ಸಮಾಜದ ಸಾಂಸ್ಕೃತಿಕ ಭಾಗವಾಗಿ ರೂಪಿಸಿಕೊಂಡಿವೆ. ಪ್ರತಿಯೊಬ್ಬರೂ ಅದಕ್ಕನುಸಾರವಾಗಿ ನಡೆಯುವಂತೆ ಹೇರಿಕೆಗಳನ್ನು ಇಲ್ಲವೇ ತಾವು ಹೇಳಿದ್ದು ಶ್ರೇಷ್ಠ ಉಳಿದವು ಕೀಳು ಎಂದು ಹೇಳುವ ಮೂಲಕ ಉಳಿದ ಬಹುಸಂಖ್ಯಾತರನ್ನು ಅನ್ಯವಾಗಿಸುವ ಪ್ರಕ್ರಿಯೆಯನ್ನು ಸಾಂಸ್ಕೃತಿಕ ಯಾಜಮಾನ್ಯ ಎಂದು

ಕರೆಯಲಾಗುತ್ತದೆ. ಪುರುಷಾಧಿಕಾರದ ಸಾಂಸ್ಕೃತಿಕ ಯಾಜಮಾನ್ಯಗಳಿಗೆ ಸ್ತ್ರೀಯರು ತಮ್ಮನ್ನು ಒಡ್ಡಿಕೊಳ್ಳುವ ನೆಲೆಗಳನ್ನು ಗುರಿತಿಸುವುದು ಈ ಚರ್ಚೆಯ ಸ್ವರೂಪವಾಗಿದೆ. ಶ್ರೇಣಿಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ಅಸಮಾನ ನೆಲೆಗಳಿವೆ. ವರ್ಣ, ಜತಿ, ವರ್ಗದಂತೆ ಅಮಾನವೀಯ ಕ್ರೌರ್ಯಗಳಿಗೆ ಕಾರಣವಾಗುವ ಮತ್ತೊಂದು ನೆಲೆಯೆಂದರೆ ಹೆಣ್ಣಿನ ದೇಹದ ಮೇಲಿನ ಪುರುಷಾಧಾರಿತ ಸಾಂಸ್ಕೃತಿಕ ಯಾಜಮಾನ್ಯ. ಲಿಂಗತ್ವ ಕಾರಣದಿಂದ ಶ್ರೇಷ್ಠರೆಂದು ಗುರುತಿಸಿಕೊಳ್ಳುವ ಪುರುಷರು ಕೌಟುಂಬಿಕ ಮತ್ತು ಸಾಮಾಜಿಕ ನೆಲೆಯಲ್ಲಿ ಯಜಮಾನಿಕೆ ಸ್ಥಾನದಲ್ಲಿಯೇ ನಿಂತು ಹೆಣ್ಣನ್ನು ಆಳುತ್ತಾರೆ. ಅವಳು ಹೇಗಿರಬೇಕು, ಯಾವ ಕೆಲಸ ಕಾರ್ಯಗಳನ್ನು ಮಾಡಬೇಕು, ಯಾವುದನ್ನು ಮಾಡಬಾರದು, ಹೇಗಿರಬೇಕು ಮುಂತಾದ ಕಟ್ಟುಕಟ್ಟಳೆಗಳನ್ನು ಹೇರಿರುವುದು ಪುರುಷನೇ ಆಗಿದ್ದಾನೆ.

ಡಾ.ಆರ್.ಚಲಪತಿಯವರು ವಿವರಿಸುವಂತೆ "ಯಾಜಮಾನ್ಯ ಇಲ್ಲವೇ ಯಜಮಾನಿಕೆ ಅನ್ನುವುದು ಬಂಡವಾಳಶಾಹಿ (ಮಾರ್ಕ್ಸ್‌ವಾದಿಗಳು ಬಳಸಿರುವಂತೆ) ಗುಂಪು ಒಂದು ಸಮಾಜದ ಜನರನ್ನು ಹೇಗೆ ತನ್ನ ಹಿಡಿತದಲ್ಲಿ ಇಟ್ಟುಕೊಳ್ಳುತ್ತವೆ? ಅಂದರೆ ಜನರಿಂದ ಆಗಿಸಲ್ಪಟ್ಟ ಉತ್ಪಾದನೆಯು ಹಣವಿರುವವರ ಕೈಯಲ್ಲಿ ಹೇಗೆ ಸೇರುವಂತೆ ಆಗುತ್ತದೆ? ಈ ಮೂಲಕ ಜನರ ಹೊಟ್ಟೆಪಾಡು ಎನ್ನುವುದೇ ಅವರನ್ನು ಹದ್ದುಬಸ್ತಿನಲ್ಲಿ ಇಡಲು ಹೇಗೆ ಬಕಳಕೆಯಾಗುತ್ತದೆ? ಉತ್ಪಾದನೆಯ ಪರಿಕರಗಳ ಒಡೆತನಗಳುಳ್ಳ ಗುಂಪು 'ಯಜಮಾನ' ಆಗಿ ಸಮಾಜವನ್ನೇ ಆಳಲು ತೊಡಗುತ್ತದೆ ಎನ್ನುವುದನ್ನು ಬಿಡಿಸಿ ಹೇಳುವುದಾಗಿದೆ. ಈ 'ಯಜಮಾನಿಕೆ' ಅನ್ನುವುದು ಹೀಗೆ ಕಾಲಾನು ಕಾಲದಿಂದಲೂ ಬೆಳೆದುಕೊಂಡು ಬಂದಿದೆ. ಇದು ಸಹಜ ಎಂದು ನಂಬಿಸಲು ತೊಡಗುತ್ತದೆ. ಚರಿತ್ರೆಯ ನೆಲೆಯಿಂದ ನೋಡಿದರೆ ಮೇಲ್ಜಾತಿಯವರು ಕೆಳ ಜಾತಿಯವರನ್ನು ತಮ್ಮ ಹೊಲ, ತೋಟಗಳಲ್ಲಿ ಕೆಲಸ ಮಾಡಿಸಿಕೊಂಡು ಅವರಿಗೆ ಕೂಲಿಯನ್ನು ನೀಡಿ ಇಲ್ಲವೇ ಜೀತದಾಳಾಗಿ ತಮ್ಮ ಹಿಡಿತದಲ್ಲಿ ಇರಿಸಿಕೊಳ್ಳುತ್ತಾರೆ. ಇದೇ ರೀತಿಯಲ್ಲಿ ರಾಜಕೀಯ ವ್ಯಕ್ತಿಗಳು ತಮಗಿಂತ ಕೆಳಮಟ್ಟದಲ್ಲಿ ಇರುವವರೆಂದು ಭಾವಿಸಿ ಸಮಾಜದ ಜನಸಾಮಾನ್ಯರ ಮೇಲೆಯೂ ತಮ್ಮ 'ಯಜಮಾನಿಕೆ'ಯನ್ನು ಚಲಾಯಿಸುತ್ತಾರೆ.

ಅದೇ ರೀತಿಯಲ್ಲಿ ಗಂಡು-ಹೆಣ್ಣಿನ ನೆಂಟಸ್ತಿಕೆಯಲ್ಲಿ 'ಯಾಜಮಾನ್ಯ' ನೆಲೆಗೊಂಡಿರುವುದು ಕಾಣಿಸುತ್ತದೆ. ಗಂಡು ಮನೆಯಿಂದ ಆಚೆ ಹೋಗಿ ದುಡಿಯಬೇಕು. ಅದೇ ಹೆಣ್ಣು ಮನೆಯಲ್ಲಿ ಇರಬೇಕು. ಅದಲ್ಲದೆ ಅವನು ಹೇಳಿದ ಹಾಗೆ ಅವಳು ಕೇಳಬೇಕು. ಅವನ ಕೈಯ್ಯಳತೆಯಲ್ಲಿಯೇ ಸಿಗಬೇಕು ಎಂದು ಗಂಡಸು ಬಯಸುವುದರಲ್ಲಿ ಈ 'ಯಜಮಾನ್ಯ' ಇದೆ. 'ಯಜಮಾನಿಕೆ'ಯು ಒಂದು ಸಂಸ್ಕೃತಿಯಾಗಿ ತನಗೆ 'ನಿಷ್ಠೆ'ಯಿಂದ ಇರುವಂತೆ ಬಯಸುತ್ತದೆ ಮತ್ತು ಅದಕ್ಕಾಗಿ ಬಲವಂತವನ್ನೂ ಹೇರುತ್ತದೆ. ಹೀಗೆ ಒಂದು ಸಮಾಜದ, ಜಾತಿ, ಮತ, ಕೆಲಸ, ಕೂಲಿ, ಹೆಣ್ಣು, ಹಣ, ಆಸ್ತಿ ಇಂತಹ ಅನೇಕ ನಂಟುಗಳಲ್ಲಿ ಸಮಾಜ ಏರುಪೇರಾಗಿರುವುದನ್ನು ಬಿಡಿಸಿ ತಿಳಿಸುವ

ಅರಿವನ್ನು ಕಟ್ಟುವ ಸಾಂಸ್ಕೃತಿಕ ನೆಲೆಗಳಲ್ಲಿ ‘ಯಜಮಾನ-ಯಜಮಾನಿ-ಯಜಮಾನಿಕೆ’ ಪದಕಟ್ಟು ಬಳಕೆಯಾಗುತ್ತಿದೆ”.[೨]

ಪುರುಷ ವರ್ಗದ ಮೌಲ್ಯಗಳೇ ಒಟ್ಟು ಸಾಮಾಜಿಕ, ಸಾಂಸ್ಕೃತಿಕ ಮೌಲ್ಯಗಳಾಗಿದ್ದು ಹೆಣ್ಣನ್ನು ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ಬಳಸಿಕೊಳ್ಳಲಾಗುತ್ತದೆ. ಪಿತೃಪ್ರಧಾನತೆಯ ಅಂಶವು ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಮತ್ತು ಪ್ರಪಂಚದ ಇತರೆ ಎಲ್ಲಾ ಧಾರ್ಮಿಕ ವ್ಯವಸ್ಥೆಗಳಲ್ಲಿಯೂ ತನ್ನ ಕೇಂದ್ರಸ್ಥಾನವನ್ನು ಪಡೆದುಕೊಂಡಿದೆ. ಹಾಗಾಗಿ ಪುರುಷರನ್ನು ಸ್ತ್ರೀಯರನ್ನು ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ಅಧೀನ ನೆಲೆಗೆ ತರುತ್ತಾರೆ. ಗಂಡು ಮಕ್ಕಳನ್ನು ಬಯಸುವುದು, ಹೆಣ್ಣು ಮಕ್ಕಳನ್ನು ನಿರಾಕರಿಸುವುದು, ಹೆಂಗಸರು ಮತ್ತು ಹೆಣ್ಣು ಮಕ್ಕಳ ಮೇಲೆ ಮನೆ ಕೆಲಸದ ಹೊರೆ, ಹೆಣ್ಣು ಮಕ್ಕಳಿಗೆ ಶಿಕ್ಷಣಾವಕಾಶದಿಂದ ವಂಚನೆ, ಅವರ ಚಲನವಲನದ ಮೇಲೆ ನಿಯಂತ್ರಣ, ಮಹಿಳೆಯರಿಗೆ ಆಸ್ತಿಹಕ್ಕು ಮತ್ತು ಉತ್ತರಾಧಿಕಾರ ನೀಡದಿರುವುದು, ಹೆಣ್ಣಿನ ದೇಹ ಮತ್ತು ಲೈಂಗಿಕತೆಗಳ ಮೇಲಿನ ಪುರಷನ ನಿಯಂತ್ರಣ ಸಾಧಿಸುವುದು, ಸಂತಾನೋತ್ಪತ್ತಿಯ ಹಕ್ಕುಗಳ ಮೇಲೆ ಮಹಿಳೆಯರಿಗೆ ಅವಕಾಶವಿಲ್ಲದಿರುವುದು ಇವೆಲ್ಲವೂ ಕುಟುಂಬ ಅಥವಾ ಸಮಾಜದಲ್ಲಿರುವ ಪುರುಷ ಪ್ರಧಾನತೆಯನ್ನು ಸೂಚಿಸುತ್ತದೆ. ಹೆಣ್ಣಿನ ಬದುಕಿನ ಅಸ್ವಾತಂತ್ರ್ಯ, ಕುಟುಂಬ ಹಾಗೂ ವಿವಾಹಗಳಂತಹ ಸಂಸ್ಥೆಗಳು ಹೆಣ್ಣಿನ ಮೇಲೆ ಸದ್ದಿಲ್ಲದೆ ಮಾಡುವ ದೌರ್ಜನ್ಯ ಮತ್ತು ಹಿಂಸೆಗಳು, ಪ್ರೀತಿ ಪ್ರೇಮಗಳಂತಹ ವೈಯಕ್ತಿಕ ಸಂಬಂಧಗಳು ಹೀಗೆ ಪುರುಷ ಪ್ರಧಾನ ವ್ಯವಸ್ಥೆಯು ಹೆಣ್ಣಿನ ಮೇಲೆ ಲಿಂಗಧಾರಿತ ನೆಲೆಯಲ್ಲಿ ನಡೆಸುವ ಯಜಮಾನಿಕೆಗಳೇ ಆಗಿವೆ.

ವಿವಾಹದಂತಹ ಒಪ್ಪಿತ ಸಂಸ್ಥೆಗಳು ಪ್ರೀತಿ, ವಿಶ್ವಾಸ, ಕರುಣೆ, ಸೌಜನ್ಯ ಮುಂತಾದ ಅನೇಕ ಗುಣಗಳ ಮೂಲಕ ಮನವೊಲಿಕೆಯ ಮಾದರಿಯಲ್ಲಿ ಹೆಣ್ಣನ್ನು ಗಂಡಿನ ಅಧೀನಕ್ಕೆ ತರುತ್ತವೆ. ಹೆಣ್ಣೊಬ್ಬಳ ಜೀವಿತಾವಧಿಯ ಲೈಂಗಿಕತೆಯನ್ನು ನಿರ್ದಿಷ್ಟ ಪುರುಷನೊಬ್ಬನ ಅಧೀನಕ್ಕೆ ಒಳಪಡಿಸುವ ಸಂಸ್ಥೆಯೇ ವಿವಾಹ ಸಂಸ್ಥೆಯಾಗಿದೆ. ಈ ಸಂಸ್ಥೆಯೊಳಗೆ ಹೆಣ್ಣು ಲೈಂಗಿಕ ಯಾಜಮಾನ್ಯವನ್ನು ಸಹಿಸಿಕೊಳ್ಳಲೇ ಬೇಕಾಗುತ್ತದೆ. ವಿವಾಹದ ಚೌಕಟ್ಟಿನೊಳಗೆ ನಡೆಯುವ ಇಂತಹ ಲೈಂಗಿಕ ಯಜಮಾನ್ಯವು ಸಮಾಜದಿಂದ ಒಪ್ಪಿತವಾದುದು. ಇಲ್ಲಿ ಶೋಷಣೆಯು ಅರಿವಿಗೆ ಬಾರದಂತೆ ಅಧಿಕಾರದ ಜೋಡಣೆಯಾಗಿರುತ್ತದೆ. ಹೆಣ್ಣಿನ ದೇಹದ ಮೇಲೆ ಒಡೆತನವನ್ನು ಸ್ಥಾಪಿಸುವುದು, ಹೆಣ್ಣಿನ ಚಲನವಲನಗಳನ್ನು ನಿರ್ಬಂಧಿಸುವುದು, ಹೆಣ್ಣಿನ ಪ್ರಜನನ ಕ್ರಿಯೆಯ ಮೇಲೆ ಒಡೆತನವನ್ನು ಸ್ಥಾಪಿಸುವುದು, ಬಹುಪತ್ನಿತ್ವ ಮತ್ತು ದುಡಿಮೆಯ ಅಪಮೌಲ್ಯೀಕರಣದಂತಹ ಸಂಗತಿಗಳು ವೈವಾಹಿಕ ನೆಲೆಯಲ್ಲಿ ಗಂಡನಿಗೆ ತನ್ನ ಹೆಂಡತಿಯ ಮೇಲೆ ಅಧಿಕಾರ ಚಲಾಯಿಸುವ ಸ್ವಾತಂತ್ರವನ್ನು ತಂದುಕೊಡುತ್ತವೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷನಿಗೆ ಹೆಣ್ಣಿನ ದೇಹವು ಸಹ ಆಸ್ತಿಯ ಒಂದು ಭಾಗವೇ ಆಗಿರುತ್ತದೆ. ಆದುದರಿಂದಲೇ ಹೆಣ್ಣಿನ ದೇಹದ ಮೇಲೆ ಸಂಪೂರ್ಣವಾದ ಅಧಿಕಾರವನ್ನು

ಚಲಾಯಿಸಲು ಗಂಡು ಮುಂದಾಗುತ್ತಾನೆ. ವಿವಾಹಾನಂತರದ ಬದುಕಿನಲ್ಲಿ ಸ್ತ್ರೀಯು ಸಂಪೂರ್ಣವಾಗಿ ಪುರುಷನ ನಿಲುವಿಗೆ ತಕ್ಕಂತೆ ತನ್ನ ಬದುಕನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಗಂಡನಿಗೆ ತಗ್ಗಿಬಗ್ಗಿ ನಡೆಯಬೇಕು, ಅವನೇ ಪರದೈವ, ಅವನು ಹೇಳಿದಂತೆ ಕೇಳಬೇಕು, ನಿಷ್ಟೆಯಿಂದ ಸೇವೆ ಮಾಡಬೇಕು ಮುಂತಾದ ಪಿತೃಪ್ರಧಾನ ಮೌಲ್ಯಗಳನ್ನು ಸ್ತ್ರೀಯರಿಗೆ ವಿಧಿಸುವ ಮೂಲಕ ವ್ಯವಸ್ಥೆಯು ಅವಳನ್ನು ವಿಧೇಯಳನ್ನಾಗಿಸುತ್ತದೆ. ವಿವಾಹದ ನಂತರದಲ್ಲಿ ಹೆಣ್ಣಿನ ದೇಹದ ಮೇಲೆ ಪುರುಷನು ಒಡೆತನವನ್ನು ಸ್ಥಾಪಿಸಿ ಮಾನಸಿಕವಾಗಿಯೂ, ದೈಹಿಕವಾಗಿಯೂ ಅಧೀನಗೊಳಿಸುತ್ತಾನೆ. ಹೀಗೆ ಅಲ್ಲಿಯವರೆಗೂ ಇದ್ದ ತನ್ನ ಅಸ್ತಿತ್ವ ವಿವಾಹದ ನಂತರದ ಬದುಕಿನಲ್ಲಿ ಇಲ್ಲವಾಗುತ್ತದೆ. ಹೆಣ್ಣಿನ ಲೈಂಗಿಕತೆಯನ್ನು ಒಬ್ಬ ಗಂಡಸಿನ ಯಜಮಾನಿಕೆಗೆ ಒಳಪಡಿಸುವ ವಿವಾಹ ಸಂಸ್ಥೆಯ ಮೂಲದಿಂದಲೇ ಈ ಎಲ್ಲಾ ಸಮಸ್ಯೆಗಳು ಪ್ರಾರಂಭವಾಗುತ್ತವೆ. "ಸ್ತ್ರೀ ಶಕ್ತಿಯನ್ನು ಸಮುದಾಯವನ್ನು ಈ ರೀತಿ ಸರಳವಾಗಿ ಎರಡಾಗಿ ಒಡೆದು ಪರಿಭಾವಿಸುವ ಮೂಲಕ ತನ್ನ ಶಕ್ತಿಯನ್ನು ಸಾಂದ್ರಗೊಳಿಸುವುದು ಎಲ್ಲ ಯಜಮಾನ್ಯ ಸಂಸ್ಕೃತಿಗಳೂ ಕಂಡುಕೊಂಡಿರುವ ಪ್ರಬಲವಾದ ದಾರಿಯಾಗಿದೆ."[೩] ಕುಟುಂಬ, ವಿವಾಹಗಳ ಮೂಲಕ ಹೆಣ್ಣಿನ ಮೇಲೆ ಒತ್ತಾಯಗಳನ್ನು ಹೇರುವುದರ ಮೂಲಕ ಅಧೀನಗೊಳಿಸಿಕೊಳ್ಳುವ ದಾರಿಯನ್ನು ಹುಡುಕುತ್ತಲೇ ಅದರ ಇನ್ನಿತರ ಯೋಜನೆಗಳನ್ನು ಫಲಪ್ರಧಾನವಾಗಿ ರೂಪಿಸಿಕೊಳ್ಳುವುದು ಪುರುಷಾಧಿಕಾರದ ಸಾಂಸ್ಕೃತಿಕ ಯಾಜಮಾನ್ಯದ ಆಶಯವಾಗಿದೆ. ತನ್ನ ಅಸ್ತಿತ್ವವನ್ನೇ ಕಳೆದುಕೊಂಡು ಗಂಡಿನ ಬಲವಿಲ್ಲದೆ ತನಗೆ ಬದುಕಲು ಅಸಾಧ್ಯವೆಂಬ ನಿಲುವನ್ನು ತಳೆಯುವ ಹಾಗೆ ಹೆಣ್ಣನ್ನು ಪುರುಷ ಪ್ರಧಾನ ಸಮಾಜ ಸೃಷ್ಟಿಸಿದೆ.

ವಿವಾಹದ ಮೂಲಕ ಹೆಣ್ಣಿನ ದೇಹದ ಮೇಲೆ ಪುರುಷನು ಲೈಂಗಿಕ ಒಡೆತನವನ್ನು ಸ್ಥಾಪಿಸಿದಾಗ ಹೆಣ್ಣು ತನ್ನ ಸ್ವಂತ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾಳೆ. ಆದರೆ ಈ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷನಿಗೆ ಲೈಂಗಿಕ ಸ್ವಾತಂತ್ರ್ಯವಿದ್ದರೆ ಹೆಣ್ಣಿಗೆ ವಿವಾಹದ ಚೌಕಟ್ಟಿನೊಳಗೆ ಮಾತ್ರ ಲೈಂಗಿಕ ಅವಕಾಶಗಳಿವೆ. ಅದನ್ನು ಹೆಣ್ಣು ಮೀರಿದರೆ ಅಪರಾಧಿಯೆನಿಸಿ ಶಿಕ್ಷೆಗೆ ಗುರಿಯಾಗುತ್ತಾಳೆ. ಪುರುಷರ ಹೆಣ್ಣನ್ನು ವಸ್ತುವಿನಂತೆ ಹೊಂದಿದ, ಪಡೆದ, ಇಟ್ಟುಕೊಂಡಿದ್ದಾನೆ ಎಂದು ಹೇಳಲಾಗುತ್ತದೆ. ಅವಳನ್ನು ಒಂದು ರೀತಿಯ ವೇಶ್ಯೆ ಎನ್ನುವಂತೆ ಚಿತ್ರಿಸಲಾಗುತ್ತದೆ. ಸಿಮಾನ್ ದ ಬೋವಾ ವಿವಾಹಿತ ಹೆಣ್ಣು ಮತ್ತು ವೇಶ್ಯೆಯರನ್ನು ಈ ರೀತಿ ಗುರುತಿಸುತ್ತಾಳೆ, "ಇಬ್ಬರ ನಡುವೆ ಬೆಲೆ ಮತ್ತು ಒಪ್ಪಂದದ ಅವಧಿಯಲ್ಲಿ ವ್ಯತ್ಯಾಸವಿದೆ. ಇಬ್ಬರೂ ಗಂಡಸರಿಗೆ ಲೈಂಗಿಕ ಸೇವೆಯನ್ನು ನೀಡುತ್ತಾರೆ. ಹೆಂಡತಿಯನ್ನು ಇಡೀ ಜೀವನಕ್ಕೆ ನೇಮಕ ಮಾಡಿಕೊಂಡರೆ ವೇಶ್ಯೆಯನ್ನು ಬೇರೆ ಬೇರೆ ಗಂಡಸರು ತಮ್ಮ ಬಯಕೆ ಪೂರೈಕೆಗಾಗಿ ತಾತ್ಕಾಲಿಕವಾಗಿ ನೇಮಿಸಿಕೊಳ್ಳುತ್ತಾರೆ. ಗಂಡ ಹೆಂಡತಿಯನ್ನು ರಕ್ಷಿಸುತ್ತಾನೆ. ವೇಶ್ಯೆಯನ್ನು ಅನೇಕ ಗಂಡಸರು ರಕ್ಷಿಸುತ್ತಾರೆ. ಅವರು ಪಡೆಯುವ ಹಣದ ಮೌಲ್ಯ ಅವರಿಬ್ಬರಿಗೂ ಇರುವ ಬೇಡಿಕೆಯನ್ನು ಅವಲಂಬಿಸಿರುತ್ತದೆ. ಹೆಂಡತಿಯು ಶೋಷಿತಳಾದರೂ ಮಾನವ ಜೀವಿಯಾಗಿ ಅಲ್ಪಸ್ವಲ್ಪ ಗೌರವ ಪಡೆಯುತ್ತಾಳೆ. ವೇಶ್ಯೆಯು ಹಣಗಳಿಕೆಯಿಂದ ಸಂತ್ರಸ್ಥಳಾದರೂ ಗುಲಾಮತನಕ್ಕೆ ಒಳಗಾಗುತ್ತಾಳೆ".[೪]

ಇಲ್ಲಿ ವಿವಾಹವಾದ ಹೆಣ್ಣಿನ ಮೇಲೆ ತನಗೆ ಸಂಪೂರ್ಣವಾದ ಹಕ್ಕು ಇದೆ ಎಂಬಂತೆ ಗಂಡನಾದವನು ತನ್ನ ಹೆಂಡತಿಯು ಮೇಲೆ ಲೈಂಗಿಕ ಅಧಿಕಾರ ಚಲಾಯಿಸುತ್ತಾನೆ. ಅದು ದೌರ್ಜನ್ಯ ಸ್ವರೂಪದ್ದಾದರೂ ಆಗಿರಬಹುದು ಅಥವಾ ಸೌಮ್ಯ ವಿನಯದ ಸ್ವರೂಪದ್ದಾಗಿರಬಹುದು. ಆದರೆ ವೇಶ್ಯೆ ಹೆಣ್ಣಿನ ಮೇಲೆ ಅದೇ ಪುರುಷ ಹಣ ನೀಡಿದ್ದೇನೆ ಎನ್ನುವ ಕಾರಣಕ್ಕೆ ಅಲ್ಲಿಯೂ ಅವಳ ಲೈಂಗಿಕತೆಯ ಮೇಲೆ ಸ್ವಾಮ್ಯವನ್ನು ಸಾಧಿಸುತ್ತಾನೆ.

ಹೆಣ್ಣು ತನ್ನ ಆಸ್ತಿ, ಆಕೆಯ ಮೇಲೆ ಸಂಪೂರ್ಣ ಹಕ್ಕು ತನಗಿದೆ ಎಂಬ ಧೋರಣೆಯಿಂದ ಪುರುಷ ಚಿಂತನೆಗಳ ಮೂಲಕ ನಿರ್ಮಾಣಗೊಳ್ಳುವ ಇಂತಹ ಕಾರ್ಯ ಪ್ರವೃತ್ತಿಗಳು ಅತಿಯನ್ನು ಸೂಚಿಸಿದರೂ ಇದೇ ಸಮಾಜದಿಂದ ಮಾನ್ಯತವಾಗುತ್ತದೆ. ಹೆಣ್ಣು ತನ್ನ ಅಂಕೆಯೊಳಗೆ ಇರುವವಳು, ಆಕೆಯ ಮೇಲೆ ಲೈಂಗಿಕವಾಗಿ ತನಗೆ ಸ್ವಾತಂತ್ರ್ಯವಿದೆ ಎಂಬ ಅತಿರೇಕದಿಂದ ಪುರುಷ ನಡೆಸುವ ದೈಹಿಕ ಸಂಬಂಧಗಳು ಲೈಂಗಿಕ ಶೋಷಣೆಯ ಆಯಾಮವನ್ನು ಪಡೆದುಕೊಳ್ಳುವ ಸಾಧ್ಯತೆಗಳೇ ಹೆಚ್ಚು. ಸ್ತ್ರೀಯನ್ನು ಪುರುಷ ಭೋಗದ ವಸ್ತು ಎಂದು ನೋಡುವಾಗ ಅವಳ ಲೈಂಗಿಕ ಚಟುವಟಿಕೆಗಳಿಗೆ ಅಭಿಪ್ರಾಯಗಳಿಗೆ ಸ್ಥಾನವಿರುವುದಿಲ್ಲ. ಇಲ್ಲಿ ಹೆಣ್ಣು ಯಾವಾಗಲೂ ನಿಷ್ಕ್ರಿಯಳಾಗುತ್ತಾಳೆ. ಹಾಗಾಗಿ ಇಂತಹ ಸಂದರ್ಭಗಳಲ್ಲಿ ಸ್ತ್ರೀಯು ತನ್ನ ಅಸಹಾಯಕತೆಯನ್ನು ಹೇಳಿಕೊಳ್ಳಲಾಗದೆ, ಅದರಿಂದ ಹೊರಬರಲು ಸಾಧ್ಯವಾಗದೆ ಪುರುಷನ ಆದೇಶ, ಇಚ್ಚೆಗೆ ತಕ್ಕಂತೆ ವರ್ತಿಸುವ ವಸ್ತುವಾಗಿ ಪರಿವರ್ತನೆಗೊಂಡಿರುತ್ತಾಳೆ. ಈ ಕಾರಣದಿಂದಾಗಿ ಲೈಂಗಿಕ ಕಳ್ಳಸಾಗಾಣೆಯಾಗುವಲ್ಲಿ ಬಹಳಷ್ಟು ಹೆಣ್ಣುಮಕ್ಕಳು ಈ ರೀತಿಯ ಪ್ರತಿರೋಧವನ್ನು ಮಾಡಲಾಗದೆ ಅಸಹಾಯಕತೆಯಿಂದಲೇ ಆ ಕೃತ್ಯಕ್ಕೆ ಒಳಗಾಗುತ್ತಾರೆ. ಹೆಣ್ಣು ಒತ್ತಾಯಕ್ಕೆ ಮಣಿದು ತನ್ನ ದೇಹವನ್ನು ಸಮರ್ಪಿಸುವುದು ಒಂದು ನೆಲೆಯಾದರೆ ಮೋಸದ ಪ್ರೀತಿಗೆ ಬಲಿಯಾಗಿ ತಮಗೆ ತಿಳಿಯದಂತೆ ತಮ್ಮನ್ನು ಅಪಾಯಕ್ಕೆ ಒಡ್ಡಿಗೊಂಡಿರುತ್ತಾರೆ. ಈ ಎರಡೂ ನೆಲೆಗಳಲ್ಲಿ ಹೆಣ್ಣು ಪುರುಷನ ಲೈಂಗಿಕ ದಾಹವನ್ನು ಮತ್ತು ಅನೈತಿಕ ಕಳ್ಳಸಾಗಣೆಯನ್ನು ಪ್ರತಿರೋಧಿಸಲು ಸಾಧ್ಯವಿಲ್ಲದಂತಹ ಪರಿಸ್ಥಿತಿಯೇ ಹುಟ್ಟಿಕೊಂಡಿರುತ್ತದೆ. ಮತ್ತು ಈ ಎರಡೂ ನೆಲೆಗಳಲ್ಲಿ ಹೆಣ್ಣು ದೇಹದ ಮೇಲಿನ ಗಂಡಿನ ಲೈಂಗಿಕ ಅಧಿಕಾರವು ಚಲಾಯಿತವಾಗುವುದನ್ನು ಸಾಂಸ್ಕೃತಿಕ ಯಾಜಮಾನ್ಯವು ಪೋಷಿಸುತ್ತಾ ಬಂದಿದೆ.

ಸ್ತ್ರೀವಾದ ಚಿಂತಕಿಯಾದ ಸಿಮೋನ್ ದ ಬೋವಾ ತನ್ನ 'ದ ಸೆಕೆಂಡ್ ಸೆಕ್ಸ್' ಪುಸ್ತಕದಲ್ಲಿ "ಇಂದಿಗೂ ಹೆಣ್ಣು ಲೈಂಗಿಕ ಕ್ರಿಯೆಯ ಮೂಲಕ ಗಂಡನಿಗೆ ಸೇವೆ ನೀಡುತ್ತಾಳೆಂದೇ ತಿಳಿಯಲಾಗಿದೆ. ಆ ಸೇವೆಗಾಗಿ ಆತ ಅವಳಿಗೆ ಏನನ್ನಾದರೂ ನೀಡಬೇಕು. ಆ ಸೇವೆಯಿಂದ ಆತ ಸುಖ ಪಡೆಯುತ್ತಾನೆ. ಹೆಣ್ಣಿನ ದೇಹ ಆತ ಕೊಂಡ ವಸ್ತು. ಆಕೆಯ ಪಾಲಿಗೆ ಅವಳೆಂದರೆ ಆತ ಬಳಸಬಲ್ಲ ಬಂಡವಾಳ ಕೆಲವೊಮ್ಮೆ ಅವಳು ಸಂಪತ್ತನ್ನು ತಂದಾಳು"[೫] ಅಂದರೆ ಹೆಣ್ಣನ್ನು ಪುರುಷ ಬಂಡವಾಳ, ವಸ್ತು ಎನ್ನುವಂತೆ ಭಾವಿಸಿದ್ದಾನೆ. ಅವಳನ್ನು ಜೀವನದ ಸಂಗಾತಿ ಎಂದು ಪರಿಗಣಿಸಲು ಸಾಧ್ಯವಾಗದೆ ಇರುವುದಕ್ಕೆ ಪುರುಷ ಪ್ರಧಾನತೆಯು ಕಾರಣವಾಗಿದೆ. ಗಂಡು ಮತ್ತು ಹೆಣ್ಣುಗಳ ಲೈಂಗಿಕ

ಪರಿಸ್ಥಿತಿಯಲ್ಲಿ ವ್ಯತ್ಯಾಸವನ್ನು ಗುರುತಿಸುವುದಾದರೆ ಸಮಾಜವೂ ಸಹ ಒಪ್ಪಿತ ವ್ಯತ್ಯಾಸಗಳೆಂದರೆ, ಲೈಂಗಿಕ ಕ್ರಿಯೆಯಲ್ಲಿ ತೊಡಗುವ ಹೆಣ್ಣು ಗಂಡಸಿಗೆ ಸೇವೆ ಸಲ್ಲಿಸುವ ಒಂದು ಸರಕು ಎಂದು ಇಂದಿಗೂ ಮಾನ್ಯ ಮಾಡಲಾಗಿದೆ. ಆದ್ದರಿಂದ ಹೆಣ್ಣಿನ ದೇಹದ ಮೇಲೆ ಆತ ಯಾಜಮಾನ್ಯವನ್ನು ಸ್ಥಾಪಿಸುತ್ತಾನೆ. ಮತ್ತು ತನಗಿಂತ ಹೆಣ್ಣು ಕೆಳವರ್ಗದವಳು ಮತ್ತು ಕೀಳು, ಶಕ್ತಿ ಹೀನಳು ಎಂದು ಪರಿಗಣಿಸುವುದರಿಂದ ಪುರುಷ ಅವಳನ್ನು ಪಡೆದುಕೊಳ್ಳುವುದಿಲ್ಲ. ಆದರೆ ಹೆಣ್ಣು ತನಗಿಂತ ಸಾಮಾಜಿಕವಾಗಿ ಕೆಳಸ್ತರದಲ್ಲಿರುವ ಗಂಡಸಿಗೆ ತನ್ನನ್ನು ಕೊಟ್ಟುಕೊಂಡರೆ ಅದನ್ನು ಕೀಳಾಗಿ ಮತ್ತು ಹೀನಾಯವಾಗಿ ನೋಡಲಾಗುತ್ತದೆ. ಈ ಎರಡೂ ಸಂದರ್ಭಗಳಲ್ಲಿ ಹೆಣ್ಣಿನ ಒಪ್ಪಿಗೆಯು ಒಂದು ನೆಲೆಯ ಸೋಲೆಂದು ಪರಿಗಣಿತವಾಗುತ್ತದೆ. ತನ್ನ ಗಂಡನಿಗೆ ಮತ್ತೊಂದು ಹೆಣ್ಣಿನ ಸಂಬಂಧ ಇದೆ ಎಂದು ಹೆಂಡತಿ ಸುಮ್ಮನೆ ಒಪ್ಪಿಕೊಳ್ಳುತ್ತಾಳೆ. ಆದರೆ ಯಾವುದೇ ಗಂಡ ತನ್ನ ಹೆಂಡತಿಗೆ ಇನ್ನೊಬ್ಬ ಪುರುಷನ ಸಂಬಂಧವಿದೆ ಎಂದು ಊಹಿಸುವುದು ಮತ್ತು ಒಪ್ಪಿಕೊಳ್ಳುವುದು ಇಲ್ಲ. ಹೆಣ್ಣು ತಾಯಿಯಾಗಿರಲಿ ಹೆಂಡತಿ, ಮಗಳು ಯಾರೇ ಆಗಿರಲಿ ತನ್ನ ಅಧೀನದಲ್ಲಿರಬೇಕು ಎನ್ನುವುದು ಮತ್ತು ಪುರುಷ ಪ್ರಧಾನತೆಯ ಚೌಕಟ್ಟಿನಲ್ಲಿ ಹೀಗೆ ಇರಬೇಕು ಎಂದು ಸಾಂಸ್ಕೃತಿಕ ಯಾಜಮಾನ್ಯವು ಬಯಸುತ್ತದೆ.

ದಾಂಪತ್ಯದ ಚೌಕಟ್ಟಿಗೆ ಹೆಣ್ಣನ್ನು ಒಳಪಡಿಸಿ ಕ್ರಮೇಣ ಅವಳನ್ನು ಎಲ್ಲಾ ವಿಷಯಗಳಲ್ಲಿಯೂ ನಿರ್ಬಂಧಿಸಿ ತನ್ನ ಅಧೀನಗೊಳಿಸುವ ಮೂಲಕ ಅಂಥ ಸ್ಥಿತಿಯನ್ನು ಅವಳು ಒಪ್ಪಿಕೊಂಡು ಮುಂದುರೆಯುವಂತೆ ಪುರುಷನು ಹುನ್ನಾರಗಳನ್ನು ಮಾಡುತ್ತಿರುತ್ತಾನೆ. ಅವಳ ದೇಹವನ್ನು ಲೈಂಗಿಕತೆಗೆ ಬಳಸುವುದರಿಂದ ಮತ್ತು ಪುರುಷರಲ್ಲಿ ಇರುವ ಅತಿಯಾದ ಲೈಂಗಿಕ ಆಸಕ್ತಿಯು ಬಹುಪತ್ನಿತ್ವಕ್ಕೆ ಪ್ರೇರಣೆ ನೀಡುತ್ತದೆ. ಮತ್ತು ವೇಶ್ಯೆಯ ಬಳಿ ಹೋಗುವಂತೆ ಪ್ರಚೋದನೆ ಮಾಡುತ್ತದೆ. ನಿತ್ಯ ಬಸಿರು, ಬಾಣಂತನ, ಮುಟ್ಟುಗಳಿಂದ ಹೆಣ್ಣಿಗೆ ಆಗಾಗ ಎದುರಾಗುವ ದೈಹಿಕ ಮಾನಸಿಕ ಪರಿಸ್ಥಿತಿಯಿಂದಾಗಿ ಲೈಂಗಿಕ ಆಸಕ್ತಿಯು ಕಡಿಮೆಯಾಗುತ್ತದೆ. ಆಕೆ ಎಲ್ಲಾ ಸಂದರ್ಭಗಳಲ್ಲಿ ಪುರುಷನ ಬಯಕೆಯನ್ನು ತೀರಿಸುವ ಪರಿಸ್ಥಿತಿಯಲ್ಲಿ ಇರುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಪುರುಷನು ಮರುಮದುವೆ ಅಥವಾ ಮತ್ತೊಂದು ಸಂಬಂಧದ ಕಡೆ ಮುಖ ಮಾಡಿ ಆ ಮೂಲಕ ತನ್ನ ದೈಹಿಕ ಕಾಮನೆಗಳನ್ನು ತೀರಿಸಿಕೊಳ್ಳುತ್ತಾನೆ.

ಕೌಟುಂಬಿಕ ನೆಲೆಯೊಳಗೆ ಹೆಣ್ಣನ್ನು ಬಂಧಿಸಿಡುವ ಪುರುಷ ಪ್ರಧಾನ ಸಮಾಜದಲ್ಲಿ ಕೆಲವೊಮ್ಮೆ ಹೆಣ್ಣು ಅನಿವಾರ್ಯ ಸಂದರ್ಭಗಳಿಗೆ ಒಳಗಾಗಿ ಸಾಮಾಜಿಕ ರಂಗಕ್ಕೆ ಆರ್ಥಿಕ ದುಡಿಮೆಗಾಗಿ ಇಳಿಯಬೇಕಾಗುತ್ತದೆ. ಆದರೆ ಅಂತಹ ಸಂದರ್ಭಗಳಲ್ಲಿ ಸಾಮಾಜಿಕ ನೆಲೆಯನ್ನು ಪ್ರವೇಶಿಸಿದಾಗ ಗಂಡಿನ ಕಾಮುಕತೆಗೆ ಬಲಿಯಾಗುವ ಸಂದರ್ಭಗಳೇ ಹೆಚ್ಚು. ಹೆಣ್ಣು ಎಷ್ಟೇ ಓದಿ ವಿದ್ಯಾವಂತಳಾದರೂ ಸಹ ದುಡಿಯುವ ವಲಯದಲ್ಲಿ ಮಾನಸಿಕ ಮತ್ತು ದೈಹಿಕ ಕಿರುಕುಳವನ್ನು ಪುರುಷರಿಂದ ಅನುಭವಿಸುತ್ತಾಳೆ. ಯಾವ ನೈತಿಕ ನೆಲೆಯಲ್ಲಿ ಹೆಣ್ಣು ಇರಬೇಕೆಂದು ಸಮಾಜ

ಭಾವಿಸುತ್ತದೋ ಅದೇ ನೈತಿಕ ನೆಲೆಯಲ್ಲಿಯೇ ಅಸಹಾಯಕ ಹೆಣ್ಣಿನ ಬದುಕನ್ನು ನುಚ್ಚು ನೂರುಗೊಳಿಸುವಲ್ಲಿ ಸಮಾಜದ ದುರಂತವಿದೆ. ಇದಷ್ಟೇ ಅಲ್ಲದೆ ಹೆಣ್ಣು ಜೀವಂತವಿದ್ದಾಗ ಮಾತ್ರ ಅವಳ ದೇಹವನ್ನೂ ಪುರುಷ ಬಳಸುವುದಷ್ಟೇ ಅಲ್ಲ. ಹೆಣ್ಣು ಹೆಣಗಳೊಡನೆ ಸಂಭೋಗ ನಡೆಸುವ ವಿಕೃತ ಮನಸ್ಸಿನವರು ಸಹ ಈ ಪ್ರಪಂಚದಲ್ಲಿದ್ದಾರೆ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ದೇಹ ಎಂಬುದು ಮರಣಾ ನಂತರವೂ ಪುರುಷನ ವಿಕೃತ ಮನಸ್ಸಿಗೆ ಸುಂದರವಾಗಿ ಕಾಣುತ್ತದೆ ಎಂಬ ವಿಚಾರವು ಪುರುಷನ ಅತಿ ಕಾಮುಕತೆಯನ್ನು ಋಜುವಾತು ಮಾಡುತ್ತದೆ.

ಗಂಡು ಪ್ರಧಾನ ಹೆಣ್ಣು ಅಧೀನ ಎಂಬಂತಹ ಚಿಂತನೆಗಳಲ್ಲಿ ಆಳುವ ಮತ್ತು ಆಳಿಸಿಕೊಳ್ಳುವ ಸಂಬಂಧವೇ ಮುಖ್ಯವಾಗುತ್ತದೆ. ಕೌಟುಂಬಿಕ ನೆಲೆಯಲ್ಲಾಗಲೀ, ಸಾಮಾಜಿಕ ನೆಲೆಯಾಗಲೀ ಆಳುವ ವರ್ಗದ ಹಿತಾಸಕ್ತಿಗಳು, ಚಿಂತನೆಗಳು, ಧೋರಣೆಗಳು ಈ ಸಂದರ್ಭದಲ್ಲಿ ಸಹಜವಾಗಿಯೇ ಅಧೀನವರ್ಗದ ಮೇಲೆ ಹೇರಿಕೆಯಾಗುತ್ತದೆ. ಅಧೀನ ಸ್ಥಾನದಲ್ಲಿರುವ ಹೆಣ್ಣು ಇಂತಹ ಯಾಜಮಾನ್ಯಗಳಿಗೆ ಮುಖಾಮುಖಿಯಾಗುತ್ತಾಳೆ.

### ೩.೨ ಹೆಣ್ಣಿನ ದೇಹ ಮತ್ತು ಲಿಂಗತಾರತಮ್ಯ

ಶ್ರೇಣೀಕೃತವಾದ ಸಮಾಜದಲ್ಲಿ ಅನೇಕ ರೀತಿಯ ಅಸಮಾನತೆಗಳು ಮತ್ತು ಭೇದಗಳಿವೆ. ವರ್ಗ, ವರ್ಣ, ಜಾತಿ, ಜನಾಂಗ, ಲಿಂಗ ಇಂತಹ ಅನೇಕ ಸಂಗತಿಗಳು ಸಾಮಾಜಿಕವಾಗಿ ಭೇದವನ್ನು ಸೃಷ್ಟಿಸಿವೆ. ಗಂಡು–ಹೆಣ್ಣಿನ ನಡುವೆ ಲಿಂಗಾಧಾರಿತ ಭೇದವು ಲಿಂಗತಾರತಮ್ಯದ ಅಸಮಾನತೆಯನ್ನು ಹುಟ್ಟುಹಾಕಿದೆ. ಪುರುಷ ಪ್ರಧಾನವಾದ ಸಮಾಜದಲ್ಲಿ ಹೆಚ್ಚಿನ ಸಂದರ್ಭಗಳಲ್ಲಿ ಪುರುಷನಿಗೆ ಅನುಕೂಲವಾಗುವಂತಹ ನಿಲುವುಗಳೇ ಕಾರ್ಯರೂಪಕ್ಕೆ ಬರುತ್ತವೆ. ಜೈವಿಕತೆಯ ಆಧಾರದಿಂದ ತಾರತಮ್ಯವನ್ನೂ ಬೆಳೆಸಿಕೊಂಡು ಬಂದಿರುವ ಪಿತೃಪ್ರಧಾನ ವ್ಯವಸ್ಥೆಯು ಹೆಣ್ಣನ್ನು ಅನೇಕ ರೀತಿಯಲ್ಲಿ ನಿಯಂತ್ರಿಸುತ್ತದೆ. ಇದರಲ್ಲಿ ಪ್ರಮುಖವಾದುದು ಲೈಂಗಿಕತೆ ಪಿತೃಪ್ರಧಾನ ವ್ಯವಸ್ಥೆಯು ಹೆಣ್ಣಿನ ಲೈಂಗಿಕತೆಯನ್ನು ಶತಮಾನಗಳಿಂದ ಹತೋಟಿಯಲ್ಲಿಟ್ಟುಕೊಂಡೇ ಬಂದಿದೆ. ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಹಿಡಿತ ಸಾಧಿಸಿದ ಪುರುಷವರ್ಗದ ಮೌಲ್ಯಗಳೇ ಒಟ್ಟು ಸಾಮಾಜಿಕ ಸಾಂಸ್ಕೃತಿಕ ಮೌಲ್ಯಗಳಾಗಿವೆ. ಅವುಗಳೇ ಹೆಣ್ಣನ್ನು ಅರ್ಥೈಸಿವೆ. ಲಿಂಗಾಧಾರಿತ ವ್ಯವಸ್ಥೆಯ ಮೇಲ್ವರ್ಗದಲ್ಲಿ ಪುರುಷ ತನ್ನ ಆಶಯಗಳಿಗೆ ತಕ್ಕಂತೆ ಹೆಣ್ಣನ್ನು ಕೆಳವರ್ಗದಲ್ಲಿ ನಿರ್ಮಿಸಿದೆ. "ಸಿಮೊನ್ ದ ಬುವಾ ಹೇಳುವಂತೆ ಸ್ತ್ರೀಯು ಮೂಲತಃ ರೂಪಿಸಲ್ಪಟ್ಟವಳು ಹೆಣ್ಣು ನಿರ್ದಿಷ್ಟ ಸಾಮಾಜಿಕ ಪ್ರಕ್ರಿಯೆಗಳಿಂದ ಆಗುತ್ತಾಳೆಯೇ ವಿನಾ ಯಾರೂ ಹೆಣ್ಣಾಗಿಯೇ ಹುಟ್ಟುವುದಿಲ್ಲ"[೬]. ಹೆಣ್ಣು–ಗಂಡು ಹೇಗಿರಬೇಕು ಎಂಬ ಯೋಚನೆಗಳು, ನಿಯಮಗಳು, ಪುರುಷ ನಿರ್ಧಾರಿತವಾಗಿಯೇ ಇರುತ್ತದೆ. ಲಿಂಗ ತಾರಮ್ಯವನ್ನು ನಿರ್ದಿಷ್ಟ ಹಂತದ ಮೇಲೆ ಗ್ರಹಿಸುವುದಕ್ಕಿಂತ ಪ್ರಮುಖವಾಗಿ ಜೈವಿಕತೆ, ಲೈಂಗಿಕತೆ, ಉತ್ಪಾದನಾ ವ್ಯವಸ್ಥೆ, ಸಾಮಾಜೀಕರಣ, ಪಿತೃಪ್ರಧಾನ ಹಾಗೂ ಬಂಡವಾಳಶಾಹಿ ವ್ಯವಸ್ಥೆ ಮುಂತಾದವುಗಳೊಂದಿಗೆ ಒಟ್ಟಾಗಿಯೇ ಗ್ರಹಿಸಬೇಕಾಗುತ್ತದೆ.

ಜೀವ ಜಗತ್ತಿನಲ್ಲಿ ಏಕಕೋಶ ಜೀವಿಗಳನ್ನು ಹೊರತುಪಡಿಸಿ ಉಳಿದೆಲ್ಲ ಜೀವಿಗಳಲ್ಲೂ ಹೆಣ್ಣು ಗಂಡು ಎಂಬ ಪ್ರಭೇದಗಳಿವೆ. ಪ್ರಾಣಿ ಪಕ್ಷಿ ಕೀಟಗಳಲ್ಲದೆ ಸಸ್ಯಗಳಲ್ಲಿಯೂ ಗಂಡು ಹೂ, ಹೆಣ್ಣು ಹೂಗಳಿರುವುದನ್ನು ಕಾಣುತ್ತೇನೆ. ಜಗತ್ತು ಈ ಎರಡರ ಪರಸ್ಪರ ಸಾಮರಸ್ಯದಲ್ಲಿ ಮುನ್ನಡೆಯುತ್ತಿದೆ. ಗಂಡು ಹೆಣ್ಣು ಎರಡೂ ಪೂರಕ ಅಂಶಗಳು ಇದಕ್ಕೆ ಮಾನವ ಜಗತ್ತು ಹೊರತಾದುದಲ್ಲ, ಆದರೆ ಮಾನವ ಸಮಾಜದಲ್ಲಿ ಲಿಂಗ ಅಸಮಾನತೆ ರೂಢಿಯಲ್ಲಿದೆ. ಮನುಷ್ಯ ಉಳಿದೆಲ್ಲ ಪ್ರಾಣಿಗಳಿಗಿಂತ ಭಿನ್ನವಾಗಿ ಪ್ರತ್ಯೇಕವಾಗಿ ಉಳಿಯಲು ಕಾರಣವೆಂದರೆ ಆಲೋಚನಾ ಶಕ್ತಿ, ಭಾಷೆ, ಸಂಸ್ಕೃತಿ ಮುಂತಾದವು ಇವು ಇತರ ಪ್ರಾಣಿವರ್ಗದಿಂದ ಮಾನವನನ್ನು ಬೇರ್ಪಡಿಸಿವೆ. ಆದರೆ ದೈಹಿಕ ರಚನೆಯಲ್ಲಿ ಪುರುಷನಿಗಿಂತ ಭಿನ್ನವಾದ ಹೆಣ್ಣನ್ನು ಜಡವಸ್ತುಗಳೊಂದಿಗೆ ಸೇರಿಸಿ ಇದೆಲ್ಲದರ ಒಡೆಯ ತಾನೇ ಎನ್ನುಂತೆ ಪುರುಷ ವರ್ತಿಸುತ್ತಿದ್ದಾನೆ. “ಭಾರತೀಯ ತತ್ವಶಾಸ್ತ್ರದಲ್ಲಿ ಹೊನ್ನು, ಹೆಣ್ಣು, ಮಣ್ಣು ಎಂಬುದೊಂದು ಸಾಮೀಕರಣ. ಈ ಮೂರೂ ಸಾಧಕನ ಸಾಧನೆಗೆ ಅಡ್ಡಿಯಾಗುವ ಅಂಶಗಳು ಎಂದೇ ಬಿಂಬಿಸಲಾಗುತ್ತದೆ. ಪುರುಷರ ಮನಸ್ಸನ್ನು ಚಂಚಲಗೊಳಿಸುವ ಮತ್ತು ತಪ್ಪಸ್ಸನ್ನು ಕೆಡಿಸುವ ಕಾರಣವೆಂದು ಭಾವಿಸಲಾಗುತ್ತದೆ. ಹೀಗೆ ಸ್ತ್ರೀಯನ್ನು ಪುರುಷನಿಗಿಂತ ಕಡಿಮೆ ದರ್ಜೆಯವಳೆಂದೇ ಗುರುತಿಸಲಾಗುತ್ತದೆ”[೨].

ಮಾನವ ಸಮಾಜದಲ್ಲಿ ಲಿಂಗತಾರತಮ್ಯ ಯಾವ ಕಾಲದಿಂದ ಜಾರಿಗೆ ಅಥವಾ ರೂಢಿಗೆ ಬಂದಿದೆಯೋ ನಿಖರವಾಗಿ ಹೇಳಲಾಗದು. ಮಾರ್ಕ್ಸ್‌ನ ಪ್ರಕಾರ ಕುಟುಂಬ ರಚನೆಯೇ ಲಿಂಗತಾರತಮ್ಯ ನೀತಿಗೆ ಮೂಲವೆಂದು ಹೇಳಬಹುದು. ಇಂದು ಈ ತಾರತಮ್ಯ ನೀತಿ ಸಮಾಜದ ಎಲ್ಲರಲ್ಲೂ ರಕ್ತಗತವಾಗಿದೆ. ಈ ವ್ಯವಸ್ಥೆಯನ್ನು ಪ್ರಶ್ನಾತೀತವಾಗಿ ಒಪ್ಪಿಕೊಂಡಿದ್ದೆವಾದರೂ ಇತ್ತೀಚಿನ ದಿನಗಳಲ್ಲಿ ಸ್ತ್ರೀವಾದವು ಪ್ರಶ್ನಿಸಲು ಪ್ರಾರಂಭಿಸಿದೆ. ಲಿಂಗತಾರತಮ್ಯದ ಹೆಣ್ಣಿನ ದಾಸ್ಯದ ಇತಿಹಾಸ ಆರಂಭ ಹಾಗೂ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಉಗಮವನ್ನು ಎಂಗೆಲ್ಸ್ ಖಾಸಗಿ ಆಸ್ತಿಯ ಪರಿಕಲ್ಪನೆಯಲ್ಲಿ ಗುರುತಿಸುತ್ತಾರೆ. ಖಾಸಗಿ ಸಂಪತ್ತಿನ ಕಲ್ಪನೆಗೆ ಮೊದಲು ಆಸ್ತಿಯ ಒಡೆತನವು ಸಮಷ್ಟಿಗೆ ಸೇರಿದ್ದು ಸ್ತ್ರೀ ಪುರುಷರಿಬ್ಬರಿಗೂ ಸಮಾನ ಸ್ಥಾನವಿತ್ತು. ಮನೆ ಹೊರಗಿನ ಗಂಡಿನ ಬೇಟೆಯ ಕೆಲಸದಷ್ಟೇ ಮನೆಯೊಳಗಿನ ಹೆಣ್ಣಿನ ಕೆಲಸಕ್ಕೂ ಗೌರವವಿತ್ತು. ಖಾಸಗಿ ಆಸ್ತಿಯ ಕಲ್ಪನೆಯೊಂದಿಗೆ ಚರಾಚರ ಸಂಪತ್ತು ಗಂಡಿನ ಅಧಿಕಾರಕ್ಕೆ ಒಳಪಟ್ಟಿತು. ಭೂಮಿಯನ್ನು ಖಾಸಗಿ ಆಸ್ತಿಯಾಗಿಸಿಕೊಳ್ಳುವ ಪ್ರಕ್ರಿಯೆಗಳು ಸಹಜವಾಗಿಯೇ ಯಜಮಾನಿಕೆ, ಗುಲಾಮಗಿರಿಗಳ ಹುಟ್ಟಿಗೂ ಕಾರಣವಾಯಿತು. ವರ್ಗದ ನೆಲೆಯಲ್ಲಿ ಸಬಲ ಗಂಡಸು ಯಜಮಾನನಾಗಿ ದುರ್ಬಲ ಗಂಡಸು ಗುಲಾಮನಾಗಿ ಕಾಣಿಸಿಕೊಳ್ಳಬಹುದಾದರೆ, ಲಿಂಗದ ನೆಲೆಯಲ್ಲಿ ಸ್ತ್ರೀ ಪುರುಷರು ಅಸಮಾನ ನೆಲೆಗಳಾಗಿ ಕಂಡುಬರುತ್ತಾರೆ. ಸ್ತ್ರೀ ಮನೆಯೊಳಗಿನ ಕೆಲಸ ಅನುತ್ಪಾದಕವೆನಿಸಿ ಆಕೆ ದಾಸ್ಯಕ್ಕೆ ಒಳಗಾದಳು. ಆವರೆಗೆ ಹೆಣ್ಣಿನ ಮೂಲಕ ಹರಿದುಬರುತ್ತಿದ್ದ ವಂಶ ಹಾಗೂ ಉತ್ತರಾಧಿಕಾರವನ್ನು ಪಿತೃ ಅಧಿಕಾರಕ್ಕೆ ವರ್ಗಾಯಿಸಲಾಯಿತು.

ಹೆಣ್ಣು ಮತ್ತು ಗಂಡು ಬೇರೆ ಬೇರೆ ಲಿಂಗಕ್ಕೆ ಸೇರಿದವರೆಂಬ ಜೈವಿಕ ಸಂಗತಿಯನ್ನಾಧರಿಸಿ ಲಿಂಗತಾರತಮ್ಯ ಹುಟ್ಟಿಕೊಂಡಿದೆ. ಜೈವಿಕ ಮೂಲ ಸಿದ್ಧಾಂತವು ಗಂಡಿನ ಜೈವಿಕ ರಚನೆಗಳು ಅವನ ಗಂಡುತನವನ್ನು ಸೃಷ್ಟಿಸುತ್ತವೆ ಮತ್ತು ಹೆಣ್ಣಿನ ಜೈವಿಕ ರಚನೆಗಳು ಹೆಣ್ಣುತನವನ್ನು ಸೃಷ್ಟಿಸುತ್ತವೆ. ಹಾಗೂ ಗಂಡುತನವು ಹೆಣ್ಣು ತನಗಿಂತ ಶ್ರೇಷ್ಠವಾದುದು ಎಂದು ಅಸಮಾನತೆಯಲ್ಲಿರುವ ಶ್ರೇಷ್ಠ-ಕನಿಷ್ಠ, ಪ್ರಧಾನ - ಅಧೀನ ಎಂಬ ತಾರತಮ್ಯದ ಭಾವನೆಗಳು ನಂಬುವಂತೆ ಒತ್ತಾಯಿಸುತ್ತವೆ. ಈ ಅಂಶಗಳಿಂದಲೇ ರಾಜಕೀಯ, ಸಾಮಾಜಿಕ, ಆರ್ಥಿಕ ನೆಲೆಗಳಲ್ಲಿ ಹೆಣ್ಣನ್ನು ಅಸಮಾನ ನೆಲೆಯಲ್ಲಿ ಪುರುಷ ಪ್ರಧಾನ ವ್ಯವಸ್ಥೆಯು ನಿಲ್ಲಿಸುತ್ತದೆ. ಇದನ್ನು ದೃಢಗೊಳಿಸಲು ಹೆಣ್ಣಿನ ಮೇಲೆ ಅನೇಕ ಮೌಲ್ಯಗಳನ್ನು ಸ್ವಭಾವಗಳನ್ನು ವ್ಯವಸ್ಥೆಯು ಹೇರುತ್ತದೆ. "ಜೈವಿಕ ಸಾಕ್ಷ್ಯ, ಹೆಣ್ಣನ್ನು ಗಂಡಿಗಿಂತ ಭಿನ್ನಳೆಂದು ಸ್ಥಾಪಿಸುತ್ತದೆಯೇ ಹೊರತು ಕೀಳೆಂದಲ್ಲ. ಜೈವಿಕ ಸಂಗತಿಗಳಿಗೆ ಒಂದು ಮೌಲ್ಯ ಬರುವುದು ಸಾಮಾಜಿಕ ಕಟ್ಟುಕಟ್ಟಳೆಗಳಿಂದ, ವಿಧಿ ನಿಷೇಧಗಳಿಂದ ಎಂಬ ಸಿ.ಎನ್.ರಾಮಚಂದ್ರನ್ ಅವರ ಮಾತುಗಳು ವಾಸ್ತವಕ್ಕೆ ಹತ್ತಿರವಾಗುತ್ತದೆ. ಆದುದರಿಂದ ಜೈವಿಕ ಸಹಜವೆಂದು ನಂಬಿಕೊಂಡು ಬಂದಿರುವ ಅನೇಕ ಸಂಗತಿಗಳು ಸಾಮಾಜಿಕ/ಸಾಂಸ್ಕೃತಿಕ ನಿರ್ಮಾಣಗಳಾಗಿವೆ".[೮]

ಜೈವಿಕ ರಚನೆಯಲ್ಲಿ ಹೆಣ್ಣು ಭಿನ್ನ ರಚನೆಯಾದರೂ ಸಹ ಸಾಮಾಜಿಕವಾಗಿ ಹೆಣ್ಣುತನವು ಲಿಂಗಾಧಾರಿತ ಸಂರಚನೆ ಎಂಬುದನ್ನು ಸಿಮಾನ್ ದ ಬೋವಾ ಸೈದ್ಧಾಂತೀಕರಿಸಿದ್ದಾಳೆ. ಕುಟುಂಬವು ಹೆಣ್ಣಿನ ಪಾತ್ರ ಸ್ವರೂಪವನ್ನು ಪಿತೃಪ್ರಧಾನ ವ್ಯವಸ್ಥೆಯ ನೀತಿ ನಿರೂಪಣೆಗಳಿಗೆ ಅನುಗುಣವಾಗಿ ನಿರೂಪಿಸುತ್ತಾ ಬಂದಿದೆ. ಗಂಡ ತಂದೆ, ಮಕ್ಕಳ ಪಾಲನೆ ಹೆಣ್ಣಿನ ಬದುಕಾಗಿದೆ. ಕುಟುಂಬದಲ್ಲಿ ಯಜಮಾನನ ನಿಯತಿಯಂತೆ ಲಿಂಗಾಧಾರಿತ ಸಾಮಾಜೀಕರಣವನ್ನು ನಡೆಸಿಕೊಂಡು ಬರಲಾಗಿದೆ. ಆಹಾರ, ಉಡುಗೆ, ತೊಡುಗೆ, ಗುಣ-ಸ್ವಭಾವಗಳ ಕಲಿಕೆ, ಜವಾಬ್ದಾರಿಗಳ ಹಂಚಿಕೆ, ಶ್ರಮದ ವರ್ಗೀಕರಣ, ಸಂತಾನ ಚಟುವಟಿಕೆ ಮುಂತಾದ ಪ್ರಮುಖ ಪ್ರಕ್ರಿಯೆಗಳು ಸಾಮಾಜೀಕರಣದ ಮೂಲಕವೇ ನಡೆಯುತ್ತದೆ. ಇಲ್ಲಿ ಎಲ್ಲಾ ನಿರ್ದೇಶನ ತತ್ವದ ಹೊಣೆಯ ಯಜಮಾನಿಕೆ ಪುರುಷನದಾಗಿರುತ್ತದೆ.

ಲಿಂಗ ಒಂದು ಜೈವಿಕ ಪದ ಆದರೆ ಪ್ರಾಕೃತಿಕವಾಗಿ ಸಹಜವಾದುದನ್ನು ಬದಲಾಯಿಸಲು ಸಾಧ್ಯವಿಲ್ಲ. ಕೆಲವು ವಿಷಯಗಳಲ್ಲಿ ಗಂಡಸರು ವಿಶೇಷ ಶಕ್ತಿ ಅಥವಾ ದುರ್ಬಲತೆಯನ್ನು ಹೊಂದಿದ್ದಾರೆ. ಇನ್ನೂ ಕೆಲವು ವಿಷಯಗಳಲ್ಲಿ ಹೆಣ್ಣು ತನ್ನ ಮಿತಿಗಳನ್ನು ಹೊಂದಿದ್ದಾಳೆ. ಆದರೆ ಅದನ್ನೇ ಶ್ರೇಣೀಕೃತಗೊಳಿಸಿ ಗಂಡು ಮೇಲು ಹೆಣ್ಣು ಕೀಳು ಎಂಬುದಾಗಿ ನೋಡಲಾಗುತ್ತಿದೆ. ಇಂತಹ ವ್ಯವಸ್ಥೆ ಪಿತೃ ಕೇಂದ್ರಿತವಾಗಿದ್ದು ಅದು ಕೌಟುಂಬಿಕ ಹಂತದಿಂದ ಸಾಮಾಜಿಕ ನೆಲೆಯವರೆಗೆ ಪುರುಷ ಪರವಾದ ಮೌಲ್ಯ ಮತ್ತು ವಿಧೇಯಕಗಳನ್ನು ಕಾಪಾಡಿಕೊಂಡು ಬರುತ್ತಿದೆ. ಇದನ್ನು ಪುರುಷ ತನ್ನ ಅಧಿಕಾರ ನೆಲೆಯಿಂದ ಹಾಗೂ ಹೆಣ್ಣು ಅಸಹಾಯಕ ಅಧೀನ ನೆಲೆಯಿಂದ

ಪೋಷಿಸಿಕೊಂಡು ಬಂದಿದ್ದಾರೆ. ಮೊಟ್ಟಮೊದಲಿಗೆ ಹೆಣ್ಣಿನ 'ಕನ್ಯತ್ವ' ಹಾಗೂ 'ಪಾತಿವ್ರತ್ಯಕ್ಕೆ' ಹೆಚ್ಚಿನ ಆದ್ಯತೆ ನೀಡಿ ಹೆಣ್ಣನ್ನು ಗೃಹ ಬಂಧಿಯಾಗಿಸಲಾಯಿತು. ಶ್ರಮ ವಿಭಜನೆಯ ಮೂಲಕ ಮನೆಯೊಳಗೆ 'ಅವಳು', ಮನೆಯಾಚೆ 'ಅವನು' ಎಂದಾಯಿತು. ಹೆಣ್ಣು ಮಕ್ಕಳನ್ನು ಮನೆಗೆಲಸದಲ್ಲಿ ತೊಡಗಿಸುವುದು. ಅಡುಗೆ ಕಲಿಸುವುದು, ಮಕ್ಕಳ ಪಾಲನೆಯಲ್ಲಿ ತೊಡಗಿಸುವುದು, ಅವರು ಸ್ವತಂತ್ರವಾಗಿ ಜೀವನ ನಿರ್ವಹಿಸಲು ಅವರಿಗೆ ಯಾವುದೇ ಬಗೆಯ ತಯಾರಿಯನ್ನು ನೀಡದಿರುವುದು ಈ ಬಗೆಯ ಪಾತ್ರ ಹಂಚಿಕೆಯನ್ನು ಮಾಡಲಾಗುತ್ತದೆ. ಆದರೆ ಗಂಡು ಮಕ್ಕಳನ್ನು ಅವರು ಚಿಕ್ಕವರಿರುವಾಗಲೇ ಅವರು ಸ್ವಾತಂತ್ರ ವ್ಯಕ್ತಿಗಳೆಂಬಂತೆ ನಡೆಸಿಕೊಳ್ಳುವುದು ಅವರಿಗೆ ಮನೆ ಹೊರಗಿನ ಕೆಲಸಗಳನ್ನು ಹಚ್ಚುವುದು ಲಿಂಗತಾರತಮ್ಯವಾಗಿದೆ. ಹೆಣ್ಣು ಮನೆಯ ಹೊರಗೆ ದುಡಿದರೂ ಸಹ ಮನೆ ಒಳಗಿನ ಕೆಲಸ ಮಾತ್ರ ಅವಳಿಗಾಗಿಯೇ ಮೀಸಲು. ಹೆಣ್ಣು ಮಕ್ಕಳಿಗೆ ಹೆಣ್ಣೆಂಬ ಕಾರಣಕ್ಕಾಗಿ ಶಿಕ್ಷಣವನ್ನು ನಿರಾಕರಿಸಲಾಗುತ್ತದೆ. ಹೆಣ್ಣಿಗೆ ಕಡಿಮೆ ಆಹಾರ ನೀಡುವುದು ಹಾಗೂ ಕುಟುಂಬದ ಪುರುಷರ ಸದಸ್ಯರ ಭೋಜನದ ನಂತರ ಹೆಣ್ಣಿಗೆ ಭೋಜನದ ಅವಕಾಶ. ಹೆಣ್ಣು ಮಗು ಇತರರ ಮನೆ ಸೇರುವವಳು, ಅವಳ ದುಡಿಮೆಯ ಫಲ ಆಕೆಯ ಪತಿ ಕುಟುಂಬಕ್ಕೆ. ಆದರೆ ಮಗ ವಂಶೋಧ್ಧಾರಕ, ಭವಿಷ್ಯದಲ್ಲಿ ಕುಟುಂಬಕ್ಕೆ ಆಧಾರ ಎಂದು ಹೆಣ್ಣು ಗಂಡಿನ ನಡುವೆ ತಾರತಮ್ಯ ಮಾಡಲಾಗುತ್ತದೆ. "ಮಾನವ ಜೀವನದಲ್ಲಿ ಅಭಿವೃದ್ಧಿಯನ್ನು ಸಾಧಿಸಲು ಉತ್ತಮ ಗುಣಮಟ್ಟದ ಆಹಾರ, ಶಿಕ್ಷಣ, ಚಲನೆಗೆ ಅವಕಾಶ, ದೌರ್ಜನ್ಯದಿಂದ ಬಿಡುಗಡೆ ಇವೆ ಮುಂತಾದ ಅನುಕೂಲಗಳು ಲಭ್ಯವಿರಬೇಕು. ಆದರೆ ಹೆಣ್ಣೆಂಬ ಕಾರಣಕ್ಕಾಗಿ ಈ ಅನುಕೂಲಗಳನ್ನು ಅನೇಕ ಮಹಿಳೆಯರು ಹೆಣ್ಣು ಮಕ್ಕಳು ಪಡೆದಿರುವುದಿಲ್ಲ".[೯]

ಸಮಾಜದಲ್ಲಿ ಹೆಜ್ಜೆ ಹೆಜ್ಜೆಗೂ ನೀನು ಹೆಣ್ಣು. ಈ ಮನೆಯಿಂದ ಹೊರಗೆ ಹೋಗುವವಳು ನಿನ್ನಿಂದ ಪ್ರಯೋಜನವಿಲ್ಲ ಎಂದು ಎಲ್ಲದರಿಂದಲೂ ಅವಳಿಗೆ ವಂಚಿಸಿ ಮೋಸ ಮಾಡಲಾಗುತ್ತಿದೆ. ಇದರ ಜೊತೆಗೆ ಹೆಣ್ಣಿನ ದೇಹವನ್ನು ಅವಳ ಶೋಷಣೆಗೆ ಬಳಸಲಾಗುತ್ತಿದೆ. ಶತಮಾನಗಳಿಂದಲೂ ಆಕೆ ದೈಹಿಕವಾಗಿ ದುರ್ಬಲಳು ಎಂಬ ನೆರವನ್ನು ಮುಂದಿಟ್ಟು ಆಕೆಯ ದೇಹವನ್ನು ಹಿಂಸೆ ಮತ್ತು ಕ್ರೌರ್ಯಗಳಿಗೆ ವಸ್ತುವನ್ನಾಗಿ ಮಾಡಿ ಅವಳ ಮೇಲೆ ಪ್ರಭುತ್ವವನ್ನು ಸಾಧಿಸಲಾಗುತ್ತಿದೆ.

ಪುರುಷನಿಗೆ ಹೆಣ್ಣಿನ ದೇಹ ಮತ್ತು ಮನಸ್ಸುಗಳೆರಡರ ಮೇಲೂ ಅಧಿಕಾರವಿದೆ ಎಂಬ ನಂಬಿಕೆ ಇರುವುದರಿಂದ ಹೆಣ್ಣನ್ನು ದಮನ ಮಾಡಲು ಮೊದಲು ಗೋಚರಿಸುವುದು ಅವಳ ದೇಹ. ಸಮಾಜವೂ ಸಹ ಲೈಂಗಿಕತೆಯನ್ನು ಒಂದು ಅಸ್ತ್ರವಾಗಿ ಬಳಸುತ್ತದೆ. ಬಲವಂತದಿಂದ ಅತ್ಯಾಚಾರ, ಅಪಹರಣಗಳಿಗೆ ಪುರುಷ ಶಿಶುಗಳನ್ನು ಕೊಲೆ ಮಾಡಲಾಗುತ್ತಿದೆ. ಕುಟುಂಬದ ಆಸ್ತಿ ಉಳಿಯಬೇಕು, ವರದಕ್ಷಿಣೆ ರೂಪದಲ್ಲಿ ಮನೆಯಿಂದ ಹೊರಗೆ ಹೋಗಬಾರದು ಎಂದು ಹೆಣ್ಣು ಶಿಶು ಹತ್ಯೆ ಮಾಡಲಾಗುತ್ತದೆ. ಹಾಗೂ ಹುಟ್ಟಿದ ಮಗು ಹೆಣ್ಣು ಎಂದಾಕ್ಷಣ. ಅದನ್ನು ಅನಾಥಾಶ್ರಮಕ್ಕೆ ನೀಡುವುದು ಅಥವಾ ಸಾರ್ವಜನಿಕ ಸ್ಥಳಗಳಲ್ಲಿ ಹೆಣ್ಣುಮಕ್ಕಳನ್ನು ಬಿಟ್ಟು ಹೊರಟು ಹೋಗುವುದು. ಹೆಚ್ಚು ಹೆಣ್ಣು ಮಕ್ಕಳು ಕುಟುಂಬದಲ್ಲಿ ಇದ್ದಾಗ ಬಡತನದ ಕಾರಣದಿಂದ, ಮುಂದೆ ಆ ಹೆಣ್ಣು

ಮಗುವಿಗೆ ಮಾಡಬೇಕಾದ ಖರ್ಚಿನ ಕಾರಣದಿಂದ ಮತ್ತು ಕುಟುಂಬಕ್ಕೆ ಹೆಣ್ಣು ಮಕ್ಕಳು ಹೊರೆ ಎನ್ನುವ ಕಾರಣದಿಂದ ಅಂತಹ ಮಕ್ಕಳನ್ನು ಮಾರುವುದು ಜೀತಕ್ಕೆ ಬಿಡುವುದು ಮಾಡಲಾಗುತ್ತಿದೆ. ಈ ಎಲ್ಲಾ ಸಂದರ್ಭಗಳು ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಗೆ ಕಾರಣಗಳಾಗುತ್ತದೆ.

ಹೆಣ್ಣನ್ನು 'ಮಾಯೆ' ಎಂಬ ಕರೆಯುವುದಿದೆ. ಅಷ್ಟೇ ಅಲ್ಲದೆ 'ಮಾಯಗಾತಿ' ಮಾಟಗಾತಿ ಎನ್ನುವ ಸಕಾರಾತ್ಮಕ ಬಿರುದನ್ನು ನೀಡಲಾಗಿದೆ. ಹೆಣ್ಣು ತನ್ನ ದೇಹದ ಮೂಲಕ ವಂಚಿಸುವಳು ಎಂಬ ಪ್ರಜ್ಞೆಯು ಗಂಡಿನಲ್ಲಿ ಬೆಳೆದಿದೆ. ನಿಸರ್ಗದ ವಿಕಾಸದ ಭಾಗವಾಗಿಯೇ ಬೆಳೆದು ಬಂದ ಮಾನವರ ಜೈವಿಕ ರಚನೆಯು ಯಾವುದೇ ತಾರತಮ್ಯವನ್ನು ಹೊಂದಿರಲಿಲ್ಲ. ಸೃಷ್ಟಿಗೆ ಬೇಕಾದ ಕ್ರಮದಲ್ಲಿ ಹೆಣ್ಣು ಗಂಡಿನ ದೈಹಿಕ ರಚನೆ ಆಗಿದೆ. ನಿಸರ್ಗದ ನಿಯಮವೇ ಇಲ್ಲಿ ಅಂತಿಮ. ಆದರೆ ಪುರುಷ ಪ್ರಧಾನ ವ್ಯವಸ್ಥೆಯು ಬೀಜ ಪ್ರಜ್ಞೆಯನ್ನು ಮುನ್ನೆಲೆಗೆ ತಂದು. ಗಂಡಿನ ದೇಹ ರಚನೆಯು ಹೆಣ್ಣಿನ ದೇಹ ರಚನೆಗಿಂತ ಭಿನ್ನ ಮತ್ತು ಶ್ರೇಷ್ಠ ಎಂದು ಅರ್ಥೈಸಿಕೊಂಡಿತು. ಮಾಟವಾದ ಹೆಣ್ಣು ದೇಹಕ್ಕಿಂತ ಶೌರ್ಯ, ವೀರತ್ವ ಸಾಹಸಿಗಳ ಗಂಡಿನ ದೇಹವೇ ಸೃಷ್ಟಿಗೆ ಮೂಲ ಎಂದು ಹೊಸ ದೇಹವನ್ನು ಕಡೆಗಣಿಸಿತು. ತನ್ನ ಅನುಭೋಗಕ್ಕೆ ಮಾತ್ರ ಹೆಣ್ಣಿನ ದೇಹವಿರುವುದು ತನ್ನ ಸಂಪರ್ಕದಿಂದಲೇ ಅವಳಿಗೆ ಮುಕ್ತಿ ಎಂಬ ಅಹಂಅನ್ನು ಹೊಂದಲಾಯಿತು. ನಂತರದ ಸಮಯದಲ್ಲಿ ಪಿತೃಪ್ರಧಾನ ಕೌಟುಂಬಿಕ ನೆಲೆಯು ಪುರುಷಾಧಿಪತ್ಯದಿಂದಾಗಿ ಲಿಂಗ ತಾರತಮ್ಯ ಭಾವನೆಯನ್ನು ಎಲ್ಲಾ ಹಂತಗಳಲ್ಲಿಯೂ ವ್ಯಾಪಿಸುವಂತೆ ಮಾಡಿತು. ಹೆಣ್ಣಿಗೆ ಇರುವ ಅದ್ಭುತ ಸಾಮರ್ಥ್ಯಗಳನ್ನೆಲ್ಲಾ ಉಪೇಕ್ಷಿಸುವ ಭಾವನೆ ಪುರುಷ ಸಮಾಜದಲ್ಲಿ ಬಹಳ ಮುಖ್ಯವಾಯಿತು. ಹೆಣ್ಣಿನ ವ್ಯಕ್ತಿತ್ವವನ್ನೇ ಅಲ್ಲಗಳೆಯುವ ಅದೆಷ್ಟೋ ನಂಬಿಕೆ ಆಚಾರ-ವಿಚಾರ ಕಾಯ್ದೆ ಕಟ್ಟಳೆಗಳು ನಿಷೇಧಗಳು ಧರ್ಮ ಮತ್ತು ಸಂಸ್ಕೃತಿಯ ಪ್ರತಿನಡೆಯಲ್ಲಿಯೂ ಅಂತರ್ಗತವಾಗಿವೆ.

ಬೆತ್ತಲೆ ದೇಹ ಮಾನಕ್ಕೆ ಸಂಬಂಧ ಎಂಬ ಪುರುಷ ಪ್ರಧಾನ್ಯತೆಯ ಮೌಲ್ಯವನ್ನು ಆಚರಣೆಗೆ ತರಲಾಯಿತು. ಆದರೆ ಅದೇ ಹೆಣ್ಣನ್ನು ಮೈತುಂಬಾ ಉಡುಗೆ ತೊಟ್ಟಿದ್ದರೂ ಸಹ ಕಾಮುಕ ಕಣ್ಣುಗಳಿಂದ ಅದೇ ಪುರುಷ ಪ್ರಧಾನತೆಯು ನೋಡುತ್ತದೆ. ಹೆಣ್ಣನ್ನು ಬೆತ್ತಲೆ ಮಾಡುವ ಹಾಗೆಯೇ ಆಕೆಯನ್ನು ಬಂಧಿಸಿ ವೇಷ ಭೂಷಣಗಳು ಆಭರಣಗಳಿಂದ ಮುಚ್ಚಿಡುವ ಎರಡೂ ಪ್ರಕ್ರಿಯೆಗಳನ್ನು ಪುರುಷನೇ ಮಾಡುವುದು. ಹೆಣ್ಣಿನ ಪಾಲಿಗೆ ಅವಳ 'ದೇಹ' ಎಂದರೆ ಪ್ರಾಣಕ್ಕೆ ಸಮನಾದುದು. ಮಾನ ಅಭಿಮಾನಕ್ಕೆ ಪ್ರತ್ಯೇಕವಾದುದು. ಪ್ರೀತಿ ಪ್ರೇಮಕ್ಕೆ ಅರ್ಪಿಸಿಕೊಳ್ಳುವಾಗ ಅತ್ಯಮೂಲ್ಯವಾದ ಭಾವಕೋಶ, ಪೊರೆವ ಹಡೆಯುವ, ಸಲಹುವ ಕರ್ತವ್ಯಕ್ಕಾಗಿ ಹೆಣ್ಣು ಎಂದು ಅರ್ಥೈಸಬಹುದು. ಸೃಷ್ಟಿಯ ಸಂಕೇತ ಹೆಣ್ಣು ದೇಹ, ಪುರುಷನಿಗೆ ಆತ್ಮವೇ ಮುಖ್ಯ ಆದರೆ ಆತ್ಮದ ಕಲ್ಪನೆಯು ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ಮಾತ್ರ ಬಂದಿದೆ. ಮಾತೃ ಪ್ರಧಾನ ವ್ಯವಸ್ಥೆಯಲ್ಲಿ ಅಂತಹ ನಂಬಿಕೆಗಳಿರಲಿಲ್ಲ. ತನ್ನೊಳಗಿನ ಗರ್ಭದ ಮೂಲಕವೇ ಹೆಣ್ಣು ನಿಸರ್ಗದ ಶಕ್ತಿಯನ್ನು ಕಂಡುಕೊಂಡಿದ್ದಾಳೆ.

ದೇಹ ಮತ್ತು ಆತ್ಮಗಳೆರಡರಲ್ಲಿ ಪುರುಷರ ನೆರಳು ದಟ್ಟವಾಗಿದೆ. ಗಂಡಿಗೆ ದೇಹವು ಮುಖ್ಯವಲ್ಲ ಏಕೆಂದರೆ ಹೆರುವ ಗರ್ಭ ಧರಿಸುವ ಸಾಮರ್ಥ್ಯವಿಲ್ಲದೇ ಇರುವುದು. ಆದರೆ ಹೇಗೆ ಗರ್ಭ ಸಾಧ್ಯತೆಯು ಇರುವುದರಿಂದ ಆತ್ಮವು ಅಗತ್ಯವೆನಿಸಲಿಲ್ಲ. ಹೆಣ್ಣಿನ ದೇಹದ ನಂಬಿಕೆಯನ್ನು ಅಪಮೌಲ್ಯಗೊಳಿಸುವಂತೆ ಪುರುಷರ ಸೃಷ್ಟಿಗಳ ಧರ್ಮಗಳು ಹೆಣ್ಣಿನ ಮೇಲೆ ನಿಷೇಧ ಹೇರಿದ್ದು ಈ ದಾರಿಯಿಂದಲೇ ಹೆಣ್ಣಿನ ವ್ಯಕ್ತಿತ್ವವನ್ನು ಪ್ರತಿಬಿಂಬಿಸಲು ಪುರುಷ ವಿಶೇಷವಾಗಿ ಆಕೆಯ ಅಂಗಾಂಗಳನ್ನು ಮಾತ್ರ ಪರಿಗಣಿಸುತ್ತಾರೆ. ಸ್ತ್ರೀ ಅಂಗಾಂಗಳನ್ನು ಪುರುಷ ಅನುಭೋಗದ ನೆಲೆಯಲ್ಲಿ ಮಾತ್ರ ಪರಿಗಣಿಸುತ್ತಾನೆ. ಹೆಣ್ಣು ಎಂದರೆ ದುರ್ಬಲ ಎಂದು ಪರಿಭಾವಿಸಿ ಬೀಜ ಪ್ರಜ್ಞೆಯು ಮೂಡಿ ಪುರುಷ ತನ್ನ ಗರ್ಭದಿಂದ ಸ್ತ್ರೀ ಲಿಂಗವನ್ನು ನೀಚವೆಂದು ಪರಿಗಣಿಸಿದ್ದಾನೆ. ಈ ಪೂರ್ವಗ್ರಹದಿಂದಾಗಿ ಹೆಣ್ಣಿನ ಲಿಂಗ ವ್ಯವಸ್ಥೆಯ ಬಗ್ಗೆ ಪರಂಪರೆಯುದ್ದಕ್ಕೂ ಕ್ರೂರವಾದ ನಿಯಮಾಚರಣೆಗಳು ಬೆಳೆದುಬಂದಿದೆ. ಅದರಲ್ಲೂ ಧರ್ಮ, ದೇವರು, ಮುಕ್ತಿ ಮಾರ್ಗಗಳ ವಿಚಾರದಲ್ಲಿ ಹೆಣ್ಣಿಗೆ ಸ್ವಾತಂತ್ರ್ಯವನ್ನು ನಿರಾಕರಿಸಲಾಗಿದೆ.

ಲಿಂಗತಾರತಮ್ಯವು ಹೆಣ್ಣಿನ ದೇಹದ ಕಾರಣಕ್ಕೆ ಪುರುಷ ಪ್ರಧಾನತೆಯು ಹುಟ್ಟುಹಾಕಿದ ವ್ಯವಸ್ಥೆಯಾಗಿದೆ. ಇದು ಎಲ್ಲಾ ಸಮಾಜಗಳಲ್ಲೂ ಎಲ್ಲಾ ಕಾಲಗಳಲ್ಲೂ ಎದ್ದು ಕಾಣುತ್ತಿದೆ. ಮತ್ತು ಇಂದಿಗೂ ಕಾಣಬರುತ್ತಿರುವ ಒಂದು ಪ್ರಮುಖವಾದ ಸಾಮಾಜಿಕ ಅಂಶವಾಗಿದೆ. ಲಿಂಗತಾರತಮ್ಯದ ಕುರಿತಾದ ಸಾಮಾಜಿಕ ಪ್ರಾಮುಖ್ಯತೆಯನ್ನು ಮಗುವಿನ ಜನನದ ಸಂದರ್ಭದಲ್ಲಿಯೇ ಗುರುತಿಸಲಾಗುತ್ತದೆ. ಉದಾ:– ಮಗುವೊಂದರ ಜನನಕ್ಕೆ ಸಂಬಂಧಿಸಿದಂತೆ ಮೊದಲು ಎಲ್ಲರೂ ಕೇಳುವ ಪ್ರಶ್ನೆ ಅದು ಗಂಡೇ? ಹೆಣ್ಣೇ? ಎಂದು. ಈ ಪ್ರಶ್ನೆಯನ್ನು ಕೇಳುವ ದಾಟಿಯಿಂದಲೇ ಸಮಾಜದಲ್ಲಿ ಲಿಂಗಭೇದದ ಪ್ರಾಮುಖ್ಯತೆ ಎಷ್ಟು ಇದೆ ಎಂಬುದು ತಿಳಿಯುತ್ತದೆ. ಲಿಂಗತಾರತಮ್ಯದ ಅಂಶವು ಸಮಾಜದಲ್ಲಿ ಜಾತಿ ಹಾಗೂ ವರ್ಗಗಳು, ಪಕ್ಷ–ಪಂಗಡಗಳು ಹುಟ್ಟಿಕೊಳ್ಳುವುದಕ್ಕಿಂತ ಎಷ್ಟೋ ಮೊದಲಿಗೆ ಅಸ್ತಿತ್ವಕ್ಕೆ ಬಂದಿದೆ. ಇತಿಹಾಸದುದ್ದಕ್ಕೂ ಹರಿದುಬಂದಿರುವ ತಾರತಮ್ಯತೆಯು ಜಗತ್ತಿನ ಹೆಚ್ಚಿನ ಎಲ್ಲಾ ಸಮಾಜಗಳಲ್ಲೂ ಸಹ ಕೆಲವೊಂದು ಹಕ್ಕುಗಳನ್ನು ಸ್ತ್ರೀಯರಿಗೆ ನಿರಾಕರಿಸಿದೆ. ಲಿಂಗಾಧಾರಿತವಾದ ಪ್ರತಿಭೆ ಹಾಗೂ ಸಾಮರ್ಥ್ಯಗಳಲ್ಲಿ ಬಹಳಷ್ಟು ವ್ಯತ್ಯಾಸಗಳಿರುವುದರಿಂದ ಹೆಣ್ಣು ಗಂಡಿನ ನಡುವಿನ ಈ ಭಿನ್ನತೆ ಅಥವಾ ಅಂತರ ಅನಿವಾರ್ಯ ಎಂಬುದು ಒಂದು ವಾದ ಮತ್ತು ಇದೊಂದು ಬಗೆಯ ಸಾಮಾಜಿಕ ನಂಬಿಕೆಯೂ ಸಹ ಆಗಿದೆ. ಆದರೆ ಈ ಬಗೆಯ ತಾರತಮ್ಯ ಅಥವಾ ಅಂತರದ ವ್ಯತ್ಯಾಸದ ಅಂಶವನ್ನು ಒಂದು ನಂಬಿಕೆಯಂತೆ ಅದು ನಿಸರ್ಗದತ್ತವಾಗಿಯೇ ಇದೆಯೇನೋ ಎಂಬಂತೆ ಹೆಣ್ಣು ಗಂಡು ಇಬ್ಬರೂ ತಾವು ಹಂಚಿಕೊಂಡಿರುವ ಸಂಸ್ಕೃತಿಯ ಒಂದು ಭಾಗವೆಂಬಂತೆ ಒಪ್ಪಿಕೊಂಡಿದ್ದಾರೆ.

ಆದರೆ ಕೆಲವೊಂದು ಜೈವಿಕ ಕಾರ್ಯಗಳನ್ನು ನಿಭಾಯಿಸಲು ಸಹಾಯಕವಾಗುವಂತೆ ಪ್ರಮುಖವಾಗಿ ಪ್ರಜನನ ಸಂಬಂಧದಿಂದ ಗರ್ಭಿಣಿಯಾಗುವುದು, ಮಗುವನ್ನು ಪ್ರಸವಿಸುವುದು,

ಮೊಲೆಯುಣಿಸುವುದು, ಮುಂತಾದಕ್ಕೆ ಸಹಾಯಕವಾಗುವಂತೆ ಹೆಣ್ಣಿನ ದೈಹಿಕ ರಚನೆಯನ್ನು ವಿನ್ಯಾಸಗೊಳಿಸಲಾಗಿರುತ್ತದೆ. ಅಲ್ಲದೆ ಶರೀರದ ಎತ್ತರ, ತೂಕ, ದೇಹದ ಮೇಲಿನ ಕೂದಲು, ದೇಹದ ಕೊಬ್ಬಿನ ಅಂಶದ ಹಂಚಿಕೆ ಮತ್ತು ದೈಹಿಕ ಶಕ್ತಿ ಇಂತಹ ಗುಣಲಕ್ಷಣಗಳಲ್ಲೂ ಸ್ತ್ರೀ ಪುರುಷರ ನಡುವೆ ವ್ಯತ್ಯಾಸಗಳಿವೆ. ತಳಿಶಾಸ್ತ್ರೀಯ (Genetics) ದೃಷ್ಟಿಯಿಂದಲೂ ಹೆಣ್ಣು ಗಂಡಿನ ನಡುವೆ ವ್ಯತ್ಯಾಸಗಳಿವೆ. ಉದಾ:– ಸ್ತ್ರೀಯರು ಸಮಾನ ಸ್ವರೂಪದ 'xx'ಎಂಬ ವರ್ಣತಂತುಗಳನ್ನು ಹೊಂದಿದ್ದಾರೆ. ಪುರುಷರು ಅಸಮಾನ ಸ್ವರೂಪ ದಿ 'xy' ಎಂಬ ವರ್ಣತಂತುಗಳನ್ನು ಹೊಂದಿದ್ದಾರೆ. ಸ್ತ್ರೀ–ಪುರುಷ ಶರೀರಗಳ ಹಾರ್ಮೋನುಗಳು ಮತ್ತು ಅವುಗಳ ಉತ್ಪಾದನೆ ಹಾಗೂ ಕಾರ್ಯಾಚರಣೆಯಲ್ಲಿಯೂ ವ್ಯತ್ಯಾಸಗಳಿವೆ. ಹಾಗೆಯೇ ಮನೋವೈಜ್ಞಾನಿಕ ದೃಷ್ಟಿಯಿಂದಲೂ ಸ್ತ್ರೀ–ಪುರುಷರ ನಡುವೆ ಅಂತರವಿದೆ. ಆದರೆ ಶರೀರ ರಚನೆಯಿಂದಲೇ ಲಿಂಗತಾರತಮ್ಯವಿದೆ ಎಂಬುದು ಸರಿಯಲ್ಲ. ಹುಟ್ಟುವಾಗ ಸ್ತ್ರೀ–ಪುರುಷರ ನಡುವಿನ ಶಾರೀರಿಕ ವ್ಯತ್ಯಾಸಗಳು ಎಷ್ಟೇ ಇದ್ದರೂ ಅವುಗಳ ಕುರಿಂತಂತೆ ಸಮಾಜದಲ್ಲಿ ಸಂಸ್ಕೃತಿ ನೀಡುತ್ತಾ ಬಂದಿರುವ ವ್ಯಾಖ್ಯಾನದಿಂದಾಗಿ ಮತ್ತು ಹೆಣ್ಣು–ಗಂಡಿಗೆ ವಹಿಸುತ್ತಾ ಬಂದಿರುವ ಪಾತ್ರ ಮತ್ತು ಹೊಣೆಗಾರಿಕೆಯ ಕಾರಣದಿಂದಾಗಿ ಲಿಂಗತಾರತಮ್ಯವು ಹುಟ್ಟಿಕೊಂಡಿದೆ.

ಕೆಲವು ವಿಷಯಗಳಲ್ಲಿ ಪುರುಷ ವಿಶೇಷ ಶಕ್ತಿ ಮತ್ತು ದುರ್ಬಲತೆಯನ್ನು ಪಡೆದಿದ್ದಾರೆ, ಇನ್ನೂ ಕೆಲವು ವಿಷಯಗಳಲ್ಲಿ ಹೆಣ್ಣು ವಿಶೇಷ ಶಕ್ತಿ ಮತ್ತು ದುರ್ಬಲತೆಯನ್ನು ಹೊಂದಿರುತ್ತಾಳೆ. ಈ ವ್ಯತ್ಯಾಸವನ್ನು ಶ್ರೇಣೀಕೃತಗೊಳಿಸಿ ಗಂಡು ಮೇಲು, ಬಲಾಢ್ಯರು, ಆಳುವವರು; ಹೆಂಗಸರು ಕೀಳು, ಅಬಲೆಯರು, ಆಳಲ್ಪಡುವವರು ಎಂದು ನೋಡಲಾಗುತ್ತದೆ. "ಸ್ತ್ರೀ ಪುರುಷರ ನಡುವಿನ ಸಾಮಾಜಿಕ, ಸಾಂಸ್ಕೃತಿಕ ಸಂಬಂಧ, ಪಾತ್ರ ಮತ್ತು ನಡವಳಿಕೆಯನ್ನು ಗುರುತಿಸುವ ಪದವೇ ಲಿಂಗವ್ಯವಸ್ಥೆ ಇದು ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸ್ತ್ರೀ ಪುರುಷರಿಗೆ ಬೇರೆ ಬೇರೆ ಗುಣ, ಪಾತ್ರ, ಮನೋಭಾವ, ನಡವಳಿಕೆ ಮತ್ತು ಮೌಲ್ಯಗಳನ್ನು ಸೂಚಿಸುತ್ತದೆ. ದುರಾದೃಷ್ಟವಶತ್ ಈ ಲಿಂಗ ವ್ಯವಸ್ಥೆಯು ಮೇಲು ಕೀಳೆಂದು ಶ್ರೇಣೀಕೃತಗೊಂಡು ಸ್ತ್ರೀ ಪುರುಷರ ನಡುವೆ ವ್ಯತ್ಯಾಸ ಮತ್ತು ಅಸಮಾನತೆಯನ್ನು ಸೃಷ್ಟಿಸುತ್ತದೆ".[೧೦]

ಲಿಂಗತಾರತಮ್ಯದ ಪುರುಷ ಪೂರ್ವಾಗ್ರಹದ ಸಂದರ್ಭದಲ್ಲಿ ಹೆಣ್ಣಿನ ದೇಹ ರಚನೆಯ ಜೈವಿಕ ಅಂಗಗಳನ್ನು ಗಮನಿಸುವುದು ಮುಖ್ಯವಾಗುತ್ತದೆ. ಸ್ತ್ರೀವಾದಿ ಚಿಂತನೆಯಲ್ಲಿ ಶರೀರ ರಚನೆ ಜೈವಿಕ ಕಾರಣಗಳನ್ನು ವಿಶ್ಲೇಷಿಸುವುದು ಸಿಮೋನ್ ದ ಬೂವಾ ಅವರಿಂದ ಸಮರ್ಥವಾಗಿ ನಡೆದುಬಂದಿದೆ. ಹೆಣ್ಣಿನ ದೈಹಿಕ ಗುಣ ನಿಸರ್ಗದಲ್ಲೇ ವಿಶಿಷ್ಟವಾದುದು. ಹೆಣ್ಣು ಶಿಶು ತಾಯಿ ಗರ್ಭದಲ್ಲಿರುವಾಗಲೇ ಗರ್ಭದ ಋತುಚಕ್ರಕ್ಕೆ ಸಿದ್ಧವಾಗಿರುತ್ತದೆ. ಮತ್ತು ಹೆಣ್ಣು ಶಿಶುವಿನ ಶರೀರ ರಚನೆಯು ಸೃಷ್ಟಿಸುವ ಜೈವಿಕ ಗುಣವನ್ನು ತಾಯಿ ಗರ್ಭದಿಂದಲೇ ಅನುವಂಶೀಯವಾಗಿ ಪಡೆದಿರುತ್ತದೆ. ಗಂಡು ಮಗು ಇಂತಹ ಗುಣವನ್ನು ಪಡೆದಿಲ್ಲ. ತನ್ನ ೮ನೇ ವರ್ಷದ ನಂತರಕ್ಕೆ ಅತ್ಯಂತ ಕನಿಷ್ಠ

ಪ್ರಮಾಣದಲ್ಲಿ ಲೈಂಗಿಕ ಹಾಗೂ ಸೃಷ್ಟಿಶೀಲ ಶಕ್ತಿಯನ್ನು ಪಡೆಯುತ್ತದೆ. ಸೃಷ್ಟಿಯ ಪ್ರಕ್ರಿಯೆಯಲ್ಲಿ ಯಾವುದೂ ಮೊದಲಲ್ಲ, ಕೊನೆಯಲ್ಲ, ಅನಂತವಾದ ವಿಕಾಸವೇ ವಾಸ್ತವ, ಅದರ ಪಯಣದಲ್ಲಿ ಹೆಣ್ಣು ಗಂಡಿನ ಸಂಬಂಧವು ಮುಖ್ಯವಾಗಬೇಕು.

ಹೆಣ್ಣಿನ ಸೌಮ್ಯತೆಯು ಅವಳ ದುರ್ಬಲ ಸ್ಥಿತಿಯಲ್ಲ ಆದರೆ ಪುರುಷ ಅದನ್ನು ತಪ್ಪಾಗಿ ಭಾವಿಸಿದ್ದಾನೆ. ಸೌಮ್ಯತೆಯು ತಾಳಿಕೆಯ ಗುಣ, ಅತಿಕ್ರಮಣವನ್ನು ತಾಳ್ಮೆಯಿಂದ ನಿಭಾಯಿಸುವ ರೀತಿಯಾಗಿದೆ. ಇದು ಜೈವಿಕ ವೈಶಿಷ್ಟವಾಗಿ ಹೆಣ್ಣಿನಲ್ಲಿ ಅಡಕವಾಗಿರುವ ಅಂಶ. ಬದುಕುಳಿಯುವ ಅಸ್ತಿತ್ವವಾಗಿಯೂ ಸೌಮ್ಯತೆಯು ಬೆಳೆದು ಬಂದಿದೆ. ಹೀಗಿದ್ದಾಗ್ಯೂ ಲಿಂಗತಾರತಮ್ಯ ಬಂದುದೇಕೆ ಎಂಬ ಪ್ರಶ್ನೆ ಮೂಡುತ್ತದೆ. ಭಾಗಶಃ ಹೆಣ್ಣಿನ ಸೌಮ್ಯತೆಯನ್ನು ಗಂಡು ಅವಳ ಸೋಲು ಇರಬಹುದು ಎಂದು ಭಾವಿಸಿರುವಂತೆಯೇ ಆ ಬಗೆಯ ಗುಣವನ್ನು ದುರುಪಯೋಗಿಸಿಕೊಂಡು ಅದನ್ನು ಸ್ವಾರ್ಥ ಸಾಧನೆಗೆ ಬಳಸುವುದು ಪುರುಷ ಪ್ರಧಾನತೆಗೆ ಅನುಕೂಲವಾಗಿ ಕಂಡಿದೆ. ಇಂತಹ ಸ್ಥಿತಿಯಲ್ಲಿ ಅವಳಿಗೆ ಇದ್ದ ಆಯ್ಕೆಗಳು ಅಸ್ಪಷ್ಟವಾಗಿದೆ. ಭಾಗಶಃ ಸ್ತ್ರೀ ಇಂತಹ ಒತ್ತಡ ಮತ್ತು ಲಿಂಗ ಶೋಷಣೆಯನ್ನು ಸಹಿಸಿಕೊಳ್ಳುವುದೇ ತನ್ನ ಆಯ್ಕೆ ಎಂದು ಭಾವಿಸಿರಬೇಕು. ಇದರಿಂದಾಗಿ ಹಿಂಸೆಯನ್ನು ಸಹಿಸಿಕೊಂಡು. ಹೊಂದಾಣಿಕೆ ಮಾಡಿಕೊಂಡು ನಿಸರ್ಗದ ಜೊತೆ ಭಾವನಾತ್ಮಕ ಸಂಬಂಧವನ್ನು ರೂಪಿಸಿಕೊಂಡು ಕೌಟುಂಬಿಕ ವ್ಯಾಪ್ತಿಯ ಸಾಂಸ್ಕೃತಿಕ ಆವರಣದಲ್ಲಿ ನಿರತಳಾದಳು. ಇದು ಒಂದು ರೀತಿಯ ಅಸ್ತಿತ್ವದ ಹೊಂದಾಣಿಕೆ ಎಂದು ಅರ್ಥೈಸಬಹುದು. ಈ ರೀತಿಯ ಸಂಕೀರ್ಣ ಸ್ಥಿತಿಯಲ್ಲಿ ಮಹಿಳೆ ಪುರುಷನ ಜೊತೆ ತನ್ನ ದೇಹ ಮತ್ತು ಮನಸ್ಸುಗಳೆರಡನ್ನೂ ಪ್ರೇಮದಲ್ಲಿ ಮೋಹದಲ್ಲಿ ತ್ಯಾಗದಲ್ಲಿ ಅರ್ಪಿಸಿಕೊಳ್ಳುವ ಒಪ್ಪಂದಗಳನ್ನು ಮಾಡಿಕೊಂಡಿದ್ದಾಳೆ. ನಿಸರ್ಗದ ಜೈವಿಕ ಅಗತ್ಯ ಹಾಗೂ ಆಕರ್ಷಣೆ ತಂತಾನೆ ಆಗುವುದು ಒಂದು ರೀತಿಯಾದರೆ. ನೈಸರ್ಗಿಕ ಕ್ರಿಯೆಯ ನಂತರ ಉಂಟಾಗುವ ತಾರತಮ್ಯ ಮತ್ತು ಒಪ್ಪಂದಗಳು ಬಹಳ ಕ್ರೂರವಾಗಿದೆ.

ವಿವಾಹ ಸಂಸ್ಥೆಯಡಿಯಲ್ಲಿ ಹೆಣ್ಣು ತನ್ನ ತನು ಮನವನ್ನೇ ಗಂಡಸಿಗೆ ಅರ್ಪಿಸಿಕೊಳ್ಳಬೇಕಾದ ಸಂಹಿತೆ ಇದೆ. ಜೊತೆಗೆ ಹೊಕ್ಕಳ ಬಳ್ಳಿಯ ಕುಡಿಯ ರಕ್ತಸಂಬಂಧವನ್ನು ಕಡಿದು ಗಂಡನ ಮೂಲಕ ಮಕ್ಕಳಿಗೆ ಗುರುತು ಬರುವಂತೆಯೂ ಒಪ್ಪಂದ ಮಾಡಿಕೊಂಡಿದ್ದಾಳೆ. ಎಲ್ಲಾ ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ ಮೌಲ್ಯಗಳಲ್ಲಿಯೂ ಪುರುಷ ಅಧಿಕಾರವೇ ಅಂತಿಮ ಎಂದು ಒಪ್ಪಿಕೊಳ್ಳಲಾಗಿದೆ. ಈ ಒಪ್ಪಂದಗಳೇ ಅದೇ ಹೆಣ್ಣಿನ ಅಸ್ತಿತ್ವವನ್ನು ಕಳೆದುಕೊಳ್ಳುವಂತೆ ಮಾಡಿದೆ. ಹೆಣ್ಣಿನ ಮನಸ್ಸು ಚಂಚಲ ಎಂಬ ಆರೋಪವೂ ಗಂಡಸಿನ ದುರ್ಬಲ ಮನಸ್ಸಿನಿಂದ ಬಂದಿದೆ. ಇದು ಹೋದ ವ್ಯಕ್ತಿತ್ವವನ್ನು ಅಪ ವ್ಯಾಖ್ಯಾನಗೊಳಿಸುವ ಕ್ರೂರತೆಯನ್ನು ಹೊಂದಿದೆ. ಈ ರೀತಿಯ ಹೆಣ್ಣು ದೇಹದ ಮೇಲಿನ ತಾರತಮ್ಯದಿಂದಾಗಿ ಅನೇಕ ಬಗೆಯ ಸಮಸ್ಯೆಗಳು ಮಾನವ ವಿಕಾಸದ ಪಥದಲ್ಲಿ ಉಂಟಾಗುತ್ತಿದೆ. ಹೆಣ್ಣು ಗಂಡಿನ ಲಿಂಗತಾರತಮ್ಯದಿಂದಾಗಿ ಮಾನವ ಸಂಬಂಧದ ಸಹಜ ವಿಕಾಸಕ್ಕೆ ತೊಡಕು ಉಂಟಾಗುತ್ತದೆ. ಆಕ್ರಮಣ ಶೀಲ ಪ್ರವೃತ್ತಿಯು ಗಂಡು ಜೀವಿಯ ಅಸ್ತಿತ್ವಕ್ಕೆ ಭವಿಷ್ಯದಲ್ಲಿ

ಅಪಾಯಕಾರಿಯಾಗಬಲ್ಲದು. ಹುಟ್ಟಲಿರುವ ಮುಂದಿನ ಪೀಳಿಗೆಯ ಲೈಂಗಿಕ ಸಂಬಂಧಗಳು ಅಸಹಜಗೊಳ್ಳುವ ಅಪಾಯವಿದೆ. ಕೌಟುಂಬಿಕ ವ್ಯವಸ್ಥೆಯೇ ಮುರಿದುಬೀಳುವ ಅವಕಾಶಗಳಿವೆ. ಜೈವಿಕವಾದ ಗುಣಗಳು ಪುರುಷ ಪೂರ್ವಾಗ್ರಹದಿಂದ ಹೆಣ್ಣಿನಲ್ಲಿ ಸಂಕುಚಿತವಾಗುವುದು. ಸಾಮಾಜಿಕವಾದ ಅಪನಂಬಿಕೆಗಳು ಬೆಳೆದು ಹೆಣ್ಣು ಗಂಡಿನ ಸಾವಯವ ಸಂಬಂಧಕ್ಕೆ ಅಡ್ಡಿಯಾಗುವುದು. ನೈತಿಕವಾದ ಮಾನವೀಯ ಮೌಲ್ಯಗಳು ಲಿಂಗತಾರತಮ್ಯದ ಕಾರಣದಿಂದ ಕುಸಿದು, ನೀತಿಯಿಲ್ಲದ ಸಂಬಂಧಗಳು ಅನ್ಯಾಯದ ದಾರಿ ಹಿಡಿಯುತ್ತದೆ. ವಂಚನೆ, ಹತ್ಯೆ, ಹಲ್ಲೆ, ಅತ್ಯಾಚಾರ, ವಿಶ್ವಾಸಘಾತುಕತೆ ಮುಂತಾದ ಮಾನವ ದ್ವೇಷಿ ಗುಣಗಳು ಲಿಂಗತಾರತಮ್ಯದಿಂದ ಉಂಟಾಗುತ್ತದೆ. ಭಾಷೆ, ಸಂಸ್ಕೃತಿ, ಸಾಹಿತ್ಯ, ನಾಗರೀಕತೆ, ತಂತ್ರಜ್ಞಾನ, ವಿಜ್ಞಾನಗಳು ಕೂಡ ಪುರುಷ ರೂಪಿಯಾಗಿ ಲಿಂಗ ತಾರತಮ್ಯವನ್ನು ಅನುಸರಿಸಿ ಸಾಮಾಜಿಕ ಅಸಮತೋಲನಕ್ಕೆ ಎಡೆ ಮಾಡಿ ಮಾನವ ಸಾಧ್ಯತೆಗಳೇ ಮಿತಿಗೊಳಗಾಗುವ ಅಪಾಯವಿದೆ. ಅಷ್ಟೇ ಅಲ್ಲದೆ ಹೆಣ್ಣನ್ನು ಲಿಂಗ ಬೇಧದ ದ್ವೇಷದಿಂದ ವಿಪರೀತವಾಗಿ ಅನೈತಿಕ ಕಳ್ಳಸಾಗಾಣಿಕೆ, ಲೈಂಗಿಕ ಮಾರುಕಟ್ಟೆಗೆ ಈಡು ಮಾಡುವ ಕ್ರೂರ ನೆಲೆಗಳು ಮತ್ತಷ್ಟು ಪ್ರಬಲವಾಗುತ್ತದೆ. ಲಿಂಗ ಶೋಷಣೆಯಿಂದ ಮಾರಕ ರೋಗಗಳು ಹೆಚ್ಚಾಗಿ ಜಗತ್ತಿನಾದ್ಯಂತ ಹಬ್ಬುತ್ತವೆ. ಲೈಂಗಿಕ ಶೋಷಣೆಯಿಂದ ಸ್ವತಃ ಪುರುಷನೇ ಮೃಗವಾಗುವ ಹಾಗು ತನ್ನ ಸಹಜ ಜೈವಿಕ ಸಂಬಂಧಗಳಿಂದ ದೂರ ಸಾಗುವ ಆಪತ್ತು ಬಹಳವಾಗಿವೆ. ಇದರಿಂದ ಜೈವಿಕ ಬೆಸುಗೆಯೇ ತುಂಡಾಗಬಹುದಾದ ಅಪಾಯವಿದೆ.

### ೩.೩ ಹೆಣ್ಣು ದೇಹದ ಮೇಲಿನ ಧಾರ್ಮಿಕ ನಿರ್ಬಂಧ

ಸಮಕಾಲೀನ ಬದುಕಿನಲ್ಲಿ ಹೆಣ್ಣಿನ ಪಾತ್ರಗಳು ಹಾಗೂ ಸ್ಥಾನಗಳನ್ನು ಭಯ ಹುಟ್ಟಿಸುವಂಥ ರೀತಿಯಲ್ಲಿ ಪ್ರಭಾವಿಸುತ್ತಿರುವ ವ್ಯವಸ್ಥೆಗಳಲ್ಲಿ ಧರ್ಮವೂ ಒಂದು. ಹೊಸ ಹೊಸ ರೂಪಗಳಲ್ಲಿ ರೀತಿಯಲ್ಲಿ ಧರ್ಮ ಎನ್ನುವ ವ್ಯವಸ್ಥೆ ಸ್ತ್ರೀ ವಿರೋಧಿ ಸಂಸ್ಕೃತಿಯ ಬೇರುಗಳನ್ನು ಸಮಾಜದ ಎಲ್ಲೆಡೆ ಹರಡುತ್ತಿರುವುದಲ್ಲದೆ, ಧಾರ್ಮಿಕ ಮೂಲಭೂತವಾದವು ಸ್ತ್ರೀ ಸ್ವಾತಂತ್ರ್ಯ ಚಳುವಳಿಗೆ ಒಂದು ಬೃಹತ್ ಸವಾಲಾಗಿದೆ. ಧರ್ಮವೆಂಬ ಸಂಸ್ಥೆ ಪುರುಷ ನಿರ್ಮಿತವಾದುದು. ಇಲ್ಲಿ ಮಹಿಳೆಯನ್ನು ಎರಡನೆಯ ದರ್ಜೆಯ ಪ್ರಜೆಯಾಗಿಯೇ ಪರಿಗಣಿಸಲಾಗಿದೆ. ಧರ್ಮ ಮಾನವೀಯತೆಯನ್ನು ಭೋಧಿಸುವಂತಹುದು ಎಂದು ನಂಬಿಸಲಾಗುತ್ತದೆ. ಆದರೆ ಇಲ್ಲಿನ ಮಾನವೀಯತೆಯು ಕೇವಲ ಪುರುಷನಿಗೆ ಸೂತ್ರವಾಗಿ ಬಿಡುತ್ತದೆ. ಪುರುಷ ನಿರ್ಮಿತವಾದ ಈ ಧರ್ಮದಲ್ಲಿ ಪುರಷರ ಹಿತವನ್ನು ಗಮನದಲ್ಲಿರಿಸಿ ಧಾರ್ಮಿಕ ಕಟ್ಟುಪಾಡುಗಳನ್ನು ರೂಪಿಸಲಾಗಿದೆ. "ಒಂದು ಸಾಮಾನ್ಯ ಅರ್ಥದಲ್ಲಿ ಧರ್ಮ ಎಂದರೆ ಸನ್ಮಾರ್ಗದಲ್ಲಿ ನಡೆಯಲು ಮಾನವನನ್ನು ಪ್ರೇರೇಪಿಸುವಂಥ ಒಂದು ಶಕ್ತಿಯಾಗಿ ಕಾರ್ಯನಿರ್ವಹಿಸುವಂತಹ ವ್ಯವಸ್ಥೆ, ಆದರೆ 'ಸನ್ಮಾರ್ಗ' ಎನ್ನುವುದು ಒಂದು ಸಾಪೇಕ್ಷಿತವಾದ ಪರಿಕಲ್ಪನೆಯಾಗಿ ಬಳಕೆಯಾಗುತ್ತಿದೆಯೇ ಹೊರತು, ಸರ್ವರಿಗೂ ಒಳಿತನ್ನು ಉಂಟು ಮಾಡುವಂತಹ

ರೀತಿಯಲ್ಲಿಲ್ಲ. ಎಲ್ಲಾ ಧರ್ಮಗಳಲ್ಲೂ ಪ್ರಗತಿಪರವಾದಂಥ ಮೌಲ್ಯಗಳು ಹಾಗೂ ಆಚರಣೆಗಳು ಅಸ್ತಿತ್ವದಲ್ಲಿದ್ದರೂ ಅವುಗಳಿಗೆ ಹೆಚ್ಚು ಪ್ರಚಾರವಿಲ್ಲ. ಇದಕ್ಕೆ ವಿರೋಧವಾಗಿ ಸ್ತ್ರೀಯನ್ನು ಎರಡನೆಯ ದರ್ಜೆಯ ಪ್ರಜೆಯಂತೆ ನಡೆಸಿಕೊಳ್ಳುವಂಥ ಪ್ರವೃತ್ತಿಗಳಿಗೆ ಚಾಲನೆ ಹೆಚ್ಚು ಎಂದು ಡಾ.ಆರ್.ಇಂದಿರಾರವರು ಅಭಿಪ್ರಾಯಿಸುತ್ತಾರೆ".[೧೧]

ಇಷ್ಟೇ ಅಲ್ಲದೆ, ಧರ್ಮವು ಹೆಣ್ಣನ್ನು ಕುರಿತು ಭಿನ್ನ ಧೋರಣೆಗಳು ದ್ವಿಮುಖ ಮೌಲ್ಯಗಳನ್ನೂ ಪ್ರತಿಪಾದಿಸುತ್ತದೆ. ಒಂದೆಡೆ ಹೆಣ್ಣನ್ನು ದೇವತೆಯೆಂದು ಘೋಷಿಸುವುದು, ಮತ್ತೊಂದೆಡೆ ಆಕೆಯ ಮೇಲಿನ ದೌರ್ಜನ್ಯಕ್ಕೆ ಮಾನ್ಯತೆ ನೀಡುವುದು ಮಾಡುತ್ತದೆ. ಹೆಣ್ಣನ್ನು ಧಾರ್ಮಿಕ ನಿರ್ಬಂಧಕ್ಕೆ ಒಳಪಡಿಸಲು ಈ ಧೋರಣೆಗಳು ಸಹಾಯಕವಾಗಿವೆ. ಕೆಲವು ಧರ್ಮಗಳು ಸ್ತ್ರೀಯರು ದೇವತಾ ವಿಗ್ರಹಗಳನ್ನು ಸ್ಪರ್ಶಿಸಿದರೆ ಮೈಲಿಗೆಯಾಗುತ್ತದೆ ಎಂದು ನಿರ್ಬಂಧ ಹೇರುತ್ತವೆ. ಮುಟ್ಟಾದ ಹೆಣ್ಣು ದೇವರ ಗುಡಿಗಳಿಗೂ ಹೋಗುವಂತಿಲ್ಲ. ಹೋದರೂ ದೇವರ ದರ್ಶನ ಮಾಡುವಂತಿಲ್ಲ. ಹೆಣ್ಣಿಗೆ ದೇವರ ಪೂಜೆ ಮಾಡುವ ಸ್ವಾತಂತ್ರ್ಯವಿಲ್ಲ. ಮುಟ್ಟಾದ ಹೆಣ್ಣಿನ ದೃಷ್ಟಿ ತಾಕಿದರೂ ಪಾವಿತ್ರ್ಯ ನಾಶವಾಗುತ್ತದೆ ಎಂಬ ಭಾವನೆಯನ್ನು ಬಿತ್ತಲಾಗಿದೆ. ಹೀಗೆ ಮೋಕ್ಷ ಸಾಧಿಸುವುದು ಸಹ ಸಾಧ್ಯವಿಲ್ಲ ಎಂದು ಧರ್ಮ ಹೆಣ್ಣಿನ ವಿಚಾರದಲ್ಲಿ ನಕಾರಾತ್ಮಕವಾಗಿಯೆ ವರ್ತಿಸುತ್ತದೆ.

ಕ್ರಿಶ್ಚಿಯನ್ ಧರ್ಮದಲ್ಲಿ Father ಇರುವಂತೆ Mother ಇಲ್ಲ ಮುಸ್ಲಿಂ ಧರ್ಮದಲ್ಲಿ ಧರ್ಮ ಗುರುಗಳಾಗಿ ಮಹಿಳೆಯರು ಕಾರ್ಯನಿರ್ವಹಿಸಿದ ಉದಾಹರಣೆಗಳಿಲ್ಲ. ಜಗದ್ಗುರು ಎಂಬ ಪಟ್ಟಕ್ಕೆ ಯಾವ ಮಹಿಳೆಯನ್ನೂ ಕೂರಿಸಿಲ್ಲ. ಬುದ್ಧ ಕೂಡ ಆರಂಭದಲ್ಲಿ ಹೆಂಗಸರನ್ನು ತನ್ನ ಧರ್ಮದೊಳಗೆ ಸೇರಿಸಿಕೊಳ್ಳಲಿಲ್ಲ. ಜೈನ ಧರ್ಮವಂತೂ ಭವಾವಳಿಯ ಕಲ್ಪನೆ ಮೂಡಿಸಿ ಹೆಣ್ಣು ಭವ ದಾಟಿ, ಗಂಡು ಜನ್ಮ ಪಡೆದಾಗ ಮಾತ್ರ ಜೀವಕ್ಕೆ ಮುಕ್ತಿ ಸಾಧ್ಯ. ಪಾಪ ಮಾಡಿದ ಜೀವ ಹೆಣ್ಣಾಗಿ, ಹೆಣ್ಣು ನಾಯಿ, ಹೆಣ್ಣು ಹಂದಿ ಮುಂತಾಗಿ, ಜನ್ಮ ತಳೆಯುತ್ತದೆ ಎಂದು ಕತೆಗಳನ್ನು ಹೇಳುವಲ್ಲಿ ಹೆಣ್ಣು ಜನ್ಮದ ಅವಹೇಳನಕಾರಿ ಚಿತ್ರಣವನ್ನು ಕಾಣುತ್ತೇವೆ.

ಇದುವರೆವಿಗೂ ಧರ್ಮ ಎನ್ನುವ ಸಂಸ್ಥೆಯ ಉಗಮವಾದುದು ಪುರುಷನ ಮನಸ್ಸಿನಲ್ಲಿ ಮತ್ತು ಅದಕ್ಕೆ ರೂಪುರೇಷೆಗಳನ್ನು ನೀಡಿದವರೆಲ್ಲಾ ಪುರುಷರೇ. ಆದುದರಿಂದ ಸ್ತ್ರೀಗೆ ಒಂದು ಸ್ವತಂತ್ರವಾದ ಅಸ್ತಿತ್ವವಿದೆ, ಆಕೆ ವ್ಯಕ್ತಿಯಾಗಿ ಎಲ್ಲಾ ಧಾರ್ಮಿಕ ಆಚರಣೆಗಳಲ್ಲಿ ಪಾಲ್ಗೊಳ್ಳಬಹುದು ಎಂಬ ಅಂಶಕ್ಕೆ ಅವರು ಪ್ರಾಮುಖ್ಯತೆಯನ್ನು ನೀಡಲೇ ಇಲ್ಲ. ಹಲವು ಧಾರ್ಮಿಕ ವಿಧಿಗಳಲ್ಲಿ ಸ್ತ್ರೀಯನ್ನು ಸಂಗಾತಿಯಾಗಿಟ್ಟುಕೊಂಡೇ ಪುರುಷ ಪಾಲ್ಗೊಳ್ಳಬೇಕು ಎನ್ನುವ ಪದ್ಧತಿ ರೂಢಿಯಲ್ಲಿದ್ದರೂ ಸ್ತ್ರೀಯೊಬ್ಬಳೇ ಆ ಧಾರ್ಮಿಕ ಆಚರಣೆ ತರಬಲ್ಲಂಥ ಅನುಕೂಲಗಳನ್ನು ಪಡೆಯಲು ಅರ್ಹಳು ಎಂಬ ತತ್ವವನ್ನು ಧರ್ಮ ಪ್ರತಿಪಾದನೆ ಮಾಡಲಿಲ್ಲ. ಧರ್ಮ ಗ್ರಂಥಗಳ ಅಧ್ಯಯನವು ಬಹಳ ಕಡಿಮೆ ಮಹಿಳೆಯರಿಗೆ ಮಾತ್ರ ಒದಗಿಸಿದಂತ ಅವಕಾಶ ಬಹುಸಂಖ್ಯಾತ ಸ್ತ್ರೀಯರ ಪಾಲಿಗೆ ಧರ್ಮ

ಅವರ ಪಾತ್ರವನ್ನು ನಿರ್ದೇಶಿಸುವಂತ ಒಂದು ವ್ಯವಸ್ಥೆಯಷ್ಟೇ. ಹೆಣ್ಣಿನ ಹುಟ್ಟು, ವಿವಾಹ, ಶಿಕ್ಷಣ, ವೈಧವ್ಯ, ಸಾವು ಮುಂತಾದ ಸಂದರ್ಭಗಳಲ್ಲಿ ಅವಳು ಮಾಡಬಹುದಾದ ಹಾಗೂ ಮಾಡಬಾರದಂಥ ಕೆಲಸ ಕಾರ್ಯಗಳ ಪಟ್ಟಿಯನ್ನೇ ಪ್ರತೀ ಧರ್ಮಗಳೂ ಸೃಷ್ಟಿಸಿವೆ. ಮಾತೃ ದೇವೋಭವ ಎಂದು ಸಾರುವ ಧರ್ಮ, ಹೆಣ್ಣು ತನ್ನ ಸತ್ತ ಪತಿಯೊಡನೆ ಜೀವಂತವಾಗಿ ಚಿತೆಯೇರುವಂಥ ಅಮಾನುಷ ಆಚರಣೆಗೆ ಪ್ರೇರೇಪಿಸುತ್ತದೆ. ಮಾನವ ಕುಲದ ಸೃಷ್ಟಿ ಮತ್ತು ಪಾಲನೆ ಪೋಷಣೆಯನ್ನು ಹೊತ್ತ ಹೆಣ್ಣಿಗೆ ಯಾವ ಧರ್ಮವೂ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡಲಿಲ್ಲ. ಅವಳಿಗೆ ನೀಡಿರುವ ಹಕ್ಕುಗಳು ಕೆಲವಾದರೆ ಹೇರಿರುವ ನಿರ್ಬಂಧಗಳು ನೂರಾರು.

ಜಗತ್ತಿನ ಹಲವಾರು ಧರ್ಮಗಳು ಮಾತೃ ದೇವತೆಯ ಆರಾಧನೆಯನ್ನು ಎತ್ತಿ ಹಿಡಿದಿದ್ದವು. ವ್ಯವಸಾಯ ಆಧಾರಿತ ಸಮಾಜಗಳಲ್ಲಿ 'ಭೂ ಮಾತೆ' ಎಂಬ ಪರಿಕಲ್ಪನೆಗೆ ಹೋದ ಮಾನತ್ಯೆಯಿತ್ತು. ಹೆಣ್ಣಿನ ಪಾತ್ರ ಅತ್ಯಂತ ಮಹತ್ವದ್ದಾಗಿದ್ದರಿಂದ ಹೆಣ್ಣಿಗೆ ಗೌರವ ಮತ್ತು ಸ್ಥಾನಗಳು ಇದ್ದವು. ಹೆಣ್ಣನ್ನು ಉತ್ಪಾದಕಿ ಎಂದು ಪರಿಗಣಿಸಿ ಸಮುದಾಯದ ಆರ್ಥಿಕ ಜೀವನದಲ್ಲಿ ಆಕೆಗೆ ವಿಶಿಷ್ಟವಾದ ಸ್ಥಾನವನ್ನು ನೀಡಲಾಗಿತ್ತು. ಮಾನವ ಜನಾಂಗದ ಉಳಿವು ಮತ್ತು ಪಾಲನೆ ಎರಡು ಹೆಣ್ಣಿನ ಕೈಯಲ್ಲೇ ಇದ್ದುದರಿಂದ ಅವಳ ಜೈವಿಕ ಜವಾಬ್ದಾರಿಗೂ ಅಷ್ಟೇ ಮಾನ್ಯತೆಯಿತ್ತು. ಕಾಲಾನಂತರದಲ್ಲಿ ಪುರುಷದೇವರೊಳಗೆ ಅಗ್ರಸ್ಥಾನ ನೀಡುವಂತಹ ಬದಲಾವಣೆಗಳು ಉಂಟಾಗಿ, ಪುರುಷಪ್ರಧಾನತೆಯೇ ಪ್ರಮುಖವಾಯಿತು.

ಸಾಮಾಜಿಕ ವ್ಯವಸ್ಥೆಯಲ್ಲಿ ಅಲಿಖಿತವಾಗಿ ಜಾರಿಯಲ್ಲಿರುವ ಧರ್ಮದ ಹೆಸರಿನ ಕಾನೂನುಗಳು ದುರ್ಬಲ ಸಮುದಾಯಗಳನ್ನು ಪ್ರಬಲರ ಅಧೀನಗೊಳಿಸುವ ಹುನ್ನಾರಗಳೇ ಆಗಿವೆ. ಮನುಸ್ಮೃತಿಯಾಧಾರಿತ ಹಿಂದೂ ಧರ್ಮವಿರಲಿ ಅಥವಾ ಕುರಾನ್ ಆಧಾರಿತ ಮುಸ್ಲಿಂ ಧರ್ಮವಿರಲಿ ಅಥವಾ ಬೈಬಲ್ ಆಧಾರಿತ ಕ್ರಿಶ್ಚಿಯನ್ ಧರ್ಮವಿರಲಿ ಅದು ಪುರುಷ ಪರವೂ ಮಹಿಳಾ ವಿರೋಧಿಯಾಗಿರುತ್ತದೆ. ಸ್ತ್ರೀ ಪುರುಷರ ಸ್ಥಾನಮಾನ ಅಸ್ತಿತ್ವ, ಯಜಮಾನಿಕೆ, ಅಧೀನತೆ, ನೆಲೆಬೆಲೆಗಳನ್ನು ಸೂಚಿಸುತ್ತಲೇ ಆಸ್ತಿಹಕ್ಕು, ವಂಶದ ಹಕ್ಕು, ದಾಂಪತ್ಯದ ಹಕ್ಕು, ವಿಚ್ಛೇಧನ ಮತ್ತು ಮರುವಿವಾಹಗಳ ಹಕ್ಕು ಮುಂತಾದ ವಿಷಯಗಳಲ್ಲಿ ಆಯಾ ಧರ್ಮದ ಧಾರ್ಮಿಕ ವಿಚಾರಗಳು ಕಂಡುಬರುತ್ತದೆ.

ವಿಶ್ವದ ಎಲ್ಲಾ ಸಮಾಜಗಳಲ್ಲಿಯೂ ಪುರುಷಾಧಿಪತ್ಯದ ಕಾರಣದಿಂದಾಗಿ ಹೆಣ್ಣಿನ ಶೋಷಣೆ ನಡೆಯುತ್ತಲೇ ಇದೆ. ಮಾತೃಪ್ರಧಾನ ವ್ಯವಸ್ಥೆಯ ನಾಶ ಮತ್ತು ಸಮುದಾಯದ ಆಸ್ತಿ ಬದಲಾವಣೆಗಳೇ ಹೆಣ್ಣಿನ ಶೋಷಣೆಗೆ ಪ್ರಧಾನ ಕಾರಣವಾಗಿವೆ. ಮನೆಯೊಳಗಿನ ಸ್ತ್ರೀಯ ಕೆಲಸ ಕಾರ್ಯಗಳನ್ನು ಅನುತ್ಪಾದಕವೆಂದು, ಕುಟುಂಬದಾಚೆಗಿನ ಗಂಡಿನ ಕೆಲಸವನ್ನು ಉತ್ಪಾದಕವೆಂಬ ಗ್ರಹಿಕೆ ಬೆಳೆದು ಬಂದಿದ್ದರಿಂದ ಪಿತೃಪ್ರಧಾನ ವ್ಯವಸ್ಥೆಯ ಅಸ್ತಿತ್ವಕ್ಕೆ ನಾಂದಿಯಾಯಿತು. ಹೀಗೆ ಉಂಟಾದ ಸಾಂಸ್ಕೃತಿಕ ಸ್ಥಿತ್ಯಂತರವು ಹೆಣ್ಣನ್ನು ತನ್ನ ಸೇವೆಗೆ ಪರಿಕರವೆನ್ನುವಂತೆ ಪುರುಷನು ವ್ಯಾಖ್ಯಾನಿಸಿ ನಿರ್ದೇಶಿಸಲು

ಕಾರಣವಾಯಿತು. ಧರ್ಮವು ಹೆಣ್ಣಿಗೆ ಹಲವು ಹಕ್ಕುಗಳನ್ನು ನೀಡಿದ್ದರೂ ಅದರ ಮೇಲೆ ಅನೇಕ ನಿರ್ಬಂಧನೆಗಳನ್ನು ಹೇರಿದೆ. ಅವಳು ಧಾರ್ಮಿಕ ಕಾರ್ಯ ಮಾಡುವಂತಿಲ್ಲ. ಉದಾ: ಬ್ರಾಹ್ಮಣರ ಮನೆಯಲ್ಲಿ ಸ್ತ್ರೀ ದೇವರ ಮನೆ ಪ್ರವೇಶಿಸುವಂತಿಲ್ಲ. ಪುರುಷನಿಗೆ ಸಕಲ ಪೂಜಾ ಸಿದ್ಧತೆಗಳನ್ನು ಮಾಡಿಕೊಡಬೇಕು, ಆದರೆ ಪೂಜಿಸುವಂತಿಲ್ಲ. ಮುಟ್ಟಾದ ಯಾವುದೇ ಸ್ತ್ರೀ ಪೂಜೆ ಮಾಡುವಂತಿಲ್ಲ. ಹೆಣ್ಣಿಗೆ ಪ್ರಕೃತಿ ದತ್ತವಾಗಿ ಬರುವಂತಹ ಮುಟ್ಟು, ಶಿಶು ಜನನ, ವೈಧವ್ಯದಂತಹ ಸಂದರ್ಭಗಳಲ್ಲಿ ಅವಳನ್ನು ಅವಮಾನಗೊಳಿಸಲಾಗಿದೆ. ಪಾತಿವ್ರತ್ಯ, ತಾಯ್ತನದ ಮೌಲ್ಯಗಳನ್ನು ಹೇರುವ ಮೂಲಕ ಜೀವಂತ ಶವವಾಗಿ ಬಾಳಬೇಕೆಂದು ಧರ್ಮವು ಹೆಣ್ಣಿನ ಮೇಲೆ ನಿಯಮಗಳನ್ನು ನಿರ್ಬಂಧಗಳನ್ನು ಹೇರಿದೆ.

“ಇತಿಹಾಸದ ಒಂದು ಘಟ್ಟದಲ್ಲಿ ಲಿಂಗ ಹಾಗೂ ಜಾತಿ ವ್ಯವಸ್ಥೆಗಳು ತಾರತಮ್ಯದ ವ್ಯವಸ್ಥೆಯಾಗಿ ಗಟ್ಟಿಗೊಂಡಂತೆ ತಮ್ಮೊಳಗಿದ್ದ ಮುಕ್ತ ಚಲನೆಯನ್ನು ಕಳೆದುಕೊಂಡು, ಅಧಿಕಾರ ಕೇಂದ್ರೀಕರಣವು ಬಲಗೊಂಡು ಶೋಷಕ ಶೋಷಿತವೆಂಬೆರಡು ಘಟಕಗಳಾಗಿ ವಿಭಜನೆಗೊಂಡಂತೆ ಅದನ್ನು ಊರ್ಜಿತೊಳಿಸಿಕೊಳ್ಳಲು ಧರ್ಮದ ಅಗತ್ಯ ಒದಗಿದ್ದು. ಅಂತೆಯೇ ಸಾಮಾಜಿಕ ವ್ಯವಸ್ಥೆಯ ಕೇಂದ್ರದಲ್ಲಿ ಉಳಿಯಲು ಧರ್ಮವು ಅವುಗಳಿಗೆ ಪರವಾನಿಗೆ ಪುರುಷನ ಶ್ರೇಷ್ಠತೆ ಹಾಗೂ ಜಾತೀಯತೆ ಅರ್ಥಾತ್ ಬ್ರಾಹ್ಮಣ ಶ್ರೇಷ್ಠತೆಗಳು ಧರ್ಮ ನಿರ್ಬಂಧನೆಗಳಿಂದವು. ಸೃಷ್ಟಿ ಸಹಜ ಗುಣಧರ್ಮವೆಂದು ನಿರೂಪಿಸಲಾಯಿತು. ದೈವ ನಿಯಮವೆನಿಸಿತು. ಧಾರ್ಮಿಕ ಅಧಿಕಾರವು ಪುರುಷನ ಕೈ ಸೇರುವ ಮೂಲಕ ಧಾರ್ಮಿಕ ಸಂಸ್ಥೆ ಪುರುಷನ ಮುಖವಾಣಿಯಾಯಿತು. ಪಿತೃಪ್ರಧಾನತೆಯ ಎಲ್ಲಾ ಮೌಲ್ಯಗಳು, ಆಚರಣೆಗಳು, ಹುನ್ನಾರಗಳು, ಧಾರ್ಮಿಕ ವಿಧೇಯಕಗಳಾಗಿ ನಿರೂಪಿತವಾದವು. ಸೃಷ್ಟಿಕರ್ತ ಗಂಡು ಎಂಬುದರ ಮೂಲಕ ಸ್ತ್ರೀ ಪುರುಷನ ಲೀಲಾ ವಿನೋದದ ಸರಕು ಎಂಬುದನ್ನು ಮಾನ್ಯಗೊಳಿಸಿಕೊಳ್ಳಲಾಯಿತು”.[೧೨] ಇದಷ್ಟೇ ಅಲ್ಲದೆ ಹೆಣ್ಣು ಪ್ರಚೋದನೆಯಿಂದ ಪುರುಷ ಪಾಪದ ಕೆಲಸಕ್ಕೆ ಕೈ ಹಾಕಿ ಪಾಪಿಯಿಂದ ಎಂಬ ಕಟ್ಟಕಡೆಯ ಮೂಲಕ ಅವಳು ಪಾಪ ಪ್ರಚೋದಕಗಳು ಅವಳನ್ನು ನಿಯಂತ್ರಿಸುವುದೇ ಕ್ಷೇಮ ಎಂಬ ಅಭಿಪ್ರಾಯವನ್ನು ಮೂಡಿಸಲಾಯಿತು. ಸ್ತ್ರೀ ಸೃಷ್ಟಿಕರ್ತನ ಸೃಷ್ಟಿ ಎಂಬ ತಾತ್ವಿಕತೆಯು ಅವಳೊಬ್ಬ ಪರಿಪೂರ್ಣ ಮಾನವಳೆಂಬ ನಿಲುವನ್ನೇ ನಿರಾಕರಿಸಿತು.

ಕೆಲವು ಧರ್ಮಗಳ ಪ್ರಕಾರ ಸ್ತ್ರೀಯರಿಗೆ ಆತ್ಮವಿಲ್ಲ. ಕೆಲವು ಧರ್ಮಗಳಲ್ಲಿ ಸ್ತ್ರೀಯರಿಗೆ ಮೋಕ್ಷವಿಲ್ಲ. ಬೌದ್ಧ ಧರ್ಮದಲ್ಲಿಯೂ ಮೊದಲು ಸ್ತ್ರೀಯರಿಗೆ ಅವಕಾಶವಿರಲಿಲ್ಲ. ಬುದ್ಧನ ತಾಯಿ ಮಾಯಾದೇವಿ, ಹೆಂಡತಿ ಯಶೋಧರಾ, ವೇಶ್ಯಾ ಸ್ತ್ರೀ ಆಮ್ರಪಾಲಿ ಮತ್ತು ತಥಾಗತನ ಶಿಷ್ಯ ಆನಂದನ ವಾದ ವಿವಾದ ಒತ್ತಾಸೆಯಿಂದಾಗಿ ಮಹಿಳೆಯರಿಗೆ ಬೌದ್ಧ ಸನ್ಯಾಸಿನಿಯರು ಆಗಲು ಅವಕಾಶ ದೊರೆಯಿತು ಎಂಬುದು ತಿಳಿಯುತ್ತದೆ. ಜೈನ ಧರ್ಮದಲ್ಲಿ ಸ್ತ್ರೀಯರು ಕಂತಿಯರು (ಸನ್ಯಾಶಿನಿಯರು) ಆಗಬಹುದಾದರೂ ಅವರು ಸದರಿ ಜನ್ಮದಲ್ಲಿ ಅಪಾರ ಪುಣ್ಯ ಸಂಪಾದನೆ

ಮಾಡಿ ಮುಂದಿನ ಜನ್ಮದಲ್ಲಿ ಪುರುಷರಾಗಿ ಹುಟ್ಟಬೇಕು. ನಂತರವೇ ಅರಿಹಂತ ಪದವಿಗೆ ಸಮರ್ಥರು ದೈವಿಕ ಧರ್ಮದಲ್ಲಿಯಂತೂ ಹೆಣ್ಣು ಮಾಯೆ, ಬಹಿಷ್ಟೆ, ಕಂಟಕಿ, ಪಾಪಾತ್ಮ ಎಂದೆಲ್ಲ ಮನುಸ್ಮೃತಿ, ಯಜ್ಞವಲ್ಕ್ಯ ಸ್ಮೃತಿಗಳಲ್ಲಿ ಬರೆಯಲಾಗಿದೆ.

ವೇದ ಕಾಲದಲ್ಲಿ ಸ್ತ್ರಿಯರಿಗೆ ಧಾರ್ಮಿಕ ಸ್ವಾತಂತ್ರ್ಯವಿತ್ತು. ಸ್ತ್ರೀಯರು ಬ್ರಹಕ್ಮವಾದಿನಿಯರಾಗಿ ಬ್ರಹ್ಮ ಸಭೆಗಳಲ್ಲಿ ಪುರುಷರ ಸಮಾನವಾಗಿ ವಾದ ಮಾಡಬಲ್ಲವರಾಗಿದ್ದರು ಎಂದು ಅಪಾಲಾ, ಲೋಪಮುದ್ರ, ಮೈತ್ರೇಯಿ, ಗಾರ್ಗಿ ಮುಂತಾದವರಿಗೆ ಹೇಳಬಹುದು. ಆದರೆ ಇವರು ಯಾರು ಸಾಮಾನ್ಯ ಮಹಿಳೆಯರು ಆಗಿರಲಿಲ್ಲ. ಉನ್ನತವರ್ಗದ ಉಚ್ಛ ವರ್ಣದ ಋಷಿ ಪತ್ನಿಯರಾಗಿದ್ದರು. ಸ್ತ್ರೀಯರಿಗೆ ಇಂದಿಗೂ ಕೆಲವು ಕಡೆ ಗರ್ಭಗುಡಿಗಳಲ್ಲಿ ಪ್ರವೇಶವಿಲ್ಲ. ದೇವರನ್ನು ಪೂಜಿಸುವ ಹಕ್ಕಿಲ್ಲ. ಮುಟ್ಟಾಗುವುದರಿಂದ ಮೈಲಿಗೆಯಾಗುತ್ತಾಳೆ ಎಂಬ ನಂಬಿಕೆ ಅವಳನ್ನು ಧಾರ್ಮಿಕ ಆಚರಣೆಗಳಲ್ಲಿ ಪಾಲ್ಗೊಳ್ಳಲು ಬಿಡುತ್ತಿಲ್ಲ. ಆದರೆ ಹೀಗಿರುವಾಗಲೂ ದೇವರ ಹೆಸರಿನಲ್ಲಿ ಉಪವಾಸ, ವ್ರತ, ನೇಮಗಳನ್ನು ಹೆಚ್ಚಾಗಿ ಆಚರಿಸುವವರು ಮಹಿಳೆಯರೇ ದೇವರ ಹೆಸರಿನಲ್ಲಿ ಬೆತ್ತಲೆ ಪೂಜೆ, ಬಸವಿ, ದೇವದಾಸಿ ಬಿಡುವುದು ಮುಂತಾದ ಆಚರಣೆಗಳಲ್ಲಿ ಹೆಣ್ಣನ್ನೇ ಬಳಸುವುದು ವಿಪರ್ಯಾಸ. ಪೂಜೆಯ ಹಕ್ಕಿಲ್ಲದವಳನ್ನು ದೇವರ ಹೆಸರಿನಲ್ಲಿ ಪುರುಷನ ಬಳಕೆಗೆ ಉಪಯೋಗಿಸುವುದು ಪುರುಷ ಪ್ರಾಧಾನ್ಯತೆಯ ಲಿಂಗ ರಾಜಕಾರಣವನ್ನು ತೋರಿಸುತ್ತದೆ.

'ನ ಪುತ್ರಸ್ಯ ಗತಿನ್ನಾಸ್ತಿ' ಅಂದರೆ ಗಂಡು ಸಂತಾನವಾಗದಿರುವವರಿಗೆ ಮೋಕ್ಷವಿಲ್ಲ. ಸತ್ತ ತಂದೆ ತಾಯಂದಿರಿಗೆ ಮೋಕ್ಷ ದೊರೆಯಬೇಕಾದರೆ ಗಂಡು ಸಂತಾನ ಬೇಕೇಬೇಕು. ಶ್ರಾದ್ಧ ಮಾಡಿ ತರ್ಪಣ ನೀಡುವ ಅಥವಾ ಚಿತೆಗೆ ಬೆಂಕಿ ಹಚ್ಚುವ ಅಧಿಕಾರ ಹಿರಿಯ ಗಂಡು ಮಗನಿಗೆ ಮಾತ್ರವಿದೆ. ಪುರಾಣಗಳಲ್ಲಿ ಪುತ್ರ ಪ್ರಾಪ್ತಿಗಾಗಿ ಮಾಡುವ ಪೂಜೆ ಪುನಸ್ಕಾರ ಯಾಗ ಯಜ್ಞಗಳ ಪ್ರಸ್ತಾವನೆ ಇದೆ. ಪುತ್ರಕಾಮೇಷ್ಟಿಯಾಗದ ಉದಾಹರಣೆಗಳು ದೊರೆಯುತ್ತದೆಯೇ ಹೊರತು ಪುತ್ರಿ ಪ್ರಾಪ್ತಿಗಾಗಿ ಇಂಥ ಯಾವುದೇ ಆಚರಣೆಗಳು ಇದ್ದಂತೆ ಕಂಡುಬರುವುದಿಲ್ಲ. ಧರ್ಮ ಸಂಹಿತೆಗಳಲ್ಲಿ ಸ್ತ್ರೀಯರ ಕರ್ತವ್ಯಗಳನ್ನು ಕುರಿತು ಹೇಳಲಾಗಿದೆ. ಅವರ ಹಕ್ಕನ್ನು ಪ್ರತಿಪಾದಿಸಲಾಗಿಲ್ಲ ಉದಾ:- ಚಾಣಕ್ಯ ನೀತಿ ನಾರಿ ಧಾರಿಣಿಗೆ ಒಡೆಯಳಲ್ಲ. ಅವಳು, ಒಡೆಯನಾದವನು ತನ್ನ ನಡೆಗೆ ಬಳಸುವ ಊರುಗೋಲು, ಶತ್ರು ಸಂಹಾರಕ್ಕೆ ರಾಜನು ಹೆಣ್ಣನ್ನು ಅಸ್ತ್ರದಂತೆ ಬಳಸಬಹುದು. ಬೊಕ್ಕಸ ಬರಿದಾದಾಗ ತನ್ನ ನಾಡಿನಲ್ಲಿ ಚೆಲುವಾದ ಹೆಣ್ಣುಗಳನ್ನು ವೇಶ್ಯಾವಾಟಿಕೆಗೆ ಇಳಿಸಿ ಕರಧನ ಸಂಗ್ರಹಿಸಬಹುದು ಎಂದು ಹೇಳುತ್ತದೆ. ಅಂದರೆ ಹೆಣ್ಣಿನ ಧಾರ್ಮಿಕ ನಿರ್ಬಂಧಗಳನ್ನು ಹೇರುವುದಲ್ಲದೆ ಅದೇ ಹೆಣ್ಣನ್ನು ಅವಳು ದೇಹದ ಕಾರಣಕ್ಕೆ ಅನೈತಿಕ ವ್ಯವಹಾರಕ್ಕೆ ದೂಡಬೇಕು ಎಂದು ಧರ್ಮ ಸಂಹಿತೆ ಹೇಳುವುದು ಎಷ್ಟು ವಿಷಾದನೀಯ.

ಎಲ್ಲಾ ಧರ್ಮಗಳಲ್ಲಿಯೂ ಹೆಣ್ಣಿನ ಪಾತ್ರ, ಸ್ಥಾನ ಹಾಗೂ ಪ್ರಾಮುಖ್ಯತೆಗಳನ್ನು ಕುರಿತಂತೆ ಅನೇಕ ಗೊಂದಲಮಯ ಅಭಿಪ್ರಾಯಗಳಿವೆ. ಒಂದೆಡೆ ಸ್ತ್ರೀಗೆ ಗೌರವ ಸೂಚನೆ, ಮತ್ತೊಂದೆಡೆ

ನಿಂದನೆಯ ಪ್ರವೃತ್ತಿಯನ್ನು ಧರ್ಮದಲ್ಲಿ ಕಾಣಬಹುದು. ಪುರುಷನಿಗೆ ಅನೇಕ ಸವಲತ್ತು ಸಮ್ಮಾನಗಳನ್ನು ನೀಡುತ್ತಾ ಸ್ತ್ರೀಗೆ ಅವಳನ್ನು ನಿರಾಕರಿಸುವಂಥ ಧಾರ್ಮಿಕ ವ್ಯವಸ್ಥೆಯೇ ಎಲ್ಲೆಡೆ ಇರುವುದು. ಬಹಳಷ್ಟು ಸ್ತ್ರೀಯರು ಧರ್ಮದ ಸಾರವನ್ನು ಅರಿಯಲು ಅವಶ್ಯವಾದ ಜ್ಞಾನಾರ್ಜನೆಯ ಪ್ರಕ್ರಿಯೆಯಿಂದಲೇ ದೂರವಿಡಲ್ಪಟ್ಟಿದ್ದರಿಂದ ಅವರ ಪಾತ್ರವನ್ನು ಕುರಿತಂತೆ ಧರ್ಮ ಗ್ರಂಥಗಳು ಏನನ್ನು ಹೇಳುತ್ತವೆ ಎಂಬುದನ್ನು ಅವರಿಗೆ ತಿಳಿಯಲು ಅವಕಾಶಗಳೇ ಇರಲಿಲ್ಲ. ಪುರುಷನಿಂದ ಸೃಷ್ಟಿಯಾಗಿ, ಪುರುಷನಿಂದ ಅರ್ಥೈಸಲ್ಪಟ್ಟ ಪುರುಷನಿಂದಲೇ ನಿಯಂತ್ರಿಸಲ್ಪಡುತ್ತಿರುವ ಧರ್ಮ ಎನ್ನುವ ವ್ಯವಸ್ಥೆ ಸ್ತ್ರೀಪರವಾದ ಅಂಶಗಳಿಗೆ ಹೆಚ್ಚಿನ ಒತ್ತನ್ನೂ ನೀಡಿಲ್ಲ. ಈ ಎಲ್ಲಾ ಧಾರ್ಮಿಕ ನಿರ್ಬಂಧಗಳನ್ನು ಹೆಣ್ಣು ಕೇವಲ ಅವಳ ದೇಹದ ಕಾರಣಕ್ಕೆ ವಿಧಿಸಲಾಗಿದೆ. ಒಂದು ಕಡೆ ಹೆಣ್ಣನ್ನು ರಕ್ಷಿಸುವ ಮಾತನ್ನಾಡುವ ಪುರುಷ ಧಾರ್ಮಿಕ ನಿರ್ಬಂಧಗಳನ್ನು ವಿಧಿಸುತ್ತಾ ಮತ್ತೊಂದು ಕಡೆ ಅನೈತಿಕವಾದ ಕೃತ್ಯಗಳಿಗೆ ಅವಳನ್ನು ಬಲಿಪಶುವಾಗಿಸುತ್ತಿದ್ದಾನೆ. ಇದೆಲ್ಲಕ್ಕೂ ಹೆಣ್ಣಿನ ದೇಹದ ಮೇಲಿನ ಪುರುಷಾಧಿಕಾರವೇ ಕಾರಣ.

### ೩.೪ ಹೆಣ್ಣು ದೇಹದ ಮೇಲಿನ ಸಾಮಾಜಿಕ ನಿಷೇಧ

ಹೆಣ್ಣು ಸ್ವಾತಂತ್ರಕ್ಕೆ ಅರ್ಹಳಲ್ಲ ಎಂಬ ಮನುವಿನ ನಿಷೇಧವು ಹೆಣ್ಣನ್ನು ಸಾಮಾಜಿಕವಾಗಿ ನಿಷೇಧಕ್ಕೊಳಪಡಿಸಿದೆ. ಬಹಿರಂಗವಾಗಿ ಹೆಣ್ಣು ಎಲ್ಲಾ ತನ್ನ ಸ್ವಂತ ಅಪೇಕ್ಷೆಗಳನ್ನು ತೋರಿಸಿಕೊಳ್ಳಬಾರದು. ಕುಟುಂಬದ ನಾಲ್ಕು ಗೋಡೆಗಳ ಮಧ್ಯೆ ಅವಳು ಬಂಧಿಯಾಗಿರಬೇಕು. ಗೌರವದ ಅಲಂಕಾರದ ವೇಷ ಭೂಷಣಗಳನ್ನು ಹೆಣ್ಣಿನ ದೇಹದ ಮೇಲೆ ಪುರುಷಾಧಿಪತ್ಯವು ಹೊದಿಸಿದೆ. ಹುಟ್ಟಿನಿಂದ ಸಾಯುವವರೆಗೂ ಪರರನ್ನು ಅವಲಂಬಿಸಿಯೇ ಬದುಕಬೇಕು ಸಾರ್ವಜನಿಕವಾದ ಯಾವ ಚಹರೆಯೂ ಹೆಣ್ಣಿಗಿಲ್ಲ. ಆಕೆ ಯಾವಾಗಲೂ ತಲೆ ತಗ್ಗಿಸಿಯೇ ನಡೆಯಬೇಕು. ಹೆಣ್ಣು ಬಹಿರಂಗವಾಗಿ ಏನನ್ನೂ ಮಾತನಾಡುವಂತೆಯೂ ಇಲ್ಲ. ಈ ಹಿನ್ನೆಲೆಯಲ್ಲಿ ಬೆಳೆದು ಬಂದ ಪುರುಷ ಸಮಾಜವು ಹೆಣ್ಣಿನ ಮೇಲೆ ಧರ್ಮ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ಅನೇಕ ನಿಷೇಧಗಳನ್ನು ಹೇರಿವೆ.

ಹೆಣ್ಣು ಎಂದಿಗೂ ಗಂಡಿನ ವಿರುದ್ಧ ಮಾತನಾಡುವಂತಿಲ್ಲ. ಹೆಣ್ಣು ಯಾವ ಅಧಿಕಾರಕ್ಕೂ ಯೋಗ್ಯಳಲ್ಲ. ಹೆಣ್ಣು ಮುಕ್ತಿ ಮಾರ್ಗಕ್ಕೆ ಅರ್ಹಳಲ್ಲ, ಸಾರ್ವಜನಿಕವಾಗಿ ತನ್ನ ಅಪೇಕ್ಷೆಗಳನ್ನು ಹೇಳಿಕೊಳ್ಳುವಂತಿಲ್ಲ, ಹೆಣ್ಣು ಧಾರ್ಮಿಕ ವಿಧಿವಿಧಾನಗಳಿಗೆ ಅರ್ಹಳಲ್ಲ, ಹೆಣ್ಣಿಗೆ ಆಸ್ತಿಯಲ್ಲಿ ಪಾಲು ಪಡೆದ ಅಧಿಕಾರವಿಲ್ಲ. ಹೆಣ್ಣು ಪತಿಗೆ ಮಾತ್ರ ನಿಷ್ಠಳಾಗಿದ್ದು ಬೇರೆ ಯಾವ ಪರ ಪುರುಷನ ಮುಖವನ್ನು ನೋಡಬಾರದು. ಗಂಡ ಸತ್ತ ನಂತರ ವಿಧವೆಯಾಗಿ ಇರಬೇಕು, ಮರು ಮದುವೆ ಆಗಬಾರದು, ಸದಾ ವಿಧೇಯಳಾಗಿದ್ದು, ಯಾವ ಪ್ರಶ್ನೆಗಳನ್ನು ಆಕೆ ಕೇಳಬಾರದು, ಸಮಾಜದಲ್ಲಿ ಹೆಣ್ಣು ಶೀಲವಂತಳಾಗಿರಬೇಕು, ಪಾತಿವ್ರತ್ಯಕ್ಕೆ ಹೆಚ್ಚು ಮಹತ್ವ ನೀಡಬೇಕು. ಶೀಲಗೆಟ್ಟ ಹೆಣ್ಣು ನಾಯಿ ಮುಟ್ಟಿದ ಮಡಕೆಯಂತೆ, ಕೊಟ್ಟ ಹೆಣ್ಣು ಕುಲಕ್ಕೆ ಹೊರಗು, ಬಿಟ್ಟ ಹೆಣ್ಣು ಬೀದಿ ಪಾಲು ಹೀಗೆ

ನೂರಾರು ಬಗೆಯ ನಿಷೇಧಗಳನ್ನು ಪಟ್ಟಿ ಮಾಡುತ್ತಾ ಹೋಗಬಹುದು. ಈ ಎಲ್ಲಾ ರೀತಿಯ ನೀತಿ ನಿಯಮ ನಿರ್ಬಂಧಗಳು ಹೆಣ್ಣು ಲಿಂಗ ಸಂಬಂಧ ಮತ್ತು ದೇಹ ಸಂಬಂಧಗಳ ಮೂಲಕವೇ ಬಂದಿವೆ ಎನ್ನಬಹುದು.

ಸಾಮಾಜಿಕ ನಿಷೇಧಗಳ ಮೂಲಕ ಪುರುಷ ಹೆಣ್ಣನ್ನು ನಿಯಂತ್ರಿಸಲು ಪ್ರಯತ್ನಿಸಿದ್ದಾನೆ. ಒಂದು ಮಗುವನ್ನು ಹೆತ್ತು ಹೊತ್ತು ಸಾಕಿ ಸಲಹಿ ತನ್ನ ಯಾವುದೇ ಚಹರೆಯೂ ಇಲ್ಲದೆ ಕಣ್ಣು ಮುಚ್ಚುವ ಹೆಣ್ಣಿನ ಅಂತರಂಗವನ್ನು ಪುರುಷ ಅರಿಯುವುದಿಲ್ಲ. ಉಂಡು ಎಸೆವ ಎಲೆಗೆ ಹೆಣ್ಣು ತನ್ನನ್ನು ಹೋಲಿಸಿಕೊಂಡಿರುವುದರ ಹಿಂದಿನ ದುರಂತ ಸ್ಥಿತಿಯನ್ನು ಸಾಮಾಜಿಕವಾಗಿ ಪರಿಶೀಲಿಸಬೇಕು. ಗಂಡು ತನ್ನ ಭೋಗಕ್ಕೆ ಹೆಣ್ಣುಗಳನ್ನು ಅಪಹರಿಸುವ ಹಾಗೆ ಗೆದ್ದ ರಾಜರು ಹೆಣ್ಣುಗಳನ್ನು ಸುಖಕ್ಕಾಗಿ ಭೋಗಿಸುವ ಕತೆಗಳು ಚರಿತ್ರೆಯಲ್ಲಿ ಸಾಕಷ್ಟು ಸಿಗುತ್ತವೆ. ಗೆದ್ದ ಸೈನಿಕರು ಸೋತ ಸೈನಿಕರ ಹೆಣ್ಣು ಮಕ್ಕಳನ್ನು ಅಪಹರಿಸಿ ಭೋಗಿಸುತ್ತಿದುದ್ದಕ್ಕೆ ಸಾಕ್ಷಿಗಳು ಸಾವಿರಾರು. ಚರಿತ್ರೆಯ ಯಾವ ಪುಟದಲ್ಲಿ ಯಾವ ರಾಜನು ಹೆಣ್ಣಿನ ಮೇಲಿನ ಹಲ್ಲೆಗೆ ವಿರುದ್ಧವಾಗಿ ರಾಜ್ಯನೀತಿ ರೂಪಿಸಿದ್ದು, ಕಾನೂನು ರೂಪಿಸಿದ್ದು, ಕಂಡು ಬರುವುದಿಲ್ಲ. ಸಾಮ್ರಾಜ್ಯಗಳು ಅಳಿಸಿಹೋದರೂ ಅವು ಉಳಿಸಿ ಹೋಗಿರುವ ಮೌಲ್ಯಗಳು ಮರೆಯಾಗಿಲ್ಲ. ಈಗಲೂ ನಾಗರೀಕತೆಯ ಹೆಸರಿನಲ್ಲಿ ಹೆಣ್ಣಿನ ಭೋಗದಲ್ಲಿ ಮುಳುಗಿವೆ. ಸಾಮಾಜಿಕ ರಚನೆಯಲ್ಲಿ ಹೆಣ್ಣಿನ ಘನತೆಯನ್ನು ಕಿರಿದಾಗಿಸುವ ನಾಗರೀಕ ಸಂಹಿತೆಗಳು ಗುಪ್ತವಾಗಿ ಕ್ರಿಯಾಶೀಲವಾಗಿರುತ್ತವೆ. ಭಾರತೀಯ ಸಮಾಜವಂತೂ ಹೆಣ್ಣಿನ ಸ್ಥಾನಮಾನಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡು ಈಗಲೂ ಆಕೆಯನ್ನು ಭೋಗದ ವಸ್ತು ಮಾತ್ರವಾಗಿ ಲೈಂಗಿಕ ಸುಖಕೊಡುವ ಸಖಿ ಅಥವಾ ಗುಲಾಮಳನ್ನಾಗಿ, ಮಕ್ಕಳು ಹೆರುವ ಯಂತ್ರವಾಗಿಯೇ ಬಳಸಿಕೊಳ್ಳುತ್ತಿದೆ.

ಸಮಾಜದ ಮೇಲು ಜಾತಿಗಳು ಕೀಳು ಅಥವಾ ಕೆಳವರ್ಗದ ಜಾತಿಗಳ ಹೆಣ್ಣುಮಕ್ಕಳನ್ನು ಬಹಳಷ್ಟು ಕ್ರೂರವಾಗಿ ಹಿಂಸಿಸುತ್ತಿವೆ. ತಮ್ಮ ಜಾತಿಯ ಹೆಣ್ಣುಮಕ್ಕಳನ್ನು ಕಾಪಾಡಿಕೊಳ್ಳುವ ಸ್ವಾರ್ಥದ ಆಸಕ್ತಿಯಿಂದಾಗಿ ಕೆಳ ಜಾತಿಯ ಹೆಣ್ಣುಮಕ್ಕಳನ್ನು ಲೈಂಗಿಕ ಶೋಷಣೆಗೆ ಬಳಸಿಕೊಂಡು ಸಾಮಾಜಿಕವಾಗಿ ದೇವದಾಸಿ ವೇಶ್ಯಾವಾಟಿಕೆಯಂತಹ ಪದ್ಧತಿಗಳನ್ನು ಜೀವಂತವಾಗಿಸಿವೆ. ಹೆಣ್ಣಿನ ರಕ್ಷಣೆ ಮಾಡುವ ನಾಟಕವಾಡುತ್ತಾ ಅವಳನ್ನು ಅಬಲೆಯನ್ನಾಗಿಸಿ ಅವಳ ಹಕ್ಕುಗಳನ್ನು ಕಸಿದುಕೊಳ್ಳಲಾಗಿದೆ.

ಹೆಣ್ಣಿಗಾಗಿ ಮಹಾ ಯುದ್ಧಗಳನ್ನು ಮಾಡಿರುವ ಪುರುಷ ಸಾಮ್ರಾಜ್ಯಗಳು ಹೆಣ್ಣಿನ ಮೇಲೆ ಸರ್ವಾಧಿಕಾರ ಚಲಾಯಿಸಿವೆ. ರಾಮಾಯಣ, ಮಹಾಭಾರತಗಳು ಹೆಣ್ಣಿನ ಕಾರಣಕ್ಕೆ ಯುದ್ಧ ಮಾಡುತ್ತದೆ. ಶ್ರೀಕೃಷ್ಣ ದ್ರೌಪದಿಯ ಮಾನ ಕಾಪಾಡಿದ ಎಂದು ಅಪರೂಪಕ್ಕೆ ಒಂದು ಸಂದರ್ಭವಾದರೂ ಅದೇ ಶ್ರೀಕೃಷ್ಣನ ರಾಸಲೀಲೆಗಳು ನೈತಿಕವಾದವುಗಳಲ್ಲ. ಹೆಣ್ಣಿನ ಮಾನ ಕಾಪಾಡುವ ಜವಾಬ್ದಾರಿ, ಹೊಣೆಗಳು ಗಂಡಿಗೆ ಇರುವುದು ನಿಜವಾದರೂ ಆತ ತನಗೆ ಸಂಬಂಧಿಸಿದ ಹೆಣ್ಣಿಗೆ ಮಾತ್ರ ಸೀಮಿತಗೊಂಡಿರುತ್ತಾನೆ. ಪರ ಸ್ತ್ರೀಯರನ್ನು ಕಾಪಾಡುತ್ತಾನೆ ಎಂದು ನಂಬಲಾಗದು. ಏಕೆಂದರೆ

ಪ್ರತಿಯೊಂದು ಹೆಣ್ಣಿನ ಬಗ್ಗೆ ಪ್ರತಿಯೊಬ್ಬ ಪುರುಷ ಕಾಪಾಡುವ ಹೊಣೆ ಹೊಂದಿದ್ದರೆ ಇಂದು ಯಾವ ಹೆಣ್ಣು ಮಕ್ಕಳು ವೇಶ್ಯಾವಾಟಿಕೆಯಲ್ಲಿ ಇರುತ್ತಿರಲಿಲ್ಲ. ಅನೈತಿಕ ಸಾಗಾಣಿಕೆಗೆ ಒಳಗಾಗುತ್ತಿರಲಿಲ್ಲ.

ಧರ್ಮಗಳೂ ಸಹ ಸಮಾಜದಲ್ಲಿ ಮಹಿಳೆಯನ್ನು ಕನಿಷ್ಠವಾಗಿ ತೋರಿಸಿವೆ. ತನ್ನ ಧರ್ಮದ ಹೆಣ್ಣು ದೇಹವನ್ನು ಇನ್ನೊಂದು ಅಥವಾ ಅನ್ಯ ಧರ್ಮದ ಪುರುಷರು ನೋಡಬಾರದು ಎಂಬ ಸ್ವಾರ್ಥ ಗಂಡಸಿನ ಮನಸ್ಸಿನ ಬಹಳ ದೊಡ್ಡ ಸಾಕ್ಷಿ. ಹೆಣ್ಣಿನ ದೇಹದ ಮೇಲಿನ ಒಡೆತನದ ಕಾರಣಕ್ಕೆ ಅವರ ನಡತೆ ಭಯಂಕರವಾಗಿದೆ. ಹೆಣ್ಣನ್ನು ಸುಂದರವಾದ ಉಡುಗೆ ಕೊಡುಗೆಗಳಿಂದ ಮುಚ್ಚುವುದು. ಬುರ್ಕಾದಲ್ಲಿ ಬಂಧಿಸುವುದು. ಒಡವೆಗಳಿಂದ ಅಲಂಕರಿಸಿ ಅದರಿಂದ ಮರೆಮಾಚುವುದೆಲ್ಲವೂ ಸಾಮಾಜಿಕವಾಗಿ ಹೆಣ್ಣಿನ ದೇಹವನ್ನು ಬಚ್ಚಿಟ್ಟು ಅವಳಿಗೆ ಸಾರ್ವಜನಿಕ ವ್ಯಕ್ತಿತ್ವವೇ ಇಲ್ಲದಂತೆ ಬಂಧಿಸುವುದಕ್ಕೆ ಮಾಡಿದ ಹುನ್ನಾರವೇ ಆಗಿದೆ. ವಿಧವೆಯರು ಸೆರಗು ಹಾಕಿಕೊಂಡು ಕತ್ತಲೆ ಮೂಲೆಯಲ್ಲಿ ನಿರಾಭರಣವಾಗಿ ಜೀವಿಸಬೇಕು, ಹೆಣ್ಣು ಮೈ ತುಂಬ ಬಟ್ಟೆ ತೊಟ್ಟು ತಲೆಯ ಮೇಲೆ ಸೆರಗು ಹೊದ್ದು ಓಡಾಡಬೇಕು. ಅವಳ ರಕ್ಷಣೆಗಿಂತಲೂ ಅವಳ ದೇಹವನ್ನು ಮತ್ಯಾರೂ ನೋಡಬಾರದು ಎಂಬುದೇ ಮುಖ್ಯವಾಗಿದೆ. ಸ್ವಂತ ತಾಯಾದವಳು ಗಂಡು ಮಕ್ಕಳಲ್ಲಿ ಮುಕ್ತವಾಗಿ, ಏಕಾಂತವಾಗಿ ಕೂತು ಮಾತನಾಡಿಸಲು ಅವಕಾಶವಿಲ್ಲ. ಮನುವಿನ ಪ್ರಕಾರ, ಸ್ವತಃ ತಾಯಿ ಮಗ ಒಂದು ಕೊಠಡಿಯಲ್ಲಿ ಏಕಾಂತದಲ್ಲಿರುವುದು ತಪ್ಪು, ಒಂದೆಡೆ ಸೇರಿದರೆ ಅವರಿಬ್ಬರೂ ಕೂಡುವರು ಎಂಬ ಅಪಾಯವನ್ನು ಹೇಳುತ್ತಾನೆ. ಹೌದು ಹೆತ್ತವಳಲನ್ನೇ ಮುಟ್ಟಿ ಬಿಡಬಹುದು ಎಂಬ ಮನುವಿನ ಆತಂಕ ನಿಜವೇ ಆದರೆ ಇಲ್ಲಿ ತಾಯಿ ಭಯದಲ್ಲಿ ಹೆಣ್ಣಿನ ಆತಂಕವಲ್ಲ ಗಂಡಿನ ಭಯವೇ ಅಧಿಕ ಇತ್ತೀಚಿನ ಪತ್ರಿಕೆಗಳಲ್ಲಿ ವರದಿಯಾಗುವ ಸುದ್ಧಿಗಳನ್ನು ನೋಡಿದರೆ ಅದು ನಿಜವಾಗಿದೆ. ಅಪ್ಪ ಮಗಳನ್ನೇ ಅತ್ಯಾಚಾರ ಮಾಡಿರುವುದು, ಮಗ ತಾಯಿಯನ್ನೇ ಭೋಗಿಸುವುದು, ಸೊಸೆಯನ್ನೇ ಮಾವ ಅನುಭವಿಸಿರುವ ಪ್ರಕರಣಗಳು ವರದಿಯಾಗುತ್ತಲೇ ಇವೆ. ಎಲ್ಲಾ ಪುರುಷರೂ ನೀಚರಲ್ಲದಿದ್ದರೂ ಸಹ ಪುರುಷ ಪ್ರಧಾನ ವ್ಯವಸ್ಥೆ ಅಪಾಯಕಾರಿಯಾದುದು.

**೩.೫ ಹೆಣ್ಣು ಮತ್ತು ಮಾರುಕಟ್ಟೆ**

ನಾಗರೀಕತೆಯು ಬೆಳೆದು ಬಂದಂತೆ ಆಧುನಿಕ ಜಗತ್ತು ತನ್ನ ರೂಪವನ್ನು ಅತ್ಯಂತ ನಾಜೂಕಾಗಿ ಬದಲಾಯಿಸಿಕೊಳ್ಳುತ್ತಾ ಬಂದಿದೆ. ಹೆಣ್ಣು ಗಂಡಿನ ಆಧುನಿಕ ಜೀವನ ಶೈಲಿಗಳಲ್ಲಿ ಮೌಲ್ಯಗಳಲ್ಲಿ ಅನೇಕ ಬದಲಾವಣೆಗಳು, ಮಾರ್ಪಾಡುಗಳಾಗುತ್ತಿವೆ. ಹಾಗೆಯೇ ಹೆಣ್ಣಿನ ಮೇಲೆ ನಡೆಯುತ್ತಿರುವ ಶೋಷಣೆಯು ತನ್ನ ಮುಖವಾಡವನ್ನು ವಿಭಿನ್ನವಾದ ಕ್ರಮಗಳಿಗೆ ರೂಪಾಂತರಿಸಿಕೊಂಡು ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಆಧುನಿಕ ಸಮಾಜದಲ್ಲಿ ಮೇಲು ನೋಟಕ್ಕೆ ಹೆಣ್ಣು ಗಂಡಿನ ಸಂಬಂಧಗಳು ಸುಧಾರಿಸಿವೆ ಎಂಬಂತೆ ಕಂಡುಬಂದರೂ, ಹೆಣ್ಣು ದೇಹದ ಶೋಷಣೆ ಲೈಂಗಿಕ ಹಿಂಸೆ ದೌರ್ಜನ್ಯಗಳು ಹೊಸತನದ ಮುಖವಾಡವನ್ನು ಹೊತ್ತಿವೆ. ಹೊಸ ಬಾಟಲಿಯಲ್ಲಿ ಹಳೇ

ಮದ್ಯ ಎನ್ನುವ ಹಾಗೆ ಮೂಲ ಅದೇ ಇದ್ದರೂ ರೀತಿ ಮಾತ್ರ ಹೊಸದಾಗಿದೆ. ಇವುಗಳ ಬಗ್ಗೆ ಸ್ತ್ರೀ ವರ್ಗ ಜಾಗೃತಿಗೊಂಡು ತನ್ನ ಹಕ್ಕುಗಳನ್ನು ಒಂದಷ್ಟು ಪ್ರಮಾಣದಲ್ಲಿ ಸಾಧಿಸಿಕೊಂಡಿದ್ದರೂ ಮೂಲಭೂತ ಪೂರ್ವಾಗ್ರಹಗಳು ನಾಶಗೊಂಡಿಲ್ಲ ಎಂಬುದು ಸತ್ಯ ಸಂಗತಿ.

ಹೆಣ್ಣಿನ ದೇಹವನ್ನು ಪುರುಷ ಅನುಭೋಗದ ತಂತ್ರಗಳು, ತಂತ್ರಜ್ಞಾನದ ಬಳಕೆಯ ಸಹಾಯದಿಂದ ನಿಯಂತ್ರಿಸುತ್ತಿದೆ. ಒಂದು ಜೀವವನ್ನು ಸೃಷ್ಟಿಸಿ ಸಂತಾನೋತ್ಪತ್ತಿಗೆ ಸಹಾಯಕವಾಗುವ ಒಂದು ಹೆಣ್ಣು ಜೀವವನ್ನು ಈ ಆಧುನಿಕ ಸಮಾಜವು ಒಂದು ಸರಕು ವಸ್ತು ಎನ್ನುವ ರೀತಿಯಲ್ಲಿ ಭಾವಿಸಿ ಬಳಸಿಕೊಳ್ಳುತ್ತಿದೆ. ಪ್ರಪಂಚದ ಎಲ್ಲಾ ಬಗೆಯ ಆಧುನಿಕ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಹೆಣ್ಣು ಬೆಲೆಯುಳ್ಳ ವಸ್ತು ಮಾರುಕಟ್ಟೆಯ ಆಕರ್ಷಕ ಬಂಡವಾಳ. ಇಂದಿನ ಬಂಡವಾಳಶಾಹಿ ಜಗತ್ತು ತನ್ನ ಮಾರುಕಟ್ಟೆಯ ಅಭಿವೃದ್ಧಿಗೆ ಆರಂಭಕ್ಕೆ ಹೆಣ್ಣಿನ ದೇಹವನ್ನು ಅತ್ಯಂತ ಆಕರ್ಷಕವಾಗಿ ಹಾಗೆಯೇ ಹೀನಾಯವಾಗಿ ಬಳಸಿಕೊಳ್ಳುತ್ತಿದೆ. ಪುರುಷ ಪ್ರಧಾನತೆಯು ಹೆಣ್ಣು ದೇಹದ ಲೈಂಗಿಕತೆ, ಅದರ ಸಾಮಾರ್ಥ್ಯಗಳು ಮತ್ತು ಈ ಹೆಣ್ಣು ದೇಹಗಳನ್ನು ತನ್ನ ರಾಜಕೀಯ ಹುನ್ನಾರಗಳಲ್ಲಿ ನಿರ್ಬಂಧಿಸಿ ಇಟ್ಟಿದೆ.

ಇಂದಿನ ಸಮಾಜದಲ್ಲಿ ಹೆಣ್ಣು ಸಾಮಾನ್ಯವಾಗಿ ಅವಳ ದೇಹವಷ್ಟೇ ಆಗಿ ಪ್ರತಿನಿಧೀಕರಣಗೊಳ್ಳುತ್ತಾಳೆ. ಅವಳ ದೇಹವನ್ನು ಕುರಿತ ಯಾವ ಮಾಹಿತಿಗಳೂ ಅವಳಿಗೆ ದಕ್ಕದೆ ಹೋಗುವಂತೆ ಮಾಡಲಾಗುತ್ತದೆ. ಮತ್ತು ಆ ದೇಹವನ್ನು ಬಳಕೆಯ ದೃಷ್ಟಿಯಿಂದ ಮಾತ್ರ ಪರಿಭಾವಿಸಲಾಗುತ್ತದೆ. ನಮ್ಮ ಕನ್ನಡ ನಾಡಿನ ಸ್ತ್ರೀವಾದಿ ಚಿಂತಕಿಯಾದ ಹೆಚ್.ಎಸ್.ಶ್ರೀಮತಿಯವರು ಹೇಳುವಂತೆ "ದೇಹ ಎಂಬುದು ನಾವು ಬಯಸಿ ಪಡೆದದ್ದು ಎಂಬುದಂತೂ ಅಲ್ಲ. ಅದರ ವೈವಿಧ್ಯಮಯ ಹಾಗೂ ವೈರುಧ್ಯದ ಕಾರ್ಯ ಚಟುವಟಿಕೆಗಳ ಮೇಲೆ ನಮ್ಮ ಹಿಡಿತ ಎಂಬುದೇನೂ ಇಲ್ಲ. ಇಂಥ 'ದೇಹ' ಎಂಬ ನಮ್ಮ ಪಾತ್ರವೇನು ಇಲ್ಲದ ಒಂದು ಸಂಗತಿಯನ್ನು ನೆಚ್ಚಿ ನಾವು ಹಲವು ಸಂಘರ್ಷಗಳಲ್ಲಿ ಬೀಳಬೇಕಾಗಿ ಬಂದಿದೆ. ದೇಹ ಮತ್ತು ಅಧಿಕಾರ ಕೇಂದ್ರಗಳು, ದೇಹ ಮತ್ತು ಕಾನೂನು, ದೇಹ ಮತ್ತು ಶಿಶ್ನ, ಇನ್ನೂ ಮುಂದುವರೆದು ಈ ದೇಹ ಮತ್ತು ಆ ಯಜಮಾನಿಕೆಯ ದೇಹ ಹೀಗೆ ಸಂಚಿಯೇ ಆಗದ ಬಲಗಳೊಂದಿಗೆ ಸಂಘರ್ಷಗಳನ್ನು ಹೆಣ್ಣಿನ ದೇಹ ಎದುರಿಸಬೇಕಾಗುತ್ತದೆ".[೧೩] ಅಂದರೆ ಹೆಣ್ಣು ದೇಹದ ಕಾರಣಕ್ಕೆ ಅಧಿಕಾರ ಕಳೆದುಕೊಂಡು ಪುರುಷ ಪ್ರಾಧ್ಯಾನತೆಯ ರಾಜಕಾರಣಕ್ಕೆ ಒಳಗಾಗಿ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುವ ಸಂದರ್ಭವನ್ನು ತಿಳಿಸಿದ್ದಾರೆ. ಇದು ಹೆಣ್ಣಿನ ದೇಹದ ಮಾರುಕಟ್ಟೆ ಮತ್ತು ಮಾರಾಟಕ್ಕೆ ಇರುವ ಪುರುಷ ಕಾರಣಗಳನ್ನು ತಿಳಿಸುತ್ತದೆ.

ಇನ್ನು ಆಧುನಿಕ ಜಗತ್ತಿನಲ್ಲಿ ಹೆಣ್ಣಿನ ದೇಹವೇ ಒಂದು ಉದ್ಯಮವಾಗಿದೆ. ಹಾಗಾಗಿ ಹೆಣ್ಣಿನ ಮಾರಾಟ ಮತ್ತು ಶೋಷಣೆಯ ರೂಪಗಳು ಯಾವ ಯಾವ ವಲಯದಲ್ಲಿ ಹೇಗೆ ಕಾರ್ಯನಿರ್ವಹಿಸುತ್ತಿವೆ

ಎಂಬುದನ್ನು ತಿಳಿಯುವುದು ಅವಶ್ಯಕವಾಗಿದೆ. ಮಾರುಕಟ್ಟೆ ಎಂಬ ಪರಿಕಲ್ಪನೆಯು ಬೆಳೆದು ಬಂದದ್ದು ಪ್ರಾಪಂಚಿಕ ವ್ಯವಹಾರದ ಪರಿಚಯವನ್ನು ಒಡನಾಟವನ್ನು ಹೊಂದಿರುವಂತಹ ಪುರುಷ ವರ್ಗದಿಂದ ನಾಗರೀಕತೆಯ ಪೂರ್ವದಲ್ಲಿ ಮನುಷ್ಯ ಅಲೆಮಾರಿಯಾಗಿದ್ದು, ಹಸಿವಿಗೆ ಬೇಟೆ ಕಾಯಕವಾಗಿತ್ತು. ಈ ಸಂದರ್ಭದಲ್ಲಿ ಸಮಾಜ ಎನ್ನುವಂತಹ ಅಂದರೆ ಸ್ಥಿರ ಸಮಾಜ ರಚನೆಗೊಂಡಿತು. ಆಗ ಕೃಷಿ, ಪ್ರಾಣಿ ಸಾಕಾಣಿಕೆಯನ್ನು ಕಲಿತು ನಂತರದ ದಿನಗಳಲ್ಲಿ ವ್ಯವಸಾಯ ಮಾಡುವ ಕ್ರಮವನ್ನು ಕಲಿತರೋ ಆಗ ಒಂದಿಷ್ಟು ಭೂಮಿಯ ಒಡೆತನವನ್ನು ಪಡೆದರು. ನಂತರದ ದಿನಗಳಲ್ಲಿ ಹೆಣ್ಣು ಸಂತಾನೋತ್ಪತ್ತಿ, ಮನೆ ನಿರ್ವಹಣೆ ಎಂದು ಕುಟುಂಬದಲ್ಲಿಯೇ ಉಳಿದಳು. ಪುರುಷ ವ್ಯವಸಾಯದ ಭೂಮಿಯ ಒಡೆತನದ ಮೂಲಕ ಭೂಮಿ, ಪ್ರಾಣಿ ಮತ್ತು ಹೆಣ್ಣು ಇವುಗಳ ಮೇಲೆ ಒಡೆತನವನ್ನು ಸ್ಥಾಪಿಸಬೇಕೆಂಬ ಆಲೋಚನೆಯನ್ನು ಬೆಳೆಸಿಕೊಂಡ ಆಸ್ತಿಯ ಮೇಲೆ ಒಡೆತನ ಸ್ಥಾಪಿಸಿದ ಈ ರೀತಿ ಪುರುಷ ಪ್ರಧಾನ ವ್ಯವಸ್ಥೆ ಬೆಳವಣಿಗೆ ಹೊಂದುತ್ತಾ ಬಂದಿತು. ಹೀಗೆ ಆರಂಭವಾದ ಲಿಂಗವ್ಯವಸ್ಥೆ ಕಾಲಾನಂತರ ಯಾವ ಹಂತ ತಲುಪಿತು ಎಂದರೆ ಮಹಿಳೆ ಆರ್ಥಿಕತೆ ಮತ್ತು ಲೈಂಗಿಕತೆಗಳು ಪುರುಷನಿಗೆ ಅಧೀನಗೊಂಡವು. "ಮಾತೃ ಅಧಿಕಾರದ ಪತನವು ಸ್ತ್ರೀ ಕುಲದ ವಿಶ್ವ ಇತಿಹಾಸಿಕ ಪ್ರಾರಂಭವವಾಗಿದ್ದಿತು. ಪುರುಷ ಮನೆಯಲ್ಲಿಯೂ ಆಡಳಿತ ಸೂತ್ರಗಳನ್ನು ತನ್ನ ಕೈಗೇ ತೆಗೆದುಕೊಂಡನು. ಮಹಿಳೆಯನ್ನು ಕೆಳದರ್ಜೆಗೆ ಇಳಿಸಲಾಯಿತು. ದಾಸಿಯನ್ನಾಗಿ ಮಾಡಲಾಯಿತು. ಮಾನವನ ವಿಷಯಾಭಿಲಾಷೆಗೆ ಗುಲಾಮಳನ್ನಾಗಿ ಮಾಡಲಾಯಿತು. ಮಕ್ಕಳನ್ನು ಹೆರುವ ಸಾಧನವನ್ನಾಗಿ ಮಾಡಲಾಯಿತು".[೧೪]

ಕುಟುಂಬದ ಹೊಣೆ ಮತ್ತು ಉತ್ಪಾದನೆಯ ಎಲ್ಲಾ ಹೊರೆ ಹೊತ್ತಿದ್ದ ಸ್ತ್ರೀ ಸಮುದಾಯವು ಹೊರ ಪ್ರಪಂಚದ ಅರಿವನ್ನು ಹೊಂದಿರಲಿಲ್ಲ. ಮಾರುವ ಕೊಳ್ಳುವ ವಿನಿಮಯ ಮಾಡಿಕೊಳ್ಳುವ ಸ್ವಭಾವವು ಪಶುಪಾಲನಾ ವ್ಯವಸ್ಥೆಯಿಂದ ಆರಂಭಗೊಂಡು ಕೃಷಿ ಯುಗದ ವೇಳೆಗೆ ಅದು ಒಂದು ದೊಡ್ಡ ಮಾರುಕಟ್ಟೆಯ ರೂಪವನ್ನು ಪಡೆಯಿತು. ನಾಗರೀಕತೆ ಬೆಳೆದಂತೆಲ್ಲಾ ತನ್ನ ಪ್ರಾಬಲ್ಯವನ್ನು ವಿಸ್ತರಿಸಿಕೊಳ್ಳುತ್ತಾ ಬಂತು. ನಾಗರೀಕತೆಗಳಲ್ಲಿ ಗುಂಪುಗಳ ಯುದ್ಧ ಕಾದಾಟಗಳಲ್ಲಿ ಸೋತ ಗುಂಪಿನ ಅಥವಾ ಸಮುದಾಯದವರನ್ನು ಗುಲಾಮರನ್ನಾಗಿಸಿಕೊಂಡು ಮಾರಾಟ ಮಾಡುವ, ಅಂತೆಯೇ ಹೆಣ್ಣುಗಳನ್ನು ಸೆರೆ ಹಿಡಿದು ಮಾರುವ ವಿಕೃತವಾದ ಬುದ್ಧಿ ಪುರುಷ ವರ್ಗಕ್ಕೆ ಬಂದಿತು. ಈ ಗುಲಾಮ ಪದ್ಧತಿಯನ್ನು ಸ್ತ್ರೀ ಸಮಾಜ ಜಾರಿಗೊಳಿಸಲಿಲ್ಲ ಎಲ್ಲವನ್ನು ತನ್ನದೆಂದು ಘೋಷಿಸಿ ಅದನ್ನು ತನ್ನ ಸರಕಾಗಿ ಹೇಗೆ ಬೇಕಾದರೂ ಬಳಸುವ ಮಾರುವ ಜಾಲವನ್ನು ಪುರುಷ ವರ್ಗದ ಆರ್ಥಿಕ ವ್ಯವಸ್ಥೆಯು ಸ್ಥಾಪಿಸಿದೆ. ಇಂದು ಜಗತ್ತಿನ ಮಾರುಕಟ್ಟೆಯು ಪುರುಷ ವರ್ಗದ ಕೈಯಲ್ಲೇ ಇದೆ. ಹಾಗೆಯೇ ಆ ಮಾರುಕಟ್ಟೆಯಲ್ಲಿ ಸ್ತ್ರೀ ಸಮುದಾಯವನ್ನು ಮತ್ತು ಹೆಣ್ಣಿನ ದೇಹವನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದ ರೀತಿ ಮಾತ್ರ ಮಿತಿ ಮೀರಿದ್ದಾಗಿದೆ.

ಪಿತೃ ಪ್ರಧಾನತೆಯ ಈ ಮಾರುಕಟ್ಟೆ ವ್ಯವಸ್ಥೆಯಲ್ಲಿ ಹೆಣ್ಣಿನ ದೇಹವನ್ನು ಸರಕಿನಂತೆ ಮಾರಾಟ ಮಾಡಲಾಗುತ್ತಿದೆ. ಹಿಂದಿನ ಕಾಲದ ಪ್ರಖ್ಯಾತ ವಿಜಯನಗರ ಸಾಮ್ರಾಜ್ಯದಲ್ಲಿ ವೇಶ್ಯಾವಾಟಿಕೆಗೆ ದೊಡ್ಡ ಮಾರುಕಟ್ಟೆಯಿತ್ತು. ವೇಶ್ಯಾವಾಟಿಕೆಯು ಪ್ರಾಚೀನವಾದುದೇ ಕೃಷ್ಣ ದೇವರಾಯನ ಐದುನೂರು ವೇಶ್ಯೆಯರ ಸಂಪರ್ಕ ಹೊಂದಿದ್ದ ಎಂದು ಆತನ ಶಾಸನಗಳೇ ಪುರಾವೆ ಒದಗಿಸುತ್ತವೆ. ಹಾಗೆ ನೋಡಿದರೆ ಜಗತ್ತಿನ ಉದ್ದಕ್ಕೂ ವೇಶ್ಯಾವಾಟಿಕೆಯ ಮಾರುಕಟ್ಟೆ ಇದೆ. ಸಾಂಸ್ಕೃತಿಕ, ಧಾರ್ಮಿಕ ರಹದಾರಿಗಳ ಮೂಲಕ ನಮ್ಮ ದೇಶದಲ್ಲಿ ವೇಶ್ಯಾವಾಟಿಕೆಗಳನ್ನು ಬಳಸಲಾಗಿದೆ. ಉದಾ:– ದೇವದಾಸಿ ಪದ್ಧತಿಯಿಂದ ವೇಶ್ಯವಾಟಿಕೆಯ ಮುಂದುವರಿಕೆಯಾಗಿರುವುದು.

ಹೆಣ್ಣು ದೇಹದ ಈ ಬಗೆಯ ಮಾರಾಟವು ಇಂದಿನ ಆಧುನಿಕ ಕಾಲದಲ್ಲಿ ಕೊನೆಗೊಂಡಿಲ್ಲ. ಆದರೆ ಬದಲಾವಣೆಯನ್ನು ಕಂಡಿದೆ. ಹೈಟೆಕ್ ವೇಶ್ಯಾವಾಟಿಕೆಯಾಗಿ ಬದಲಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹೆಣ್ಣು, ಸ್ವತಃ ತಾನಾಗಿಯೇ ವೇಶ್ಯಾವಾಟಿಕೆಗೆ ಇಷ್ಟ ಪಟ್ಟು ಬರುವುದಿಲ್ಲ. ಅಂತಹ ನರಕದ ಕೂಪಕ್ಕೆ ಪಿತೃ ಪ್ರಧಾನ ಪ್ರಭುತ್ವದ ಭೋಗ ಸಮಾಜವು ಆಕೆಯನ್ನು ನೂಕುತ್ತದೆ. ಹೆಣ್ಣನ್ನು ಅಪಹರಿಸಿ, ವಂಚಿಸಿ, ಪ್ರೀತಿಯ ನಾಟಕವಾಡಿ, ಆಸೆಗಳನ್ನು ತೋರಿಸಿ ಅಥವಾ ದಬ್ಬಾಳಿಕೆಯಿಂದ ಈ ಕೃತ್ಯದಲ್ಲಿ ಪಾಲ್ಗೊಳ್ಳುವಂತೆ ಮಾಡಲಾಗುತ್ತದೆ. ಅಷ್ಟೇ ಅಲ್ಲದೆ ಬಂಡವಾಳಶಾಹಿ ಜಗತ್ತು ತನಗೆ ಬೇಕಾದ ಮಾರುಕಟ್ಟೆಯನ್ನು ಹುಡುಕುವಾಗಲೂ ಸ್ತ್ರೀ ಪುರುಷರ ನಡುವಣ ಲೈಂಗಿಕ ವ್ಯತ್ಯಾಸವನ್ನು ಒಂದು ಮಾರುಕಟ್ಟೆಯ ಸರಕಾಗಿ ನೋಡುತ್ತದೆ. ಈ ರೀತಿ ಸರಕಾಗಿ ನೋಡುವಾಗ ದೈಹಿಕ ವ್ಯತ್ಯಾಸ ಮತ್ತು ಅದನ್ನು ಆಧರಿಸಿದ ರೂಪಗಳು ಮುಖ್ಯವಾಗುತ್ತದೆ. ಹೆಣ್ತನ ಮತ್ತು ಪುರುಷತ್ವವೆನ್ನುವುದು ಇಲ್ಲಿ ಮುಖ್ಯವಲ್ಲ. ಮಾರುಕಟ್ಟೆಗೆ ಸ್ತ್ರೀಯರ ದೇಹವು ಕೂಡಾ ಒಂದು ಕೇಂದ್ರವೆಂದು ಬಂಡವಾಳಶಾಹಿ ಜಗತ್ತು ಪ್ರತಿಪಾದಿಸುತ್ತದೆ. ಬಂಡವಾಳಶಾಹಿ ಜಗತ್ತಿಗೆ ಹೆಣ್ಣಿನ ದೇಹವೆಂದರೆ ಅದು ೩೬–೨೬–೩೬ರ ಪ್ರಶ್ನೆ ಈ ರೀತಿಯ ಸ್ಥಿತಿಯಲ್ಲಿ ಹೆಣ್ಣಿನ ದೇಹವು ಮಾರುಕಟ್ಟೆಯೊಳ್ಳಗೊಂದು ಸಾಮಗ್ರಿ. ಸುಂದರ ಹೆಣ್ಣು ಈ ರೀತಿಯ ಮಾರುಕಟ್ಟೆ ನಿಯಂತ್ರಿತ ಸ್ಥಿತಿಯಲ್ಲಿ ಅರಿವಿಲ್ಲದಂತೆಯೇ ಮಾರುಕಟ್ಟೆ ನಿಯಂತ್ರಿತವಾದ ದೇಹವನ್ನು ಸರಕನ್ನಾಗಿಸಬಲ್ಲಳು. ಆಧುನಿಕ ಜಗತ್ತಿನಲ್ಲಿ ಬಂಡವಾಳಶಾಹಿ ಜಗತ್ತು ಮತ್ತು ಪುರುಷ ಕೇಂದ್ರಿತ ಚಿಂತನೆಗಳು ಎರಡು ಜೊತೆ ಜೊತೆಗೆ ಕೈ–ಕೈ ಸೇರಿಸಿಕೊಂಡರೆ ಅದು ಅತ್ಯಂತ ಅಪಾಯಕಾರಿಯಾಗಬಲ್ಲದು.

ಇಂದಿನ ಆಧುನಿಕ ಜೀವನದ ಅವಶ್ಯಕತೆಯಾಗಿರುವ ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನದ ಆವಿಷ್ಕಾರಗಳಿಂದ ಹೈಟೆಕ್ ವೇಶ್ಯಾವಾಟಿಕೆಯನ್ನು ರೂಪಿಸಲಾಗಿದೆ. ಜಗತ್ತಿನ ಯಾವುದೋ ಒಂದು ಮೂಲೆಯಲ್ಲಿ ಕುಳಿತು ತನ್ನ ದೇಹವನ್ನು ಮತ್ತೊಬ್ಬರಿಗೆ ಅಂತರ್‌ಜಾಲದ ಮೂಲಕ ಪ್ರದರ್ಶಿಸುತ್ತಾ ಹಣ ಸಂಪಾದಿಸಬಹುದು ಎಂದು ಲೈಂಗಿಕ ಉದ್ಯಮವು ಆಕರ್ಷಿಸುತ್ತಿದೆ. ಸ್ಪರ್ಶವೇ ಇಲ್ಲದೇ ಒಬ್ಬರನ್ನೊಬ್ಬರು ಅಂತರ್‌ಜಾಲದ ಮೂಲಕ ಬೆತ್ತಲಾಗಿ ಕೂಡಬಹುದು ಎಂಬಷ್ಟು ತಂತ್ರಜ್ಞಾನವು ಲೈಂಗಿಕ ಉದ್ಯಮದಲ್ಲಿ ಬಳಕೆಯಾಗಿದೆ. ಜಾಗತಿಕ ಲೈಂಗಿಕ ಮಾರುಕಟ್ಟೆಯು ವಿಶ್ವದ ಯಾವುದೇ

ದೊಡ್ಡ ಬಂಡವಾಳದ ಕಂಪನಿಗಳಿಗೂ ಮೀರಿದ ಹಣದ ವಹಿವಾಟನ್ನು ಮಾಡುತ್ತಿದೆ ಎಂದು ಅಂಕಿ ಅಂಶಗಳು ಹೇಳುತ್ತದೆ. ಹೆಣ್ಣು ದೇಹದ ಇಂಚಿಂಚನ್ನು ತೋರುವ ಜಾಲತಾಣಗಳು ಅಸಂಖ್ಯಾತವಾಗಿದೆ. ಪೋರ್ನೊಗ್ರಫಿಯ ಈ ಜಾಲದಲ್ಲಿ ಹೆಣ್ಣು ಮಾರಾಟ ಅವ್ಯಾಹತವಾಗಿದೆ.

ತಾಂತ್ರೀಕೃತ ಸಮಾಜವು ಹೆಣ್ಣನ್ನು ತನ್ನ ತಾಂತ್ರೀಕೃತ ಜೀವನ ಮೌಲ್ಯಕ್ಕೆ ತಕ್ಕಂತೆ ದುಡಿಸಿಕೊಳ್ಳುತ್ತಿದೆ. ಸೈಬರ್ ಸೆಕ್ಸ್ ಕೆಫೆಗಳು ತಂತ್ರಜ್ಞಾನದ ಪರಿಣಾಮದಿಂದ ಇಂತಹ ಜಾಲತಾಣಗಳು ಸಣ್ಣ ಮಕ್ಕಳಿಂದ ಹಿಡಿದು ವೃದ್ಧೆಯರಾದಿಯಾಗಿ ಎಲ್ಲರನ್ನೂ ದೇಹ ತೋರ್ಪಡಿಕೆಗೆ ಒಳಪಡಿಸುತ್ತಿರುವ ಅಪಾಯವನ್ನು ತಂದೊಡ್ಡಿದೆ. ಮುಂದುವರೆದ ರಾಷ್ಟ್ರಗಳಲ್ಲಿ ಇದು ಒಂದು ಪಿಡುಗಾಗಿದೆ. ತಂತ್ರಜ್ಞಾನದ ಉಪಕರಣಗಳು ಹೆಣ್ಣನ್ನು ಮಾರುವ ಅಸ್ತ್ರಗಳಾಗಿಯೂ ಬಳಕೆಯಾಗುತ್ತಿವೆ. ಹೆಣ್ಣು ದೇಹದ ಬೆತ್ತಲೆಯನ್ನು ತಂತ್ರಜ್ಞಾನವು ಬಹಳಷ್ಟು ವ್ಯವಸ್ಥಿತವಾಗಿ ಪುನರ್ ಮುದ್ರಿಸಿ ಕ್ಷಣಾರ್ಧದಲ್ಲಿ ವಿಶ್ವವ್ಯಾಪ್ತಿ ಹರಡುತ್ತದೆ. ಈ ಮೂಲಕ ಸಭ್ಯ ಹೆಣ್ಣಿನ ಮಾನವನ್ನು ಯಾರದೋ ಮುಖ ಯಾರದೋ ದೇಹಕ್ಕೆ ಹೊಂದಿಸಿ ಅವರ ವ್ಯಕ್ತಿತ್ವವನ್ನು ಮಾರುವುದು, ನೀಲಿ ಚಿತ್ರದ ಇಂಡಸ್ಟ್ರೀಯು ಈ ತಂತ್ರಜ್ಞಾನದಿಂದಲೇ ಬೆಳೆದಿರುವುದು. ನೀಲಿ ಚಿತ್ರಗಳ ಮಾರಾಟ, ವೀಕ್ಷಣೆಗೆ ಅವಕಾಶ ನೀಡುವ ಮೂಲಕ ಮಿಲಿಯನ್ ಗಟ್ಟಲೆ ಹಣದ ವಹಿವಾಟು ನಡೆಸುತ್ತಿದೆ.

ಒಂದು ಕಡೆ ಪುರುಷಾಧಿಕಾರದ ಹೆರಿಕೆಗಳಾದಷ್ಟೇ ಮತ್ತೊಂದು ಕಡೆ ಸ್ವತಃ ಹೆಣ್ಣು ತಾನಾಗಿಯೆ ತನ್ನ ಹೀನ ಸ್ಥಿತಿಯಲ್ಲಿ ಹೊಟ್ಟೆಪಾಡಿಗಾಗಿ ತನ್ನ ದೇಹವನ್ನು ತಾನೇ ದೂರಿಕೊಳ್ಳಬೇಕಾದ ಸ್ಥಿತಿಯನ್ನು ಭಿನ್ನವಾಗಿ ಪರಿಗಣಿಸಬೇಕಾಗುತ್ತದೆ. “ಸುತ್ತಲಿನ ಸಾಂಸ್ಕೃತಿಕ ಸಂಗತಿಗಳು ‘ಹೆಣ್ಣು ದೇಹ’ವನ್ನು ಮಾಂಸಕ್ಕಾಗಿ ಕಾಯುವ ಹದ್ದಿನಂತೆ ನಡೆಸಿಕೊಳ್ಳುತ್ತವೆ. ಇವು ಅವುಗಳನ್ನು ದಮನಿತ ಸ್ಥಿತಿಯಲ್ಲಿ ಉಳಿಸಿಬಿಡುವಷ್ಟು ಶಕ್ತವಾದವು”.[೧೫] ಸಮಾಜದಲ್ಲಿ ಜಾತಿ, ವರ್ಗ, ಬಡತನದ ಕಾರಣಕ್ಕೆ ಶೋಷಣೆಗೆ ಒಳಗಾಗಿ ಎಲ್ಲಾ ಸಂಬಂಧಗಳು ಹೊರಹಾಕಿದಾಗ ಸಮಾಜದ ಎಲ್ಲಾ ಬಾಗಿಲುಗಳು ಮುಚ್ಚಿಕೊಂಡಾಗ ಅಂತಹ ಶೋಷಿತ ಹೆಣ್ಣುಗಳಿಗೆ ಬದುಕಲು ಒಂದು ದಾರಿ ಬೇಕಿರುತ್ತದೆ. ಅಂತಹ ದುರ್ಬಲ ಪರಿಸ್ಥಿತಿಯಲ್ಲಿ ಪ್ರಾಪಂಚಿಕ ಜ್ಞಾನವುಳ್ಳ ಪುರುಷವರ್ಗ ಸರಿಯಾದ ಮಾರ್ಗ ತೋರಿದ್ದರೆ ಒಂದು ಹೆಣ್ಣಿನ ಜೀವನ ಉತ್ತಮಗೊಳ್ಳತ್ತದೆ. ಆದರೆ ರಕ್ಷಿಸುವ ನೆಪದಲ್ಲಿ ಭಕ್ಷಿಸುವ ಪುರುಷರು ಅವರನ್ನು ತಮ್ಮ ಕಾಮುಕ ಬಲೆಗೆ ಬೀಳಿಸಿಕೊಳ್ಳುತ್ತಾರೆ. ಆಗ ಅನಿವಾರ್ಯವಾಗಿ ಆ ಹೆಣ್ಣು ಮಕ್ಕಳು ತಮ್ಮನ್ನು ತಾವು ಮಾರಿಕೊಳ್ಳುತ್ತಾರೆ. ತಮ್ಮ ಬದುಕಿಗಾಗಿ ತಮ್ಮ ಸ್ವದೇಹ ಮಾರಾಟಕ್ಕಿಳಿಯುವುದು ಅಪರಾಧವೆನಿಸುವುದಿಲ್ಲ. ಆದರೆ ಇದು ತಪ್ಪೆನಿಸಿದರೂ ಇದರ ಹೊಣೆಗಾರಿಕೆಯನ್ನು ಪುರುಷ ಪ್ರಧಾನತೆ ವ್ಯವಸ್ಥೆಯೇ ಹೊರಬೇಕು.

ಬಡತನವೂ ಸಹ ತೀರ ಕ್ರೂರವಾಗಿ ಹೆಣ್ಣನ್ನು ಇಂತಹ ಮಾರುಕಟ್ಟೆಗೆ ಗಿರಾಕಿಯನ್ನಾಗಿ ತಳ್ಳುತ್ತದೆ. ದೇವದಾಸಿಯರು ಮತ್ತು ಜಾತಿ ಶಾಪದ ಮಹಿಳೆಯರು ಹಿಂಸೆಯಿಂದ ತಪ್ಪಿಸಿಕೊಳ್ಳಲು

ಇಂತಹ ದಾರಿಗಳನ್ನು ಅನುಸರಿಸುವುದಿದೆ. ಹಸಿದ ಹೆಣ್ಣಿನ ಕರೆಯಲ್ಲೂ ಕಾಮುಕತೆಯನ್ನು ಹುಡುಕುವುದು ಪುರುಷ ಪ್ರಧಾನತೆ ಅಷ್ಟೇ ಏಕೆ ಸ್ವತಃ ತಮ್ಮ ಮನೆಯ ಹೆಣ್ಣು ಮಕ್ಕಳನ್ನು ಬಾಲ್ಯದಲ್ಲಿಯೇ ವೇಶ್ಯಾವಾಟಿಕೆಗೆ ಮಾರುವ ತಂದೆ, ತಾಯಿ, ಅಣ್ಣ, ತಮ್ಮಂದಿರಿದ್ದಾರೆ. ಅಭಿವೃದ್ಧಿಶೀಲ ದೇಶವಾದ ಭಾರತದಲ್ಲಿಯು ಈ ಹೈಟೆಕ್ ಮಾರುಕಟ್ಟೆಯು ಉದ್ಯಮವಾಗಿ ಬೆಳೆಯುತ್ತಿದೆ. ಅಷ್ಟೇ ಅಲ್ಲದೆ, ಕರ್ನಾಟಕದ ರಾಜಧಾನಿಯಾದ ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳಲ್ಲಿಯೂ ಪ್ರವಾಸೋದ್ಯಮ, ಔದ್ಯೋಗೀಕರಣ, ಜಾಗತೀಕರಣದ ಪ್ರಭಾವವಾಗಿ ಹೈಟೆಕ್ ವೇಶ್ಯಾವಾಟಿಕೆಗಳು ತಲೆ ಎತ್ತಿವೆ. ಪ್ರವಾಸಿಗರ ನೆಚ್ಚಿನ ತಾಣವಾದ ಮೈಸೂರು ಜಿಲ್ಲೆಯಲ್ಲಿಯೂ ಸಹ ವೇಶ್ಯಾವಾಟಿಕೆ ಹೆಚ್ಚುತ್ತಿದ್ದು ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯೂ ಅಧಿಕವಾಗುತ್ತಿದೆ. ಇದರ ಜೊತೆಗೆ ಲೈಂಗಿಕ ಉದ್ಯಮವು ಇಂದು ಹಳ್ಳಿಗಳಿಗೂ ವ್ಯಾಪಿಸಿದೆ. ಗ್ರಾಮಗಳೇ ಇವತ್ತಿನ ನಗರಗಳಲ್ಲಿ ತುಂಬುತ್ತಿರುವ ವೇಶ್ಯಾವಾಟಿಕೆಗೆ ಸರಬರಾಜು ಕೇಂದ್ರಗಳಾಗುತ್ತಿವೆ.

ಹೆಣ್ಣು ಬಹಳ ಸುಲಭವಾಗಿ ಲೈಂಗಿಕ ಆಕ್ರಮಣಗಳಿಗೆ ಒಳಗಾಗಿ ಬಿಡುತ್ತಾಳೆ. ಈ ಆಕ್ರಮಣಕ್ಕೆ ಪ್ರತಿರೋಧವನ್ನು ಒಡ್ಡುವ ಶಕ್ತಿ ಅವಳಲ್ಲಿಲ್ಲ. ಅಷ್ಟೇ ಅಲ್ಲ, ಅವಳ ಲೈಂಗಿಕತೆಯನ್ನು ಬಹಳ ಸುಲಭವಾಗಿ ನಿರ್ಬಂಧಿಸಿ ಇಡಬಹುದು. ಹಾಗೆಯೇ ಆರ್ಥಿಕತೆಯ ತಾರತಮ್ಯಗಳಿಗೂ ಸುಲಭವಾಗಿ ಒಳಗಾಗಿಸಬಹುದು ಎನ್ನುವ ಪುರುಷ ಕೇಂದ್ರಿತ ಚಿಂತನೆಗಳು ಹೆಣ್ಣನ್ನು ಮನಬಂದಂತೆ ಬಳಸಿಕೊಳ್ಳಲು ಮುಂದಾಗುತ್ತವೆ. ಹೆಣ್ಣು ಮಾರಾಟವಾಗುವ ಮಾರುಕಟ್ಟೆಯಿಂದ ವೇಶ್ಯಾವೃತ್ತಿಯನ್ನು ಕಾನೂನಿನ ಪರಿಭಾಷೆಯು 'ದೇಹ ವ್ಯಾಪಾರ' ಎಂದು ವ್ಯಾಖ್ಯಾನಿಸುತ್ತವಾದರೂ ಈ ವ್ಯಾಪಾರದಲ್ಲಿ ಹೆಣ್ಣು ದೇಹವೇ ಹೂಡಿಕೆಯಾಗುತ್ತಾದರೂ ಆ ಹೂಡಿಕೆಯು ಲಾಭದಾಯಕ 'ಉತ್ಪಾದನೆ'ಯಾಗಿ ಅವಳ ಕೈಗೆ ದಕ್ಕುವ ಬದಲು, ಅವಳು ಆರ್ಥಿಕವಾಗಿ ಅತ್ಯಂತ ಕುಬ್ಜಳೂ, ಅವಮಾನಿತಳು ಆಗುತ್ತಾಳಷ್ಟೇ. ಹಾಗಾಗಿ ವೇಶ್ಯಾ ವೃತ್ತಿಯನ್ನು ಪುರುಷ ಕೇಂದ್ರಿತ ಚಿಂತನೆಯ ಅತ್ಯಂತ ದುಷ್ಟವೂ, ಮಾರಕವೂ ಆದ ಒಂದು ರೂಢಿ ಎಂದೇ ತೀವ್ರವಾದಿ ಸ್ತ್ರೀವಾದ ಆಗ್ರಹಿಸುತ್ತದೆ. ವೇಶ್ಯಾವೃತ್ತಿಯಲ್ಲಿ ಹೆಣ್ಣು ಗಂಡಿನ ಕಾಮುಕತೆಗೆ ಮುಕ್ತವಾಗಿ ಒದಗುವ ವಸ್ತುವಾಗಿ ಬಳಕೆಗೊಳ್ಳುತ್ತಾಳೆ. ಈ ಶೋಷಣೆಯ ಜೊತೆಗೆ ಸಾಮಾಜಿಕವಾಗಿ ಅಪರಾಧಿಯಾಗಿ ನಿಂತು ಶಿಕ್ಷೆಗೆ ಒಳಗಾಗುತ್ತಾಳೆ.

ಹೆಣ್ಣಿನ ದೇಹದ ಮೂಲಕವೇ ಆಕೃತಿ ಪಡೆದುಕೊಂಡ ಪುರುಷ ಸಮಾಜವು ಅದೇ ಹೆಣ್ಣಿನ ನಾಶಕ್ಕೆ ನಾಂದಿಯಾಯಿತು. ಮಾತೃ ಮೂಲ ಪರಂಪರೆಯ ಹೆಣ್ಣು ದೇಹದ ಫಲವಂತಿಕೆಯು ಸಾಂಸ್ಕೃತಿಕ ನಂಬಿಕೆಗಳಿಗೂ ಹಾಗೂ ಈ ಶತಮಾನದ ಹೈಟೆಕ್ ಲೈಂಗಿಕ ಅಪರಾಧಗಳ ತಾಂತ್ರೀಕೃತ ಜಾಲಕ್ಕೂ ದೊಡ್ಡ ಅಂತರವಿದೆ ಎಂಬುದು ಸ್ಪಷ್ಟ. ಆದರೆ ಲಿಂಗ ಶೋಷಣೆ ಮತ್ತು ಲೈಂಗಿಕ ಅತಿಕ್ರಮಗಳ ಮೂಲ ಸ್ವರೂಪ ಮಾತ್ರ ಹಾಗೆಯೇ ಮುಂದುವರೆದಿರುವುದನ್ನು ಗಮನಿಸಲೇಬೇಕು.

## ೩.೬ ಹೆಣ್ಣು ದೇಹ ಮತ್ತು ಮಾಧ್ಯಮ

ಆಧುನಿಕ ಪ್ರಪಂಚದ ಬಹುಮುಖ್ಯ ಅಂಗವಾದ ಸಮೂಹ ಮಾಧ್ಯಮಗಳ ಜನಪ್ರಿಯತೆಯ ವ್ಯಾಪ್ತಿ ವಿಶಾಲವಾದುದು. ಇಂದು ಸಮೂಹ ಮಾಧ್ಯಮಗಳಾದ ಪತ್ರಿಕೆಗಳು, ದೂರದರ್ಶನ, ಚಲನಚಿತ್ರ, ಆಕಾಶವಾಣಿ ಮತ್ತು ಸಾಮಾಜಿಕ ಜಾಲತಾಣಗಳು ಇಡೀ ವಿಶ್ವವನ್ನೇ ಸಂಕುಚಿತಗೊಳಿಸಿ ಪುಟ್ಟ ಹಳ್ಳಿಯನ್ನಾಗಿ ಮಾಡಿವೆ. ಸಾಮಾಜಿಕ ಅಭಿವೃದ್ಧಿಯಲ್ಲಿ ಸಮೂಹ ಮಾಧ್ಯಮಗಳ ಪಾತ್ರ ಮಹತ್ವವಾದುದು. ಈ ಸಮೂಹ ಮಾಧ್ಯಮಗಳು ಕೇವಲ ಸುದ್ದಿ ಪ್ರಚಾರ ಸಾಧನಗಳಲ್ಲ, ಜನರ ಅಭಿಪ್ರಾಯಗಳನ್ನು, ಜೀವನ ಶೈಲಿಯನ್ನು, ಜೀವನವನ್ನು ಕುರಿತ ಅವರ ದೃಷ್ಟಿಕೋನಗಳನ್ನು ಪ್ರಭಾವಿಸುವಂತ ಶಕ್ತಿಯನ್ನು ಪಡೆದಿವೆ. ಪುಸ್ತಕ ಓದಲು ಬಾರದ, ಶಾಲೆಯಲ್ಲಿ ಪಾಠವನ್ನು ಮುಂದುವರೆಸಿಕೊಂಡು ಹೋಗಲಾಗದ ಸಹಸ್ರಾರು ಜನರಿಗೆ ಸಮೂಹ ಮಾಧ್ಯಮಗಳೇ ಪ್ರಮುಖ ವಿಷಯ ಮೂಲಗಳು ಎನ್ನುವುದರಲ್ಲಿ ಸಂದೇಹವಿಲ್ಲ. ಸಮೂಹ ಮಾಧ್ಯಮಗಳಿಗಿರುವ ಮತ್ತೊಂದು ಪ್ರಮುಖ ಜವಾಬ್ದಾರಿಯೆಂದರೆ ಯಾವುದೇ ವಿಷಯವನ್ನು ಕುರಿತಂತೆ ವಿಭಿನ್ನ ದೃಷ್ಟಿಕೋನಗಳಿಗೆ ಜನರನ್ನು ತಲುಪುವಂಥ ಅವಕಾಶವನ್ನು ನೀಡುವುದು. ವಿಷಯಗಳನ್ನು ಜನರವರೆಗೆ ತೆಗೆದುಕೊಂಡು ಹೋಗುವ ಮೊದಲು ಅದರ ಸತ್ಯಾಸತ್ಯೆಗಳನ್ನು ಪರೀಕ್ಷಿಸುವುದು. ಆಧಾರ ರಹಿತ ಹಾಗೂ ಸತ್ಯಕ್ಕೆ ದೂರವಾದ ವಿಚಾರಗಳನ್ನು ಪ್ರಚಾರ ಮಾಡುವುದು ಮಾಧ್ಯಮಗಳು ಮಾಡಬಾರದಂಥ ಕಾರ್ಯಗಳು. ಸಮೂಹ ಮಾಧ್ಯಮಗಳು ಸಾಮಾಜಿಕ ಕಾಳಜಿ ಮತ್ತು ಸಾಮಾಜಿಕ ಜವಾಬ್ದಾರಿಗಳೆರಡನ್ನೂ ಏಕಕಾಲದಲ್ಲಿ ಬೆಳೆಸಿಕೊಳ್ಳಬೇಕು.

ಜನರಿಗೆ ಮನರಂಜನೆಯನ್ನು ಒದಗಿಸುವುದೂ ಸಮೂಹ ಮಾಧ್ಯಮಗಳ ಜವಾಬ್ದಾರಿಯೆ ಆಗಿದ್ದರೂ ಎಂತಹ ಮನರಂಜನೆಯನ್ನು ಒದಗಿಸಬೇಕು ಎನ್ನುವುದನ್ನು ಕುರಿತಂತೆ ಅನೇಕ ಅಭಿಪ್ರಾಯಗಳಿವೆ. ಹಣಗಳಿಗೆ ಅಬ್ಬರದ ಪ್ರಚಾರ ಮಾರುಕಟ್ಟೆಯ ಬೇಡಿಕೆಗಳನ್ನು ಪೂರೈಸುವುದು ಇವೇ ಮಾಧ್ಯಮಗಳಿಗೆ ಪ್ರಮುಖವಾದ ಗುರಿಗಳಾದರೆ ಸಾಮಾಜಿಕ ಜವಾಬ್ದಾರಿಯ ಪ್ರಶ್ನೆಯೇ ಬರುವುದಿಲ್ಲ. ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಮಾಧ್ಯಮಗಳು ಜವಾಬ್ದಾರಿಯುತವಾದ ರೀತಿಯಲ್ಲಿ ತಮ್ಮ ಪಾತ್ರ ನಿರ್ವಹಿಸಬೇಕಾಗುತ್ತದೆ. ವಿಶೇಷವಾಗಿ ಹೆಣ್ಣಿನ ಚಿತ್ರಣಕ್ಕೆ ಸಂಬಂಧಿಸಿದ ವಿಚಾರದಲ್ಲಿ ಜವಾಬ್ದಾರಿಯುತವಾಗಿ ವರ್ತಿಸಬೇಕಾಗುತ್ತದೆ. "ನಾವು ಮಾಧ್ಯಮಗಳನ್ನು ಸಾಮಾಜಿಕ ಬದಲಾವಣೆಯ ಸಾಧನಗಳೆಂದು ಗುರುತಿಸಿದ್ದರೂ, ಮಹಿಳೆಯರ ವಿಚಾರದಲ್ಲಿ ಅವು ಬಹು ನಕಾರಾತ್ಮಕವಾದ ಪಾತ್ರವನ್ನು ವಹಿಸಿವೆ. ದೇಶದ ಜನಸಂಖ್ಯೆಯಲ್ಲಿ ಸುಮಾರು ಅರ್ಧಭಾಗದಷ್ಟಿರುವ ಮಹಿಳೆಯರಿಗೆ ಮಾಧ್ಯಮದ ಕಾರ್ಯಕ್ರಮಗಳು ಅಥವಾ ಸುದ್ದಿ ಪ್ರಸಾರದಲ್ಲಿ ಅರ್ಧದಷ್ಟಾದರೂ ಸ್ಥಾನ ದೊರೆಯುವುದು ಹಾಗಿರಲಿ, ಅವರನ್ನು ಕುರಿತ ದೃಷ್ಟಿಕೋನಗಳೂ ಕ್ರಿಯಾತ್ಮಕವಾಗಿಲ್ಲ."[೧೬]

ಈ ಸಮೂಹ ಮಾಧ್ಯಮಗಳು ಹೆಣ್ಣಿನ ಕ್ರಿಯಾಶೀಲತೆ ಪ್ರತಿಭಾಶಕ್ತಿ ಮತ್ತು ಬುದ್ಧಿಮತ್ತೆಗೆ ಅನುಗುಣವಾದ ಪ್ರಮಾಣದಲ್ಲಿ ಅವಳನ್ನು ಬಿಂಬಿಸುತ್ತಿಲ್ಲ. ಒಂದು ಕಡೆ ಸಂಪ್ರದಾಯದ ಸೆರಗಿನಿಂದ

ಹೊರಬರುತ್ತಿರುವ ಹೆಣ್ಣು, ಅದರೊಳಗಡೆ ಬಂಧಿಯಾಗಿರುವ ಹೆಣ್ಣು ಪಶ್ಚಿಮದ ಚಿಂತನೆ ಮತ್ತು ಜೀವನಕ್ರಮದೊಳಗಡೆ ಸಿಲುಕಿರುವ ಹೆಣ್ಣು, ಜಾಗತೀಕರಣ, ಉದಾರೀಕರಣ, ಖಾಸಗೀಕರಣವಾದ ಹೊಸ ಹೊಸ ವಿದ್ಯಮಾನಗಳಿಂದಾಗಿ ವಿವಿಧ ರೀತಿಯ ಹೆಣ್ಣಿನ ಬದುಕಿನ ಚಿತ್ರಣಗಳು, ಮಾದರಿಗಳು ನಮ್ಮ ಮುಂದಿವೆ. ಈ ಸಂದರ್ಭದಲ್ಲಿ ಬದಲಾಗುತ್ತಿರುವ ಹೆಣ್ಣಿನ ಮಾದರಿಯಲ್ಲಿ ನಮ್ಮ ಮಾಧ್ಯಮಗಳ ಪ್ರಭಾವ ಮತ್ತು ಪರಿಣಾಮಗಳ ಬಗ್ಗೆ ಚಿಂತಿಸುವುದು ಅವಶ್ಯಕವಾಗಿದೆ. ಹೆಣ್ಣು ಮತ್ತು ಮುದ್ರಣ ಮಾಧ್ಯಮವನ್ನು ಕುರಿತು ವಿಶ್ಲೇಷಣೆಯಲ್ಲಿ ತೊಡಗುವಾಗ ಎರಡು ಅಂಶಗಳತ್ತ ಗಮನ ಹರಿಸಬಹುದು. ಮೊದಲನೆಯದು ಹೆಣ್ಣಿನ ವಿಚಾರಗಳಿಗೆ ದೊರೆಯುವ ಪ್ರಾತಿನಿಧ್ಯವೆಷ್ಟು, ಎರಡನೆಯದು ಹೆಣ್ಣಿಗೆ ಸಂಬಂಧಿಸಿದ ವಿಚಾರಗಳನ್ನು ಪ್ರಸ್ತುತಪಡಿಸುವ ರೀತಿಗೆ ಸಂಬಂಧಿಸಿದ್ದು. ಮಾಧ್ಯಮ ಇಂದು ಬೃಹತ್ ಕೈಗಾರಿಕೆಯಾಗಿ ಬೆಳೆದಿದ್ದು. ಈ ಕೈಗಾರಿಕೆಯ ಒಡೆತನ ಪುರುಷರದ್ದೇ ಆಗಿದೆ. ಮುದ್ರಣ ಮಾಧ್ಯಮವೂ ಇದಕ್ಕೆ ಹೊರತಾಗಿಲ್ಲ. ಸುದ್ದಿಯನ್ನು ಸೃಷ್ಟಿಸುವುದು, ಉತ್ತರಿಸುವುದು ಮತ್ತು ನಿಯಂತ್ರಿಸುವುದು ಬಹುಮಟ್ಟಿಗೆ ಪುರುಷರೇ ಆಗಿರುವುದರಿಂದ ಮಹಿಳೆಯರಿಗೆ ಈ ಕ್ಷೇತ್ರದಲ್ಲಿ ನಿಯಮಿತವಾದ ಪ್ರವೇಶ ಮಾತ್ರ ದೊರೆತಿದೆ. ಪ್ರಮುಖ ದಿನಪತ್ರಿಕೆ ಹಾಗೂ ವಾರಪತ್ರಿಕೆಗಳಲ್ಲಿ ಮಹಿಳಾ ಹೋರಾಟಗಳು ಅವರಿಗೆ ಸಂಬಮಧಿಸಿದ ವಿಚಾರಗಳು ಹಾಗು ಪುರುಷ ಪ್ರಾಧಾನ್ಯತೆಯನ್ನು ಎದುರಿಸಲು ಅವರು ನಡೆಸುತ್ತಿರುವ ಪ್ರಯತ್ನಗಳಿಗೆ ದೊರೆಯುತ್ತಿರುವ ಪ್ರಾತಿನಿಧ್ಯ ಬಹಳ ಕಡಿಮೆ ಇದೆ. ಆದರೆ ಹೆಣ್ಣನ್ನು ಕುರಿತ ನಕಾರಾತ್ಮಕ ಚಿತ್ರಣ ಇಂದು ಮುದ್ರಣ ಮಾಧ್ಯಮದಲ್ಲಿ ಸಾಮಾನ್ಯವಾಗಿದ್ದು ಅವಳ ಬಗ್ಗೆ ಅಪಪ್ರಚಾರ ಮತ್ತು ಅವಳ ಸಾಮರ್ಥ್ಯವನ್ನು ಅಲ್ಲಗಳೆಯುವುದು ದಿನನಿತ್ಯ ನಡೆಯುತ್ತಿದೆ. ಹೆಣ್ಣು ಎಂದೊಡನೆ ಮಾಧ್ಯಮಗಳಿಗೆ ಕಾಣುವುದು ಹೆಣ್ಣಿನ ದೇಹ ಮಾತ್ರ, ಅದನ್ನು ಬಳಸಿಕೊಂಡು ಅವರು ಕೆಲಸಗಳನ್ನು ಮಾಡಿಸಿಕೊಳ್ಳುತ್ತಾರೆ. ಅವಳಿಗೆ ಸ್ವತಂತ್ರವಾದ ಆಲೋಚಿಸುವ ಅಥವಾ ಸಮರ್ಥವಾಗಿ ಕಾರ್ಯನಿರ್ವಹಿಸುವ ಶಕ್ತಿಯೇ ಇಲ್ಲ ಎನ್ನುವಂತೆ ಅನೇಕ ಪತ್ರಿಕೆಗಳು ಹೆಣ್ಣನ್ನು ಚಿತ್ರಿಸುತ್ತವೆ. ವಧೂ ದಹನ, ಅತ್ಯಾಚಾರ, ಸತಿ, ಆಸಿಡ್ ಎರೆಚುವ ಸಂಗತಿಗಳು ವರದಿಯಾಗುವಷ್ಟು ರೋಚಕವಾಗಿ ಹೆಣ್ಣಿನ ಪ್ರಗತಿ ವರದಿಗಳು ಸುದ್ಧಿಯಾಗುವುದಿಲ್ಲ.

ಚಿತ್ರ ತಾರೆಯರು ಕ್ರೀಡಾ ಪಟುಗಳಿಗೆ 'ಗ್ಲಾಮರ್' ಪ್ರಚಾರ ಕೊಡುವಲ್ಲಿ ಪತ್ರಿಕೆಗಳು ಸ್ಪರ್ಧೆಗಿಳಿಯುತ್ತವೆ. ಮಹಿಳಾ ದೃಷ್ಟಿಕೋನದ ತಾತ್ವಿಕತೆ, ಸೈದ್ಧಾಂತಿಕ ನಿಲುವು ಇತ್ತೀಚೆಗೆ ಪತ್ರಿಕೆಗಳಲ್ಲಿ ವಿವಿಧ ರೀತಿಯಲ್ಲಿ ಪ್ರಕಟವಾಗುತ್ತಿವೆ. ಹೆಣ್ಣಿನ ಬಗೆಗಿನ ಭೋಗ ಅಥವಾ ಲೈಂಗಿಕತೆ, ಕಾಮ ಮುಂತಾದ ದೃಷ್ಟಿಕೋನಗಳಿಂದ ಮಹಿಳಾಪರ ಪತ್ರಿಕೆಯಾಗಲು ಸಾಧ್ಯವಿಲ್ಲ. ವಾಣಿಜ್ಯ ಉದ್ದೇಶದ ಮಹಿಳಾ ಪತ್ರಿಕೆಗಳು ಇವೆ. ವೃತ್ತಿನಿರತ ಪತ್ರಿಕೋದ್ಯಮ ಇವುಗಳನ್ನು ನಿರ್ಲಕ್ಷಿಸುತ್ತದೆ. ವಾಣಿಜ್ಯ ಒತ್ತಡಗಳು ಹೆಚ್ಚಿದಾಗ ಹಣಗಳಿಸುವ ಹವಣಿಕೆಯಲ್ಲಿ ಹೆಣ್ಣನ್ನು ತಪ್ಪು ಹಾದಿ ಹಿಡಿಸುವ, ಅಶ್ಲೀಲಕರ ಪ್ರದರ್ಶನ ಸಾಹಿತ್ಯವನ್ನು ಪ್ರಕಟಿಸುತ್ತವೆ. ಮೈ ಮಾರಾಟ, ಅಲಂಕಾರ, ಊಟ, ಅಡುಗೆ, ಕೌಟುಂಬಿಕ ಜವಾಬ್ದಾರಿ, ಗೃಹ ಅಲಂಕಾರಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡುತ್ತವೆ. ಮಹಿಳೆಯರ ಮೇಲಿನ

ದೌರ್ಜನ್ಯಗಳು ಅಥವಾ ಕುಟುಂಬದ ಒಳಗೆ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತಂತೆ ಸುದ್ದಿಯನ್ನು ಪ್ರಕಟ ಮಾಡುತ್ತವೆ. ಆದರೆ, ಅವು ವಿವರಣಾತ್ಮಕವಾಗಿರುತ್ತವೆಯೇ ಹೊರತು ವಿಚಾರಣಾತ್ಮಕವಾಗಿ ಇರುವುದಿಲ್ಲ. ವಿಷಯದ ಕುರಿತಂತೆ ಜಾಗೃತಿ ಮೂಡಿಸುವುದಿಲ್ಲ. ಇದನ್ನೆಲ್ಲಾ ವಿಮರ್ಶಿಸಿದರೆ, ಹೆಣ್ಣಿನ ಜಗತ್ತು ಪುರುಷ ಜಗತ್ತಿಗಿಂತ ಸಂಪೂರ್ಣ ಭಿನ್ನ, ರಾಜಕೀಯ ಚಿಂತನೆ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಚಿಂತನೆಗಳಲ್ಲಿ ತನ್ನದೇ ಆದ ಒಳನೋಟಗಳನ್ನು ಆಕೆ ನೀಡಲಾರಳು ಎಂಬಂತೆ ಪುರುಷ ಪ್ರಾಧಾನ್ಯತೆಯು ಅಭಿಪ್ರಾಯ ಪಡುವುದನ್ನು ಅರಿಯಬಹುದಾಗಿದೆ.

ಇನ್ನು ದೃಶ್ಯ ಮಾಧ್ಯಮದ ವಿಷಯಕ್ಕೆ ಬಂದಾಗ ಅಲ್ಲಿನ ವ್ಯವಸ್ಥೆಯೇನು ಪತ್ರಿಕಾ ರಂಗಕ್ಕಿಂತ ಹೊರತಾಗಿಲ್ಲ. ಕಿರುತೆರೆ, ಹಿರಿತೆರೆಗಳು ಇಂದು ಹೆಣ್ಣಿನ ಉದ್ಯೋಗದ ಅವಕಾಶಗಳನ್ನು ಹೆಚ್ಚಿಸಿವೆ. ಚೆಲುವಿದ್ದರೆ ನಟಿಯರಾಗಬಹುದು, ಮಾಡೆಲ್‌ಗಳಾಗಬಹುದು, ತುಂಬಾ ದುಡ್ಡು ಸಂಪಾದಿಸಬಹುದು ಎಂಬಂತ ಆಮಿಷಗಳು ಇಂದು ಹೆಣ್ಣಿನ ದಿಕ್ಕು ತಪ್ಪಿಸುತ್ತಿದೆ. ವೈಚಾರಿಕ ಪ್ರಜ್ಞೆ ವಿದ್ಯೆ, ಬುದ್ಧಿ ಇಲ್ಲದೆಯೂ ಸೌಂದರ್ಯ ಒಂದರಿಂದ ಮಾತ್ರ ಅದಮ್ಯವಾದುದನ್ನು ಸಾಧಿಸಬಹುದೆಂಬ ಸುಳ್ಳು ನಿರೀಕ್ಷೆಗಳನ್ನು ಬಿತ್ತಿ ಹೆಣ್ಣಿನ ಬದುಕುವ ಹಕ್ಕನ್ನೇ ನಿರಾಕರಿಸುವಷ್ಟರ ಮಟ್ಟಿಗೆ ಈ ಮಾಧ್ಯಮಗಳ ಪಾತ್ರವಿದೆ. ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಹಣ ಎಲ್ಲದಕ್ಕೂ ನಿರ್ಣಾಯಕವಾಗಿರುವ ಸ್ಥಿತಿಯಲ್ಲಿ ಮೌಲ್ಯಗಳಿಗೆ ಬೆಲೆಯಿಲ್ಲದೇ ನೈತಿಕತೆ ದಿವಾಳಿಯಾಗುತ್ತಿದೆ. ಮಾಧ್ಯಮಗಳು ಸೃಷ್ಟಿಸುತ್ತಿರುವ ಸ್ಥಿರ ಮಾದರಿಯ ಹೆಣ್ಣಿನ ಚಿತ್ರಣದಿಂದಾಗಿ ಹೆಣ್ಣಿನ ದೈಹಿಕ ಮಾಟ, ಸುತ್ತಳತೆ, ಸೌಂದರ್ಯ ಇವೇ ಮುಂಚೂಣಿಯಲ್ಲಿ ನಿಂತು ನಿಜವಾಗಿಯೂ ಆಕೆ ಸಶಕ್ತಳಾಗಬೇಕಾದರೆ ಗಳಿಸಿಕೊಳ್ಳಬೇಕಾದ ಬೌದ್ಧಿಕ ಮಟ್ಟ, ವೈಚಾರಿಕ ಗಟ್ಟಿತನವು ಮರೆಗೆ ಸರಿದು ಹಿಂದಿಗಿಂತಲೂ ಇಂದು ಹೆಚ್ಚು ಶೋಷಿತಳಾಗುವಂತೆ ಮಾಡಿದೆ. ಹೆಣ್ಣನ್ನು ಮಾನವೀಯವಾಗಿ ಪರಿಗಣಿಸದೆ, ಸಹಜ ಜೀವಿಯಾಗಿ ಪರಿಗಣಿಸದೆ ಇದಕ್ಕೆ ಬದಲಾಗಿ ಸರಕಾಗಿ ಪರಿಭಾವಿಸುವ ಅಂಶವೇ ಇಂದು ವಾಸ್ತವವಾಗಿದೆ. ಅವಳ ದೇಹ, ಮಾತು, ಸೌಂದರ್ಯ ಎಲ್ಲವೂ ಲಾಭಗಳಿಸಿಕೊಳ್ಳುವ ನಿಟ್ಟಿನಲ್ಲೇ ಇಲ್ಲಿ ಬಳಕೆಯಾಗುತ್ತಿರುವುದಂತು ಸತ್ಯ.

ಲಾಭ-ನಷ್ಟದ ದೃಷ್ಟಿಕೋನದಿಂದಾಗಿ ಬಂಡವಾಳ ಸುರಿದಿರುವುದು ವಾಪಾಸಾಗಬೇಕೆಂಬ ತುಡಿತ ಈ ಮಾಧ್ಯಮ ಜಗತ್ತಿಗೆ ಹೆಣ್ಣನ್ನು ಸರಕಾಗಿ ಪರಿಚಯಿಸಿ, ಅದಕ್ಕೆ ಸರಿ ಹೊಂದಿಸುತ್ತಿರುವುದು ಕೇದಕರವಾದ ವಿಚಾರ. ಮಹಿಳೆಯಲ್ಲಿ ಅಪೂರ್ವ ಸಾಹಿತಿಗಳು, ಚಿಂತಕರು, ಹೋರಾಟಗಾರರು, ಸಮಾಜ ಸುಧಾರಕರು, ಶಿಕ್ಷಣ ತಜ್ಞರು, ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಸಾಧಕಿಯರ ಚಿತ್ರಣಗಳು, ಸಂದರ್ಶನಗಳು ಇವೆಲ್ಲಾ ಶೇಕಡ ಒಂದರಷ್ಟು ಪ್ರಚಾರಗೊಳ್ಳುತ್ತವೆ. ಉಳಿದ ತೊಂಬತ್ತು ಶೇಕಡಾ ಪ್ರಸಾರವಾಗುವ ಹೆಣ್ಣಿನ ಚಿತ್ರಣಗಳು ರಾಕ್ಷಸಿಯರು, ದುಂದುಕೋರರು, ಚಾಡಿಕೋರರು, ಮನೆ ಮುರುಕರು, ಪೆದ್ದರು, ಲಜ್ಜಾಗೌರಿಗಳು ಇಲ್ಲವೇ ವಿಚಿತ್ರ ವೇಷ ಭೂಷಣದ ವಿಲಕ್ಷಣ ಸೌಂದರ್ಯದವರು ಹೆಣ್ಣಿನ ಬಗ್ಗೆ ಜಿಗುಪ್ಸೆ ಹುಟ್ಟಿಸುವಂಥ ನೆಲೆಯಲ್ಲಿ ಪೈಪೋಟಿಗೆ ಬಿದ್ದಹಾಗೆ ಈ

ರೀತಿಯ ಹೆಣ್ಣಿನ ಮಾದರಿಗಳು ಸಶಕ್ತವಾದ ಮಾಧ್ಯಮಗಳಲ್ಲಿ ಮತ್ತೆ ಮತ್ತೆ ಮೂಡಿಬರುತ್ತಿರುವುದು. ಹೆಣ್ಣಿನ ಮಾನಸಿಕ ಮತ್ತು ನೈತಿಕ ಶಕ್ತಿಯನ್ನು ಕಸಿದುಕೊಳ್ಳುವ ಅಸ್ತ್ರಗಳೆಂದೇ ತಿಳಿಯಬಹುದು.

ದೃಶ್ಯ ಮಾಧ್ಯಮಗಳಲ್ಲಿ ಹೆಣ್ಣಿನ ದೇಹವೇ ಪ್ರಧಾನ ಆಕರ್ಷಣೆ ಉತ್ಪಾದನೆಗೂ ಹೆಣ್ಣು ದೇಹಕ್ಕು ಯಾವುದೇ ಸಂಬಂಧ ಇಲ್ಲದಿದ್ದರೂ ಮಾಧ್ಯಮದ ಮೂಲಕ ಮಾರುಕಟ್ಟೆಗೆ ಮಾಧ್ಯಮವಾಗಿ ಜಾಹಿರಾತುಗಳಲ್ಲಿ ದೇಹವನ್ನೇ ಇಲ್ಲಿ ಸೇತುವೆಯಾಗಿ ಬಳಸಲಾಗುತ್ತದೆ. ಸಮೂಹ ಮಾಧ್ಯಮಗಳ ಮೂಲಕ ಹರಿದು ಬರುವ ಜಾಹೀರಾತುಗಳಲ್ಲಿ ಹೆಣ್ಣಿನ ದೇಹವನ್ನು ತೋರುವ ಕ್ರಮದಲ್ಲಿ ಪುರುಷ ಧೋರಣೆ ಪ್ರಧಾನ ಹೆಣ್ಣಿನ ನಾನಾ ರೂಪಗಳನ್ನು ಬಂಡವಾಳ ಮಾಡಿಕೊಂಡು ಅವಳ ನಿಜವಾದ ವ್ಯಕ್ತಿತ್ವವನ್ನು ಮರೆಮಾಡಲಾಗಿದೆ. ಮಾಧ್ಯಮಗಳಿಗೆ ಹೆಣ್ಣು ದೇಹ ಬೆತ್ತಲಾದಷ್ಟು ಲಾಭಕರವೇ ಆದುದರಿಂದ ರೋಚಕ ದೇಹ ಪ್ರದರ್ಶನ ದೃಶ್ಯ ಮಾಧ್ಯಮಗಳಿಗೆ ಬೆಲೆಯುಳ್ಳದ್ದಾಗಿರುವುದು. ದೇಹವನ್ನು ತೋರುವ ಮಾಧ್ಯಮ ಅವಳ ಅಂತರಂಗವನ್ನು ತೋರಲು ಬಯಸುವುದಿಲ್ಲ. ಸಿನಿಮಾಗಳಲ್ಲಿ ಕಿರುತೆರೆಯ ಚಿತ್ರಗಳಲ್ಲಿ ಹೆಣ್ಣಿನ ಅಶ್ಲೀಲ ದೃಶ್ಯ, ನಟನೆಗಳನ್ನು ಹದ್ದು ಮೀರಿದ ಕ್ರಮದಲ್ಲಿ ತೋರಿಸುವುದು ಮಾರುಕಟ್ಟೆಯ ಅಭಿರುಚಿಗಳಿಂದಲೇ ಮಾರಾಟದ ಬಲೆಯನ್ನು ಮಾಧ್ಯಮಗಳು ಬಹಳ ಸುಂದರವಾಗಿ ನೇಯ್ದಿರುತ್ತದೆ. ಹೆಣ್ಣಿನ ದೇಹದ ವ್ಯಾಪಾರದಿಂದ ಮಾಧ್ಯಮಗಳಿಗೆ ಮಿಲಿಯನ್ ಗಟ್ಟಲೆ ಲಾಭವಿದೆ. ಚಲನಚಿತ್ರಗಳಲ್ಲಿ ಮಹಿಳೆಯರನ್ನು ಕ್ರೌರ್ಯ, ದೌರ್ಜನ್ಯ, ಲೈಂಗಿಕ ಪ್ರಚೋದನೆ, ಅಶ್ಲೀಲ ಸಂಭಾಷಣೆಯ ಮೂಲಕ ಕೆಳಮಟ್ಟದಲ್ಲಿ ಚಿತ್ರಿಸಲಾಗುತ್ತದೆ. ಅನೇಕ ಆಮಿಷಗಳನ್ನು ತ್ತೋರಿಸಿ ಎಳೆಯ ವಯಸ್ಸಿನ ಹುಡುಗಿಯರನ್ನು ಸಿನಿಮಾ ಕ್ಷೇತ್ರಕ್ಕೆ ಆಕರ್ಷಿಸಲಾಗುತ್ತದೆ. ಬಹಳಷ್ಟು ಹೆಣ್ಣು ಮಕ್ಕಳು ಕ್ಯಾಮರಾ ಮುಂದೆ ಬರುವ ಮೊದಲೇ ಶೋಷಣೆಗೆ ಒಳಗಾಗಿರುತ್ತಾರೆ. ಎಷ್ಟೋ ಹೆಣ್ಣುಗಳು ಮನೆಬಿಟ್ಟು, ನಟಿಯರಾಗುವ ಮರೀಚಿಕೆಯ ಬೆನ್ನಟ್ಟಿ ಕೊನೆಗೆ ವೇಶ್ಯಾಗೃಹಗಳನ್ನು ಸೇರಿರುತ್ತಾರೆ. ಸುಳ್ಳು ಕಂಪನಿಗಳು, ಜಾಹಿರಾತಿನ ಮೂಲಕ ಕರೆಯಿಸಿಕೊಂಡು ವಿವಿಧ ಬಗೆಯ ದಂದೆಗಳಿಗೆ ಬಲಿಪಶುಗಳನ್ನಾಗಿ ಮಾಡುವುದು ಅನೇಕ ಬಾರಿ ಪತ್ರಿಕೆಗಳಲ್ಲಿಯೂ ಪ್ರಕಟವಾಗಿದೆ. ಚಲನಚಿತ್ರ, ಸಾಹಿತ್ಯ, ಸಂಗೀತ, ನೃತ್ಯ, ನಿರ್ದೇಶನ ಮುಂತಾದ ಹಲವು ಕಲೆಗಳನ್ನೊಳಗೊಂಡ ದೃಶ್ಯ ಮಾಧ್ಯಮವು ಅಷ್ಟೇ ವಾಣಿಜ್ಯೀಕರಣಗೊಂಡ ಮಾರುಕಟ್ಟೆಯೂ ಆಗಿದೆ.

ವಾಣಿಜ್ಯೀಕೃತ ಜಾಹಿರಾತುಗಳಲ್ಲಿ ಸ್ತ್ರೀ ದೇಹವನ್ನು ಬಳಸಿಕೊಂಡೇ ತಾನು ತಯಾರಿಸಿದ ವಸ್ತುಗಳಿಗೆ ಪ್ರಚಾರವನ್ನು ನೀಡುವುದು. ಆ ವಸ್ತು ಒಂದು ಸಾಬೂನು ವಾಹನಕ್ಕೆ ಬಿಡಿಭಾಗಗಳು, ಮದ್ಯ ಯಾವುದೇ ಇರಬಹುದು ಅಲ್ಲಿ ಹೆಣ್ಣಿನ ಅಂಗಾಂಗ ಪ್ರದರ್ಶನವನ್ನು ಕಾಣಬಹುದು. ಸ್ತ್ರೀಯರು ಬಳಸದೇ ಇರುವ ವಸ್ತುಗಳಿಗೂ ಮಹಿಳೆಯರನ್ನೇ ಜಾಹಿರಾತುಗಳಲ್ಲಿ ಬಳಸುವುದು ವಿಪರ್ಯಾಸ. ಮಹಿಳೆಯನ್ನು ಅವಳ ಸಾಂಪ್ರದಾಯಿಕ ಪಾತ್ರಗಳಲ್ಲೇ ಚಿತ್ರಿಸುವಂಥ ಜಾಹಿರಾತುಗಳು ಹೆಚ್ಚು ಉದಾ: ಆಹಾರ ಸಾಮಗ್ರಿ, ಅಡುಗೆ ಮಾಡುವ ಪರಿಕರ, ಸಿದ್ಧ ಆಹಾರ, ದಿನ ಬಳಕೆಯ ವಸ್ತು ಮುಂತಾದವುಗಳಿಗೆ ಹೆಣ್ಣನ್ನು ಬಳಸುವ ಮೂಲಕ ಅವುಗಳೆಲ್ಲ ಹೆಣ್ಣಿಗೆ ಮೀಸಲು ಎಂದು ಪ್ರಚಾರ ಮಾಡುತ್ತದೆ.

ಪಿತೃಪ್ರಧಾನ ವ್ಯವಸ್ಥೆಯ ಉತ್ಪಾದನೆ ಮತ್ತು ಸಂತಾನೋತ್ಪಾದನೆಯ ಸಂಗತಿಗಳಲ್ಲಿ ಹೆಣ್ಣನ್ನು ಕುರಿತ ಬಹುಬಗೆಯ ಕೃತಕ ರಚನೆಗಳಿಗೆ ಮಾಧ್ಯಮಗಳು ಪ್ರತಿನಿಧೀಕರಿಸುತ್ತವೆ. "ಸ್ತ್ರೀವಾದಿ ಸಂಶೋಧನೆಗಳು ಇದಕ್ಕಾಗಿ ಸಂಕೇತ ವಿಜ್ಞಾನ ಮತ್ತು ಮನೋವಿಶ್ಲೇಷಣೆಗಳ ಚಿಂತನೆಗಳನ್ನು ಮತ್ತು ಸಮಾಜಶಾಸ್ತ್ರಗಳ ಅಧ್ಯಯನ ವಿಧಾನಗಳನ್ನು ಬಳಸುತ್ತವೆ. ಈ ಸಂಶೋಧನೆಗಳು ನಾಲ್ಕು ಉದ್ದೇಶಗಳನ್ನು ಹೊಂದಿದೆ. ಒಂದು : ಲೈಂಗಿಕತಾವಾದ ಮತ್ತು ಹೆಣ್ಣು ಸ್ಥಿರ ಮಾದರಿ ಪಾತ್ರಗಳನ್ನು ಬಿಂಬಿಸುತ್ತವೆಯೋ ಎಂಬುದನ್ನು ಪರಿಶೀಲಿಸಲು ವಿಷಯ ವಿಶ್ಲೇಷಣೆಯನ್ನು ನಡೆಸುತ್ತವೆ. ಎರಡು: ಈ ಪ್ರತಿನಿಧೀಕರಣವು ವಾಸ್ತವ ಸಂಗತಿಗಳನ್ನೇ ತೋರಿಸುತ್ತದೆ. ಮೂರು: ಹೆಣ್ಣು ಎಂಬ ಮಿಥ್ಯೆಯನ್ನು ಮತ್ತು ಸ್ತ್ರೀತ್ವದ ಅರ್ಥಗಳನ್ನು ಕಟ್ಟುವ ತಂತ್ರಗಾರಿಕೆಯ ಒಗಟನ್ನು ಬಿಡಿಸಿ ಮಾಧ್ಯಮಕ್ಕೆ ಅದರ ಗ್ರಾಹಕರಿಗೂ ಇರುವ ಸಂಬಂಧವನ್ನು ಮತ್ತು ಈ ಕುರಿತು ಇರುವ ಸಾಂಸ್ಕೃತಿಕ ಅಭಿಪ್ರಾಯಗಳನ್ನು ವಿವರಿಸುತ್ತದೆ. ನಾಲ್ಕು: ಮಹಿಳೆಯರ ಉದ್ಯೋಗದ ಸಂದರ್ಭದಲ್ಲಿ ಹೇಳುವುದಾದರೆ, ಮಾಧ್ಯಮವು ಒಂದು ಸಮಾಜೋಧಾರ್ಮಿಕ ವ್ಯವಸ್ಥೆಯೇ ಆಗುತ್ತದೆ ಎಂಬುದನ್ನು ವಿಶ್ಲೇಷಿಸಿ ತೋರಿಸುವುದು."[೧೭]

ಸ್ತ್ರೀವಾದಿ ಚಿಂತನೆಯು ಮಾಧ್ಯಮ ಅಧ್ಯಯನದ ಕೇಂದ್ರ ಪ್ರಶ್ನೆಗಳನ್ನು ಮರುಚಿಂತನೆಗೆ ಒಳಪಡಿಸುವ ಮೂಲಕ ತನ್ನದೇ ಆದ ಒಂದು ವಿಶೇಷ ಅಧ್ಯಯನ ವಲಯವನ್ನು ರೂಪಿಸಿಕೊಳ್ಳುತ್ತದೆ. ಸ್ತ್ರೀವಾದಿ ಅಧ್ಯಯನಗಳು ಸಾಕಷ್ಟು ವಿವರಗಳಲ್ಲಿ ಜಾಹಿರಾತುಗಳು ಮತ್ತು ಪೋರ್ನೋಗ್ರಫಿಗಳಲ್ಲಿ ಹೆಣ್ಣನ್ನು ಹೇಗೆ ಒಂದು ವಸ್ತುವಾಗಿ ನಿಲ್ಲಿಸಿಬಿಡುತ್ತದೆ ಎಂಬುದನ್ನು ವಿಶ್ಲೇಷಿಸಿವೆ. ಅಲ್ಲದೆ ಗೃಹಿಣಿಯಾಗಿ ತಾಯಿಯಾಗಿ ಇರುವುದೇ ಹೆಣ್ಣಿಗೆ ಇರುವ ಸಹಜ ಪಾತ್ರ ಎಂದು ತೋರಿಸುವುದು ಮಾಧ್ಯಮಗಳನ್ನು ಸಂಪೂರ್ಣವಾಗಿ ಆವರಿಸಿಕೊಂಡಿರುವ ತಂತ್ರಗಾರಿಕೆಯಾಗಿದೆ ಎಂಬುದನ್ನು ಸಹ ವಿಷದಪಡಿಸುತ್ತವೆ. ಹಾಗೆಯೇ ಪಿತೃಪ್ರಧಾನ ರಚನೆಯ ಮಾಧ್ಯಮವನ್ನು ನಿರಾಕರಿಸುವುದರ ಬಗ್ಗೆ ಗಂಭೀರವಾಗಿ ಚಿಂತಿಸುವ ಮೂಲಕ, ಸ್ತ್ರೀವಾದಿ ಮಾಧ್ಯಮ ಮತ್ತು ಸಿದ್ಧಾಂತಗಳನ್ನು ಹೊಸದಾಗಿ ಕಟ್ಟಿಕೊಳ್ಳಬೇಕಾದ ಅವಶ್ಯಕತೆಯನ್ನು ಸಹ ತಿಳಿಸುತ್ತದೆ.

ಹೆಣ್ಣೆಂದರೆ ಗಂಡಿಗೆ ಅಡಿಯಾಳಾಗಿ ಇರುವವಳು, ಸೌಂದರ್ಯ, ದೇಹ ಸಿರಿಯ ಮೂಲಕ ಎಲ್ಲರನ್ನೂ ತನ್ನ ತೆಕ್ಕೆಗೆ ಸೆಳೆದುಕೊಳ್ಳುವಳು ಎಂಬೆಲ್ಲಾ ರೀತಿಯಲ್ಲಿ ಮಾಧ್ಯಮಗಳು ಹೆಣ್ಣನ್ನು ಬಿಂಬಿಸುತ್ತವೆ. ಇದರ ಪರಿಣಾಮ ಶತಮಾನಗಳಿಂದ ಹೋರಾಟದ ಮೂಲಕ ಸಮಾನತೆ ಸ್ವಾತಂತ್ರ್ಯವನ್ನು ಪಡೆದು ಸಬಲೆಯಾಗುತ್ತಿರುವ ಹೆಣ್ಣಿನ ಭವಿಷ್ಯಕ್ಕೆ ತೊಡಕಾಗುವುದಂತು ಸತ್ಯ ಸಂಗತಿ. ಈ ನಿಟ್ಟಿನಲ್ಲಿ ಮಾಧ್ಯಮಗಳು ಇಂದು ಕಟ್ಟಿಕೊಂಡಿರುವ ಸ್ಥಿರ ಮಾದರಿಯ ಈ ರೀತಿಯ ಹೆಣ್ಣಿನ ಚಿತ್ರಣಗಳ ಬದಲಾಗಿ ಅದನ್ನು ಮುರಿದು ಕಟ್ಟಬೇಕಾದ ಅನಿವಾರ್ಯತೆ ನಮ್ಮೆದುರು ಇದೆ.

ಮಾಧ್ಯಮಗಳು, ಮಾನವೀಯತೆಯ, ಗಂಡಿನಷ್ಟೇ ಪ್ರಖರವಾಗಿ ಚಿಂತಿಸಬಲ್ಲ, ಸಮಾನತೆಯ ಬದುಕನ್ನು ಬಾಳುವ, ಸಮಾಜದ ಉನ್ನತಿಗೆ ಶ್ರಮಿಸುವ ಮಾದರಿಯ ಹೆಣ್ಣಿನ ಚಿತ್ರಣಗಳನ್ನು

ನೀಡಬೇಕಾದ ಅನಿವಾರ್ಯತೆಯ ಜವಾಬ್ದಾರಿಯನ್ನು ಅರಿಯಬೇಕಿದೆ. ಆ ಮೂಲಕ ಸಮಾಜದ ನೈತಿಕ ಅಧಃಪತನವನ್ನು ತಡೆಗಟ್ಟುವ ನಿಟ್ಟಿನಲ್ಲಿ ಮೊದಲು ಲಾಭ ನಷ್ಟದ ದೃಷ್ಟಿಕೋನದಿಂದ ಹೊರಬರಬೇಕಿದೆ. ಭವಿಷ್ಯದ ಒಳಿತಿನ ದೃಷ್ಟಿಯಿಂದಲೂ ನಾವು ಇಂದು ಈ ಕುರಿತು ಗಂಭೀರವಾಗಿ ಚಿಂತಿಸಬೇಕಾಗಿದೆ.

## ೩.೭ ಹೆಣ್ಣು ದೇಹ ಮತ್ತು ತಂತ್ರಜ್ಞಾನ

ತಂತ್ರಜ್ಞಾನವು ತಟಸ್ಥ ಗುಣದ ಒಂದು ಶಕ್ತಿ. ಇದು ಮಾನವ ಕುಲಕ್ಕೆ ಬಹಳಷ್ಟು ಉಪಯೋಗಕಾರಿಯಾದುದು. ಮತ್ತು ಇಂದಿನ ಪರಿಸ್ಥಿತಿಯಲ್ಲಿ ಅನಿವಾರ್ಯವೂ ಆದುದಾಗಿದೆ. ಆದರೆ ಇಂದು ತಂತ್ರಜ್ಞಾನ ಮತ್ತು ವಿಜ್ಞಾನ ಮುಂದುವರಿದಂತೆಲ್ಲಾ ಸಮಾಜವು ಸರಳತೆಯಿಂದ ಸಂಕೀರ್ಣತೆಯ ಕಡೆಗೆ ತಿರುಗಿ ಸಾಮಾಜಿಕ ವ್ಯವಸ್ಥೆಯಲ್ಲಿ ಏರುಪೇರು ಸೃಷ್ಟಿಯಾಗಲು ಕಾರಣವಾಗುತ್ತಿದೆ. ತಂತ್ರಜ್ಞಾನವು ಪುರುಷ ರೂಪಿಯಾದುದು. ತನಗೆ ಬೇಕಾದ ಎಲ್ಲಾ ತಾಂತ್ರಿಕ ಉಪಕರಣಗಳನ್ನು ಪುರುಷ ಆವಿಷ್ಕಾರ ಮಾಡಿದ್ದು, ಬಳಕೆಯೂ ಆತನೇ ಮಾಡುತ್ತಾನೆ. ಸ್ತ್ರೀಯರನ್ನು ಶಿಕ್ಷಣದಿಂದ ಹೊರಗಿಟ್ಟು ಪರಿಣಾಮವಾಗಿ ತಂತ್ರಜ್ಞಾನದ ಜ್ಞಾನ ಬಹಳ ಕಡಿಮೆ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಹೆಣ್ಣು ತಂತ್ರಜ್ಞಾನದ ಕಡೆ ಮುನ್ನಡೆದಿದ್ದಾಳೆ. ಇಪ್ಪತ್ತೊಂದನೆ ಶತಮಾನವು ಆಧುನೀಕರಣಗೊಂಡಂತೆ ಹೆಚ್ಚು ತಂತ್ರಜ್ಞಾನದ ಮೂಲಕವೇ ತನ್ನೆಲ್ಲಾ ಅಗತ್ಯಗಳನ್ನು ಪೂರೈಸಿಕೊಳ್ಳಲು ಮುನ್ನಡೆದಿದೆ. ಈ ತಂತ್ರಜ್ಞಾನದ ಮೂಲಕ ಹೆಣ್ಣಿನ ಶೋಷಣೆಗೆ ಮತ್ತೊಂದು ಆಯಾಮ ದೊರೆತಿದೆ. ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನದ ಆವಿಷ್ಕಾರಗಳಿಂದ ಹೈಟೆಕ್ ವೇಶ್ಯಾವಾಟಿಕೆಯನ್ನು ರೂಪಿಸಿಲಾಗಿದೆ. ಹೆಣ್ಣು ದೇಹಕ್ಕೂ ತಂತ್ರಜ್ಞಾನಕ್ಕೂ ಮೇಲು ನೋಟಕ್ಕೆ ಸಂಬಂಧವಿಲ್ಲ ಎಂಬಂತೆ ಕಂಡರೂ ತಾಂತ್ರೀಕೃತ ಸಮಾಜವು ಹೆಣ್ಣನ್ನು ತನ್ನ ತಾಂತ್ರೀಕೃತ ಜೀವನ ಮೌಲ್ಯಕ್ಕೆ ತಕ್ಕಂತೆ ದುಡಿಸಿಕೊಳ್ಳುತ್ತದೆ.

ಕಾಲ್ ಸೆಂಟರ್‌ಗಳಲ್ಲಿ ದುಡಿಯುವ ಹೆಣ್ಣುಮಕ್ಕಳು ತಂತ್ರಜ್ಞಾನದ ಎದುರು ಮಾತಿನ ಕೂಲಿಗಳಾಗಿ ದುಡಿಯಬೇಕಾದ ಪರಿಸ್ಥಿತಿಯಿದೆ. ಹೆಣ್ಣಿನ ದೇಹ ಮತ್ತು ಮನಸ್ಸುಗಳೆರಡೂ ಯಾರದೋ ತಂತ್ರಜ್ಞಾನದ ಕೂಲಿಗೆ ಒಳಪಡಬೇಕಾದ ಆರ್ಥಿಕ ವ್ಯವಸ್ಥೆ ನಿರ್ಮಾಣವಾಗುವುದು. ಮಾಹಿತಿ ತಂತ್ರಜ್ಞಾನದ ಗುಲಾಮರಾಗಿ ದುಡಿದ ಹೆಣ್ಣಿನ ಮನಸ್ಸು ದುರುಪಯೋಗವಾಗುವ ಅಪಾಯ ಇದ್ದೇ ಇದೆ. ಕಾಲ್‌ಸೆಂಟರ್‌ನಲ್ಲಿ ಎಲ್ಲವೂ ನೈತಿಕವಾಗಿರುವುದಿಲ್ಲ ಎಂಬುದು ವರ್ತಮಾನದ ವಿದ್ಯಮಾನಗಳಿಂದ ತಿಳಿಯುತ್ತದೆ. ಸೈಬರ್ ಸೆಕ್ಸ್ ಕೆಫೆಗಳು ತಂತ್ರಜ್ಞಾನದ ಪರಿಣಾಮ ಇಂತಹ ವೆಬ್‌ಸೈಟ್‌ಗಳು ಅಬಾಲ ವೃದ್ಧೆಯರಾಗಿ ಎಲ್ಲರನ್ನು ದೇಹ ತೋರ್ಪಡಿಕೆಗೆ ಒಳಪಡಿಸುತ್ತಿರುವ ಅಪಾಯಗಳನ್ನು ಇಂದು ಮುಂದುವರಿದ ರಾಷ್ಟ್ರಗಳೂ ಸೇರಿದಂತೆ ಅಭಿವೃದ್ದಿ ಶೀಲ ರಾಷ್ಟ್ರಗಳು ಸಹ ತೀವ್ರವಾಗಿ ಎದುರಿಸುತ್ತಿವೆ. ಮತ್ತು ಸೈಬರ್ ಸೆಕ್ಸ್, ಸೆಕ್ಸ್ ಕೆಫೆಗಳು ಇಂದು ದೊಡ್ಡ ಪಿಡುಗಾಗಿವೆ. ತಂತ್ರಜ್ಞಾನದ ಉಪಕರಣಗಳು ಹೆಣ್ಣನ್ನು ಮಾರುವ ಅಸ್ತ್ರಗಳಾಗಿಯೂ ಬಳಕೆಯಾಗುತ್ತಿವೆ. ಹೆಣ್ಣು ದೇಹದ ಬೆತ್ತಲೆಯನ್ನು ತಂತ್ರಜ್ಞಾನವು

ಎಷ್ಟೊಂದು ವ್ಯವಸ್ಥಿತವಾಗಿ ಪುನರ್ ಮುದ್ರಿಸಿ ಕ್ಷಣಾರ್ಧದಲ್ಲಿ ಹಂಚುತ್ತದೆ ಎಂದರೆ ಅದರ ಮಾಯಾಜಾಲವು ಭೀಕರವಾಗಿದೆ. ಯಾವುದೇ ಸಭ್ಯ ಹೆಣ್ಣಿನ ಮಾನವನ್ನು ತಂತ್ರಜ್ಞಾನದ ಮೂಲಕ ಬೆಳಕು ಹರಿಯುವುದರ ಒಳಗೆ ಬೀದಿಪಾಲು ಮಾಡಿ ಆಕೆಯ ದೇಹವನ್ನು ಬಟಾಬಯಲು ಮಾಡಬಹುದು. ಯಾರದೋ ಮುಖ ಯಾರದೋ ದೇಹ ಹೊಂದಿಸಿ ಅವರ ವ್ಯಕ್ತಿತ್ವವನ್ನು ಮಾರಬಹುದು. ಬ್ಲೂಫಿಲ್ಮ್ ಇಂಡಸ್ಟ್ರೀಯು ತಂತ್ರಜ್ಞಾನದ ಬಲದಿಂದ ಬೆಳೆದದ್ದು, ಕೇವಲ ನೀಲಿಚಿತ್ರಗಳ ಮಾರಾಟವೊಂದರಿಂದಲೇ ಮಿಲಿಯನ್ ಗಟ್ಟಲೆ ವ್ಯವಹಾರ ನಡೆಯುತ್ತಿದೆ.

ಸೈಬರ್ ಕ್ರೈಮ್ ಎಂಬ ಆಧುನಿಕ ಅಪರಾಧವು ಕಂಪ್ಯೂಟರ್ ತಂತ್ರಜ್ಞಾನವು ಬಳಕೆಗೆ ಬಂದ ನಂತರದ್ದಾಗಿದೆ. ಕಂಪ್ಯೂಟರ್ ತನ್ನಲ್ಲಿ ಇಡೀ ವಿಶ್ವದ ಎಲ್ಲಾ ವಿಚಾರಗಳನ್ನು ಅಡಗಿಸಿಟ್ಟುಕೊಂಡು ನವೀನ ಜ್ಞಾನದತ್ತ ಸಮಾಜವನ್ನು ಕೊಂಡೊಯ್ಯಲು ಅದನ್ನು ಬಳಸುವ ಅಥವಾ ಉಪಯೋಗಿಸುವ ದಿಕ್ಕಿನಲ್ಲಿ ದಾರಿ ತಪ್ಪಿರುವುದು ಅಲ್ಲದೆ ದುರುಪಯೋಗವಾಗುತ್ತಿದೆ ಎಂಬುದಕ್ಕೆ ನಾವು ಕಾಣುತ್ತಿರುವ ಈ ಸೈಬರ್ ಕ್ರೈಮ್ ಒಂದು ಸಾಕ್ಷಿಯಾಗಿದೆ. ಈ ಅಪರಾಧವು ವ್ಯಕ್ತಿಗಳನ್ನು ಹೆದರಿಸುವುದು, ಚೈಲ್ಡ್ ಪ್ರೋನೋಗ್ರಫಿ, ಟ್ರ್ಯಾಪ್ ಮಾಡುವುದು, ಅಶ್ಲೀಲ ಪ್ರದರ್ಶನ ಇತ್ಯಾದಿಗಳಿಗೆ ಕಾರಣವಾಗಿದೆ. ಇದರಿಂದ ಯುವ ಜನಾಂಗದ ಮನಸ್ಸಿಗೆ ಘಾಸಿಯಾಗುವ ಪರಿಸ್ಥಿತಿ ಇರುವುದರಿಂದ ಅವರು ಮಾನಸಿಕ ಅಸಮತೋಲನಕ್ಕೆ ಒಳಗಾಗುತ್ತಾರೆ. ಹಾಗೂ ಲೈಂಗಿಕ ಶೋಷಣೆಗೆ ಒಳಗಾಗುವ ಅಮಾಯಕ ಹೆಣ್ಣು ಮಕ್ಕಳ ಸಂಖ್ಯೆಯೇ ಹೆಚ್ಚಾಗಿದೆ.

ಸೈಬರ್ ಸ್ಟಾಕರ್ಸ್: ಇಂಟರ್ ನೆಟ್ ಎನ್ನುವುದು ಜಗತ್ತಿನ ಕನ್ನಡಿ, ಜಗತ್ತಿನಲ್ಲಿ ಏನೆಲ್ಲಾ ಇರುತ್ತದೆಯೋ ಅದೆಲ್ಲವೂ ಇಂಟರ್‌ನೆಟ್‌ನಲ್ಲಿ ಇರುತ್ತದೆ. "ಸೈಬರ್ ಸ್ಟಾಕಿಂಗ್ ಎಂದರೆ ಇಂಟರ್ ನೆಟ್ ಮೂಲಕ ನಡೆಯುವ ದೌರ್ಜನ್ಯ, ಅವಮಾನ, ಶೋಷಣೆ, ಹಾಗೂ ಬೆದರಿಕೆ ಕೆಲವೊಮ್ಮೆ ಇದು ಇಂಟರ್‌ನೆಟ್‌ನ್ನು ಮೀರಿದ್ದು. ದೂರವಾಣಿಯ ಮೂಲಕ ಹಿಂಸಿಸುವುದು, ಅಶ್ಲೀಲ ಮಾಹಿತಿ ಕಳುಹಿಸುವುದು, ವೈಯುಕ್ತಿಕ ಮಾಹಿತಿ ಸಂಗ್ರಹಿಸುವುದು ಹೀಗೆ ಏನೆಲ್ಲಾ ಆಗಬಹುದು"[೧೮] ಬಹಳವಾಗಿ ಕಾಡುವ ಸೈಬರ್ ಸ್ಟಾಕರ್ಸ್ ಒಬ್ಬ ವ್ಯಕ್ತಿಯನ್ನು ಗುರಿಯಾಗಿಸಿಕೊಂಡು ಅಂತರ್ಜಾಲದಲ್ಲಿ ಆ ವ್ಯಕ್ತಿಯ ಚಲನೆಯನ್ನು ನಿರಂತರವಾಗಿ ಇನ್ನೊಬ್ಬ ವ್ಯಕ್ತಿ ಗಮನಿಸಬಹುದು. ಇಲ್ಲಿ ಮೊದಲ ವ್ಯಕ್ತಿಯ ಗೌಪ್ಯತೆ ನಾಶವಾಗುತ್ತಿರುತ್ತದೆ. ಅದು ವ್ಯಕ್ತಿಯನ್ನು ಅವಮಾನಿಸುವ, ಅದರ ವೈಯಕ್ತಿಕ ಜೀವನದಲ್ಲಿ ನುಸುಳುವ, ಅವರನ್ನು ಸದಾ ಭಯದಲ್ಲಿರುವಂತೆ ಮಾಡುವ ಸಂದರ್ಭಗಳೂ ಇರಬಹುದು. ಸಾಮಾನ್ಯವಾಗಿ ಪುರುಷರಿಂದ ಮಹಿಳೆಯರು ಮತ್ತು ಮಕ್ಕಳು ಮಾನಸಿಕ ದೌರ್ಜನ್ಯಕ್ಕೆ ಒಳಗಾಗುತ್ತಾರೆ. ಶಿಶು ಕಾಮಿಗಳಿಂದ ಮಕ್ಕಳೇ ಹೆಚ್ಚಾಗಿ ಕಿರುಕುಳಕ್ಕೆ ಒಳಗಾಗುತ್ತಾರೆ. ಮನೆಯ ಹೊರಗೆ ದುಡಿಯುವ ಹೆಣ್ಣು ಮಕ್ಕಳು ತಮ್ಮ ಸಹೋದ್ಯೋಗಿಯಿಂದಲೋ ಮಾಜಿ ಪ್ರಿಯಕರನಿಂದಲೋ ಈ ಸುಳಿಗೆ ಸುಲಭವಾಗಿ ಗುರಿಯಾಗುವುದು. ವಿಷಾದನೀಯ ಅಂತರ್ಜಾಲದ ಸ್ನೇಹ ಕೆಲವೊಮ್ಮೆ ದ್ವೇಷಕ್ಕೆ ಎಡೆಮಾಡಿಕೊಡುತ್ತದೆ. ಯಾವುದೋ ಸಣ್ಣ ವಿಷಯಕ್ಕೆ ಸಿಟ್ಟು ಮಾಡಿಕೊಂಡು ಅದನ್ನೇ ದ್ವೇಷಕ್ಕೆ

ಪೂರ್ಣವಾಗಿ ತಿರುಗಿಸಿಕೊಳ್ಳುತ್ತಾರೆ. ಅದು ಹೆಣ್ಣಿನ ವಿರುದ್ಧವಾಗಿದ್ದಾರೆ ಅವಳ ಬಗ್ಗೆ ಅಶ್ಲೀಲವಾಗಿ ಬರೆಯುವುದು, ಅವಳ ಪೋನ್ ನಂಬರ್ ಎಲ್ಲರಿಗೂ ಸಿಗುವಂತೆ ಮಾಡುವುದು, ಯಾರದೋ ಬೆತ್ತಲೆ ದೇಹದ ಚಿತ್ರಕ್ಕೆ ಅವಳ ಮುಖದ ಚಿತ್ರ ಅಂಟಿಸಿ ಅಂತರ್ಜಾಲದಲ್ಲಿ ಬಿಡುಗಡೆ ಮಾಡುವುದು ಮುಂತಾದವು ಮಾಡುತ್ತಾರೆ. ಸಮೀಕ್ಷೆಯ ಪ್ರಕಾರ ಹೀಗೆ ಅಂತರ್ಜಾಲದ ಶೋಷಣೆಗೆ ಒಳಗಾಗುವವರಲ್ಲಿ ಶೇ.೭೫ರಷ್ಟು ಮಹಿಳೆಯರೇ ಆಗಿರುತ್ತಾರೆ. ಹಾಗೆಯೇ ಈ ಸೈಬರ್ ಅಪರಾಧವು ಗಣನೀಯ ಪ್ರಮಾಣದಲ್ಲಿ ಹೆಚ್ಚಳಗೊಂಡಿದೆ.

ಅಷ್ಟೇ ಅಲ್ಲದೆ ತಂತ್ರಜ್ಞಾನದ ಫಲವಾಗಿ ಹೆಣ್ಣು ಇಂದು ಹೊಸ ಹೊಸ ಆವಿಷ್ಕಾರಗಳಿಗೆ ಬಲಿಯಾಗುವ, ಪ್ರಯೋಗಗಳಿಗೆ ಒಡ್ಡಿಕೊಳ್ಳುವ ವಸ್ತುವಾಗಿದ್ದಾಳೆ. ವೈದ್ಯಕೀಯ ಸಂಶೋಧನೆಗಳು ವಿಸ್ತರಿಸಿದಂತೆ ಅದರೊಂದಿಗೆ ತಂತ್ರಜ್ಞಾನದ ಪರಿಣತಿಯೂ ಹೆಚ್ಚಿದಂತೆಲ್ಲಾ ಸ್ತ್ರೀ ಪುರುಷರಿಬ್ಬರ ಜೀವನಗಳ ಮೇಲೂ ಅಗಾಧವಾದ ಪರಿಣಾಮಗಳೂ ಆದವು. ಜೀವಿತಾವಧಿಯು ವಿಸ್ತರಿಸಿದ್ದು, ಶಿಶು ಮರಣ ಮತ್ತು ಬಾಣಂತಿ ಮರಣ ಕಡಿಮೆಯಾಗತೊಡಗಿದ್ದ ಅತ್ಯಂತ ಸಕರಾತ್ಮಕ ಪರಿಣಾಮಗಳೇ ಆದರೆ ಇದರೊಂದಿಗೆ ಹೆಣ್ಣು ದೇಹದ ಮೇಲೆ ಗಂಡಿಗೆ ದೊರಕಿದ ಅಪಾರ ನಿಯಂತ್ರಣದ ಪರಿ ಯಾವ ಕಲ್ಪನೆಗೂ ದೊರಕದಷ್ಟಾಯಿತು.

ಪೋರ್ನೋಗ್ರಫಿಗಳು, ಜಾಹೀರಾತುಗಳು ಹೆಣ್ಣಿನ ತೆಳು ದೇಹಗಳನ್ನು ಸರಿಹೊಂದಿಸಲು ಅದಕ್ಕೆ ತಕ್ಕಂತೆ ಪ್ಲಾಸ್ಟಿಕ್ ಸ್ತನ, ಮೈಮಾಟಗಳನ್ನು ಅಳವಡಿಸಲು ತಂತ್ರಜ್ಞಾನವನ್ನು ಬಳಸಿಕೊಳ್ಳಲಾಗುತ್ತಿದೆ. ವ್ಯಾಯಾಮ, ಪ್ಲಾಸ್ಟಿಕ್ ಸರ್ಜರಿ, ತೂಕ ನಿಯಂತ್ರಣ ಎಂಬ ಜಪಗಳು ದೊಡ್ಡ ಮಾರುಕಟ್ಟೆಯನ್ನೇ ಸೃಷ್ಟಿಸಿದವು. ದಪ್ಪ ದೇಹದವರಾಗಿಬಿಟ್ಟರೆ ಎಂಬ ಆತಂಕವು ಮಹಿಳೆಯರನ್ನು ಈ ದುಸ್ಥಿತಿಗೆ ತಳ್ಳಿತು. ದಂತ ವೈದ್ಯ, ಚರ್ಮ ತಜ್ಞರು, ಭರ್ಜರಿ ವ್ಯಾಪಾರಿಗಳಾದರು. ತಂತ್ರಜ್ಞಾನವು ಸ್ವತಃ ಉಪಕಾರಿ ಗುಣದ್ದಾಗಿದೆ ಎಂಬುದು ನಿಜವೇ ಇರಬಹುದು. ಆದರೆ, ಪಿತೃ ಪ್ರಧಾನತೆಯ ಸಾಮಾಜಿಕ ಸಂಬಂಧಗಳ ವ್ಯವಸ್ಥೆಯು, ತಂತ್ರಜ್ಞಾನವು ಯಾರ ಪಾಲಿಗೆ ಉಪಕಾರಿಯಾಗಬೇಕು, ಯಾರ ಪಾಲಿಗೆ ಅಲ್ಲ ಎಂಬುದನ್ನು ನಿರ್ಧರಿಸುವ ಸಂಗತಿಯಾಗಿದೆ ಎಂಬುದೇ ಮಹಿಳೆಯರ ಪಾಲಿನ ವಾಸ್ತವ ಎಂದು ಸ್ತ್ರೀವಾದಿ ಚಿಂತನೆಗಳು ವಾದಿಸುತ್ತವೆ. ಉದಾಹರಣೆಗೆ ಕೆಲಸದ ಸ್ಥಳದಲ್ಲಿ ಹೊಸ ಹೊಸ ತಂತ್ರಜ್ಞಾನದ ಆವಿಷ್ಕಾರಗಳು ಬಳಕೆಗೆ ಬರಬಹುದು, ಆದರೆ ಆದಾಗಲೇ ನೆಲೆಗೊಂಡಿರುವ ಗಂಡು ಹೆಣ್ಣುಗಳ ಪ್ರಾಬಲ್ಯ ಮತ್ತು ಅಧೀನತೆಗಳ ಸಂಬಂಧಿ ಮುಂದುವರೆಸಲು ಅವು ನೆರವಾಗುತ್ತವಷ್ಟೇ ತಂತ್ರಜ್ಞಾನದ ಆವಿಷ್ಕಾರಗಳು ಗಂಡಸರು ನಿರ್ವಹಿಸುವ ಕೆಲಸಗಳಿಗೆ ನೇರವಾಗುತ್ತವೆ. ಮತ್ತು ದೈಹಿಕ ಶ್ರಮದ ಕೆಲಸಗಳು ಎಂದಿನಂತೆ ಅಧೀನ ನೆಲೆಯವರ ಪಾಲಿಗೆ ಉಳಿಯುತ್ತದೆ. ತಂತ್ರಜ್ಞಾನವು ಒಂದು ಗುಂಪಿನ ಎಲ್ಲಾ ಸದಸ್ಯರಿಗೂ ಸಮಾನವಾಗಿ ಉಪಯೋಗಕ್ಕೆ ಬರುತ್ತವೆ ಮತ್ತು ಅವರ ಶ್ರಮಗಳನ್ನು ತಗ್ಗಿಸಿ ಲಾಭಗಳನ್ನು ಹೆಚ್ಚಿಸುತ್ತವೆ ಎಂದು ಸಾಮಾನ್ಯೀಕರಿಸಿ ಹೇಳಿಬಿಡಬಹುದು. ಆದರೆ ಆ ತಂತ್ರಜ್ಞಾನವು ತಗ್ಗಿಸಿದ ದೇಹಶ್ರಮ, ತಂದುಕೊಟ್ಟ ಲಾಭಗಳು ಯಾವ ತಂತ್ರದಲ್ಲಿ ಯಾರ

ಪಾಲಿಗೆ ರವಾನೆಯಾಗುತ್ತವೆ ಎಂಬುದನ್ನು ದೀರ್ಘ ವಿಶ್ಲೇಷಣೆಗೆ ಒಳಪಡಿಸಿದಾಗ ತಿಳಿಯುತ್ತದೆ. ಆಫೀಸ್ ಕಛೇರಿ, ಕುಟುಂಬ, ಕೃಷಿ, ಸೌಂದರ್ಯ, ಹೀಗೆ ಮೊದಲಾದ ಹತ್ತು ಹಲವು ವಲಯಗಳಲ್ಲಿ ಗಮನಿಸಿದರೆ ಇದು ಯಾರಿಗಾದರೂ ಸ್ಪಷ್ಟನೇ ಆಗುತ್ತವೆ ಸ್ವಲ್ಪ ಸೂಕ್ಷ್ಮತೆ ಮತ್ತು ಸಕಾರಾತ್ಮಕ ಸಂವೇದನೆಗಳು ಇರಬೇಕಷ್ಟೆ.

ಇನ್ನು ಹೆಣ್ಣು ದೇಹದ ಕುರಿತ ಅನುಭೋಗಿ ಕಲೆಯಲ್ಲಿ ಅಭಿವ್ಯಕ್ತವಾದ ಅಂಶಗಳನ್ನು ಗಮನಿಸಿದರೆ. ಜನಪದ ಕಲೆಗಳಿಂದ ಹಿಡಿದು ಶಿಷ್ಟ ಕಲೆಗಳ ತನಕ ಹೆಣ್ಣು ದೇಹವು ಅನುಭೋಗಿ ಪ್ರಜ್ಞೆಯಲ್ಲಿ ಅಭಿವ್ಯಕ್ತಿ ಹೊಂದಿರುವುದನ್ನು ಗಮನಿಸಬಹುದು. ನೃತ್ಯ, ನಾಟಕ, ಪ್ರದರ್ಶನ ಕಲೆಗಳಲ್ಲಿ ಹೆಣ್ಣಿನ ಶಕ್ತಿ ಸಾಮಾರ್ಥ್ಯಗಳನ್ನು ಬಿಂಬಿಸುವುದಕ್ಕೆ ಬದಲು ಆಕೆಯನ್ನು ಶೃಂಗಾರದ ಕ್ರಮಗಳಲ್ಲಿ ಬಳಸಿಕೊಳ್ಳಲಾಗಿದೆ. ಪ್ರಾಚೀನ ಕವಿಗಳು ಕಡ್ಡಾಯವಾಗಿ ಶೃಂಗಾರ ರಸದಲ್ಲಿ ಮುಳುಗಿಯೇ ತಮ್ಮ ಕಾವ್ಯವನ್ನು ಮುಗಿಸುವುದು ಪಾರಮಾರ್ಥಿಕ ಕಾವ್ಯದಲ್ಲೂ ಶೃಂಗಾರ ರಸವನ್ನು ದೇವರ ಸಮಕ್ಷಮದಲ್ಲೇ ಪಂಡಿತ ಪಾಮರ ಕವಿಗಳೂ ಬರೆದಿದ್ದಾರೆ ಎಂದರೆ ಅವರ ಪಾರಮಾರ್ಥಿಕ ನಿರೂಪಣೆಗಳನ್ನು ಮೆಚ್ಚಲೇಬೇಕು. ಚಿತ್ರಕಲೆಯಲ್ಲೂ ಹೆಣ್ಣಿನ ದೇಹವನ್ನು ಉತ್ಕಟವಾಗಿ ಕಲಾವಿದರು ಚಿತ್ರಿಸುತ್ತಾರೆ. ಎಫ್.ಎಂ.ಹುಸೇನ್, ರವಿವರ್ಮರು ಪ್ರಖ್ಯಾತ ಕಲಾವಿದರಿರಬಹುದು, ಅಂತಹವರು ಸಹ ಹೆಣ್ಣು ಲೈಂಗಿಕ ಭಾವನೆಗಳನ್ನೇ ತಮ್ಮ ಚಿತ್ರಗಳ ಬಂಡವಾಳ ಮಾಡಿಕೊಂಡಿದ್ದಾರೆ. ಹುಸೇನ್‌ರವರು ಸಂಸ್ಕೃತಿ ಚಿತ್ರದ ಹಗರಣ ಇಲ್ಲಿ ನೆನಪಾಗುತ್ತದೆ. ದೇವತೆಯ ಪಾವಿತ್ರ್ಯ ಕಲ್ಪನೆಯನ್ನು ಭಗ್ನ ಪಡಿಸಲು ಅವರು ಸರಸ್ವತಿಯನ್ನು ಅರೆಬೆತ್ತಲೆಯಾಗಿ ಲೈಂಗಿಕ ಉದ್ದೀಪತೆಯಲ್ಲಿ ತೋರಿದ್ದನ್ನು ಇಲ್ಲಿ ಸ್ಮರಿಸಬಹುದು. ಒಟ್ಟಿನಲ್ಲಿ ಪುರುಷ ಪ್ರಧಾನತೆ ತಮ್ಮ ಉದ್ದೇಶದ ಸಾಧನೆಗೆ ಹೆಣ್ಣಿನ ಅಂಗಾಂಗಗಳನ್ನೇ ಬಂಡವಾಳ ಮಾಡಿಕೊಂಡಿರುವುದನ್ನು ಯಾರೂ ಪ್ರಶ್ನಿಸಲಿಲ್ಲ. ಅಶ್ಲೀಲ ಚಿತ್ರ ಎಂದು ಜರಿದರೇ ಹೊರತು ಹೆಣ್ಣು ದೇಹವನ್ನು ಹೇಗೆ ಬಳಸಿಕೊಳ್ಳುವುದು ಎಷ್ಟು ಸಮಂಜಸ ಎಂದು ಚರ್ಚಿಸಲಿಲ್ಲ. ಪ್ರಸಿದ್ಧ ಚಿತ್ರ ಕಲಾವಿದರೆಲ್ಲರೂ ಹೆಣ್ಣು ದೇಹವನ್ನು ಬಹಳ ಕಲಾತ್ಮಕವಾಗಿ ತೋರಿದ್ದರೂ ಅದು ನೈತಿಕ ಕಲಾತ್ಮಕತೆಯಲ್ಲ. ಗಂಡಿನ ದೇಹವನ್ನು ಯಾಕೆ ಹಾಗೆ ವಿಜೃಂಬಿಸಿ ಪುರುಷ ಕಲಾವಿದರು ಬರೆಯುವುದಿಲ್ಲ ಎಂಬುದು ಗಮನಿಸಬೇಕು.

ಪ್ರಾಚೀನ ಕಾವ್ಯ, ನಾಟಕ, ಮೀಮಾಂಸೆಯಲ್ಲೆಲ್ಲೂ ಹೆಣ್ಣು ದೇಹದ ವರ್ಣನೆ ಸಭ್ಯತೆಯನ್ನು ಮೀರಿದೆ. ದೇವಾಲಯದ ಮಿಥುನ ಶಿಲ್ಪಗಳಂತೂ ತಲೆತಗ್ಗಿಸುವಂತಿವೆ. ದೇವಾಲಯದ ಮೇಲಿನ ಭಕ್ತಿಗೂ ಅದರಲ್ಲಿನ ಬೆತ್ತಲೆ ಶಿಲ್ಪಗಳಿಗೂ ವೈರುಧ್ಯವಿದೆ. ವಾಸ್ತು ಶಿಲ್ಪದಲ್ಲಿನ ಬೆತ್ತಲೆ ಚಿತ್ರಣಗಳು ಕಲೆಯ ಹೆಸರಲ್ಲಿ ರಮಣೀಯವಾಗಿದ್ದರೂ ಹೀಗೆ ಹೆಣ್ಣನ್ನು ಪೂಜ್ಯ ಸ್ಥಳಗಳಲ್ಲಿ ಬೆತ್ತಲೆ ತೋರಿಸುವುದು ಅವಳಿಗೆ ಮಾಡಿದ ಅಪಮಾನವಾಗಿದೆ.

"ಭಾರತದ ಸಂದರ್ಭದಲ್ಲಿ ಒಮ್ಮೆ ಆಕೆ ವೇಶ್ಯೆಯಾದರೆ ಮತ್ತೆ ಹಿಂದಿನ ಜೀವನಕ್ಕೆ ಮರಳುವುದು ಕಷ್ಟ"[೧೯]– ಕರ್ನಾಟಕ ಮತ್ತು ಕೇರಳ ಹೈಕೋರ್ಟ್‌ನ ನಿವೃತ್ತ ಮುಖ್ಯ ನ್ಯಾಯ

ಮೂರ್ತಿ ವಿ.ಎಸ್.ಮಳೀಮಠ ಅವರು ಹೇಳುತ್ತಾರೆ. ಸಮಾಜವಾದಿ ಚಿಂತಕ ವಿ.ಐ ಲೆನಿನ್ ಅವರ ಪ್ರಕಾರ "ಬಡತನ ಅತ್ಯಂತ ಕಡಿಮೆ ಕೂಲಿ, ಹಸಿವು, ಗುಲಾಮಗಿರಿ, ಇರುವವರೆಗೂ ವೇಶ್ಯಾವೃತ್ತಿ ಅನಿವಾರ್ಯವಾಗಿ ಇರುವುದು. ಮಾನವ ಸಮಾಜದ ಚರಿತ್ರೆಯಲ್ಲಿ ಎಲ್ಲಿ ಶೋಷಿತ ವರ್ಗಗಳೂ ಯಾವತ್ತು ತಮ್ಮ ಪೀಡಕರಿಗೆ ಮೊದಲು ತಮ್ಮ ಕೂಲಿ ರಹಿತ ಶ್ರಮವನ್ನು, ಎರಡನೆಯದಾಗಿ ತಮ್ಮ ಮಹಿಳೆಯರನ್ನು ಬೆಲೆವೆಣ್ಣುಗಳಾಗಿ ಬಿಟ್ಟುಕೊಡುವುದೇ ಬಲಾತ್ಕಾರಕ್ಕೊಳಗಾಗಿಯೇ ಇದ್ದುಕೊಂಡು ಬಂದಿವೆ. ಈ ರೀತಿಯಲ್ಲೇ ಅವರ ಶೋಷಣೆ ಜರುಗುತ್ತಿರುವುದು. ಈ ವಿಷಯಕ್ಕೆ ಸಂಬಂಧಿಸಿ ಗುಲಾಮ ಪದ್ಧತಿಯೂ ಸಾಮಂತಶಾಹಿ ವ್ಯವಸ್ಥೆಯೂ ಬಂಡವಾಳವಾದವು ಒಂದೇ ರೀತಿಯವು. ಬದಲಾಗುವುದು ಶೋಷಣೆಯ ರೂಪವಷ್ಟೇ, ಶೋಷಣೆಯಂತೂ ಉಳಿದೇ ಇರುತ್ತದೆ"[೨೦]. ಈ ಮಾತು ಲೈಂಗಿಕ ಶೋಷಣೆಯೂ ಒಂದು ಜೀತವೇ ಎಂಬುದಕ್ಕೆ ಆಧಾರಗಳನ್ನು ನೀಡುತ್ತದೆ.

**೩.೮ ಹೆಣ್ಣಿನ ಲೈಂಗಿಕತೆ**

"ಬಾಲೆಯರು, ಹೆಣ್ಣುಮಕ್ಕಳನ್ನು ಈ ರೀತಿಯ ಜೀತಕ್ಕೆ ಬಲವಂತದಿಂದಲೋ, ಪ್ರಚೋದಿಸಿಯೋ, ಆರ್ಥಿಕ ಸಂಕಷ್ಟದ ಕಾರಣಕ್ಕೋ ತಳ್ಳುವ ಮೂಲಕ ಅವರನ್ನು ನಿರಂತರ ಅತ್ಯಾಚಾರಕ್ಕೆ ಗುರಿ ಮಾಡಿದಂತಾಗುತ್ತದೆ. ತನ್ಮೂಲಕ ಹಿಂಸೆ ನೀಡಿ ಅವರ ದೇಹವನ್ನು ಘಾಸಿಗೊಳಿಸಲಾಗುತ್ತದೆ ಮತ್ತು ರೋಗಗಳು ಹರಡುತ್ತವೆ. ಇದನ್ನು ಯಾವುದೇ ಕಾರಣಕ್ಕೂ ಕ್ಷಮಿಸಲಾಗದು"[೨೧] ಎಂದು ರೂಪ ಹಾಸನ ಅವರು ಹೇಳುತ್ತಾರೆ. "ಲೈಂಗಿಕತೆ ಎಂಬುದು ನಿಯೋಗಿಯು ತಾನು ನಿರ್ದಿಷ್ಟ ಜೀವವರ್ಗಕ್ಕೆ ಸೇರಿದೆನೆಂಬ ಭಾವವನ್ನು ಪಡೆದುಕೊಳ್ಳಲು ನೆರವಾಗುವ ಮಾಧ್ಯಮ, ನಿಯೋಗಿಯಲ್ಲಿ ತನ್ನ ವ್ಯಕ್ತಿಗತ ವಾಸ್ತವವು ಅಪರಿಪೂರ್ಣತೆಯ ಅನಿಸಿಕೆಯು ಮೂಡಿ ತನ್ನ ಜೀವಿತ ವರ್ಗಕ್ಕೆ ಸೇರಿರುವ ಇನ್ನೊಂದು ಜೀವಿಯಲ್ಲಿ ಇರುವ ತನ್ನನ್ನೇ ಕಂಡು ಅದರೊಡನೆ ಬೆರೆಯುವ ಮೂಲಕ ಪೂರ್ಣಗೊಳ್ಳುವ ಬಯಕೆ ಮೂಡುತ್ತದೆ. ಈ ಪ್ರಕ್ರಿಯೆಯು ಜೀವಿಯು ತನ್ನ ಪೂರ್ಣತೆಯನ್ನು ಕಂಡುಕೊಳ್ಳುವುದರ ಜೊತೆಗೆ ತನ್ನಂತೆ ಇರುವ ಮತ್ತೊಂದು ಜೀವಿಯನ್ನು ರೂಪಿಸಲು ಸಾಧ್ಯವಾಗುತ್ತದೆ"[೨೨] ಎನ್ನುವ ಹೆಗೆಲ್ ಅವರ ಚಿಂತನೆಯನ್ನು ಎಚ್.ಎಸ್.ಶ್ರೀಮತಿಯವರು ರೀತಿ ವಿವರಿಸುತ್ತಾರೆ.

ದಿ ಸೆಕ್ಸ್ಯುಯಾಲಿಟಿ ಕನೆಕ್ಷನ್ ಇನ್ ರೀಪ್ರೊಡಕ್ಟಿವ್ ಹೆಲ್ತ್ ಎಂಬ ಲೇಖನದಲ್ಲಿ ಗ್ರುಪೋ ಕೇರ್ಸ್ ಅವರ ಮಾತುಗಳನ್ನು ರುತ್ ಡಿಕ್ಸನ್ ಮ್ಯೂಲೇರ್ ಅವರು ಉಲ್ಲೇಖಿಸುತ್ತಾರೆ. ಲೈಂಗಿಕತೆ ಎಂಬುದಕ್ಕೆ ವಿವಿಧ ಸಂದರ್ಭಗಳಲ್ಲಿ ವಿವಿಧ ಅರ್ಥಗಳಿವೆ. ಸಾಮಾಜಿಕವಾಗಿ ಆಯೋಜನೆಗೊಂಡಿರುವ ಲೈಂಗಿಕತೆ ಮತ್ತು ಲೈಂಗಿಕ ನಡವಳಿಕೆಗಳ ನಾಲ್ಕು ಆಯಾಮಗಳನ್ನು ಅವರು ಸರಳವಾದ ಚೌಕಟ್ಟಿನಲ್ಲಿ ಹೀಗೆ ಪ್ರಸ್ತಾಪಿಸುತ್ತಾರೆ "ಲೈಂಗಿಕ ನಡವಳಿಕೆ ಎಂಬುದು ಜನರು ಲೈಂಗಿಕವಾಗಿ ಇತರರೊಡನೆ ಏನು ಮಾಡುತ್ತಾರೆ ಅಥವಾ ತಮಗಾಗಿ ಏನು ಮಾಡುತ್ತಾರೆ, ತಮ್ಮನ್ನು ತಾವು ಲೈಂಗಿಕವಾಗಿ ಹೇಗೆ ಪ್ರಸ್ತುತ ಪಡಿಸುತ್ತಾರೆ, ಹೇಗೆ ಮಾತನಾಡುತ್ತಾರೆ ಮತ್ತು ವರ್ತಿಸುತ್ತಾರೆ

ಎಂಬುದನ್ನು ಪ್ರಾಯೋಗಿಕವಾಗಿ ಗಮನಿಸುವ ಕ್ರಮಗಳನ್ನು ಒಳಗೊಂಡಿರುತ್ತದೆ. ಇದಕ್ಕೆ ಭಿನ್ನವಾಗಿ ಲೈಂಗಿಕತೆಯು ಲೈಂಗಿಕ ಪ್ರಚೋದನೆಗೆ ಮತ್ತು ತೃಪ್ತಿಗೆ (ರಿಬಿಡೋ ಕಾಮ) ಬೇಕಾಗುವ ದೈಹಿಕ ಸಾಮರ್ಥ್ಯ ಹಾಗೂ ಸಾಮಾಜಿಕ ನಡುವಳಿಕೆ ಮತ್ತು ಲಿಂಗ ಮತ್ತು ಲಿಂಗತ್ವಗಳ ರಚನೆಯ ಜೊತೆಗೆ ವ್ಯಕ್ತಿಗತವಾದ ಮತ್ತು ಸಾಮಾಜಿಕ ಅರ್ಥಗಳನ್ನು ಹಂಚಿಕೊಳ್ಳುವಂತಹ ವಿಷಯಗಳ ಜೊತೆಗೆ ಸುತ್ತುವರಿಯಲ್ಪಟ್ಟಿರುವಂತಹ ಸಮಗ್ರ ಪರಿಕಲ್ಪನೆಯಾಗಿದೆ. ಹಾಗೆಯೇ ಲೈಂಗಿಕತೆಯು ಜೀವ ವೈಜ್ಞಾನಿಕ ಪರಿಕಲ್ಪನೆಯಾಗಿ ಶ್ರೇಣೀಕೃತಗೊಂಡ ಸಾಮಾಜಿಕ ಸಂಬಂಧಗಳ ನೈಸರ್ಗಿಕ ಕಾರ್ಯಗಳನ್ನು ಪ್ರತಿನಿಧಿಸಲು ಮತ್ತು ವ್ಯಾಖ್ಯಾನಿಸಲು ಇರುವ ಸಂಸ್ಕೃತಿ ಮತ್ತು ಸಾಮಾಜಿಕ ಉತ್ಪನ್ನವಾಗಿದೆ."[೨೩] ಸಾರ್ತ್ರ ಮತ್ತು ಮಾರ್ಲೋಪಾಟಿ ಹೇಳುವಂತೆ "ಲೈಂಗಿಕತೆಯು ಅಸ್ತಿತ್ವದ ಸಹಚರಿ ಸ್ಥಿತಿ, ಇದನ್ನು ಎರಡು ರೀತಿಯಲ್ಲಿ ಅರ್ಥೈಸಿಕೊಳ್ಳಬಹುದು. ಮೊದಲನೆಯದಾಗಿ ಅಸ್ತಿತ್ವದ ಪ್ರತಿಯೊಂದು ಅನುಭವವು ಲೈಂಗಿಕ ನೆಲೆಯ ಮಹತ್ವವನ್ನು ಹೊಂದಿದೆ. ಎರಡನೆಯದಾಗಿ ಪ್ರತಿ ಲೈಂಗಿಕ ಸಂಗತಿಯಲ್ಲಿ ಅಸ್ತಿತ್ವದ ನೆಲೆಯಲ್ಲಿ ಮಹತ್ವ ಪಡೆದಿದೆ."[೨೪]

ಸೆಕ್ಸ್ಯುಯಾಲಿಟಿ ಇನ್‌ಫರ್ಮೇಶನ್ ಅಂಡ್ ಎಜ್ಯುಕೇಶನ್ ಕೌನ್ಸಿಲ್ ದಿ ಯುನೈಟೆಡ್ ಸ್ಟೇಟ್ಸ್ ಪ್ರಕಾರ "ಮಾನವ ಲೈಂಗಿಕೆಯು ವ್ಯಕ್ತಿಯ ಲೈಂಗಿಕ ಜ್ಞಾನ, ನಂಬಿಕೆ, ವರ್ತನೆಗಳು, ಮೌಲ್ಯಗಳು ಮತ್ತು ನಡವಳಿಕೆಗಳನ್ನು ಒಳಗೊಂಡಿರುತ್ತದೆ. ಅದರ ವಿವಿಧ ಆಯಾಮಗಳು ಅಂಗರಚನಾ ಶಾಸ್ತ್ರ ಮತ್ತು ಲೈಂಗಿಕ ಪ್ರತಿಕ್ರಿಯೆ ವ್ಯವಸ್ಥೆಯ ಜೀವ ರಸಾಯನ ಶಾಸ್ತ್ರ, ಗುರುತಿಸುವಿಕೆ, ಪುನರ್ಮನನ ತರಬೇತಿ, ಪಾತ್ರಗಳು ಮತ್ತು ವ್ಯಕ್ತಿತ್ವ ಮತ್ತು ವಿಚಾರಗಳು, ಅನುಭವಗಳು ಮತ್ತು ಸಂಬಂಧಗಳನ್ನು ಒಳಗೊಂಡಿದೆ. ಲೈಂಗಿಕತೆಯ ಅಭಿವ್ಯಕ್ತಿಯು ನೈತಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಮತ್ತು ನೀತಿಯುತ ಕಾಳಜಿಯಿಂದ ಪ್ರಭಾವಿತಗೊಂಡಿವೆ."[೨೫]

ಶ್ರೀಮತಿಯವರು ತಮ್ಮ 'ಸ್ತ್ರೀವಾದ : ತಾತ್ವಿಕತೆ' ಎಂಬ ಕೃತಿಯಲ್ಲಿ "ಲೈಂಗಿಕತೆ ಎನ್ನುವುದ ಗಾಳಿ, ನೀರು, ಆಹಾರಗಳಂತಹ ಇನ್ನುಳಿದ ಜೀವನಾವಶ್ಯಕ ಸಂಗತಿಗಳಂತೆ ಸ್ವ ಸಂಪೂರ್ಣವಾದ ಅನುಭವವಿಲ್ಲ. ಭಿನ್ನ ಲಿಂಗಿಗಳಲ್ಲಿ ಪರಸ್ಪರವಾಗಿ ವಿನಿಮಯವಾಗುವ ಅನುಭವ ಹಾಗಾಗಿ ಇಲ್ಲಿ ಪರಸ್ಪರ ಬಯಕೆ, ಆಕರ್ಷಣೆಗಳೂ ಸಹಜ ಕೆಲವು ಪ್ರಾಣಿಗಳಲ್ಲಿ ಈ ಮೈಥುನದ ಬಯಕೆ ಕೇವಲ ಸಂತಾನೋತ್ಪತ್ತಿಯ ಸಂದರ್ಭಕ್ಕಷ್ಟೇ ನಿಗದಿತ ವಾಗಿರುತ್ತದೆಯಾದರೆ, ಕೆಲವು ಜೀವಿಗಳಲ್ಲಿ ಬಹು ಮುಖ್ಯವಾಗಿ ಮಾನವರಲ್ಲಿ ಸಂತಾನೋತ್ಪತ್ತಿಯ ಹೊರತಾಗಿಯೂ ನಿರಂತರವಾಗಿರಬಹುದು. ಇಂಥಾ ಬಯಕೆ, ಆನಂದ, ಖುಷಿ, ಎಂಬಂತಹ ಅಮೂರ್ತ, ಭಾವನಾತ್ಮಕ ಅಗತ್ಯಗಳನ್ನು ಪೂರೈಸುವಂತದ್ದಾಗಿರುತ್ತದೆಂದು"[೨೬] ವಿವರಿಸುತ್ತಾರೆ. "ಲೈಂಗಿಕತೆ ಎಂಬುದು ನಿಸರ್ಗದತ್ತ ಪ್ರೇರಣೆ, ಮೂಲತಃ ಪ್ರಾಣಿಯಾದ ಮನುಷ್ಯನಲ್ಲಿರುವ ಹೆಣ್ಣು ಗಂಡು ಪ್ರವೃತ್ತಿಗಳು ಅವನಿಗಾಗಿಯಲ್ಲಿ ಕುಲ ಪರಂಪರೆಯನ್ನು ಮುಂದುವರೆಸುವ ನಿಸರ್ಗದ ಇಚ್ಛೆಗೆ ಅದು ಸೇರಿದ್ದು"[೨೭] ಎಂದು ಶಿವರಾಮ ಕಾರಂತರು ತಮ್ಮ ಮೈಮನಗಳ ಸುಳಿಯಲ್ಲಿ ಕಾದಂಬರಿಯ ಮುನ್ನುಡಿಯಲ್ಲಿ ವಿವರಿಸುತ್ತಾರೆ.

ಹೀಗೆ ಲೈಂಗಿಕತೆಯು ಪ್ರಾಣಿ ಸಂಕುಲದ ಮೂಲಭೂತವಾದ ಅಗತ್ಯತೆ ಎನಿಸಿ, ಅದರ ಸಂತತಿಯ ಮುಂದುವರಿಕೆಗಾಗಿ ನಿಸರ್ಗವೇ ಹುಟ್ಟು ಹಾಕಿದ ಒಂದು ಸಹಜ ಪ್ರಕ್ರಿಯೆ ಇದು. ಗಂಡು ಹೆಣ್ಣು ಪರಸ್ಪರ ಕೊಟ್ಟು ಪಡೆಯುವ ಮತ್ತು ಪಡೆದು ಕೊಡುವ ಒಂದು ಜೀವಶಾಸ್ತ್ರೀಯ ಚಟುವಟಿಕೆಯಾಗಿದೆ. ಇಲ್ಲಿ ಗಂಡು ಮೇಲು ಅಥವಾ ಹೆಣ್ಣು ಮೇಲೋ ಎಂಬ ಲಿಂಗತ್ವದ ಪ್ರಶ್ನೆಯೇ ಬರುವುದಿಲ್ಲ. ಆದರೆ ಲೈಂಗಿಕವಾಗಿ ಹೆಣ್ಣು ಗಂಡಿಗೆ ಅಧೀನವಾಗುವ ಸಂದರ್ಭವೇನಿತ್ತು? ಇದು ಉಳಿಯುವಿಕೆಯ ಪ್ರಕ್ರಿಯೆಯಾಗಿತ್ತು. ಜೈವಿಕ ಮತ್ತು ದೈಹಿಕ ಅಸಾಮರ್ಥ್ಯವಾ? ಅಥವಾ ಹೆಣ್ಣಿನ ಲೈಂಗಿಕತೆಯನ್ನು ಬಂದಿಸಿ ತಾನು ಮುಕ್ತವಾಗಿ ಲೈಂಗಿಕ ಸುಖದ ಅವಕಾಶವನ್ನು ಪಡೆಯುವ ಪುರುಷ ರಾಜಕಾರಣವಾ? ಎಂಬುದನ್ನು ವಿಶ್ಲೇಷಿಸುವ ಮತ್ತು ಅರ್ಥೈಸುವ ಅಗತ್ಯವಿದೆ.

ಆಹಾರ ಸಂಗ್ರಹಣೆಯಿಂದ ಆಹಾರ ಉತ್ಪಾದನೆಯ ಹಂತಕ್ಕೆ ಬರುವ ಮೊದಲು ಮುಕ್ತವಾಗಿ ಕಾಡು ಮೇಡುಗಳಲ್ಲಿ ಓಡಾಡಿಕೊಂಡಿದ್ದ ಸಂದರ್ಭದಲ್ಲಿ ಮಾನವ ಜೀವಿಗೆ ಲೈಂಗಿಕತೆ ಒಂದು ಸಹಜ ಕ್ರಿಯೆಯಾಗಿತ್ತು. ಜೀವ ರಕ್ಷಣೆಗಾಗಿ ಒಂದೆಡೆ ಕೂಡಿದಾಗ ಸಮುದಾಯದ ಜೀವನಕ್ಕೆ ನಾಂದಿಯಾಯಿತು. "ಭೂಮಿ ಸಮುದಾಯದ ಎಲ್ಲರಿಗೂ ಸೇರಿದ್ದ ಶಿಲಾಯುಗದಲ್ಲಿ, ಸ್ತ್ರೀ ಮತ್ತು ಪುರುಷರು ಪರಸ್ಪರ ಸಹಕಾರಿಗಳಾಗಿದ್ದರು ಶ್ರಮ ವಿಭಜನೆಯಿಂದ ಎರಡು ಲಿಂಗಗಳು ಎರಡು ವರ್ಗಗಳಾಗಿದ್ದರೂ ಸಮಾನತೆ ಇತ್ತು. ಪುರುಷ ಮನೆಯ ಹೊರಗೆ ಆಹಾರ ಸಂಗ್ರಹಣೆಗೆ ತೊಡಗಿದರೆ, ಮಹಿಳೆ ಮನೆಯಲ್ಲುಳಿದು ಕುಂಬಾರಿಕೆ, ನೇಕಾರಿಕೆ, ತೋಟಗಾರಿಕೆ, ಮಾಡುತ್ತಿದ್ದಳು. ಕುಟುಂಬದ ಆರ್ಥಿಕತೆಯಲ್ಲಿ ಇಬ್ಬರಿಗೂ ಪಾಲಿತ್ತು. ಲೋಹದ ಬಳಕೆಯನ್ನು ಕಂಡುಕೊಂಡ ಪುರುಷ ಕೃಷಿಯ ವಿಸ್ತರಣೆಯಲ್ಲಿ, ಕೃಷಿ ಉಪಕರಣವಾಗಿ ಲೋಹವನ್ನು ಬಳಸಿಕೊಂಡ. ಹೀಗೆ ಕೃಷಿ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಭೂಮಿಯನ್ನು ಗುಲಾಮರನ್ನು ತನ್ನ ಖಾಸಗಿ ಆಸ್ತಿಯನ್ನಾಗಿ ಮಾಡಿಕೊಂಡ. ಹೊಸ ಉಪಕರಣಗಳ ಬಳಕೆಯಿಂದ ಶ್ರಮ ವಿಭಜನೆಯ ಸಮತೋಲನ ತಪ್ಪಿದಲ್ಲಿ ಮಾತೃ ಮೂಲದ ವ್ಯವಸ್ಥೆಯ ಸ್ತ್ರೀ ಅಧಿಕಾರ ಪುರುಷನ ಪಾಲಾಯಿತು. ಖಾಸಗಿ ಆಸ್ತಿಯ ತಳಹದಿಯ ಮೇಲೆ ನೆಲೆಗೊಂಡ ಪಿತೃ ಪ್ರಧಾನ ಕುಟುಂಬದಲ್ಲಿ ಸ್ತ್ರೀ ಪುರುಷನ ಅಧೀನಕ್ಕೆ ಒಳಗಾಗುತ್ತಾಳೆ"[೨೮] ಎಂದು ಏಂಗೆಲ್ಸ್ ವಿಶ್ಲೇಷಿಸುತ್ತಾನೆ.

ಜೀವಿಯೊಂದು ಪ್ರಾಣದೊಂದಿಗೆ ಇರಬೇಕಾದರೆ ಗಾಳಿ, ನೀರು ಆಹಾರಗಳು ಅತ್ಯಂತ ಅಗತ್ಯ. ಇವುಗಳಷ್ಟೇ ಪ್ರಮುಖವಾದ ಮತ್ತೊಂದು ಅಗತ್ಯವೆಂದರೆ ಮೈಥುನ. ಆದರೆ ಇದರ ಅಲಭ್ಯತೆ ಪ್ರಾಣವನ್ನು ಕಳೆಯದಾದರು, ಜೀವಿಯನ್ನು ಚಡಪಡಿಸುವಂತೆ ಮಾಡುತ್ತದೆ. ಸಂತಾನದ ಮುಂದುವರಿಕೆಗಾಗಿ ಈ ಚಡಪಡಿಕೆಯನ್ನು ನಿಸರ್ಗವೇ ಹುಟ್ಟಹಾಕಿದೆ. ಮೈಥುನದಲ್ಲಿ ಹೆಣ್ಣು-ಗಂಡು ಎಂಬ ಎರಡು ಜೀವಿ ವೈವಿಧ್ಯಗಳು ಭಾಗವಹಿಸುತ್ತವೆ. ಈ ಪ್ರಕ್ರಿಯೆಗಾಗಿಯೇ ಹೆಣ್ಣು ಗಂಡು ಎಂಬ ಲಿಂಗ ವೈವಿಧ್ಯವನ್ನು ನಿಸರ್ಗವು ಕಲ್ಪಿಸಿದೆ. ಪರಸ್ಪರ ಆಕರ್ಷಣೆಯ ಮೂಲಕ ಈ ಪ್ರಕ್ರಿಯೆಯು ನಡೆಯುತ್ತದೆ. ಹೆಣ್ಣು ಗಂಡುಗಳ ದೇಹ ರಚನೆಯಲ್ಲಿ ಉಳಿದ ಯಾವ ವ್ಯತ್ಯಾಸಗಳೂ ಇಲ್ಲವಾದರು

ಜನನಾಂಗಗಳು ಮಾತ್ರ ಭಿನ್ನ ಸ್ವರೂಪ ಹೊಂದಿರುತ್ತವೆ. ಈ ಭಿನ್ನತೆಯೇ ಹೆಣ್ಣು ಗಂಡುಗಳ ವಿಶಿಷ್ಟ ಸಾಮರ್ಥ್ಯವೂ ಪರಸ್ಪರ ಆಕರ್ಷಣೆಯ ಕೇಂದ್ರವೂ ಆಗಿರುತ್ತದೆ. ಈ ಕುರಿತ ಚರ್ಚೆಯ ಪರಿಭಾಷೆಯಲ್ಲಿ ಇದನ್ನೇ 'ಲೈಂಗಿಕತೆ' ಎಂದು ಕರೆಯಬಹುದು.

ಲೈಂಗಿಕತೆಯು ಗಾಳಿ, ನೀರು, ಆಹಾರಗಳಂತ ಜೀವನಾವಶ್ಯಕ ಸಂಗತಿಗಳಂತೆ ಸಂಪೂರ್ಣವಾದ ಅನುಭವವಲ್ಲ. ಭಿನ್ನ ಲಿಂಗಗಳಲ್ಲಿ ಪರಸ್ಪರವಾಗಿ ವಿನಿಮಯವಾಗುವ ಒಂದು ಅನುಭವ. ಪರಸ್ಪರ ಬಯಕೆ ಮತ್ತು ಆಕರ್ಷಣೆಗಳು ಸಹಜವಾಗಿರುತ್ತದೆ. ಕೆಲವು ಪ್ರಾಣಿಗಳಲ್ಲಿ ಇದು ಕೇವಲ ಸಂತಾನೋತ್ಪತ್ತಿಯ ಕಾಲಕ್ಕಷ್ಟೇ ಸೀಮಿತವಾದರೆ, ಮಾನವರಲ್ಲಿ ಅದರ ಹೊರತಾಗಿಯೂ ನಿರಂತರವಾದ ಬಯಕೆಯಾಗಿದೆ. ಈ ಬಯಕೆ, ಸಂತೋಷ, ಆನಂದ ಎಂಬಂತಹ ಅಮೂರ್ತ ಭಾವನಾತ್ಮಕ ಅಗತ್ಯಗಳನ್ನು ಪೂರೈಸುತ್ತದೆ. ಹೆಣ್ಣು-ಗಂಡು ಇಬ್ಬರಲ್ಲಿ ಪ್ರಕಟವಾಗುವ ಈ ಲೈಂಗಿಕತೆಯ ಸ್ವರೂಪ ಮತ್ತು ಕಾರ್ಯ ವಿಧಾನಗಳಲ್ಲಿ ಭಿನ್ನವಾಗಿರುತ್ತದೆ. ಮನೋವಿಜ್ಞಾನದ ಪ್ರಕಾರ ಲೈಂಗಿಕತೆಯು ಚಿಕ್ಕ ಮಕ್ಕಳಲ್ಲೇ ಪ್ರಕಟವಾಗುತ್ತದೆ ಎನ್ನುತ್ತದೆ. ಜನನಾಂಗಗಳು ಸಂತಾನೋತ್ಪತ್ತಿಗೆ ಸಮರ್ಥವಾಗುವಷ್ಟು ಬೆಳವಣಿಗೆ ಹೊಂದಿದ ವಯೋಮಾನದಲ್ಲಿ ದೈಹಿಕವಾಗಿಯೂ ಗೋಚರಿಸುವ ಹಂತದಲ್ಲಿ ಹುಡುಗ ಹುಡುಗಿಯರು ವಯಸ್ಕರಾಗಿರುತ್ತಾರೆ. ಬಾಲ್ಯದಿಂದ ಹರಯಕ್ಕೆ ದಾಟುತ್ತಾರೆ, ದೈಹಿಕ ವ್ಯತ್ಯಾಸಗಳಾಗುತ್ತದೆ. ಆದರೆ ಈ ದೈಹಿಕ ವ್ಯತ್ಯಾಸದಿಂದ ಹುಡುಗ ಅಷ್ಟೇನೂ ಗಾಭರಿಯಾಗುವುದಿಲ್ಲ. ಏಕೆಂದರೆ ಈ ಅನುಭವ ಅವನಿಗೆ ಬಿಡುಗಡೆಯ ಭಾವವನ್ನು ನೀಡುವ ಜೊತೆಗೆ ಸಾಮಾಜಿಕವಾಗಿ ಸಹ ಇದಕ್ಕೊಂದು ಹೆಮ್ಮೆಯ ಮನ್ನಣೆ ನೀಡುತ್ತದೆ. ಆದರೆ ಹುಡುಗಿಯಲ್ಲಿ ಈ ಬದಲಾವಣೆಯು ಸಂಕೀರ್ಣ ಸ್ವರೂಪದ್ದು. ಋತು ಚಕ್ರದೊಂದಿಗೆ ಆರಂಭವಾಗುವ ಬದಲಾವಣೆಗಳು ಅವಳನ್ನು ಸ್ವತಃ ಮುಜುಗರ, ಆತಂಕಗಳಿಗೆ ಒಳಗು ಮಾಡುತ್ತದೆ. ಈ ನಿಸರ್ಗದತ್ತ ಬದಲಾವಣೆಗಳೊಂದಿಗೆ ಸಾಮಾಜಿಕವಾಗಿ ಇದಕ್ಕೆ ರೂಢಿ ನಿಯಮಗಳು ಲಗತ್ತಾಗಿ, ಅವಳ ಮಾನಸಿಕ ಸ್ಥಿತಿಯನ್ನು ತೀವ್ರ ಏರುಪೇರು ಮಾಡುತ್ತದೆ.

ಋತುಚಕ್ರವು ಸ್ವಯಂ ಬಿಡುಗಡೆಯ ಅನುಭವದ್ದಲ್ಲ. ಅದು ಮತ್ತೇನನ್ನೋ ಸ್ವೀಕರಿಸಿ ಒಳಗೊಳ್ಳಲು ತಯಾರಾದ ಒಂದು ಸ್ಥಿತಿಯಾಗಿದೆ. "ಸ್ಖಲನದೊಂದಿಗೆ ತನ್ನೊಳಗಿನ ಒಂದು ಮುಜುಗರವನ್ನು ಹೊರಹಾಕಿ ನಿರಾಳವಾಗುವ ಪುರುಷ ದೇಹ ಮತ್ತೆ ತನ್ನ ಸ್ವಸ್ಥ ಸ್ಥಿತಿಗೆ ಮರಳುತ್ತದೆ. ಆದರೆ ಇದನ್ನು ಸ್ವೀಕರಿಸಿದ ಹೆಣ್ಣು ದೇಹ, ಆ ಮುಜುಗರವನ್ನು ದೇಹದೊಳಗೆ ಹೊತ್ತು ಪೋಷಿಸಿ ಹೆರುವ ಸಂಕಷ್ಟಗಳ ಮಾಲೆಯನ್ನೇ ಎದುರಿಸಬೇಕಾಗುತ್ತದೆ. ಹೆಣ್ಣು ಗಂಡುಗಳ ಲೈಂಗಿಕತೆಯ ಸ್ವರೂಪದಲ್ಲೇ ಇರುವ ಮತ್ತೊಂದು ಮುಖ್ಯ ವ್ಯತ್ಯಾಸವೆಂದರೆ ಬೆಡುಗಡೆಯ ಅಗತ್ಯ ಬಿದ್ದಾಗ ಅದಕ್ಕಾಗಿ ಗಂಡು ದೇಹ ಸಿದ್ಧಗೊಳ್ಳುತ್ತದೆಯಾದರೆ, ಹೆಣ್ಣು ದೇಹ ಮಾತ್ರ ಇದರ ಸ್ವೀಕರಣಕ್ಕೆ ಪ್ರತ್ಯೇಕವಾಗಿ ಸಿದ್ಧಗೊಳ್ಳಬೇಕೆಂದಿಲ್ಲ. ಆ ಹೆಣ್ಣಿಗೆ ಅಗತ್ಯವಿಲ್ಲವೆಂದಾಗಲೂ, ಮಾನಸಿಕವಾಗಿ ಆಕೆ ಸನ್ನದ್ಧವಿಲ್ಲವೆಂದಾಗಲೂ, ಈ ಕ್ರಿಯೆ ನಡೆಯಲು ಯಾವ ತಡೆಯೂ ಇರುವುದಿಲ್ಲ. ಪುರುಷನಿಗೆ

ಅವನ ಶಿಶ್ನ ಸುಖದ ಅನುಭವವನ್ನೀಯುವ ಅಂಗವಾಗಿರುವಂತೆ, ಹೆಣ್ಣಿಗೆ ಅವಳ ಯೋನಿಯು ಸುಖವನ್ನೀಯುವ ಅಂಗ ಎಂದೇನೂ ಹೇಳುವಂತಿಲ್ಲ"[೨೯] ಎಂದು ಲೈಂಗಿಕತೆಯ ಕುರಿತು ಎಚ್.ಎಸ್.ಶ್ರೀಮತಿಯವರು ವಿವರಿಸುತ್ತಾರೆ. ಲೈಂಗಿಕತೆಯ ಸಾಮರ್ಥ್ಯ ಹಾಗೂ ಅದು ಒದಗಿಸುವ ಅನುಭವ ಸ್ತ್ರೀ ಪುರುಷರಲ್ಲಿ ಜೀವನಾವಶ್ಯಕ ಸಂಗತಿಗಳಾದರೂ, ಅವುಗಳು ಇಬ್ಬರಲ್ಲಿ ವ್ಯಕ್ತಗೊಳ್ಳುವಲ್ಲಿ ಇರುವ ವ್ಯತ್ಯಾಸಗಳಿಂದಾಗಿ ಅದು ಪುರುಷನಿಗೆ ಬಿಡುಗಡೆಯ ಸಾಧನವಾಗಿಯೂ, ಸ್ತ್ರೀಗೆ ಸಂಕೋಲೆಯಾಗಿಯೂ ಪರಿಣಮಿಸಿದೆ. ಪುರುಷನ ಆಕ್ರಮಣ ಸ್ವಭಾವ ಮತ್ತು ಅದಕ್ಕೆ ಅನುಗುಣವಾಗಿ ಸಮಾಜವೂ ರೂಪಿಸಿರುವ ವಾತಾವರಣದಲ್ಲಿ ಹೆಣ್ಣು ನಲುಗಿ ಹೋಗುತ್ತಾಳೆ. ಹೆಣ್ಣಿನ ಮೇಲೆ ಆಕ್ರಮಣ ಮಾಡಿ ಅಧೀನಗೊಳಿಸಿಕೊಳ್ಳಲು ಇದು ಅವಕಾಶ ಕಲ್ಪಿಸುತ್ತದೆ. ಗಂಡಿನ ಲೈಂಗಿಕತೆಯು ಪಡೆದುಕೊಳ್ಳುವ ಈ ಆಕ್ರಮಣ ಗುಣವನ್ನು ಸಿಮೋನ್ ದ ಬೋವಾ ಈ ರೀತಿ ವಿರಿಸುತ್ತಾರೆ, ಆಕ್ರಮಿಸುವುದು ಬಂಧಿಸುವುದು, ಗೆಲ್ಲುವುದು ಗಂಡಿನ ಕ್ರಿಯೆಗಳಾದರೆ, ಶರಣಾಗುವುದು, ಬಂಧಿತಳಾಗುವುದು, ಸೋಲುವುದು ಹೆಣ್ಣಿನ ಸ್ಥಿತಿಗಳಾಗುತ್ತವೆ. ಪ್ರೀತಿಯಿಂದ ಆಕ್ರಮಿಸಿ, ಬಾಹು ಬಂಧನದಲ್ಲಿಟ್ಟು ಗೆದ್ದೆನೆಂದು ಹೇಳುಬಹುದು. ಮನಸಾರೆ ಒಪ್ಪಿ ಶರಣಾದಳೆಂದೂ ಹೇಳಬಹುದು. ಆದರೆ ಆಕ್ರಮಣಕ್ಕೆ ಒಳಗಾದವಳು ನೋವು, ಹಿಂಸೆ, ಅವಮಾನಗಳಿಗೆ ತುತ್ತಾಗುವುದಂತೂ ಸುಳ್ಳಲ್ಲ. ಆದರೆ ಅವುಗಳನ್ನು ವ್ಯಕ್ತಗೊಳಿಸಲು ಅವಕಾಶಗಳಲ್ಲಿ ಎಂಬುದು ಸಹ ವಾಸ್ತವವೆ.

ಫ್ರಾಯ್ಡ್ ಹೆಣ್ಣಿನ ಲೈಂಗಿಕತೆಯು ಅಂತಸ್ಥವಾಗಿಯೇ ನಿಷ್ಕ್ರಿಯವೂ, ಗಂಡಸಿನಿಂದ ಹಿಂಸೆಯನ್ನು ಅನುಭವಿಸುವುದರಿಂದ ಆನಂದಿಸುವಂಥದ್ದೂ, ಸ್ವಮೋಹಿಯೂ ಆದ ಗುಣಗಳನ್ನು ಹೊಂದಿದೆ ಎಂದು ಹೇಳುತ್ತಾನೆ. ಆದರೆ ಲೈಂಗಿಕತೆಯನ್ನು ಕುರಿತು ಹೆಣ್ಣಿನ ವಾಸ್ತವದ ಅನುಭವಗಳನ್ನು ಒಂದಿಷ್ಟು ಪರಿಗಣಿಸದೆ ನಿರೂಪಿತವಾಗುತ್ತಿರುವ ಫ್ರಾಯ್ಡ್‌ನ ಚಿಂತನೆಗಳ ನೆಲೆಗಳನ್ನು ಸ್ತ್ರೀವಾದಿಗಳು ಕಟುವಾಗಿ ಟೀಕಿಸುತ್ತಾರೆ. ಮಹಿಳಾ ಲೈಂಗಿಕತೆಯ ವಿಚಾರವಾಗಿ ಆನ್ ಕೊಯೆಡ್ತ್ ತನ್ನ 'The myth of vaginal orgasm' ಎಂಬ ಬರಹದಲ್ಲಿ "ಹೆಂಗಸಿನ ಲೈಂಗಿಕತೆಯ ಮುಖ್ಯ ಆನಂದವು ಪುರುಷ ಚಿಂತನೆಯು ಹೇಳುವಂತೆ ಯೋನಿಯೊಳಗೆ ಶಿಶ್ನದ ಪ್ರವೇಶದಿಂದ ಮಾತ್ರವೇ ಆಗುತ್ತದೆ ಎಂಬುದು ಪೂರಾ ಸುಳ್ಳು ಎಂದು ವಾದಿಸುತ್ತಾಳೆ. ಏಕೆಂದರೆ ಹೆಣ್ಣಿನ ತುರೀಯಾನಂದವು ಶಿಶ್ನ ಪ್ರವೇಶವನ್ನು ಅವಲಂಬಿಸಿಯೇ ಇಲ್ಲ. ಯೋನಿಯೊಳಗೆ ಶಿಶ್ನ ಪ್ರವೇಶವಾಗುವುದರಿಂದ ಗಂಡಸಿಗೆ ಆನಂದ ದೊರೆಯುತ್ತದೆ. ಆದರೆ ಆ ಕ್ರಿಯೆಯಲ್ಲಿ ಹೆಂಗಸಿಗೆ ತನ್ನ ಆನಂದದ ಎಳೆ ತಪ್ಪಿದಂತೆ, ಚದುರಿದಂತೆ ಅನುಭವವಾಗುತ್ತದೆ. ಆದರೆ ಅವಳ ಸಾಮಾಜಿಕತೆಯು ಈ ಅನುಭವವನ್ನೇ ಸುಳ್ಳು ಎಂದು, ಶಿಶ್ನ ಪ್ರವೇಶವೇ ಅವಳ ಆನಂದವೆಂದು ಅವಳನ್ನು ಒತ್ತಾಯದಿಂದ ನಂಬಿಸುತ್ತದೆ. ವಾಸ್ತವದಲ್ಲಿ ಅವಳ ತುರೀಯಾನಂದದ ಕಾರಣ ಅವಳದೇ ಅಂಗವಾದ ಭಗಾಂಕುರದಲ್ಲಿ ಸಾಮಾಜಿಕ ಒತ್ತಾಯದ ಕಲಿಕೆಯಿಂದಾಗಿ ಹೆಣ್ಣು ತನ್ನ ಆನಂದವನ್ನು ಸ್ವತಃ ಗುರುತಿಸುವುದನ್ನು ಮರೆತವಳಂತೆ ಗೊಂದಲಗೊಳ್ಳುತ್ತಾಳೆ."[೩೦]

ಜೂಲಿಯೆಟ್ ಮಿಶೆಲ್ 'Women : the Longest Revolution' ಎಂಬ ತನ್ನ ಕೃತಿಯಲ್ಲಿ ಲೈಂಗಿಕತೆ ಎಂಬುದು ಪಿತೃಪ್ರಧಾನತೆಯು ನಿರ್ಮಿಸಿರುವ ದಮನಕಾರಿ ನಾಲ್ಕು ರಚನೆಗಳ ಪೈಕಿ ಒಂದು ಎಂದಿದ್ದಾಳೆ. ಪಿತೃಪ್ರಧಾನತೆಯಲ್ಲಿ ಎರಡು ಪ್ರಮುಖ ಚಟುವಟಿಕೆಗಳು ನಡೆಯುತ್ತವೆ. ಒಂದು ಹೆಣ್ಣಿನ ಸಂತಾನೋತ್ಪತ್ತಿಯ ಮೇಲೆ ಪುರುಷನಿಗೆ ದಕ್ಕಿರುವ ನಿಯಂತ್ರಣ ಶಕ್ತಿ, ಎರಡು ಹೆಣ್ಣು ದೇಹಗಳ ಲೈಂಗಿಕತೆಯ ಮೇಲೆ ದಕ್ಕಿರುವ ಯಜಮಾನಿಕೆ. ಈ ಅರ್ಥದಲ್ಲಿ ಹೇಳುವುದಾದರೆ, ಲೈಂಗಿಕತೆಯ ಯಾವ ಬಗೆಗಳೂ ಅಂತಸ್ಥ ಗುಣದವುಗಳಲ್ಲ, ಬದಲಿಗೆ ಅದು ವ್ಯಕ್ತಿಗಳ ಬದುಕು ಮತ್ತು ಪ್ರಜ್ಞೆಗಳ ಮೇಲೆ ತೀವ್ರ ಪರಿಣಾಮಗಳನ್ನು ಬೀರುವ ರಾಜಕೀಯ ಮತ್ತು ಸಾಂಸ್ಕೃತಿಕ ಸಂಸ್ಥೆಗಳ ಒಂದು ಪ್ರತಿಫಲನ ಮಾತ್ರ.

ಪಿತೃ ಪ್ರಧಾನ ಸಮಾಜ ವ್ಯವಸ್ಥೆಯು ಗಂಡಿನ ಸಹಜ ಜೈವಿಕ ಸಂಗತಿಯನ್ನು ಪ್ರತಿಷ್ಠೆಯ ಅಖಾಡವಾಗಿ ಬದಲಾಯಿಸುತ್ತದೆ. ಹೆಣ್ಣು ಭಿನ್ನಲಿಂಗಿ ಎಂಬುದಕ್ಕಿಂತ, ಅವಳು ಎರಡನೆಯ ದರ್ಜೆಯ ಲಿಂಗ ಎಂಬುದೇ ಸ್ಥಿರವಾಗಿರುವುದು ಇದಕ್ಕೆ ಕಾರಣ. ನಿಸರ್ಗ ಸಹಜ ಲೈಂಗಿಕತೆಯು ಸಹ ಈ ಪಿತೃಪ್ರಧಾನ ಸಾಮಾಜಿಕತೆಯಲ್ಲಿ ತಾರತಮ್ಯಕ್ಕೊಳಗಾಗಿದೆ. ಹೆಣ್ಣಿನ ಲೈಗಿಕತೆಯ ವ್ಯಾಖ್ಯಾನವೇ ಬದಲಾಗಿದೆ. ಹೆಣ್ಣಿನೊಂದಿಗೆ ಸಮಾಗಮ ಎಂಬ ಅಂಶ ಹೋಗಿ ಅವಳ ದೇಹ, ಬುದ್ಧಿ, ಮನಸ್ಸುಗಳ ಸ್ಥಿತಿಗತಿಗಳನ್ನು ನಿರ್ದೇಶಿಸುವ ಹಕ್ಕನ್ನು ಪುರುಷನಿಗೆ ಒದಗಿಸುತ್ತದೆ. ಶೀಲ, ಅಶ್ಲೀಲಗಳ ಪ್ರಶ್ನೆಗಳಾಗಿ ಅವಳ ಪ್ರತಿರೋಧ, ಪ್ರತಿಭಟನೆಗಳು ನಾಚಿಕೆಗೆಟ್ಟ ಸಂಗತಿಗಳೆನಿಸುತ್ತವೆ. ಹೆಣ್ಣಿನ ಲೈಂಗಿಕತೆಯನ್ನು ಪ್ರತಿಬಂಧಿಸುವ ನೆಲೆಯಲ್ಲಿ ಬಹುಮುಖ್ಯವಾಗಿ ಸಾಮಾಜಿಕ ಸಂಸ್ಥೆಯಾದ ವಿವಾಹ ಸಂಸ್ಥೆಯು ಪ್ರಮುಖವಾಗುತ್ತದೆ. ಸಮಾಜದ ಸದಸ್ಯರ ಲೈಂಗಿಕತೆಯನ್ನು ಕ್ರಮ ಬದ್ಧಗೊಳಿಸುವ ನಾಗರೀಕತೆಯ ಹೆಸರಿನಲ್ಲಿ ಹುಟ್ಟಿಕೊಂಡ ಒಂದು ಸಂಸ್ಥೆ. ಆದರೆ, ವಾಸ್ತವದಲ್ಲಿ ಹೆಣ್ಣಿನ ಲೈಂಗಿಕೆಯನ್ನು ಒಬ್ಬ ಪುರುಷನಿಗೆ ಅಧೀನಪಡಿಸುವುದೇ ಈ ಸಂಸ್ಥೆಯ ಮೂಲ ಉದ್ದೇಶ ಎನ್ನುವುದೇನೂ ರಹಸ್ಯದ ಸಂಗತಿಯಲ್ಲ. ಹೆಣ್ಣಿನ ಬಗ್ಗೆ ಹೊಮ್ಮಿರುವ ಎಲ್ಲಾ ಸಾಮಾಜಿಕ ಚಿಂತನೆಗಳಲ್ಲೂ ವಿವಾಹದ ಈ ಉದ್ದೇಶಗಳೇ ಇನ್ನಷ್ಟು ಸ್ಥಿರಪಟ್ಟಿವೆ. ಪ್ರಭುತ್ವವು ಸಹ ಈ ಚಿಂತನೆಗಳನ್ನೇ ಪೋಷಿಸುತ್ತಾ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿರುತ್ತದೆ. ಲೈಂಗಿಕತೆಯು ಸಂತಾನಾಭಿವೃದ್ಧಿಯ ಪ್ರಮುಖ ಗುರಿಗೆ ಸಂಬಂಧಿಸಿದ್ದೇ ಆದರೂ, ಸಂತಾನವನ್ನು ಹೇರುವುದು ಅವಳಿಗೆ ನಿಗದಿತವಾದ ಸಾಮಾಜಿಕ ಕರ್ತವ್ಯವಾಗಿ, ಅನಿವಾರ್ಯ ಹೊರೆಯಾಗಿ ಪರಿಣಮಿಸುತ್ತದೆ. ಒಂದು ರೀತಿಯಲ್ಲಿ ಲೈಂಗಿಕತೆ ಅವಳ ಪಾಲಿಗೆ ಒತ್ತೆ ಇಟ್ಟಂತಹ ಒಂದು ಸಂಗತಿ ಮಾತ್ರವೇ ಆಗಿರುತ್ತದೆ.

ಹೆಣ್ಣಿನ ಲೈಂಗಿಕೆಯು ಫಲವಂತಿಕೆಯ ಪ್ರಶ್ನೆಯಾಗಿ ಮಾತ್ರವೇ ಈ ಪುರುಷ ಪ್ರಧಾನ ಸಮಾಜಕ್ಕೆ ಮುಖ್ಯವಾಗಿಬಿಡುತ್ತದೆ. ಕುಟುಂಬದ ವಂಶೋದ್ಧಾರಕನನ್ನು ಹೆತ್ತು ಕೊಡುವ ಯಂತ್ರವಾಗಿಯೂ, ಪ್ರಭುತ್ವದ ಪಾಲಿಗೆ ಜನಸಂಖ್ಯಾ ಸಮಸ್ಯೆಯನ್ನು ನಿರ್ವಹಿಸಲು ಆಕ್ರಮಣ ಮಾಡಬೇಕಾದ ದೇಹವಾಗಿಯೂ ಉಳಿದುಬಿಡುತ್ತಾಳೆ. ಚಿಕ್ಕ ಕುಟುಂಬಗಳ ಹೆಸರಿನಲ್ಲಿ ದೇಶದ ಜನ

ಸಂಖ್ಯೆಯ ಸಮಸ್ಯೆಯ ಹೆಸರಿನಲ್ಲಿ ಹೆಣ್ಣಿನ ಹೆರುವ ಶಕ್ತಿಗೆ ಹಾಗೂ ಅವಳ ಲೈಂಗಿಕತೆಯ ಸಂತೋಷಕ್ಕೆ ಒಂದು ಗೆರೆಯನ್ನು ಎಳೆಯಬಹುದಾದರೂ, ಅವಳ ಲೈಂಗಿಕೆಯನ್ನು ಅನುಭೋಗಿಸುವಲ್ಲಿ ಈ ಪಿತೃ ಪ್ರಧಾನ ಸಮಾಜ ಪುರುಷನಿಗೆ ಹೆಚ್ಚಿನ ಸ್ವಾತಂತ್ರ್ಯವನ್ನೇ ನೀಡಿದೆ. ದೇವದಾಸಿ ಪದ್ಧತಿ, ಬೆತ್ತಲೆ ಸೇವೆ, ವೇಶ್ಯಾವೃತ್ತಿ, ಅತ್ಯಾಚಾರ, ಬಹುಪತ್ನಿತ್ವಗಳಂಥವು ಇದಕ್ಕೆ ಉದಾಹರಣೆಗಳು. ಹೆಣ್ಣಿನ ಲೈಂಗಿಕತೆ ಒಟ್ಟು ಪುರುಷನಿಗೆ ಮೀಸಲಿರಬೇಕು ಎಂಬುದನ್ನು ಜಾರಿಗೊಳಿಸಲು, ವಿವಾಹದ ಉಪ ಬಂಧಗಳಾಗಿ ಪಾತಿವ್ರತ್ಯ, ಸತಿಪದ್ಧತಿ, ವೈದವ್ಯಗಳಂತವು ಜಾರಿಗೆ ಬಂದವು. ಗಂಡು ಸಂತಾನದ ಮೂಲಕ ವಂಶೋಧ್ಧಾರ, ಸಂಕರವಿಲ್ಲದ ಶುದ್ಧ ರಕ್ತದ ವಂಶವೃದ್ಧಿಗಳಂತಹ ಕಲ್ಪನೆಗಳನ್ನು ಹಲವು ಸ್ವಾರ್ಥಗಳಲ್ಲಿ ಈ ನಾಗರೀಕತೆ ರೂಪಿಸಿದಾಗಲೂ ಅದು ಹೆಣ್ಣಿನ ಲೈಂಗಿಕತೆಯ ಮೇಲೆ ನಡೆಸಿದ ಆಕ್ರಮಣವೇ ಆಗಿದೆ. ಈ ಚೌಕಟ್ಟಿನಲ್ಲಿ ಪುರುಷನಿಗೆ ಮುಕ್ತವಾದ ಲೈಂಗಿಕ ಸ್ವಾತಂತ್ರ್ಯ ಲಭ್ಯವಾಗುತ್ತದೆ, ಆದರೆ ಹೆಣ್ಣಿನ ಲೈಂಗಿಕತೆಯ ಪ್ರಶ್ನೆಯೇ ಅಳಿಸಿ ಹೋಗಿ ಅವಳ ದೇಹ ಕೇವಲ ಒಂದು ಹೆರುವ ಯಂತ್ರವಾಗಿದೆ.

ಇಂದಿನ ಆಧುನಿಕತೆಯ ನಾಗರೀಕ ಯುಗದಲ್ಲಿ ಹೆಣ್ಣಿಗೆ ತನ್ನ ಲೈಂಗಿಕತೆಯ ಮೇಲೆ ಸಾಕಷ್ಟು ಹತೋಟಿ ಸಿಕ್ಕಿದೆ ಎಂಬ ಭ್ರಮೆ ಇದೆ. ಪ್ರೇಮ ವಿವಾಹ, ವಿಧವಾ ವಿವಾಹ, ವಿಚ್ಛೇದನೆ, ತನಗೆ ಮಗು ಬೇಡವೆನಿಸಿದರೆ ಸಂತಾನ ನಿರೋಧಕಗಳ ಬಳಕೆ ಅಥವಾ ಗರ್ಭಪಾತಕ್ಕೆ ಅವಕಾಶ ಇವು ಅವಳ ಮುಂದೆ ತೆರೆದುಕೊಂಡಿವೆ. ಇನ್ನು ಮುಂದೆ ಹೋಗಿ, ತೀವ್ರವಾದಿಯಾಗಿ ಪುರುಷನ ಸಂಗವನ್ನೇ ನಿರಾಕರಿಸಿ ಸಲಿಂಗಿಯಾಗಿ ಲೆಸ್ಬಿಯನ್ ಆಗುವ ಸಾಧ್ಯತೆಗಳೂ ದೊರಕಿವೆ. ಆದರೆ ಈ ಎಲ್ಲಾ ಸಂದರ್ಭಗಳಲ್ಲಿಯೂ ಲೈಂಗಿಕತೆಯ ಸ್ವಾತಂತ್ರ್ಯವನ್ನು ಚಲಾಯಿಸಲು ಹೊರಟ ಹೆಣ್ಣು ಈ ಪುರುಷ ಪ್ರಧಾನ ಸಮಾಜದ ಎದುರು ಅಪರಾಧಿ ಎನಿಸಿ ಅಪಮಾನಿತಳಾಗುತ್ತಾಳೆ. ಸಮಾಜವು ನಿರ್ದೇಶಿಸಿದ ವಿಧಾನದಲ್ಲೇ ತನ್ನ ಲೈಂಗಿಕತೆಯನ್ನು ಒತ್ತೆಯಿಟ್ಟು ಕೇವಲ ಹೆರಿಗೆ ಯಂತ್ರವಾಗಲು ಒಪ್ಪಿದರೆ ಮಾತ್ರ ಆ ಹೆಣ್ಣು ಗೌರವಾನ್ವಿತಳಾಗುತ್ತಾಳೆ. ಇಲ್ಲವಾದಲ್ಲಿ ಅವಳ ಬದುಕು ಲಜ್ಜೆಗೆಟ್ಟಿದ್ದೂ, ಅನೈತಿಕದ್ದೂ ಎಂದು ಗುರುತಿಸಲಾಗುತ್ತದೆ.

ಸಂತಾನದಂತೆಯೇ ಲೈಂಗಿಕಾಸಕ್ತಿ ಎಂಬುದು ಸಹ ಮಾನವ ಜನ್ಮದ ಜೊತೆಗೆ ಬಂದಿರುವ ಒಂದು ಸಂಗತಿ. ಬಹು ಪ್ರಾಚೀನ ಕಾಲದಲ್ಲಿಯೇ ಭಾರತದಲ್ಲಿ ವಾತ್ಸಾಯನ ಕಾಮಸೂತ್ರ ಎಂಬ ಕೃತಿಯು ರಚನೆಯಾಗಿದೆ. ಇದರಲ್ಲಿ ಕಾಮ ಸಂತೋಷದ ಹಲವು ಬಗೆಗಳನ್ನು ಹೇಳಲಾಗಿದೆ. ಕಳೆದ ಕೆಲವು ಶತಮಾನಗಳಿಂದೀಚೆಗೆ ಸಂತಾನೋತ್ಪದನೆಯ ಉದ್ದೇಶವಿಲ್ಲದೆಯೂ ನಡೆಸುವ ಲೈಂಗಿಕ ಕ್ರಿಯೆಗೆ ತೊಡಗುವುದು ಎಂಬುದು ಹೆಚ್ಚು ರೂಢಿಗೆ ಬಂದಾದ ಮೇಲೆ ಪಶ್ಚಿಮದ ಸಂಸ್ಕೃತಿಗಳಲ್ಲಿಯೂ ಲೈಂಗಿಕತೆಯ ವ್ಯಾಖ್ಯಾನಗಳೇ ಬದಲುಗೊಂಡಿವೆ. ೨೦೦೦ನೇ ಇಸವಿಯ ಹೊತ್ತಿಗೆ ಲೈಂಗಿಕತೆ ಎಂಬುದು ಅಸ್ತಿತ್ವದ ಸಂಗತಿಯಾಗಿದೆ. ಆದರೆ ಇದೇ ಸಂಗತಿ ಒಂದು ಸಂಕೀರ್ಣ ಮಾರುಕಟ್ಟೆಯಾಗಿ

ವಿಸ್ತರಿಸಿದ್ದು ಮತ್ತೊಂದು ಸಂಗತಿಯಾಗಿದೆ. ನಗರದ ಪ್ರಜಾಪ್ರಭುತ್ವಗಳ ಪರಿಸರದ, ವಾಣಿಜ್ಯೀಕರಣದ ಆರ್ಥಿಕತೆಗಳು ಗಂಡಸರು, ಹೆಣ್ಣುಗಳು ಎಲ್ಲರೂ ಈ ಲೈಂಗಿಕ ಆನಂದವನ್ನು ಪಡೆಯಲು ಮುಗಿ ಬೀಳುವಂತೆ ಬಲವಾದ ಜಾಲಗಳನ್ನು ಹೆಣೆಯ ತೊಡಗಿದವು. ಪಶ್ಚಿಮ ಸಂಸ್ಕೃತಿಗಳಲ್ಲಿ ಲೈಂಗಿಕ ಆನಂದದ ಮಾರುಕಟ್ಟೆ ವಿಸ್ತರಿಸಿ ಬೆಳೆಯಲು ಜಾಹೀರಾತು ವಲಯವು ಹೆಚ್ಚು ದುಡಿಯಿತು. ಖಾಸಗಿ ಮಲಗುವ ಕೋಣೆಯಿಂದ ದಾಟಿಕೊಂಡು ಬಂದ ಲೈಂಗಿಕತೆಯ ಸಿನಿಮಾ, ರೇಡಿಯೋ, ಪ್ರಚಾರದ ಬೋರ್ಡ್‌ಗಳು ಜಾಹೀರಾತು ಎಲ್ಲೆಂದರಲ್ಲಿ ರಾರಾಜಿಸುತ್ತಾ ಹರಾಜಾಯಿತು. ಒಂದು ಕಡೆ ಅಸ್ತಿತ್ವದ ರಾಜಕಾರಣದ ಹೊಸ ನಡೆ, ಇನ್ನೊಂದು ಕಡೆಯಿಂದ ವಾಣಿಜ್ಯೀಕರಣಗೊಂಡ ಲೈಂಗಿಕತೆಯ ಸ್ಥಿತಿಗಳು ಸೇರಿ ಲೈಂಗಿಕತೆಯ ವ್ಯಾಖ್ಯಾನವನ್ನೇ ಬದಲಿಸಿದವು. ಇಂದು ಲೈಂಗಿಕತೆಯು ಸಂತಾನೋತ್ಪತ್ತಿಗಿಂತಲೂ ಹೆಚ್ಚಾಗಿ ಕಾಮ ತೃಷೆಯ, ಆಟ, ಅದರ ಆನಂದ ಎಂಬ ವ್ಯಾಖ್ಯಾನವನ್ನೇ ಗುರುತಾಗಿಸಿಕೊಂಡಿದೆ.

ಕಾಮದ ಆನಂದ ಎಂಬುದು ಸಕಾರಾತ್ಮಕವಾಗಿ ಬಳಕೆಗೊಳ್ಳುವ ಸಾಧ್ಯತೆಗಳೂ ಎಷ್ಟಿದೆಯೋ ಅದು ಒಡ್ಡುವ ಅಪಾಯಗಳ ಸಂಗತಿಯೂ ದೊಡ್ಡದೇ ಆಗಿದೆ. ಅದರಲ್ಲಿಯೂ ಹೆಣ್ಣು ಈ ಅಪಾಯಗಳಿಗೆ ಹೆಚ್ಚು ಹೆಚ್ಚು ಒಳಗಾಗುವುದು ಎಂಬುದು ಅಕ್ಷರಶಃ ಸತ್ಯ. ಸ್ತ್ರೀ ಪುರುಷರು ಒಂದು ಸಮುದಾಯವಾಗಿ ಭಾಗವಹಿಸುವ ಅನೇಕ ಚಟುವಟಿಕೆಗಳು, ಚಳುವಳಿ ಕ್ರಾಂತಿ, ಹೋರಾಟಗಳಲ್ಲಿ, ಯುದ್ಧಗಳಲ್ಲಿ ಇಂತ ಸಂಭವಗಳು ಹೆಚ್ಚು. ಸಾಮೂಹಿಕ ಅತ್ಯಾಚಾರಗಳು ಸರ್ವೇ ಸಾಮಾನ್ಯವೆನಿಸುವ ದಂಗೆ, ಯುದ್ಧಗಳಲ್ಲಿ ಮತ್ತಿತರ ಸಂಪತ್ತು ಲೂಟಿಯಾದಂತೆ, ಹೆಣ್ಣಿನ ಲೈಂಗಿಕತೆಯ ಲೂಟಿಯೂ ನಡೆಯುತ್ತದೆ. ಆದರೆ ಸಂದರ್ಭ ಶಾಂತಿಯುತವಾಗಿದ್ದಾಗಲೂ ಭಯ ಭೀತಿ ಆತಂಕಗಳಿಂದ ತುಂಬಿದ್ದಾಗಲೂ ಗಂಡಸಿಗೆ ಲೈಂಗಿಕತೆಯ ಮುಕ್ತ ಸ್ವಾತಂತ್ರ್ಯ ಸಹಜವೆಂಬಂತೆ ದೊರೆತುಬಿಡುತ್ತದೆ. ಆದರೆ ಹಣ್ಣಿನ ಪಾಲಿಗೆ ಅದು ಸದಾ ಪ್ರತಿಬಂಧಕವೇ. ಇದರಲ್ಲಿ ನಿಸರ್ಗದ ಪಾಲು ಮುಖ್ಯವಾದುದು ನಿಜ, ಆದರೆ ಲೈಂಗಿಕತೆಯ ಪರಿಣಾಮವಾದ ಸಂತಾನ ಮೈತಳೆಯುವುದು ಹೆಣ್ಣಿನ ದೇಹದಲ್ಲಾದ್ದರಿಂದ ಹೀಗಾಗುವುದು ಸಹಜವೇ. ಆದರೆ ಸಾಮಾಜಿಕ ಚಿಂತನೆಗಳಲ್ಲಿ ಪುರುಷ ಪ್ರಧಾನ ಪ್ರಭುತ್ವವವು ರೂಪಿಸುವ ಕಾಯಿದೆ ಕಾನೂನುಗಳಲ್ಲಿ ಇದು ಅವಳ ಅಪರಾಧ ಎಂದು ಪರಿತಗಣಿತವಾಗುತ್ತದೆ. ಈ ಅಪರಾಧಕ್ಕೆ ಅವಳು ಬಹಳ ತೀವ್ರವಾದ ಶಿಕ್ಷೆ, ಅವಮಾನ, ನೋವು ಹಿಂಸೆಗಳಿಗೆ ಬಲಿಯಾಗಬೇಕಾಗುತ್ತದೆ.

ಇನ್ನು ಪುರುಷ ಪ್ರಧಾನೆಯ ಪ್ರಭುತ್ವವು ಪ್ರಗತಿ, ಆಧುನೀಕರಣ, ಜಾಗತೀಕರಣ ಎಂದು ಅಭಿವೃದ್ಧಿಗಳ ಹೆಸರಿನಲ್ಲಿ ರೂಪಿಸುವ ಯೋಜನೆಗಳು ಸಹ ಹೆಣ್ಣಿನ ಲೈಂಗಿಕತೆಯನ್ನು ಬೇಕೆಂದ ಹಾಗೆ ಬಳಸಬಹುದಾದ ಒಂದು ಆಸ್ತಿ ಎಂಬಂತೆ ನೋಡುತ್ತದೆ. ವೇಶ್ಯಾ ಪದ್ಧತಿ, ಬೆತ್ತಲೆ ಸೇವೆಯನ್ನು ಅನೈತಿಕ ಅನಾಗರೀಕ ಎಂದು ಭಾವಿಸಿದ್ದರೆ ಅಲ್ಲಿಯ ಹೆಣ್ಣುಗಳನ್ನು ಅನಾಮತ್ತಾಗಿ ಬೇರೊಂದು ಲೋಕಕ್ಕೆ ವರ್ಗಾಯಿಸಿ ಉದ್ಧರಿಸಿ ಬಿಡುವ ಚಿಂತನೆಗಳು ಹುಟ್ಟಿಕೊಳ್ಳುತ್ತದೆ. ಇಲ್ಲಿ ಹೆಣ್ಣನ್ನು ಜೀವಂತ ವ್ಯಕ್ತಿ ಎಂದು ಗುರುತಿಸುವ ಬದಲು, ಅನಾರೋಗ್ಯಕರ, ಅನೈತಿಕ ದೇಹಗಳು

ಎಂದು ಪರಿಗಣಿಸಲಾಗುತ್ತದೆ. ವೇಶ್ಯೆ ಎಂದರೆ ದೇಹ ವ್ಯಾಪಾರವನ್ನು ಮಾಡುವ ಹೆಣ್ಣು ಎಂಬುದು ಅತ್ಯಂತ ಪ್ರಚಲಿತ ನುಡಿ. ಬಂಡವಾಳಶಾಹಿ ಮಾರುಕಟ್ಟೆಯಲ್ಲಿ ಹೆಣ್ಣಿನ ದೇಹವನ್ನು ವ್ಯಾಪಾರದ ಸರಕಾಗಿ ಬಳಸುವ ಪುರುಷರು ಮತ್ತು ಅದಕ್ಕೆ ಗಿರಾಕಿಗಳಾಗಿ ಬರುವ ಗಂಡಸರು ಎಂಬ ಒಂದು ದೊಡ್ಡ ಜಾಲವೇ ಇದೆ ಎಂಬ ನಿರ್ವಚನವೂ ಕಂಡ ಅರ್ಧ ಸತ್ಯವೇ. ಹೆಣ್ಣು ಈ ಕೆಲಸದಲ್ಲಿರುವುದು ಅವಳ ಆಯ್ಕೆಯ ವಿಷಯವಲ್ಲ. ದೇವರು ಧರ್ಮ ಸಂಪ್ರದಾಯಗಳ ಬಲವಾದ ಬಲೆಯ ಮೂಲಕ ಅಂಚಿನಲ್ಲಿರುವ ಅಸಹಾಯಕ ಸ್ಥಿತಿಯ ಸಾಮುದಾಯಗಳ ಹೆಣ್ಣುಗಳನ್ನು ಈ ವ್ಯಾಪಾರದೊಳಗೆ ಬಲಂವಂತವಾಗಿ ಮೋಸಮಾಡಿ ಅಥವಾ ಹಣದ ಆಸೆ ತೋರಿಸಿ ಎಳೆದು ಬಿಡುವಂತ ಕ್ರಮವೂ ಪ್ರಬಲವಾದುದು. ಮದುವೆಯಾದ ಹೆಂಡತಿಯನ್ನೇ ಶಯನೇಷು ವೇಶ್ಯಾ ಎಂದು ವ್ಯಾಖ್ಯಾನಿಸುವ ಭವ್ಯ ಪರಂಪರೆ ಭಾರತದಲ್ಲಿ ಲೈಂಗಿಕ ದೌರ್ಜನ್ಯಕ್ಕೆ ಯಾವ ಬಗೆಯ ಪ್ರಕ್ರಿಯೆ ನಿರೀಕ್ಷಿಸಬಹುದು ಎಂಬುದು ಊಹಿಸಬೇಕಾದ ಸಂಗತಿ. ಯಾವುದೇ ಹೆಣ್ಣಿನ ದೇಹವಾದರೂ ಅದೊಂದು ಲೈಂಗಿಕ ವಸ್ತು ಮಾತ್ರವೇ ಆಗಿರುತ್ತದೆ ಎಂಬುದೇ ಪುರುಷ ಪ್ರಧಾನ ಚಿಂತನೆಯ ಮೊದಲ ತತ್ವ ಆದರೆ ಪಿತೃ ಪ್ರಧಾನತೆಯ ನಿಯಮಾವಳಿಗಳು ತನ್ನ ಒಳಕಾರ್ಯಸೂಚಿಗಳ ಕಾರಣಗಳಲ್ಲಿ ಕೆಲವು ಹೆಂಗಸರಿಗೆ ಮದುವೆ ಮತ್ತು ಅದರ ಕಾರಣವಾಗಿ ದೊರಕುವ ಒಂದು ಹಂತದ ದೇಹ ರಕ್ಷಣೆ ಎಂಬ ಭ್ರಮಾತ್ಮಕವಾದ ಗೌರವ ಮರ್ಯಾದೆಗಳ ಅವಕಾಶ ನೀಡುತ್ತದೆ. ಬಹುತೇಕ ಇದು ಮೇಲು ಜಾತಿಗೆ ಸೇರಿದ ಮಹಿಳೆಯರಿಗೆ ಸೀಮಿತವಾಗುತ್ತದೆ. ಮತ್ತು ಸಾಮಾಜಿಕವಾಗಿ ಅಂಚಿನವರಾಗಿ ಉಳಿದ ಜಾತಿ ಸಮುದಾಯಗಳ ಮಹಿಳೆಯರು ಎಲ್ಲಾ ಗಂಡಸರಿಗೂ ಲಭ್ಯವಾಗುವ ಲೈಂಗಿಕ ವಸ್ತುಗಳಷ್ಟೇ ಆಗಿ ಉಳಿದು ಬಿಡುತ್ತಾರೆ.

ಕುಟುಂಬದ ವಾರಸುದಾರ ಎಂಬ ಕಲ್ಪನೆಯಿಂದಾಗಿ ಭ್ರೂಣ ಪರೀಕ್ಷೆಯ ಮೂಲಕ ಸಾವಿರಾರು ಹೆಣ್ಣು ಭ್ರೂಣಗಳನ್ನೇ ಹತ್ಯೆ ಮಾಡಿಸಿದ ಪರಿಣಾಮ ಉತ್ತರ ಭಾರತದ ಹಲವು ರಾಜ್ಯಗಳಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಕಡಿಮೆಯಾಗಿದೆ. ಈ ಪರಿಸ್ಥಿತಿಯಲ್ಲಿ ವಿವಾಹದ ಹೆಸರಿನಲ್ಲಿ ದಕ್ಷಿಣ ಭಾರತದ ರಾಜ್ಯಗಳಿಂದ ಹೆಣ್ಣುಗಳನ್ನು ವಿವಾಹ ಮಾಡಿಕೊಳ್ಳುವ ಮೂಲಕ ಆ ರಾಜ್ಯಗಳಿಗೆ ಕರೆದೊಯ್ಯಲಾಗುತ್ತಿದೆ. ಇಲ್ಲಿ ಅಂಚಿನ ಸಮುದಾಯದ ಮತ್ತು ಬಡತನದಲ್ಲಿರುವ ಹೆಣ್ಣುಮಕ್ಕಳೇ ಅತಿ ಹೆಚ್ಚು ಈ ಕೃತ್ಯಕ್ಕೆ ಬಲಿಯಾಗುತ್ತಾರೆ. ಮದುವೆಯ ಎಲ್ಲಾ ಖರ್ಚು ಅವರದೇ ಹೆಣ್ಣು ಹೆತ್ತವರಿಗೆ ಹಣ ಕೊಟ್ಟು ಮಗಳನ್ನು ಮದುವೆಯಾಗಿ ಹೋಗುವರು. ಈ ಇಡೀ ಪ್ರಕ್ರಿಯೆ ಎರಡು ಅಥವಾ ಮೂರು ದಿನಗಳಲ್ಲಿ ಮುಗಿಯುತ್ತದೆ. ಇಂಥ ಮದುವೆಗೆ ಗುಜರಾತಿನಿಂದ ಮೂರ್‍ನಾಲ್ಕು ಜನ ಗಂಡಸರು ಬರುವರು. ಹೆಣ್ಣು ಹೆತ್ತವರು ಮಗಳ ಮದುವೆ ಮಾಡಿ ಒಂದಿಷ್ಟು ಹಣ ಕೈ ಸೇರಿದಕ್ಕೆ ನಿರಾಳವಾಗುವರು. ಇದೊಂದು ಮದುವೆಯ ಹೆಸರಿನಲ್ಲಿ ನಡೆಯುವ ಹೆಣ್ಣುಗಳ ಮಾರಾಟ. ಇದನ್ನು 'ಗುಜ್ಜರ್ ಕಿ ಶ್ಯಾದಿ' ಎಂದು ಕರೆಯುವರು.

ಒಟ್ಟಿನಲ್ಲಿ ಹೆಣ್ಣಿನ ಲೈಂಗಿಕತೆಯು ಈ ನಾಗರೀಕತೆಯ ಅಧೀನವಾಗಿದೆ. ಹೆಣ್ಣು ಒಂದು ಅನುಭೋಗದ ವಸ್ತುವೇ ಆಗಿದ್ದಾಳೆ. ತನ್ನ ವಂಶೋದ್ದಾರಕ್ಕಾಗಿ ಇರುವ ಒಂದು ಯಂತ್ರವೆಂದೇ ಭಾವಿಸಲಾಗಿದೆ. ಹೆಣ್ಣನ್ನು ಭ್ರೂಣದಲ್ಲೇ ಹತ್ಯೆ ಮಾಡಿ ಬಿಸಾಡುತ್ತಿರುವುದು ಮಾತ್ರ ಪ್ರತಿಷ್ಠೆಯಾಗಿದೆ. ವಂಶೋದ್ಧಾರಕ್ಕೆ ಹೆಣ್ಣು ಬೇಕು, ಆದರೆ ಹೆಣ್ಣು ಮಗು ಬೇಡ ಎಂಬ ನಿಲುವು ಇದೆ. ಈ ಕಾರಣದಿಂದಾಗಿ ಲಾಭಕೋರ ಲೆಕ್ಕಾಚಾರದ ಸಮಾಜ ಇಂದು ಲಿಂಗಾನುಪಾತ ನೆಲೆಯಲ್ಲಿ ಹೆಣ್ಣಿನ ತೀವ್ರ ಕೊರತೆಯನ್ನು ಅನುಭವಿಸುವ ಹಂತಕ್ಕೆ ಒಂದು ನಿಂತಿದೆ. ಈ ಅಸಮಾನತೆಯು ಹೆಣ್ಣಿನ ಮೇಲಿನ ದೌರ್ಜನ್ಯ ಹೆಚ್ಚಳಕ್ಕೆ ಕಾರಣವಾಗುತ್ತಿದೆ. ಹೆಚ್ಚಾಗುತ್ತಿರುವ ಅತ್ಯಾಚಾರ, ಲೈಂಗಿಕ ದೌರ್ಜನ್ಯ, ಹೆಣ್ಣು ಮಕ್ಕಳ ಸಾಗಾಣಿಕೆ ಮತ್ತು ಅಕ್ರಮ ಮಾರಾಟ ಎಗ್ಗಿಲ್ಲದೆ ನಡೆಯುತ್ತಿರುವ ವೇಶ್ಯಾವಾಟಿಕೆ ಇವೆಲ್ಲಕ್ಕೆ ಹೆಣ್ಣಿನ ಕೊರತೆಯೂ ಮುಖ್ಯ ಕಾರಣವೆಂದು ಸಮಾಜ ವಿಜ್ಞಾನಿಗಳು ಗುರುತಿಸುತ್ತಾರೆ.

ಜಾಗತೀಕರಣದ ಬೃಹತ್ತಾದ ಬಾಹುಗಳು ವಿಸ್ತರಿಸುತ್ತಾ ಹೋದಂತೆ ಹೆಣ್ಣನ್ನು ದೇಹ ಕೇಂದ್ರಿತವಾಗಿ ನೋಡುವ ಪ್ರಕ್ರಿಯೆ ವ್ಯಾಪಕವಾಗುತ್ತಾ ಸಾಗಿದೆ. ಹಿಂದೆ ಕುಟುಂಬದೊಳಗೆ ಇದ್ದ ಹೆಣ್ಣಿನ ದಮನ ಮಾದರಿಗಳು ಇಂದು ಬೀದಿಗೆ ಬಂದಿವೆ. ಹೀಗಾಗಿ ಅವಳನ್ನು ಬಳಸಿಕೊಳ್ಳಲು ಬೇಕಾದ ವಿಸ್ತೃತ ಮಾರ್ಗಗಳನ್ನು ದುಷ್ಟಶಕ್ತಿಋ ಕಂಡುಕೊಳ್ಳುತ್ತವೆ. ಆಧುನಿಕ ತಂತ್ರಜ್ಞಾನವೂ ಇದಕ್ಕೆ ವೇಗ ವರ್ಧಕವಾಗಿ ಕೆಲಸ ಮಾಡುತ್ತಿದೆ. ಒಂದೆಡೆ ಶ್ರೀಮಂತರೂ ಮತ್ತಷ್ಟು ಶ್ರೀಮಂತರಾಗುವ, ಬಡವರು ಮತ್ತಷ್ಟು ಬಡವರಾಗುತ್ತಾ ಸಾಗಿರುವ ನಮ್ಮ ಅಭಿವೃದ್ಧಿಯ ಪರಿಕಲ್ಪನೆಗಳಿಂದಾಗಿ ವೇಗವಾಗಿ ಬೀದಿಗೆ ಬೀಳುತ್ತಿರುವ ಬಡ ಹೆಣ್ಣುಮಕ್ಕಳು ಬದುಕುಳಿಯಲಿಕ್ಕಾಗಿ ಕೆಲವೊಮ್ಮೆ ತಾವಾಗಿಯೇ ಹಲವು ಬಾರಿ ವ್ಯವಸ್ಥಿತ ಹುನ್ನಾರದ ಮೂಲಕ ಇಂತಹ ದುಷ್ಟ ಜಾಲಕ್ಕೆ ಬೀಳುತ್ತಿದ್ದಾರೆ. ಈ ಮಾರಾಟ ಜಾಲಕ್ಕೆ ಸುಲಭವಾಗಿ ಸಿಲುಕುತ್ತಿದ್ದಾರೆ. ಈ ಮಾರಾಟ ಜಾಲಗಳು ಇಂದು ಭೂಗತವಾಗಿ ಮತ್ತು ಮಾಫಿಯಾ ಆಗಿ ಬೆಳೆದು ನಿಂತಿದೆ. ಕಾನೂನು ವ್ಯವಸ್ಥೆಯು ಅಕ್ರಮ ಮಾನವ ಸಾಗಾಣಿಕೆ ಮತ್ತು ಮಾರಾಟ ತಡೆ ಸಮಿತಿಯು ಎಲ್ಲಿಯೂ ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ವ್ಯವಸ್ಥೆಯು ನಾಪತ್ತೆ ಪ್ರಕರಣಗಳನ್ನು ಎರಡನೇ ಅಥವಾ ಮೂರನೇ ಹಂತದ ಆದ್ಯತೆಯಾಗಿ ತೆಗೆದುಕೊಳ್ಳುವುದರಿಂದ ಮತ್ತು ಮೂಲ ಮಾರಾಟ ಜಾಲವನ್ನು ಭೇದಿಸದೇ ತಕ್ಷಣ ಕಾಣೆಯಾದವರನ್ನು ಮಾತ್ರ ಹುಡುಕಿ ಕೈ ತೊಳೆದುಕೊಳ್ಳುವುದರಿಂದ ಈ ಜಾಲ ವಿಸ್ತರಿಸಲು ಯಾವುದೇ ಅಡೆತಡೆ ಇಲ್ಲದೆ ಮುಂದುರೆಯಲು ಸಹಾಯಕವಾಗಿದೆ.

ತಾಯಿ ಎಂದು ಗೌರವಾನ್ವಿತವಾಗಿ ಹೇಳುವ ಸಭ್ಯ ನಾಗರೀಕತೆಗಾಗಲೀ ತನ್ನ ಪ್ರಯೋಗಗಳಿಗೆ ಸುಲಭವಾಗಿ ದಕ್ಕುವ ಒಂದು ಪಶು ಎಂದು ಕಾಣುವ ಪ್ರಭುತ್ವಕ್ಕಾಗಲೀ ಹೆಣ್ಣು ಎಂದಿಗೂ ಒಂದು ವ್ಯಕ್ತಿಯಾಗಿ ಕಾಣುವುದಿಲ್ಲ. ಅವಳೊಂದು ದೇಹ ಮತ್ತು ಲೈಂಗಿಕತೆಗೆ ಇರುವ ಉಚಿತ ವಸ್ತುವಾಗಿಯೇ ಉಳಿದುಬಿಡುತ್ತಾಳೆ.

## ೩.೯ ಮನುಸ್ಮೃತಿಯಲ್ಲಿ ಹೆಣ್ಣಿನ ಲೈಂಗಿಕತೆ ಮತ್ತು ಅಸ್ತಿತ್ವದ ನಿರಾಕರಣೆ

ಪ್ರಪಂಚದಲ್ಲಿನ ಧರ್ಮಗಳು ಪುರುಷರ ಸೃಷ್ಟಿ, ಎಲ್ಲಾ ಧರ್ಮಗಳ ದೇವ ಪುರುಷರು ಸ್ವಯಂ ಸೃಷ್ಟಿಕರ್ತರು. ಯಾವುದೇ ಧರ್ಮವು ಹೆಣ್ಣಿನ ಮೂಲಕ ಇದುವರೆಗೂ ಅಸ್ತಿತ್ವಕ್ಕೆ ಬಂದಿಲ್ಲ . ನಮ್ಮ ದೇಶದ ಪುರಾಣ, ಮಹಾಕಾವ್ಯಗಳಲ್ಲಿ, ಹರಿಕಥೆ, ಯಕ್ಷಗಾನ, ಬಯಲಾಟಗಳಲ್ಲಿ, ಪತಿವ್ರತೆಯರ ಕಥೆಗಳಲ್ಲಿ ಗಂಡಿನ ಮೇಲ್ಮೆ, ಹೆಣ್ಣಿನ ಅಧೀನತೆ, ಹೆಣ್ಣು ಮಾಯೆ, ಭೋಗದ ವಸ್ತು, ಮನೆಗೆಲಸ , ಮಕ್ಕಳನ್ನು ಪಡೆಯುವುದು, ಪೋಷಿಸುವುದು, ಪುರುಷನ ಸೇವೆ ಮಾಡುವುದು ಮೊದಲಾದ ಮೌಲ್ಯಗಳೇ ಮಹಿಳೆಯ ಅತ್ಯುನ್ನತ ಮೌಲ್ಯಗಳು ಎಂದು ಪ್ರತಿಪಾದಿಸಲಾಗಿದೆ. ಪುರುಷ ತನ್ನ ದುರ್ಬಲ ಸ್ಥಿತಿಯನ್ನು ಹೆಣ್ಣಿನ ಮೇಲೆ ಹಾಕಿ ಅದಕ್ಕೆ ಧಾರ್ಮಿಕ ಲೇಪವನ್ನು ಹಚ್ಚಿದ್ದಾನೆ. ದೇವರಲ್ಲಿ ಲೀನವಾಗುವುದೇ ಬದುಕಿನ 'ಸಾಧನೆ' ಅದುವೇ 'ಮುಕ್ತಿ' ಇದು ಬದುಕಿನ ದೊಟ್ಟ ಸಾಧನೆ ಎಂಬುದು ಪುರುಷ ಸಮಾಜದ ನಂಬಿಕೆ. ಆದರೆ ಇದಕ್ಕೆ ಹೆಣ್ಣು ಅಡ್ಡಿಯಾಗುತ್ತಾಳೆ ಎಂಬುದು ಪುರುಷವಾದ. ಆ ಕಾರಣಕ್ಕಾಗಿ ಹೆಣ್ಣನ್ನು ದುರ್ಬಲಳು, ಅನರ್ಹಳು ಎಂದು ನಂಬಿಸಲಾಗಿದೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಮನುವಿನ ಧಾರ್ಮಿಕ ಗ್ರಂಥ ಮನುಸ್ಮೃತಿ. ಇದು ಎಷ್ಟು ನಯವಾಗಿ ಹೆಣ್ಣಿನ ಮೇಲೆ ಧರ್ಮವನ್ನು ಹೇರುವ ಕಾರ್ಯ ಮಾಡುತ್ತದೆ ಎಂದರೆ, ಸ್ವತಃ ಹೆಣ್ಣೇ ಧರ್ಮದ ಭ್ರಮೆಯಲ್ಲಿ ಸಿಲುಕಿ ಅದು ಸರಿ ಎನ್ನುವಷ್ಟು ನಂಬುವಂತಾಗಿದೆ. ಹೆಣ್ಣಿನ ಹಕ್ಕುಗಳನ್ನು, ಅವಳ ಸ್ವಾತಂತ್ರ್ಯವನ್ನು ನಿಗ್ರಹಿಸುವ ಕಾರ್ಯವು ಭಾರತೀಯ ಇತಿಹಾಸದಲ್ಲಿ ಚಾಲನೆಯಾಗಿದ್ದು ಈ ಧರ್ಮ ಗ್ರಂಥದಿಂದಲೇ ಎನ್ನಬಹುದು.

ಧರ್ಮದ ಮುಖ್ಯ ಆಶಯಕ್ಕೆ ಧಕ್ಕೆಯಾಗುವಂತೆ ಮಹಿಳೆಯರ ಮೇಲೆ ಪುರೋಹಿತಶಾಹಿ ವರ್ಗದ ಸಹಕಾರದಿಂದ ಪುರುಷ ಪ್ರಧಾನ ಸಮಾಜ ಅಪಾಯಕಾರಿಯಾದಂತಹ ಮಾನದಂಡಗಳನ್ನು ಹೇರಿದೆ. ಮನುಸ್ಮೃತಿಯ ಉಲ್ಲೇಖಗಳನ್ನು ಗಮನಿಸಿದರೂ ಸಾಕು ಯಾವ ಪ್ರಮಾಣದಲ್ಲಿ ಪುರುಷಾಧಿಪತ್ಯವು ತನ್ನ ಪೂರ್ವಾಗ್ರಹಗಳನ್ನು ಬಳಸಿದೆ ಎಂಬುದು ತಿಳಿಯುತ್ತದೆ. ಮನುಸ್ಮೃತಿಯು ಪುರಾಣಗಳು, ಮಹಾಕಾವ್ಯಗಳಿಗಿಂತ ಸ್ವಲ್ಪ ಮೊದಲೇ ಹುಟ್ಟಿದ ಕೃತಿಯಾಗಿದೆ. ಇಂತಹ ಹಲವು ಸ್ಮೃತಿಗಳಿಗಿಂತ ಹೆಚ್ಚು ಪ್ರಚಲಿತವಾಗಿ ಮಹಿಳೆಯರ ಬಗೆಗಿನ ಭಾರತೀಯ ಸಮಾಜದ ಭಾವನೆಯನ್ನು ರೂಪಿಸಿದ ಗ್ರಂಥಗಳಲ್ಲಿ ಇದು ಒಂದು ಪ್ರಧಾನ ಗ್ರಂಥ. ಈ ಕೃತಿಯಲ್ಲಿ ಹೆಣ್ಣಿನ ಕುರಿತು ಏನು ಹೇಳಲಾಗಿದೆ ಎಂಬುದನ್ನು ತಿಳಿದುಕೊಳ್ಳುವುದು ಇಂದು ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳನ್ನು ಮತ್ತು ಅದರ ಎಲ್ಲಾ ಆಯಾಮಗಳನ್ನು ಅರ್ಥಮಾಡಿಕೊಳ್ಳಲು ಅವಶ್ಯಕ.

ಹಿಂದೂ ಧರ್ಮದಲ್ಲಿ ಒಂದು ಪವಿತ್ರವಾದ ಧರ್ಮಗ್ರಂಥ ಮತ್ತು ಧರ್ಮ ಸೂತ್ರವೆಂದೇ 'ಮನುಸ್ಮೃತಿ' ಪರಿಗಣಿತವಾಗಿದೆ. ಮನುಸ್ಮೃತಿ ಪ್ರಾಚೀನ ಭಾರತೀಯ ಸಮಾಜದ ಸಾಮಾಜಿಕ ವಿಧಿವಿಧಾನಗಳು ನಿಷೇಧಗಳನ್ನು, ನೀತಿ–ನಡವಳಿಗಳು, ಕಟ್ಟುಪಾಡುಗಳನ್ನು ಹೇಳುವ ಒಂದು

ಕೃತಿಯಾಗಿದೆ. ಹಿಂದೂ ಮತದ ಅನುಯಾಯಿಗಳಿಗೆ ಆಧಾರ ಗ್ರಂಥವಾಗಿ ಮತ್ತು ವಿರೋಧಿಗಳಿಗೆ ಮೂಲಭೂತವಾದಿ ಗ್ರಂಥವಾಗಿಯೂ ಖ್ಯಾತಿ ಮತ್ತು ಅಪಖ್ಯಾತಿಗಳನ್ನು ಹೊಂದಿದೆ. ಈ ಕೃತಿಯು ಪ್ರಾಚೀನ ಧರ್ಮವನ್ನು ಮೇಲ್ನೋಟಕ್ಕೆ ಬಿಂಬಿಸುತ್ತಲೇ ಜಾತಿಯನ್ನು ಕೇಂದ್ರೀಕರಿಸಿದೆ. ಶೂದ್ರರನ್ನು ಸ್ತ್ರೀಯರನ್ನು, ದಲಿತರನ್ನು ವರ್ಣಾಶ್ರಮ ಧರ್ಮದ ಹಿನ್ನೆಲೆಯಲ್ಲಿ ಸಂಪೂರ್ಣವಾಗಿ ಶೋಷಿಸುತ್ತದೆ. ಆಧುನಿಕ ಸ್ತ್ರೀವಾದಿಗಳು 'ಮನುಸ್ಮೃತಿ'ಯ ಬಗ್ಗೆ ಹೊಂದಿರುವ ದೃಷ್ಟಿಕೋನಗಳಿಗೆ ಪೂರಕವಾಗಿ ಇಲ್ಲಿ ಮನುಸ್ಮೃತಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಮನುಸ್ಮೃತಿ ಕೃತಿಯಲ್ಲಿ ರಾಜ್ಯ, ರಾಜ, ರಾಜಪ್ರಭುತ್ವ, ಅಧಿಕಾರ, ಯಂತ್ರಾಂಗ, ನ್ಯಾಯವ್ಯವಸ್ಥೆ, ಭೌತಿಕ ಹಿಂಸೆ ಮತ್ತು ದೂಷಣೆ, ಲೈಂಗಿಕ ಅಪರಾಧಗಳು, ಅಂದಿನ ಸಾಮಾಜಿಕ, ಆರ್ಥಿಕ ಜೀವನ ಸ್ತ್ರೀಯರ ಸ್ಥಿತಿಗತಿಯನ್ನು ವಿವರಿಸುವ ವಿಷಯಗಳಿಗೆ ಒಟ್ಟು ಹನ್ನೆರಡು ಅಧ್ಯಾಯಗಳಲ್ಲಿ ವಿಂಗಡನೆಗೊಂಡಿರುವ ಈ ಕೃತಿಯನ್ನು ಸ್ತ್ರೀ ವಿಷಯಗಳ ಕುರಿತ ಮನುವಿನ ವಿಚಾರ ಪ್ರತಿಪಾದನೆಗಳಿಗೆ ಸೀಮಿತಗೊಳಿಸಿ ಅದರ ವಿಶ್ಲೇಷಣೆಯನ್ನು ಮಂಡಿಸುವುದು. ಈ ಅಧ್ಯಾಯದ ಆಶಯವಾಗಿದೆ.

ಮೊದಲ ಅಧ್ಯಾಯದಲ್ಲಿಯೇ ಮನು ತನ್ನ ಸ್ಮೃತಿ ರಚನೆಯ ಅಗತ್ಯತೆಯನ್ನು ಪ್ರಸ್ತಾಪಿಸಿದ್ದಾನೆ. "ಮಹಾ ಋಷಿಗಳು ಒತ್ತಾಯ ಪಡಿಸಿದ ಹಿನ್ನೆಲೆಯಲ್ಲಿ ಸಮಸ್ತ ಸೃಷ್ಟಿಯ ಕಾರ್ಯ ವಿಧಾನದ ಸ್ವರೂಪವಾಗಿ ಈ ರಚನೆಯನ್ನು ಮಾಡಲಾಯಿತೆಂದು ಹೇಳಿಕೊಂಡಿದ್ದಾನೆ."[೩೧] ಚಾತುರ್ವರ್ಣ ಪದ್ಧತಿಯನ್ನು ಕರ್ಮ ಸಿದ್ಧಾಂತಕ್ಕೆ ಅನುಗುಣವಾಗಿ ಇಲ್ಲಿ ವ್ಯಾಖ್ಯಾನಿಸಲಾಗಿದೆ. ವರ್ಣ-ವರ್ಗ-ಜಾತಿಗಳಲ್ಲಿ ಪುನರ್ಜನ್ಮಗಳ ಕರ್ಮಾನುಸಾರ ಜೀವಿಯ ಉತ್ಪತ್ತಿ ತತ್ವವನ್ನು ಪ್ರತಿಪಾದಿಸುವುದು ಮನುವಿನ ಮುಖ್ಯ ಉದ್ದೇಶ, ಈ ಪ್ರಸ್ತುತ ವಿಶ್ಲೇಷಣೆಯು ಸ್ತ್ರೀ ಕೇಂದ್ರಿತ ನೆಲೆಯನ್ನು ಹೊಂದಿರುವುದರಿಂದ ಇತರೆ ವಿಷಯ ಪ್ರತಿಪಾದನೆಯನ್ನು ಕೈಬಿಡಲಾಗಿದೆ.

"ದ್ವಿಧಾ ಕೃತ್ವಾತ್ಮನೋ ದೇಹಮರ್ಧೇನ ಪುರುಷೋಽಭವತ್।
ಅರ್ಧೇನ ನಾರೀ ತಸ್ಯಾಂ ಸ ವಿರಾಜಮಸೃಜತ್ ಪ್ರಭು: ॥ ೧.೩೨॥"[೩೨]

ಆ ಬ್ರಹ್ಮನು ತನ್ನ ದೇಹವನ್ನು ಎರಡು ಭಾಗಮಾಡಿ ಅರ್ಧದಿಂದ ಪುರುಷನೂ, ಇನ್ನರ್ಧದಿಂದ ಸ್ತ್ರೀಯನ್ನು ಸೃಷ್ಟಿಸಿದನು. ಆ ಸ್ತ್ರೀ ರೂಪದಲ್ಲಿ ವಿರಾಟ್ ಎಂಬುವನನ್ನೂ ಸೃಷ್ಟಿಸಿದನಂತೆ. ಆ ವಿರಾಟ್ ಪುರುಷನ ಜಗತ್ ಸೃಷ್ಟಿಯು, ನಂತರದ ಸೃಷ್ಟಿಯಾಗಿ ಸ್ವಾಯಂಭು ಮನುಸೃಷ್ಟಿ. ಆನಂತರ ದಶ ಮಹರ್ಷಿಗಳಿಂದ ಸಮಗ್ರ ಜೀವ ಸಂಕುಲದ ದೇವ-ಮಾನವ-ಸಕಲ ಚರಾಚರ ವರ್ಗವು ಸೃಷ್ಟಿಯಾಯಿತಂತೆ. ಮನುಸ್ಮೃತಿಯನ್ನು ಒಳಗೊಂಡಂತೆ ಎಲ್ಲ ಸ್ಮೃತಿಗಳೂ ಇದೇ ಬಗೆಯ ಸೃಷ್ಟಿ ತತ್ವವನ್ನು ಪ್ರತಿಪಾದಿಸಿದ ಮೇಲೆ ಮನುಷ್ಯ ಸಂಬಂಧಗಳನ್ನು ವಿವರಿಸುತ್ತದೆ. ಈ ಸೃಷ್ಟಿ ತತ್ವದಲ್ಲಿ ಬ್ರಹ್ಮ ಅರ್ಧ ಭಾಗವಾಗಿ ಸೀಳಿಕೊಂಡು ಸ್ತ್ರೀಯಾಗಿ ರೂಪು ತಳೆಯುವುದನ್ನು ಬಹಳ ಮುಖ್ಯವಾದ ಅಂಶವಾಗಿ ಪರಿಗಣಿಸಬೇಕು. ಮಾನವ ಸೃಷ್ಟಿಗೆ ಅಗತ್ಯವಾದ ಸ್ತ್ರೀ ಸೃಷ್ಟಿ ಪ್ರತಿಪಾದನೆಯನ್ನು ಅರ್ಧ ಭಾಗವಾಗಿ ಹೇಳಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

ಸ್ತ್ರೀಯರಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು, ಯೋಗ್ಯ ಸಮಯದಲ್ಲಿ ಕುಲಕ್ರಮಾನುಸಾರವಾಗಿ, ಸ್ವಜಾತಿ ಪರಂಪರೆಯಂತೆ, ಮಂತ್ರಗಳನ್ನು ಉಚ್ಚರಿಸದೇ ಮಾಡಬೇಕು ಎಂದು ಮನು ಎರಡನೇ ಅಧ್ಯಾಯದಲ್ಲಿ ಪ್ರತಿಪಾದಿಸುತ್ತಾನೆ.

"ವೈವಾಹಿಕೋ ವಿಧಿಃ ಸ್ತ್ರೀಣಾಂ ಸಂಸ್ಕಾರೋ ವೈದಿಕಃ ಸ್ಮೃತಃ।
ಪತಿಸೇವಾ ಗುರೌ ವಾಸೋ ಗೃಹಾರ್ಥೋಗ್ನಿ ಪರಿಕ್ರಿಯಾ॥೨.೬೭॥"[೩೩]

ಸ್ತ್ರೀಯರಿಗೆ ವಿಧಿಪೂರ್ವಕವಾದ ವಿವಾಹ ಸಂಸ್ಕಾರವೇ ಮಾಡಬೇಕು. ಈ ವಿವಾಹ ವಿಧಿಯು ಮಂತ್ರೋಕ್ತವಾಗಿ ಮಾಡಲ್ಪಡುತ್ತದೆ. ಸ್ತ್ರೀಯರಿಗೆ ಪತಿ ಸೇವೆಯೇ ಗುರುಕುಲ ವಾಸವಿದ್ದಂತೆ ಗೃಹಕೃತ್ಯವೇ ಅಗ್ನಿ ಕಾರ್ಯವಿದ್ದಂತೆ ಎಂದು ವಿವರಿಸಲಾಗಿದೆ. ಸ್ತ್ರೀಯನ್ನು ನಿರ್ಭಂದಿಸುವ ನಾನಾ ವಿಧಿವಾದ ಸ್ವಭಾವ, ಗುಣಧರ್ಮಗಳನ್ನು ಮನು ಪ್ರಸ್ತಾಪಿಸುತ್ತಾನೆ.

"ಸ್ವಭಾವ ವಷ ದಾರೀಣಾಂ ನರಾಣಾವಿಂಹ ದೂಷಣಂ
ಅತೋರ್ಧಾನ್ನ ಪ್ರಮಾದ್ಯಂತಿ ಪ್ರಮದಾಸು ವಿಪಶ್ಚಿತಃ॥೨.೨೧೩॥"[೩೪]

ಅಂದರೆ ಸ್ತ್ರೀಯರು ಪುರುಷರ ಮನಸ್ಸನ್ನು ಕೆಡಿಸುವವರೇ ಆಗಿದ್ದು ಅದು ಅವರ ಸ್ವಭಾವವಾಗಿದೆ. ಆದ್ದರಿಂದ ತಿಳುವಳಿಕೆಯುಳ್ಳ ಪುರುಷರು ಸ್ತ್ರೀಯರು ವಿಷಯದಲ್ಲಿ ಎಚ್ಚರತಪ್ಪಿ ನಡೆಯುವುದಿಲ್ಲ ಎಂದಿದ್ದಾನೆ.

"ಅವಿದ್ಯಾಂಸಮಲಂ ಲೋಕೇ ವಿದ್ವಾಂಸಮಪಿ ವಾ ಪುನಃ।
ಪ್ರಮದಾ ಹ್ಯುತ್ಪಥಂ ನೇತುಂ ಕಾಮಕ್ರೋಧವಶಾನುಗಂ॥೩.೩೧೪॥"[೩೫]

ಕಾಮಕ್ರೋಧಗಳಿಗೆ ದಶನಾದ ಮನುಷ್ಯನನ್ನು, ಅವನು ಪಂಡಿತನೇ ಇರಲಿ, ಪಾಮರನೇ ಇರಲಿ, ದಾರಿತಪ್ಪಿಸಲು ಸ್ತ್ರೀಯರು ಸಮರ್ಥರಾಗಿರುತ್ತಾರೆ.

"ಮಾತ್ರ ಸ್ವಸ್ತಾ ದುಹಿತ್ರಾ ವಾ ನ ವಿವಿಕ್ತಾ ಸನೋ ಭವೇತು।
ಬಲವಾನಿಂದ್ರಿಯಗ್ರಾಮೋ ವಿದ್ವಾಂಸದುಪಿ ಕರ್ಷತಿ ॥೨.೨೧೫॥"[೩೬]

ತಾಯಿಯೊಡನೆ, ಸಹೋದರಿಯೊಡನೆ, ಮಗಳೊಡನೆ ಸಹ ನಿರ್ಜನ ಪ್ರದೇಶದಲ್ಲಿ ಗಂಡಸು ಒಂಟಿಯಾಗಿರಬಾರದು. ಏಕೆಂದರೆ ಬಲಿಷ್ಠವಾದ ಇಂದ್ರೀಯಗಳ ಸಮೂಹವು ಎಂತಹ ವಿದ್ವಾಂಸನನ್ನೂ ಸೆಳೆದುಕೊಳ್ಳುತ್ತದೆ. ಹಾಗೆಯೇ

"ಕಾಮಂ ತು ಗುರುಸತ್ನೀನಾಂ ಯುವತೀನಾಂ ಯುವಾಭುವೀ
ವಿಧಿನದ್ವಂದನಂ ರುರ್ಯಾತ್ ಆಸಾವಹಮಿತಿ ಬ್ರುವನ ॥೨.೨೧೬॥"[೩೭]

ಗುರುಪತ್ನಿಯು ಪ್ರಾಯದ ತರುಣಿಯಾಗಿದ್ದಾರೆ ತರುಣನಾದ ಶಿಷ್ಯನು ಅವಳಿಗೆ ಪಾದ ಮುಟ್ಟಿ ನಮಸ್ಕಾರ ಮಾಡಬಾರದು, ನೆಲವನ್ನು ಮುಟ್ಟಿ ದೂರದಿಂದಲೇ ತನ್ನ ಹೆಸರು ಹೇಳಿಕೊಂಡು

ನಮಸ್ಕರಿಸಬೇಕು. ಸ್ತ್ರೀ ಅಸ್ಪೃಶ್ಯತೆಯ ಪ್ರತಿಪಾದನೆಯೂ ಇಲ್ಲಿ ಕಾಣಿಸಿಕೊಂಡಿದೆ. ಹಾಗಾಗಿಯೇ ಕೆಲವೆಡೆ ಶೂದ್ರ ವರ್ಗದೊಡನೆ ಸ್ತ್ರೀಯನ್ನು ಸಮೀಕರಿಸಿ ಆಚರಣಾ ಪದ್ಧತಿಗಳನ್ನು ಹೇಳಲಾಗಿದೆ.

"ಸ್ತ್ರೀಯೋ ರತ್ನಾನ್ಯಥೋ ವಿದ್ಯಾ ಧರ್ಮಃ ಶೌಚಂ ಸುಭಾಷಿತಃ।
ವಿವಿಧಾನಿ ಚ ಶಿಲ್ಪಾನಿ ಸಮಾದೇಯಾನಿ ಸರ್ವತಃ ॥೨.೨೪೦॥"[೩೮]

ಸ್ತ್ರೀಯರು, ರತ್ನಗಳು, ವಿದ್ಯೆ, ಧರ್ಮ, ಶೌಚ, ಸುಭಾಷಿತ, ಶಿಲ್ಪಿಗಳು ಇವು ಎಲ್ಲಿದ್ದರೂ ಸಹ ಅವನ್ನು ಪಡೆದುಕೊಳ್ಳಲು ಮುಂದಾಗಬೇಕು ಎಂದು ಮನು ಜೀವಂತ ಸ್ತ್ರೀಯನ್ನು ನಿರ್ಜೀವ ವಸ್ತುಗಳ ಜೊತೆಗೆ ಸೇರಿಸಿದ್ದಾನೆ.

ಅಧ್ಯಾಯ ಮೂರರಲ್ಲಿ ವಿವಾಹ ಪದ್ಧತಿಯನ್ನು ಕುರಿತಂತೆ ವಿವರಿಸಲಾಗಿದೆ. ಪ್ರಸಿದ್ಧವಾದ ಎಂಟು ಬಗೆಯ ವಿವಾಹ ಪದ್ಧತಿಯನ್ನು ಕನ್ಯೆಯರನ್ನು ಆಯ್ಕೆ ಮಾಡುವಾಗ ಅವರ ವರ್ಣ, ಕುಲ, ದೇಹ, ಆಕೃತಿ, ಸ್ವರೂಪ ಇತ್ಯಾದಿಗಳನ್ನು ಹೇಳಲಾಗಿದೆ.

"ನೋದ್ವಹೇತ್ಕಪಿಲಾಂ ಕನ್ಯಾಂ ಸಾಧಿಕಾಂಗೀಂ ನ ರೋಗಿಣೀಂ।
ನಾಲೋಮಿಕಾಂ ನಾತಿಲೋಮಾಂ ನ ವಾಚಾಟಾಂ ನ ಪಿಂಗಲಾಂ॥೩.೮॥"[೩೯]

ಕೆಂಜ ಕೂದಲುಗಳುಳ್ಳ, ಸ್ಥೂಲವಾದ ಗಾತ್ರವುಳ್ಳ, ರೋಗವುಳ್ಳ, ಮೈಮೇಲೆ ಕೂದಲುಗಳೇ ಇರದ, ಅಥವಾ ಮೈತುಂಬ ಅತಿಯಾದ ಕೂದಲುಗಳಿರುವ ವಾಚಾಳಿಯಾದ ಪಿಂಗಲವರ್ಣದ ಹೆಣ್ಣನ್ನು ಮದುವೆಯಾಗಬಾರದು ಎಂದು ವಿವರಿಸಲಾಗಿದೆ.

"ನರ್ಕ್ಷವೃಕ್ಷ ನದೀನಾಮ್ನೀಂ ನಾಂತ್ಯ ಪರ್ವಕನಾಮಿಕಾಂ।
ನ ಪಕ್ಷ್ಯ ಹಿ ಪ್ರೇಷ್ಯನಾಮ್ನೀಂ ನ ಚ ಭೀಷಣನಾಮಿಕಾಂ॥೩.೯॥"[೪೦]

ನಕ್ಷತ್ರಗಳ, ವೃಕ್ಷಗಳ, ನದಿಗಳ, ಕಿರಾತಚರಿತಿಗಳು ವಾಸಿಸುವ ಬೆಟ್ಟಗಳ ಪಕ್ಷಿಗಳ, ಹಾವುಗಳ, ದಸ್ಯುಗಳ, ಹೆಸರುಗಳನ್ನು ಹೊಂದಿದ ಹಾಗೂ ಕ್ರೂರವಾದ ಭೀಷಣ ಹೆಸರುಗಳುಳ್ಳ ಹೆಣ್ಣನ್ನು ಮದುವೆಯಾಗಬಾರದು.

"ಅನ್ಯರಿಗಾಂಗೀಂ ಸೌಮ್ಯನಾಮ್ನೀಂ ಹಂಸ ವಾರಣ ಗಾಮಿನೀಂ।
ತನುಲೋಮಕೇಶದಶನಾಂ ಮೃದ್ದಂಗೀ ಮುದ್ವ ಹೇತ್ಸ್ತ್ರಿಯಂ॥೩.೧೦॥"[೪೧]

ನಿರ್ದೋಷವಾದ ಅವಯವಗಳುಳ್ಳ, ಸುಂದರವಾದ ಹೆಸರುಗಳ, ಹಂಸದಂತೆ, ಗಜದಂತೆ ಗಂಭೀರವಾಗಿ ನಡೆಯುವ ಸುಂದರ ಕೇಶರಾಶಿಯುಳ್ಳ, ಸುಭಗವಾದ ದಂತಪಕ್ತಿಯುಳ್ಳ ಕೋಮಲಾಂಗಿಯನ್ನು ಆಯ್ದು ವಿವಾಹ ಮಾಡಿಕೊಳ್ಳಬೇಕು.

"ಯಸ್ಯಾಸ್ತು ನ ಭವೇದ್ಭ್ರಾತಾ ನ ವಿಜ್ಞಾಯೇತ ವಾ ಪಿತಾ।
ನೋಡಯಚ್ಛೇತ ತಾಂ ಪ್ರಾಬ್ಯಃ ಪುತ್ರಿ ಕಾಧರ್ಮಶಂಕಯಾ॥೩.೧೧॥"[೪೨]

ದ್ವಿಚಂತಿಯವರಿಗೆ ಅಂದರೆ ಬ್ರಾಹ್ಮಣ ಕ್ಷತ್ರೀಯ, ವೈಶ್ಯರು ಮೊದಲ ವಿವಾಹದಲ್ಲಿ ತಮ್ಮ ತಮ್ಮ ಚರಿತೆಯ ಕನ್ಯೆಯನ್ನೇ ಮಾಡಿಕೊಳ್ಳಬೇಕು. ದೇಹ ಸುಖಕ್ಕಾಗಿ ನಂತರ ಮಾಡಿಕೊಳ್ಳುವ ವಿವಾಹದಲ್ಲಿ ಬೇಕಾದ ಜಾತಿಯವಳನ್ನು ಮದುವೆಯಾಗಬಹುದು.

"ಸವರ್ಣಾಗ್ರೇ ದ್ವಿಜಾತೀನಾಂ ಪ್ರಶಸ್ತು ದೂಕರ್ಮಣಿ।
ಕಾಮತಸ್ತು ಪ್ರವೃತ್ತಾನಾಮಿಮಾಃಸ್ಯೂಃ ಕ್ರಮಶೋವರಾಃ ॥೩.೧೨॥"[೪೩]

ಯಾವ ಸ್ತ್ರೀಗೆ ಸಹೋದರನಿಲ್ಲವೋ ಯಾವ ಕನ್ಯೆಗೆ ತಂದೆ ಯಾರೆಂದು ತಿಳಿಯದೋ ಅವಳ ಹುಟ್ಟಿನ ಬಗ್ಗೆ ಸಂಶಯವುಂಟಾಗುವುದೋ ಅಂಥ ಹೆಣ್ಣನ್ನು ಮದುವೆಯಾಗಬಾರದು.

"ಶೂದ್ರೈವ ಭಾರ್ಯಾ ಶೂದ್ರಸ್ಯ ಸಾ ಚ ಸ್ವಾ ಚ ವಿಶಃ ಸ್ಮೃತೇ।
ತೇ ಚ ಸ್ವಾ ಚೈವ ರಾಜ್ಞಶ್ಯ ತಾಶ್ವ ಸ್ವಾ ಚಾಗ್ರ ಜನ್ಮನಃ ॥೩.೧೩॥"[೪೪]

ಶೂದ್ರನಿಗೆ ಶೂದ್ರಳೇ ಹೆಂಡತಿಯಾಗಬೇಕು. ವೈಶ್ಯನಿಗೆ ವೈಶ್ಯ ಜಾತಿಯ ಹಾಗೂ ಶೂದ್ರ ಚರಿತೆಯ ಹೆಣ್ಣಾಗಬಹುದು. ಕ್ಷತ್ರೀಯನಿಗೆ ಕ್ಷತ್ರೀಯ ಜಾತಿಯ, ವೇಶ್ಯ ಜಾತಿಯ ಹಾಗೂ ಶೂದ್ರಳು ಹೆಂಡತಿಯಾಗುಹುದು. ಬ್ರಾಹ್ಮಣನಿಗೆ ಬ್ರಾಹ್ಮಣ, ಕ್ಷತ್ರೀಯ, ವೈಶ್ಯ ಮತ್ತು ಶೂದ್ರ ಸ್ತ್ರೀಯರೂ ಹೆಂಡತಿಯಾಗುಹುದು.

"ನ ಬ್ರಾಹ್ಮಣ ಕ್ಷತ್ರೀಯಯೋರಾಪದ್ಯಡಿ ಹಿ ತಿಷ್ಠತೋಃ।
ಕಸ್ಮಿಂಶ್ಚಿದಡಿ ವೃತ್ತಾಂತೇ ಶೂದ್ರಾ ಭರ್ಯೋಽಡದಿಶ್ಯತೇ॥೩.೧೪॥"[೪೫]

ಎಂಥಹ ಅನಿವಾರ್ಯವಾದ ಸಂದರ್ಭದಲ್ಲಿ ಬ್ರಾಹ್ಮಣ ಹಾಗೂ ಕ್ಷತ್ರೀಯ ಪುರುಷರು ಶೂದ್ರ ಸ್ತ್ರೀಯನ್ನು ಪ್ರಥಮ ಹೆಂಡತಿ ಎಂದು ವಿವಾಹ ಮಾಡಿಕೊಳ್ಳಬಾರದು ಎಂಬ ನಿಯಮ ವಿಧಿಸಲಾಗಿದೆ.

"ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾ ಚಾ ಪತ್ಯ ಸ್ತಥಾಸುರಃ।
ಗಾಂಧರ್ವೋ ರಾಕ್ಷಸಶ್ಚೈವ ಪೈಶಾತಶ್ಚಾಷ್ಟದೋಥಮಃ॥೩.೨೧॥"[೪೬]

ಬ್ರಾಹ್ಮ, ದೈವ, ಆರ್ಷ, ಪ್ರಾಚಾಪತ್ಯ, ಅಸುರ, ಗಾಂದರ್ವ, ರಾಕ್ಷಸ ಹಾಗೂ ಪೈಶಾಚ ಎಂದು ಎಂಟು ಪ್ರಕಾರದ ವಿವಾಹಗಳಿವೆ. ಪೈಶಾಚವು ಅತ್ಯಂತ ಅಧಮ ವಿವಾಹವಾಗಿದೆ. ಈ ಎಲ್ಲಾ ಎಂಟು ವಿವಾಹ ಪದ್ಧತಿಗಳು ಪುರುಷಾಭಿಮುಖವಾಗಿ ವರ್ಣಿಸಲ್ಪಟ್ಟಿದೆಯೇ ಹೊರತು ಸ್ತ್ರೀ ಆಯ್ಕೆಯ ಯಾವುದೇ ಪ್ರಸ್ತಾಪಗಳನ್ನು, ಅವಕಾಶಗಳನ್ನು ಒಳಗೊಂಡಿಲ್ಲ. ಇದು ಮನುವಿನ ಸ್ತ್ರೀ ಮತ್ತು ಪುರುಷರ ನಡುವಿನ ಪಕ್ಷಪಾತವನ್ನು ಅನಾವರಣ ಮಾಡುತ್ತದೆ. ಗಾಂಧರ್ವ ವಿವಾಹ ಪದ್ಧತಿ ಮಾತ್ರ ಪರಸ್ಪರ ಇಚ್ಛಾಪೂರ್ವಕವಾದ ನೆಲೆಯನ್ನು ಹೊಂದಿದೆ. ಈ ಎಲ್ಲಾ ಎಂಟು ಬಗೆಯ ವಿವಾಹ ಪದ್ಧತಿಗಳಲ್ಲಿ 'ಕನ್ಯೆ'ಯರನ್ನು ಹೇಗೆ ಮದುವೆಯಾಗಬೇಕೆಂದು ಹೇಳಲಾಗುತ್ತದೆಯೇ ಹೊರತು 'ವರ' ಹೇಗಿರಬೇಕೆಂಬುದರ ಬಗೆಗೆ ವಿವರಿಸುವುದಿಲ್ಲ. ಅದರಲ್ಲಿಯೂ ರಾಕ್ಷಸ ಮತ್ತು

ಪೈಶಾಚಿಕ ವಿವಾಹದಲ್ಲಿ ಹೆಣ್ಣನ್ನು ಒಂದು ವಸ್ತುವಾಗಿ ನೋಡುವುದು ಮತ್ತು ಶೀಲಭಂಗ ಮಾಡುವುದನ್ನು ಗುರುತಿಸಬಹುದಾಗಿದೆ.

"ಹತ್ವಾಭಿತ್ತ್ವಾ ಚಭಿತ್ತ್ವಾಚ ಕ್ರೋಶಂತೀಂ ರುದತೀಂ ಗೃಹಾತ್।
ಪ್ರಸಹ್ಯ ಕನ್ಯಹರಣಂ ರಾಕ್ಷಸೋ ವಿಧಿರುಚ್ಯತೇ॥೩.೩೩॥"[೪೭]

ವಿವಾಹಕ್ಕೆ ವಿರೋಧಿಸುವ ಕನ್ಯೆಯ ಸಂಬಂಧಿಗಳನ್ನು ಹೊಡೆದು, ಬಡಿದು, ಕಡಿದು, ಬಾಗಿಲೊಡೆದು, ಅಳುತ್ತಿರುವ, ಆಕ್ರೋಶಗೊಳ್ಳುತ್ತಿರುವ ಕನ್ಯೆಯನ್ನು ಬಲತ್ಕಾರದಿಂದ ಮನೆಯಿಂದ ಎತ್ತಿಕೊಂಡು ಹೋಗಿ ಮಾಡಿಕೊಳ್ಳುವ ಮದುವೆಗೆ ರಾಕ್ಷಸ ವಿವಾಹವೆನ್ನುತ್ತಾರೆ.

"ಸುಪ್ತಾಂ ಮತ್ತಾಂ ಪ್ರಮತ್ತಾಂ ವಾ ರಹೋ ಯತ್ರೋಪಗಚ್ಛತಿ
ಸ ಪಾಪಿಷ್ಠೋ ವಿವಾಹಾನಾಂ ಪೈಶಾಚಶ್ಚಾಷ್ಟ ಯೋಧಮಃ॥೩.೩೪॥"[೪೮]

ಕನ್ಯೆಯು ಮಲಗಿರುವಾಗ ಅಥವಾ ಮದ್ಯ ಕುಡಿದು ಪಾನಮತ್ತಳಾಗಿರುವಾಗ ಅಥವಾ ನಿರ್ಜನ ಪ್ರದೇಶದಲ್ಲಿ ಒಂಟಿಯಾಗಿ ಅಲೆದಾಡುವಾಗ ಅವಳ ಶೀಲಭಂಗ ಮಾಡಿ ಮದುವೆಯಾಗುವುದಕ್ಕೆ ಪೈಶಾಚಿಕ ವಿವಾಹವೆನ್ನುವರು.

ವಿವಾಹದಲ್ಲಿ ಕನ್ಯೆಯ ತಂದೆಯು ಸ್ವೀಕರಿಸುವ ಕನ್ಯಾ ಶುಲ್ಕವನ್ನು ನಕಾರಾತ್ಮಕವಾಗಿ ಹೇಳುವ ಮನುವು ಪತಿಯ ಮನೆಯಿಂದ ಸಿಗುವ 'ಸ್ತ್ರೀಧನ'ವನ್ನು ನಿರಾಕರಿಸುತ್ತಾನೆ. ಏಕೆಂದರೆ ಅದರಿಂದ ಕನ್ಯಾ ವಿಕ್ರಯವಾಗುವುದು. ಮಗಳನ್ನು ಮಾರಿದಂತಾಗುವುದರಿಂದ ಕನ್ಯೆಯ ಹೆಸರಿನಲ್ಲಿ ಹಣ ಸ್ವೀಕರಿಸಬಾರದು ಎಂದು ಹೇಳುತ್ತಾನೆ. ಇಂದಿನ ಆಧುನಿಕ ಯುಗದಲ್ಲಿ ವರದಕ್ಷಿಣೆಯು ಅವ್ಯಾಹತವಾಗಿ ಹೆಚ್ಚಾಗಿರುವಾಗ 'ವರದಕ್ಷಿಣೆ'ಯನ್ನು ಮನುವು ಅಂದು ನಿರಾಕರಿಸಿದ್ದರೆ ಒಳ್ಳೆಯದಾಗುತ್ತಿತ್ತು. ಇನ್ನು ಸ್ತ್ರೀಗೌರವ ಬಗ್ಗೆ ಪ್ರಸ್ತಾಪಿಸಿದ ಆತನ ಪ್ರಸಿದ್ಧ ಸೂತ್ರಗಳು ಹೀಗಿವೆ.

"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ।
ಯತ್ರೈ ಕಾಸ್ತುನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಂಃ॥೩.೫೬॥"[೪೯]

ಎಲ್ಲಿ ಸ್ತ್ರೀಯರಿಗೆ ಗೌರವ ಸನ್ಮಾನಗಳು ದೊರೆಯುತ್ತವೋ ಅಲ್ಲಿ ದೇವತೆಗಳು ಪ್ರಸನ್ನರಾಗುತ್ತಾರೆ. ಯಾವ ಮನೆಯಲ್ಲಿ ಸ್ತ್ರೀಯರು ಗೌರವಿಸಲ್ಪಡುವುದಿಲ್ಲವೋ ಅಲ್ಲಿ ಮಾಡುವ ಎಲ್ಲಾ ಯಜ್ಞ ಪೂಜೆಗಳು ನಿಷ್ಫಲವಾಗುತ್ತವೆ.

"ಶೋಚಂತಿ ಚಾಮಯೇಂ ಯತ್ರ ವಿನಶ್ಯತ್ಯಾಕು ತತ್ಕುಲಂ।
ನಶೋಚಂತಿತು ಯತ್ರೈತಾ ವರ್ಧತೇ ತದ್ಧಿಸರ್ವದಾ॥೩.೫೭॥"[೫೦]

ಯಾವ ಕುಲದಲ್ಲಿ ಸ್ತ್ರೀಯರು ದುಃಖಪಡುತ್ತಾರೋ ಆ ವಂಶವು ನಿರ್ವಂಶವಾಗುತ್ತದೆ. ಯಾವ ವಂಶದಲ್ಲಿ ಸ್ತ್ರೀಯರು ಸಂತೋಷದಿಂದಿರುತ್ತಾರೋ ಆ ವಂಶವು ಸರ್ವದಂ ಅಭ್ಯುದಯವನ್ನು ಹೊಂದುತ್ತಾರೆ.

"ಚರಿಮಯೋ ಯಾನಿ ಗೇಹಾನಿ ಶಪಂತ್ಯ ಪ್ರತಿಪೂಜಿತಾಂ।
ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಿಃ॥೩.೫೮॥"[೫೧]

ಗೌರವ, ಮಾನ, ಮರ್ಯಾದೆಗಳನ್ನು ಪಡೆಯದೇ ಯಾವ ಸ್ತ್ರೀಯರು ಬರಿ ನೋವಿನಿಂದ ಶಾಪ ಹಾಕುತ್ತಾರೋ ಆ ಮನೆ ಹಾಗೂ ಮನೆತನಗಳು ದುರ್ವಿದಿಗೆ ಗುರಿಯಾದಂತೆ ಹಾಳಾಗಿ ಹೋಗುತ್ತದೆ.

ಹೀಗೆ ಮನುವು ಸ್ತ್ರೀಯನ್ನು ಅತ್ಯಂತ ಗೌರವದ ನೆಲೆಯಲ್ಲಿ ವಿವರಿಸುವಾಗಲೂ ಗಂಡ ಹೆಂಡತಿಯರ ಪರಸ್ಪರವಾದ ಸಹಬಾಳ್ವೆ ಮತ್ತು ಸಂತೋಷದ ಬದುಕು ಆರೋಗ್ಯಕರವಾಗಿರುತ್ತದೆ ಎಂದು ಹೇಳುವಾಗಲೂ ಸಹ ಪುರುಷನ ವಂಶೋಧ್ಧಾರ ಮತ್ತು ಸಂತಾನೋತ್ಪತ್ತಿಯ ಸಂಗತಿಗಳೇ ಪ್ರಧಾನ ಆಶಯವಾಗಿ ಮಂಡಿಸಿರುವುದನ್ನು ಗ್ರಹಿಸಬಹುದು.

ಮನುಸ್ಮೃತಿಯ ಐದನೆಯ ಅಧ್ಯಾಯದಲ್ಲಿ 'ಸ್ತ್ರೀಯರ ಧರ್ಮ'ವನ್ನು ಕುರಿತಂತೆ ವ್ಯಕ್ತಪಡಿಸಿರುವ ವಿಚಾರಗಳು ಅತ್ಯಂತ ಕಠೋರವಾಗಿವೆ. ಅವುಗಳು ಸ್ತ್ರೀ ಸ್ವಾತಂತ್ರ್ಯಹರಣವನ್ನು ಮಾಡುತ್ತದೆ. ಅವುಗಳನ್ನು ಗುರುತಿಸುವುದಾದರೆ,

"ಬಾಲಯಾ ವಾ ಯುವತ್ಯಾ ವಾ ವೃದ್ಧಯಾ ವಾ ಪಿ ಯೋಷಿತಾ।
ನ ಸ್ವಾತಂತ್ರ್ಯೇಣ ಕರ್ತವ್ಯಂ ಕಿಂಚಿತ್ಕಾರ್ಯಂ ಗೃಹೇಷ್ವತಿ॥೫.೧೪೭॥"[೫೨]

ಬಾಲಕಿಯಿದ್ದಾಗಲೂ, ಯುವತಿಯಾದಾಗಲೂ, ವೃದ್ಧೆಯಾದಾಗಲೂ, ಮನೆಗಳಲ್ಲಿದ್ದಾಗಲೂ ತಾನೇ ಸ್ವತಂತ್ರವಾಗಿ ಸ್ತ್ರೀಯು ಯಾವ ಕಾರ್ಯವನ್ನೂ ಮಾಡಬಾರದು.

"ಬಾಲ್ಯೆ ಪಿತುರ್ವಶೇ ತಿಷ್ಠೇತ್ಪಾಣಿಗ್ರಾಹಸ್ಯ ಯೌವನೇ।
ಪುತ್ರಾಣಾಂ ಭರ್ತರಿ ಪ್ರೇತೇ ನ ಭಜೇತ್ ಸ್ತ್ರೀ ಸ್ವಾತಂತ್ರ ತಾಂ॥೫.೧೪೮॥"[೫೩]

ಬಾಲ್ಯದಲ್ಲಿ ಸ್ತ್ರೀಯು ತಂದೆಯ ವಶದಲ್ಲಿ, ಯೌವ್ವನದಲ್ಲಿ ಗಂಡನ ಅಧೀನದಲ್ಲಿ, ಗಂಡ ಸತ್ತ ನಂತರ ಪುತ್ರರ ಅಧೀನದಲ್ಲಿ ಬಾಳಬೇಕಲ್ಲದೆ ತಾನೇ ಸ್ವಾತಂತ್ರವಾಗಿ ವ್ಯವಹರಿಸಬಾರದು.

"ಪಿತ್ರಾ ಭತಾಂ ಸುತೈರ್ವಾಪಿ ನೇಚ್ಛೇದ್ವಿರಹ ಮಂತ್ಮನಃ।
ಏಷಾಂ ಹಿ ವಿರಹೇಣ ಸ್ತ್ರೀ ಗರ್ಹ್ಯೇ ಕುರ್ಯಾದುಭೇ ಕುಲೇ॥೫.೧೪೯॥"[೫೪]

ತಂದೆ, ಗಂಡ ಹಾಗೂ ಮಕ್ಕಳನ್ನು ಬಿಟ್ಟು ಒಬ್ಬಳೇ ಇರಬಾರದು, ಇವರನ್ನು ಬಿಟ್ಟು ಒಬ್ಬಳೇ ಇದ್ದರೆ ಸ್ತ್ರೀಯು ತಂದೆಯ ಹಾಗೂ ಗಂಡನ ಮನೆಗಳೆರಡಕ್ಕೂ ಕೆಟ್ಟ ಹೆಸರು ತರುತ್ತಾಳೆ.

"ಮಂಗಲಾರ್ಥಂ ಸ್ವಸ್ತ್ಯಯನಂ ಯಜ್ಞಶ್ಚಾಸಾಂ ಪ್ರಜಾಪತೇಃ।
ಪ್ರಯುಜ್ಯತೇ ವಿವಾಹೇಷು ಪ್ರಧಾನಂ ಸ್ವಾಮ್ಯಕಾರಣಂ॥೫.೧೫೨॥"[೫೫]

ಸ್ತ್ರೀಯರಿಗೆ ಮಂಗಲವಾಗಲಿ ಎಂಬ ಉದ್ದೇಶದಿಂದ ವಿವಾಹದಲ್ಲಿ ಸ್ವಸ್ತಿವಾಚವೂ ಪ್ರಜಾಪತಿ ಹೋಮವೂ ವಿಧಿಸಲ್ಪಟ್ಟಿದೆ. ವಿವಾಹದಲ್ಲಿ ಕನ್ಯಾದಾನ ಮಾಡುವುದೆಂದರೆ ಪತಿಗೆ ಅವಳ ಮೇಲೆ ಒಡೆತನವನ್ನು ಮತ್ತು ಅಧಿಕಾರವನ್ನು ನೀಡುವುದಾಗಿದೆ.

"ವಿಶೀಲಃ ಕಾಮವೃತ್ತೋವಾ ಗುಣ್ಶೈರ್ವಾ ಪರಿವರ್ಜಿತಃ।
ಉಪಚರ್ಯಃ ಸ್ತ್ರಿಯಾ ಸುಧ್ವ್ಯಾ ಸತತಃ ದೇವವತ್ಸತಿಃ॥೫.೧೫೪॥"[೫೬]

ಪತಿಯು ಚೆನ್ನಾಗಿರದಿದ್ದರೂ, ನಡತೆಯು ಒಳ್ಳೆಯದಾಗಿರದಿದ್ದರೂ, ಕಾಮಾತುರನಾಗಿ ಅವನು ಅನ್ಯ ಹೆಂಗಸರಲ್ಲಿ ಮನಸಿಟ್ಟರೂ, ದುರ್ಗುಣಿಯಾಗಿದ್ದರೂ ಸಹ ಸಾಧ್ವಿಯಾದ ಹೆಂಡತಿ ತನ್ನ ಪತಿಯನ್ನು ದೇವರೆಂದೇ ಭಾವಿಸಿ ಸೇವೆ ಮಾಡಬೇಕು.

"ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋನ ವ್ಕರಂ ನಾಪುಪೋಷಿತಂ।
ಪತಿಂ ಶುಶ್ರೂಷತೇ ಯೇನ ತೇನ ಸ್ವರ್ಗೇ ಮಹೀಯತೇ॥೫.೧೫೫॥"[೫೭]

ಪತಿಯನ್ನು ಬಿಟ್ಟು ಸ್ತ್ರೀಗೆ ಇನ್ನಾವ ಬೇರೆ ಯಜ್ಞವೇ ಇಲ್ಲ. ಪತಿಸೇವೆಯನ್ನು ಬಿಟ್ಟು ಇನ್ನಾವ ವ್ರತವೂ ಇಲ್ಲ. ಉಪವಾಸವೂ ಇಲ್ಲ, ಪತಿವ್ರತಾ ಭಾವದಿಂದ ಪತಿ ಸೇವೆ ಮಾಡುವುದರಿಂದಲೇ ಸ್ತ್ರೀಯು ಸ್ವರ್ಗಲೋಕದಲ್ಲಿ ಗೌರವಪಡೆಯುತ್ತಾಳೆ.

"ಪಾಣಿಗ್ರಾಹಸ್ಯ ಸಾಧ್ವೀ ಸ್ತ್ರೀ ಜೀವತೋ ವಾಂ ಮೃತಸ್ಯ ವಾ।
ಪತಿಲೋಕಮಧೀಪ್ಯಂತೀ ನಾಚರೇತ್ಕಿಂಚಿದಪ್ರಿಯಂ॥೫.೧೫೬॥"[೫೮]

ಧರ್ಮವಂತೆಯಾದ ಪತಿವ್ರತೆಯು ತನ್ನ ಪತಿಯು ಬದುಕಿರುವಾಗಲು ಮತ್ತು ಮರಣ ಹೊಂದಿದಾಗಲೂ ಸದ್ಗತಿಯನ್ನು ಅಪೇಕ್ಷಿಸುತ್ತ ಅವನ ಮನಸ್ಸಿಗೆ ವಿರುದ್ದವಾದ ಏನನ್ನೂ ಮಾಡುವುದಿಲ್ಲ.

"ಕರಿಮರಿತು ಕ್ಷಪಯೇದ್ದೇಹಂ ಪುಷ್ಪ ಮೂಲಫಲೈಃ ಶುಭೈಃ।
ನ ತು ನಾಮಾಪಿ ಗೃಹ್ಣೀಯಾತ್ವಕೌಪ್ರೇತೇ ಪರಸ್ಯ ಕು॥೫.೧೫೭॥"[೫೯]

ಪತಿಯು ಮೃತನಾದ ಮೇಲೆ ಸಾಧ್ವಿಯಾದ ಸತಿಯು ಹೂವು ಗಡ್ಡೆ ಗೆಣಸು ಹಣ್ಣು ಹಂಪಲುಗಳಿಂದ ದೇಹದ ಅಭಿಲಾಷೆಯನ್ನು ಕಡಿಮೆ ಮಾಡಿಕೊಳ್ಳುವ ರೀತಿಯಲ್ಲಿ ಆಹಾರ ವಿವಾಹಗಳಲ್ಲಿ ವರ್ತಿಸಬೇಕು. ಪುರುಷನ ಹೆಸರನ್ನು ಕೂಡ ನುಡಿಯಬಾರದು.

"ಆಸೀತಾ ಮರಣಾತ್ ಕ್ಷಾಂತರಿ ನಿಯತಾ ಬ್ರಹ್ಮಚಂರಿಣೀ।
ಯೋ ಧರ್ಮ ಏಕಪತ್ನೀನಾಂ ಕಾಂಕ್ಷಂತೀ ತಮನುತ್ತಮಂ॥೫.೧೫೮॥"[೬೦]

ಪತಿವ್ರತೆಯಾದ ಸ್ತ್ರೀಯು ತನ್ನ ಗಂಡನ ಮರಣಾನಂತರ ತಾನು ಸಾಯುವತನಕ ನಿರಂತರ ಬ್ರಹ್ಮಚಾರಿಣಿಯಾಗಿಯೇ ಉಳಿದು, ಪರಪುರುಷ ಸಂಗ ಮಾಡದೇ, ವ್ರತಾಚರಣೆ ಮಾಡುತ್ತ ಧರ್ಮವನ್ನು ಸರಿಪಡಿಸಬೇಕು.

ಆದರೆ ಪತಿಯು ಮರಣಿಸಿದಾಗ ಪತಿಗೆ ಯಾವ ರೀತಿಯ ನಿರ್ಬಂಧ ವಿದಿಸಿದ್ದಾನೆ ಎಂಬುದನ್ನು ನೋಡೋಣ.

"ಭಾರ್ಯಾಯೈ ಪೂರ್ವಮಾರಿಗ್ಯೈ ದತ್ವಾಗ್ನೀನಂತ್ಯಕ ರ್ಮಣಿ।
ಪುನರ್ದಾರಕ್ರಿಯಾಂ ಕೃರ್ಯಾತ್ಪುನರಾಧಾನಮೇವ ಚ॥೫.೧೬೮॥"[೬೧]

ಪತ್ನಿಯು ತನಗಿಂತ ಮೊದಲು ಮೃತಳಾದರೆ ಅವಳ ಅಂತ್ಯಕರ್ಮಗಳಲ್ಲಿ ಅಗ್ನಿಯನ್ನು ಸಮರ್ಪಿಸಿದ ನಂತರ ಯೋಗ್ಯ ಕಾಲದಲ್ಲಿ ಅಂದರೆ ಪುತ್ರೇಚ್ಛೆಯಿದ್ದಲ್ಲಿ ಯೌವ್ವನವಿದ್ದಲ್ಲಿ ಪುನರ್ವಿವಾಹ ಮಾಡಿಕೊಳ್ಳಬಹುದು.

ಅಧ್ಯಾಯ ಏಳರಲ್ಲಿ ರಾಜಧರ್ಮವನ್ನು ಕುರಿತು ಹೇಳಲಾಗಿದೆ. ಇಲ್ಲಿ ಯಾರನ್ನು ನಂಬಬೇಕು ಮತ್ತು ಯಾರನ್ನು ನಂಬಬಾರದು ಎಂದು ಹೇಳಲಾಗಿದೆ.

"ಜಡಮುಂಕಾಂಧಬಧಿರಾದ್ ಸ್ತ್ರೀರ್ಯಗ್ಯೋನಾನ್ ವಯೋತಿಗಾನ್।
ಸ್ತ್ರೀಮ್ಲೇಚ್ಛ ವಯಾಧಿತವ್ಯಂಗಾನ್ ಮಂತ್ರ ಕಾಲೇ ಪಸಾರಿಯೇತ್॥೭.೧೪೯॥"[೬೨]

ಜಡ ಬುದ್ಧಿಯುಳ್ಳವರನ್ನು, ಮೂಕರನ್ನು, ಕುರುಡರನ್ನು, ಕಿವುಡರನ್ನು, ಗಿಳಿ ಮುಂತಾದ ಪಕ್ಷಿಗಳನ್ನು, ಮುದುಕರನ್ನು, ಸ್ತ್ರೀಯರನ್ನು, ಮ್ಲೇಚ್ಛರನ್ನು, ರೋಗಿಗಳನ್ನು ಅಂಗವಿಕಲರನ್ನು ಗುಪ್ತ ಸಮಾಲೋಚನೆಯ ಸಮಯದಲ್ಲಿ ಹೊರಗಿರಿಸಬೇಕು.

"ಬಿಂದಂತ್ಯವಮತಾ ಮಂತ್ರರಿ ತೈರ್ಯಗ್ಯೋನಾಸ್ತಥೈವ ಚ।
ಸ್ತ್ರೀಯಶ್ಚೈವ ವಿಶೇಷೇಣ ತಸ್ಮಾತ್ತತ್ರಪತೋ ಭವೇತ್॥೭.೧೫೦॥"[೬೩]

ದೈವವಂಚಿತರಾದ ಈ ಮೂಕರು ಇತ್ಯಾದಿಗಳೆಲ್ಲ ತಮಗೆ ಅವಮಾನವಾದ ಸಂದರ್ಭದಲ್ಲಿ ರಹಸ್ಯವನ್ನು ಬಯಲು ಮಾಡಿ ಬಿಡುತ್ತಾರೆ. ಅದರಲ್ಲಿಯೂ ಸ್ತ್ರೀಯರಂತೂ ಗುಟ್ಟನ್ನು ಕಾಪಾಡಲಾರರು, ಆದ್ದರಿಂದ ಜಾಗೃತ ವಹಿಸಬೇಕು.

ಅಧ್ಯಾಯ ಎಂಟರಲ್ಲಿ ನ್ಯಾಯಾಂಗದ ಕುರಿತು ವಿವರಿಸಲಾಗಿದೆ. ಸಾಕ್ಷಿ ಹೇಳುವ ಸಂದರ್ಭದಲ್ಲಿ ವಿಶ್ವಾಸಾರ್ಹತೆಯ ಕುರಿತು ಹೇಳುವಾಗ...

"ಏಕೋಲುಬ್ಧಸ್ತು ಸಾಕ್ಷೀ ಸ್ಯಾದ್ವಹ್ವ್ಯಃ ಶುಚ್ಯೋಪಿನ ಸ್ತ್ರೀಯಃ।
ಸ್ತ್ರೀಬುದ್ಧೇರಸ್ಥಿರತ್ವಾತ್ತು ದೋಷೈಶ್ಚಾನ್ಯೇಪಿಯೇ ವೃತ್ತಾಃ॥೮.೭೭॥"[೬೪]

ದುರಾಶೆಯಿಂದ ಪುರುಷನು ಒಬ್ಬನೇ ಸಾಕ್ಷಿಯಾದರೂ ಸಾಕು ಆಗಬಹುದು. ಆದರೆ ಶುದ್ಧಾಚರಣೆಯುಳ್ಳವರಾದರೂ ಸ್ತ್ರೀಯರು ಸ್ವಭಾವತ್ಯ ಚಂಚಲೆಯರಾದ್ದರಿಂದ ಅವರು ನುಡಿಯುವ ಸಾಕ್ಷಿಯು ವಿಶ್ವಾಸಾರ್ಹವಲ್ಲ ಎಂದು ಹೇಳಲಾಗಿದೆ.

ಇನ್ನು ಅಧ್ಯಾಯ ಒಂಬತ್ತರಲ್ಲಿ ಸ್ತ್ರೀ–ಪುರುಷರ ಸಂಬಂಧವನ್ನು ಹೇಳುವಾಗ ಪುರುಷನಾದವನು ಸ್ತ್ರೀಯನ್ನು ಹೇಗೆ ತನ್ನ ಅಂಕೆಯಲ್ಲಿ ಇಟ್ಟುಕೊಳ್ಳಬೇಕೆಂಬ ವಿಚಾರವಾಗಿ ತನ್ನ ಕಠೋರವಾದ ಉಪದೇಶಗಳನ್ನು ಸೃಷ್ಟಿಸಿದ್ದಾನೆ.

"ಅಸ್ವತಂತ್ರಾಃ ಸ್ತ್ರಿಯಃ ಕಾರ್ಯಾಃ ಪುರುಷೈಃ ಸ್ವೈರ್ದಿದಾನಿಶಂ।
ವಿಷಯೇಷು ಚ ಸಬ್ಬಂತ್ಯಃ ಸಂಸ್ಥಾಪ್ಯಾ ಆತ್ಮನೋ ದಶೇ॥೯.೨.॥"[೬೫]

ಹಗಲಿರುಳು ಪತಿ, ಸಾಪಿತ, ಸುಕ, ಮೊದಲಾದ ಪುರುಷರು ಹೆಣ್ಣುಮಕ್ಕಳನ್ನು ಅಧೀನದಲ್ಲಿಟ್ಟುಕೊಳ್ಳಬೇಕು. ಸಾಮಾನ್ಯವಾಗಿ ಸುಖ–ಭೋಗದ ಅಭಿಲಾಷೆಗಳಲ್ಲಿ ಪ್ರವರ್ತಿಸುವ ಸ್ತ್ರೀಯರನ್ನು ತಮ್ಮ ಅಂಕೆಯಲ್ಲಿ ಇರಿಸಿಕೊಳ್ಳಬೇಕು.

"ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ।
ರಕ್ಷಂತಿ ಸ್ಥಾವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ॥೯.೩॥"[೬೬]

ಬಾಲ್ಯದಲ್ಲಿ ಸ್ತ್ರೀಯ ತಂದೆಯ ವಶದಲ್ಲಿ, ಯೌವನದಲ್ಲಿ ಗಂಡನ ವಶದಲ್ಲಿ, ಗಂಡ ಸತ್ತ ನಂತರ ಪುತ್ರನ ಅಧೀನದಲ್ಲಿ ಬಾಳಬೇಕಲ್ಲದೇ ತಾನೇ ಸ್ವತಂತ್ರವಾಗಿ ವ್ಯವಹರಿಸಬಾರದು. ಹಾಗೆ ಮಹಿಳೆ ಸ್ವಾತಂತ್ರಕ್ಕೆ ಅರ್ಹಳಲ್ಲ ಎಂದು ಮನು ಪ್ರತಿಪಾದಿಸುತ್ತಾನೆ. ಅದಕ್ಕೆ ಅವನು ಕೊಡುವ ಕಾರಣ ಒಂಟಿ ಮಹಿಳೆಯರನ್ನು ಪುರುಷರು ಬಲಾತ್ಕರಿಸಿ ಕೆಡಿಸುತ್ತಾರೆ ಎಂದಲ್ಲ, ಬದಲಾಗಿ ಮಹಿಳೆಯರನ್ನು ನಂಬುವುದಕ್ಕೆ ಆಗುವುದಿಲ್ಲ. ಅವರು ಕಾಮಾಸಕ್ತರಾಗಿ ತಾವೇ ಯಾರೊಂದಿಗಾದರೂ ಭೋಗಕ್ಕೆ ಎಳಸುತ್ತಾರೆ ಎಂದು.

"ಯಾದೃಶಂ ಭಜತೇ ಹಿ ಸ್ತ್ರೀ ಸುತಂ ಸೂತೇ ತಥಾವಿಧಂ।
ತಸ್ಮಾತ್ಪ್ರ ಜಾವಿಶುದ್ಧ್ಯರ್ಥಂ ಸ್ತ್ರಿಯಂ ರಕ್ಷೇತ್ಪ್ರಯತ್ನತಃ॥೯.೯॥"[೬೭]

ಯಾವ ತರಹದ ಪುರುಷನನ್ನು ಮನಸಾರೆ ವರಿಸಿ ಸ್ತ್ರೀಯು ಸೇವಿಸುವಳೋ ಅದೇ ತರಹದ ಪುತ್ರನನ್ನು ಹಡೆಯುತ್ತಾಳೆ. ಆದ್ದರಿಂದ ಶುದ್ಧವಾದ ಸಂತಾನ ಉಂಟಾಗಲಿ ಎಂಬ ಅಪೇಕ್ಷೆಯಿಂದ ಸ್ತ್ರೀಯ ಶೀಲವನ್ನು ಪ್ರಯತ್ನ ಪಟ್ಟು ಕಾಪಾಡಿಕೊಳ್ಳಬೇಕು.

"ನೈತಾ ರೂಪಂ ಪರೀಕ್ಷಂತೇ ನಾಸಾಂ ವಯಸಿ ಸಂಸ್ಥಿತಿಃ।
ಸುರೂಪ ವಾ ವಿರೂಪಂ ವಾ ಪುಮಾನಿತ್ಯೇವ ಭುಂಜತೇ॥೯.೧೪॥"[೬೮]

ಸ್ತ್ರೀಯರು ಪುರುಷರ ರೂಪ ಹಾಗೂ ವಯಸ್ಸುಗಳನ್ನು ಕುರಿತು ಹೆಚ್ಚು ವಿಚಾರಿಸಲು ಹೋಗುವುದಿಲ್ಲ. ಕುರೂಪಿಯಾಗಿರಲಿ, ಸುರೂಪಿಯಾಗಿರಲಿ ಪುರುಷ ಸಂಗವನ್ನು ಬಯಸುವವರು, ಪುರುಷ ಹೇಗೆ ಇರಲಿ ಭೋಗಿಸುವವರು ಎಂದು ಹೇಳುತ್ತಾ, ನಿಸರ್ಗ ಸಹಜವಾಗಿ ಇರುವ ಸ್ತ್ರೀಯರ ಚಂಚಲ ಸ್ವಭಾವವನ್ನು ಪುರುಷ ಅರ್ಥ ಮಾಡಿಕೊಂಡು ಅವಳ ರಕ್ಷಣೆ ವಿಶೇಷವಾಗಿ ಪ್ರಯತ್ನಿಸಬೇಕು.

“ಶಯ್ಯಾ ಸನಮಲಂಕಾರಂ ಕಾಮಂ ಕ್ರೋಧಮನಾರ್ಜದಂ।

ದ್ರೋಹಭಾವಂ ಕುಚರ್ಯಾಂ ಚ ಸ್ತ್ರೀಭ್ಯೋ ಮನುರಕಲ್ಪಿಯತ್॥೯.೧೭॥”[೧೯]

ಶಯ್ಯೆ, ಆಸನ, ಅಲಂಕಾರ ಇವುಗಳ ಮೋಹ, ಕಾಮ, ಕ್ರೋಧ, ಅಪ್ರಾಮಾಣಿಕತೆ, ಪತಿದ್ರೋಹ ಮತ್ತು ದುರ್ನಡತೆ ಇವು ಸಾಮಾನ್ಯವಾಗಿ ಸ್ತ್ರೀಯರಲ್ಲಿರುವ ಸ್ವಾಭಾವಿಕ ಗುಣಗಳೆಂದು ಮನುವು ಹೇಳುತ್ತಾನೆ.

“ನಾಸ್ತಿ ಸ್ತ್ರೀಣಾಂ ಕ್ರಿಯಾ ಮಂತ್ರೈರಿತಿ ಧರ್ಮೇ ವ್ಯವಸ್ಥಿತಿಃ।

ನಿರಿಂದ್ರಿಯಾ ಹ್ಯಮಂತ್ರಾಶ್ಚ ಸ್ತ್ರೀಯೋನೃತಮಿತಿ ಸ್ಥಿತಿಃ॥೯.೧೮॥”[೨೦]

ಸ್ತ್ರೀಯರಿಗೆ ಮಂತ್ರಪೂರ್ವಕವಾದ ಧರ್ಮಸಂಸ್ಕಾರಗಳಿಲ್ಲ ಎಂದು ಶಾಸ್ತ್ರವು ಹೇಳುತ್ತದೆ. ಇಂದ್ರಿಯಗಳನ್ನು ನಿಗ್ರಹಿಸುವ ಮಂತ್ರ ಸಾಧನಗಳು ಸ್ತ್ರೀಯರಿಗೆ ಹೇಳಲ್ಪಟ್ಟಿಲ್ಲವಾದ್ದರಿಂದ ಅವರು ಅಶುದ್ಧರಾಗಿಯೇ ಇರುತ್ತಾರೆ ಎಂದು ಧರ್ಮದ ವಿಚಾರವಾಗಿದೆ ಎಂದು ಮನು ಹೇಳುತ್ತಾನೆ.

“ತಥಾ ಚ ಶ್ರುತಯೋ ಬಹ್ವ್ಯೋ ನಿಗೀತಾ ನಿಗಮೇಷ್ವಪಿ।

ಸ್ವಾಲಕ್ಷಣ್ಯ ಪರೀಕ್ಷಾರ್ಥಂ ತಾಸಾಂ ಶೃಣುತ ನಿಷ್ಕೃತೀಃ॥೯.೧೯॥”[೨೧]

ಸ್ತ್ರೀಯರು ಸಾಮಾನ್ಯವಾಗಿ ಚಪಲ ಚಿತ್ತವುಳ್ಳವರು, ವ್ಯಭಿಚಾರ ಮನಸ್ಕರು ಎಂಬುದರ ಬಗ್ಗೆ ವೇದಗಳಲ್ಲಿಯೆ ಅನೇಕ ಪ್ರಮಾಣಗಳಿವೆ.

“ಪ್ರಜನಾರ್ಥಂ ಮಹಾಭಾಸಾಃ ಪೂಜಾರ್ಹಾ ಗೃಹದೀಪ್ತಯಃ।

ಸ್ತ್ರೀಯಃ ಶ್ರೀಯಶ್ಚ ಗೇಹೇಷಂ ನ ವಿಶೇಷೋಸ್ತಿ ಕಶ್ಚನ॥೯.೨೬॥”[೨೨]

ಮಹಾ ಭಾಗ್ಯವಂತೆಯರಾದ, ಮನೆಯ ದೀಪಗಳಾದ, ಪೂಜಾರ್ಹರಾದ ಈ ಸ್ತ್ರೀಯರು ಸಂತಾನವನ್ನು ಉತ್ಪಾದಿಸಲಿಕ್ಕೆಂದೇ ಇದ್ದಾರೆ. ಮನೆಯನ್ನು ತುಂಬುವ ಐಶ್ವರ್ಯದಂತೆ ಮನೆಯನ್ನು ತುಂಬುತ್ತಾರೆ. ಸ್ತ್ರೀ ಹಾಗೂ ಐಶ್ವರ್ಯಗಳಲ್ಲಿ ಭೇದವೇ ಇಲ್ಲ ಎಂದು ಮನು ಪ್ರತಿಪಾದಿಸುತ್ತಾನೆ. ಜೊತೆಗೆ ಪ್ರತ್ರೋತ್ಪತ್ತಿ, ಧರ್ಮಾಚರಣೆ, ಪತಿ–ಸೇವೆ, ರತಿ–ಸುಖ, ಸಂತಾನವನ್ನು ಹಡೆದು ಪಿತೃಗಳಿಗೆ ಸದ್ಗತಿ ನೀಡುವುದು ಮತ್ತು ಆತ್ಮೋದ್ಧಾರ ಮಾಡಿಕೊಳ್ಳುವುದು ಇವು ಸ್ತ್ರೀಯರ ಸಾಧನಗಳೆಂದು ಮನು ಹೇಳುತ್ತಾನೆ.

“ಕ್ಷೇತ್ರ ಭೂತಾ ಸ್ಮೃತಾ ನಾರೀ ಬೀಜಭೂತಃ ಸ್ಮೃತಃ ಪ್ರಮಾನ್।

ಕ್ಷೇತ್ರ ಬೀಜಸಮಾಯೋಗಾತ್ಯಂಭವಃ ಸರ್ವದೇಹಿನಾಂ॥೯.೩೩॥”[೨೩]

ಸ್ತ್ರೀಯು ಕ್ಷೇತ್ರವೆಂದು ಕರೆಯಿಸಿಕೊಳ್ಳುತ್ತಾಳೆ. ಪುರುಷನು ಬೀಜ ಬಿತ್ತುವವನು ಎಂದು ಹೇಳಿಸಿಕೊಳ್ಳುತ್ತಾನೆ. ಬೀಜ ಹಾಗೂ ಕ್ಷೇತ್ರಗಳ ಸಂಬಂಧದಿಂದಲೇ ಸರ್ವ ಪ್ರಾಣಿಗಳ ಜನನವಾಗುತ್ತದೆ.

“ಬೀಜಸ್ಯ ಚೈವ ಯೋನ್ಯಾಶ್ಚ ಬೀಜಮುತ್ಕೃಷ್ಟ ಮುಚ್ಯತೇ।
ಸರ್ವಭೂತ ಪ್ರಸೂತಿರ್ಹಿ ಬೀಜಲಕ್ಷಣಲಕ್ಷಿತಾ॥೯.೩೪॥”[೭೪]

ಬೀಜದ ಹಾಗೂ ಕ್ಷೇತ್ರದ ತುಲನೆಯಲ್ಲಿ ಬೀಜಕ್ಕೇನೇ ಹೆಚ್ಚಿನ ಮಹತ್ವವಿದೆ. ಏಕೆಂದರೆ ಸರ್ವಪ್ರಾಣಿಗಳ ಉತ್ಪತ್ತಿಯಲ್ಲಿ ಆ ಬೀಜದ ಗುಣಲಕ್ಷಣಗಳೇ ಪ್ರಧಾನ ಪಾತ್ರ ವಹಿಸುತ್ತದೆ. ಎಂದು ಈ ಶ್ಲೋಕ ಹೇಳುತ್ತದೆ. ಆದರೆ ಕ್ಷೇತ್ರವಿಲ್ಲದೆ ಬೀಜವಿದ್ದರೆಷ್ಟು ಎಂಬ ಅರಿವು ಇರದಿರುವುದು ವಿಪರ್ಯಾಸ. ಈ ಬೀಜ ಪರಿಕಲ್ಪನೆಯ ಮೌಲ್ಯದಿಂದ ಪುರುಷನೇ ಶ್ರೇಷ್ಠ, ಮಹಿಳೆ ಅಧೀನಳು ಎಂಬ ಕಲ್ಪನೆಯಿಂದಾಗಿ ಪುರುಷಾಧಿಕಾರವನ್ನು ಸ್ಥಾಪಿಸಲು ಸಾಧ್ಯವಾಗಿದೆ.

ಸಂತಾನ ಪ್ರಾಪ್ತಿಗಾಗಿ ಅದರಲ್ಲೂ ಒಬ್ಬ ಪುತ್ರನ ಹುಟ್ಟಿಗಾಗಿ ನಿಯೋಗ ಪದ್ಧತಿಯಂತೆ ಒಬ್ಬ ‘ವಿಧವೆ’ಯಲ್ಲಿ ನಿರ್ದಿಷ್ಟ ಕ್ರಮಗಳಂತೆ ಕೂಡುವುದನ್ನು ಮನು ಒಪ್ಪುತ್ತಾನೆ. ಆದರೆ ‘ವಿಧವಾ ವಿವಾಹ’ವನ್ನು ನಿಷೇಧಿಸುತ್ತಾನೆ. ಅದಕ್ಕೆ ಸಂಬಂಧಿಸಿದಂತೆ ಮನುಸ್ಮೃತಿಯಲ್ಲಿನ ಶ್ಲೋಕಗಳನ್ನು ನೋಡುವುದಾದರೆ

“ವಿಧವಾಯಾಂ ನಿಯುಕ್ತಸ್ತು ಘೃತಂಕ್ತೋ ವಾಗ್ಯತೋ ನಿಶಿ।
ಏಕ ಮುತ್ಪಾದಯೇತ್ಪುತ್ರಂ ನ ದ್ವಿತೀಯಂ ಕಥಂಚನ॥೯.೬೦॥”[೭೫]

ಈ ಶ್ಲೋಕವು ವಿಧವೆಯಲ್ಲಿ ಸಂತಾನಕ್ಕಾಗಿ ನಿಯೋಗ ಮಾಡುವವನು, ಮೈಗೆ ತುಪ್ಪ ಸವರಿಕೊಂಡು ಮಾತಾಡದೇ, ಮೌನದಿಂದಲೇ ಸಂಭೋಗ ಮಾಡಿ ಕೇವಲ ಒಬ್ಬ ಪುತ್ರನನ್ನು ಮಾತ್ರ ಹುಟ್ಟಿಸಬೇಕು ಎಂದು ಹೇಳುತ್ತದೆ.

“ವಿಧವಾಯಾಂ ನಿಯೋಗಾರ್ಥೇ ನಿವೃತ್ತೇ ತು ಯಥಾವಿದಿ।
ಗುರುವಚ್ಚ ಸ್ನುಪರಿವಚ್ಚ ವರ್ತೇಯಾತಾಂ ಪರಸ್ಪರಂ॥೯.೬೨॥”[೭೬]

ಹೀಗೆ ವಿಧವೆಯಲ್ಲಿ ನಿಯೋಗ ವಿಧಾನದಿಂದ ಗರ್ಭಧಾರಣೆ ಮಾಡಿಸಿದ ಮೇಲೆ ಅಣ್ಣನು ತಮ್ಮನ ಹೆಂಡತಿಯನ್ನು ಸೊಸೆಯಂತೆಯೂ, ತಮ್ಮನು ಅಣ್ಣನ ಹೆಂಡತಿಯನ್ನು ಗುರುಪತ್ನಿಯಂತೆಯೂ ಕಾಣಬೇಕು ಎಂದು ಮನು ಹೇಳುತ್ತಾನೆ.

“ಪ್ರೋಷಿತೋ ಧರ್ಮಕಾರ್ಯಾರ್ಥಂ ಪ್ರತೀಕ್ಷೋಷ್ಟೌ ನರಃ ಸಮಾಃ।
ವಿದ್ಯಾರ್ಥಂ ಫಟ್ ಯಶೋರ್ಥಂ ವಾ ಕಾಮಾರ್ಥಂ ತ್ರೀಂಸ್ತು ವತ್ಸರಂನ್॥೯.೭೬॥”[೭೭]

ಧರ್ಮ ಕಾರ್ಯಕ್ಕೆಂದು ಪತಿಯು ದೇಶಾಂತರ ಹೋಗಿದ್ದರೆ ಎಂಟು ವರ್ಷಗಳ ತನಕ ಅವನ ಬರವನ್ನು ನಿರೀಕ್ಷಿಸಬೇಕು. ವಿದ್ಯೆ ಅಥವಾ ಕೀರ್ತಿಯ ಸಂಪಾದನೆಗೆ ಹೋಗಿದ್ದರೆ ಆರು ವರ್ಷ ಮರಳಿಬರುವ ದಾರಿ ಕಾಯಬೇಕು. ಅನ್ಯ ಸ್ತ್ರೀಯ ಜೊತೆಗೂಡಲು ಹೋಗಿದ್ದರೆ ಮೂರು ವರ್ಷಗಳ ತನಕ ಕಾಯಬೇಕು ಎಂದು ಈ ಶ್ಲೋಕ ಹೇಳುತ್ತದೆ. ಆದರೆ ಪತಿಗೆ ಯಾವ ರೀತಿಯಾಗಿ ಹೇಳುತ್ತದೆ ಎಂದು ನೋಡೋಣ.

"ಸಂವತ್ಸರಂ ಪ್ರತೀಕ್ಷೇತ ದ್ವಿಷಂತೇಂ ಯೋಷಿತಂ ಪತಿಃ।

ಊರ್ಧ್ವಂ ಸಂವತ್ಸರಾತ್ತ್ವೇದಾಂ ದಾಯಂ ಹೃತ್ವಾನ ಸಂವಸೇತ್॥೯.೭೭॥"[೭೮]

ತನ್ನಲ್ಲಿ ಜಗಳವಾಡಿಕೊಂಡು ದ್ವೇಷ ಸಾಧಿಸಲು ತೆರಳಿದ ಪತ್ನಿಗಾಗಿ ಗಂಡನು ಒಂದು ವರ್ಷದ ತನಕ ಹಾದಿ ಕಾಯಬೇಕು. ಒಂದು ವರ್ಷದ ನಂತರವೂ ಅವಳು ಹಗೆ ಸಾಧಿಸಿದರೆ, ತಾನು ಕೊಟ್ಟ ವಸ್ತು ಒಡವೆಗಳನ್ನು ಕಸಿದುಕೊಂಡು ಆಕೆಯನ್ನು ಬಿಟ್ಟು ಬಿಡಬೇಕು ಎಂದಿದೆ.

"ಉನ್ಮತ್ತಂ ಪತಿತಂ ಕ್ಲೀಬಮಬೀಜಂ ಪರಿಪರೋಗಿಣಂ।

ನ ತ್ಯಾಗೋಸ್ತಿ ದ್ವಿಪಂತ್ಯಾಶ್ಚನ ಚ ದಾಯಾಪವರ್ತನಂ॥೯.೭೯॥"[೭೯]

ಹುಚ್ಚನನ್ನು, ಪತಿತನನ್ನು, ಪಂಥನನ್ನು, ಬೀಜಹೀನನ್ನು, ಕುಷ್ಠ ಮುಂತಾದ ಪಾಪ ರೋಗವುಳ್ಳವನನ್ನು ಅವನ ಪತ್ನಿಯು ಉಪಚರಿಸದೇ ಇದ್ದರೂ ಅವಳನ್ನು ತೊರೆಯಬಾರದು. ಅವಳಿಗಿತ್ತ ವಸ್ತು ಒಡವೆಗಳನ್ನು ಕಸಿದುಕೊಳ್ಳಬಾರದು ಎಂದು ಹೇಳುತ್ತಾ.

"ಮಧ್ಯಪಾ ಸಾಧುವೃತ್ತಾ ಚ ಪ್ರತಿಕೂಲಾ ಚ ಯಾ ಭವೇತ್।

ವ್ಯಾಧಿತಾ ವಾಧಿವೇತ್ತವ್ಯಾ ಹಿಂಸ್ರಾರ್ಥಘ್ನೀ ಚ ಸರ್ವದಾ॥೯.೮೦॥"[೮೦]

ಹೆಂಡತಿಯು ಕುಡುಕಿಯಾದರೆ, ದುರಾಚಾರಿಣಿಯಾದರೆ, ಪತಿಗೆ ಪ್ರತಿಕೂಲಾಚರಣೆ ಉಳ್ಳವಳಾದರೆ, ರೋಗ ಪೀಡಿತಳಾದರೆ, ಹಿಂಸಕ ಸ್ವಭಾವದವಳಾದರೆ, ಹಣ ಹಾಳು ಮಾಡುವವಳಾದರೆ ಅವಳನ್ನು ತೊರೆದು ಮತ್ತೊಬ್ಬಳನ್ನು ಮದುವೆಯಾಗಬಹುದು ಎಂದು ಗಂಡಿಗೆ ಅವಕಾಶವನ್ನು ಮನುಸ್ಮೃತಿ ನೀಡುತ್ತದೆ. ಹಾಗೆಯೇ ಆಸ್ತಿಯ ವಿಚಾರವಾಗಿ ಹೇಳುವಾಗಲೂ

"ಪುತ್ರಿಕಾಯಾಂ ಕೃತಾಯಾಂ ತು ಯದಿ ಪುತ್ರೋನುಜಾಯತೇ।

ಸಮಸ್ತತ್ರ ವಿಭಾಘಃ ಸ್ಯಜ್ಯೇಷ್ಠತಾ ನಾಸ್ತಿ ಹಿ ಸ್ತ್ರೀಯಃ॥೯.೧೩೪॥"[೮೧]

ಮಗಳನ್ನೇ ಪುತ್ರಿಕಾ ಧರ್ಮದಿಂದ ಸ್ವೀಕರಿಸಿ ಮಗನಂತೆ ಭಾವಿಸಿದ ಮೇಲೆ ತನಗೆ ಮಗನಾದ ನಂತರ ಅವರಿಬ್ಬರಿಗೂ ಆಸ್ತಿಯಲ್ಲಿ ಸಮಪಾಲು ಸಲ್ಲಬೇಕು. ಸ್ತ್ರೀಗೆ ಜ್ಯೇಷ್ಠತ್ವವೂ ಇಲ್ಲ, ಉದ್ಧಾರವೂ ಇಲ್ಲ ಎಂದು ಹೇಳುತ್ತಾನೆ. ಆಸ್ತಿಯ ಉತ್ತರಾಧಿಕಾರದ ಹಕ್ಕನ್ನು ಹೇಳುವಾಗಲು ದಾಯಭಾಗ ಅಂದರೆ ಸಹೋದರರಲ್ಲಿ ಮಾತ್ರ ಆಸ್ತಿ ಹಂಚಿಕೆಯನ್ನು ಕುರಿತು ಮಾತನಾಡುತ್ತಾನೆ. ಕನ್ಯೆಯರಿದ್ದಲ್ಲಿ ಆಸ್ತಿಯ ಭಾಗದಿಂದ ನಾಲ್ಕನೆಯ ಒಂದಂಶದಲ್ಲಿ ಪಾಲುಕೊಡಬೇಕೆಂದು ಪ್ರಸ್ತಾಪಿಸಿದ್ದಾನೆ.

ಮನುವಿನ ದೃಷ್ಟಿಯಲ್ಲಿ ಮಹಿಳೆ ಶಿಕ್ಷಣವನ್ನು ಕಲಿಯುವುದು ಬೇಡವಾಗಿದೆ. ಗುಲಾಮಳಾಗಿಯೇ ಅವಳು ಸಮಾಜದಲ್ಲಿ ಮುಂದುವರಿಯಬೇಕು. ಅವಳು ಅಕ್ಷರಲೋಕ ಪ್ರವೇಶ ಮಾಡಿದರೆ ಅವಳು ಜಗತ್ತಿನಲ್ಲಿ ನಡೆಯುವ ಸಮಾಚಾರ ತಿಳಿದುಕೊಂಡು ಮುಂದುವರೆದರೆ ಪುರುಷನ ತೋಳತೆಕ್ಕೆಯಿಂದ ದೂರ ಹೋಗಿ ಸ್ವಚ್ಛಂದವಾಗಿ ಹಾರಾಡುವುದು ಕಲಿತುಕೊಂಡು, ಸ್ವಂತ ವಿಚಾರ ಮಾಡುವುದು ಕಲಿತು ತನ್ನ ಸ್ವಂತ ವ್ಯಕ್ತಿತ್ವವನ್ನು ರೂಪಿಸಿಕೊಂಡು ಸಬಲಳಾಗುವುದು ಮನುವಿಗೆ ಬೇಡವಾಗಿತ್ತು.

ಸ್ತ್ರೀಯು ಸಂತಾನವನ್ನು ಉತ್ಪಾದಿಸಲೆಂದು ಜನಿಸಿರುವುದು ಮತ್ತು ಅದರ ಜೊತೆಗೆ ಸಂಸಾರದ ನಿರ್ವಹಣೆ, ಪತಿಸೇವೆ ಮೊದಲಾದವು ಅವಳ ಕರ್ತವ್ಯಗಳೆಂದು ಪ್ರತಿಪಾದಿಸಿದ್ದಾನೆ. ಸಂತಾನ ಪ್ರಾಪ್ತಿಗಾಗಿ ಅದರಲ್ಲೂ ಒಬ್ಬ ಪುತ್ರನ ಹುಟ್ಟಿಗಾಗಿ ನಿಯೋಗ ಪದ್ಧತಿಯಂತೆ 'ವಿಧವೆ'ಯಲ್ಲಿ ಕೂಡುವುದನ್ನು ಮನು ಅಂಗೀಕರಿಸುತ್ತಾನೆ. ಆದರೆ ಆ ಹೆಣ್ಣಿನ ವಿಧವಾ ವಿವಾಹವನ್ನು ನಿಷೇಧಿಸುತ್ತಾನೆ. ವಿವಾಹಿತ ಹೆಣ್ಣು ಅಮಂಗಳೆಯಾಗಿದ್ದರೆ, ವ್ಯಭಿಚಾರ ಅಪವಾದ ಹೊತ್ತಿದ್ದರೆ, ರೋಗಗಳಿಗೆ ತುತ್ತಾಗಿದ್ದರೆ, ಅಂಗವೈಕಲ್ಯವನ್ನು ಹೊಂದಿದ್ದರೆ, ಗರ್ಭವತಿಯಾಗದಿದ್ದರೆ ಆಕೆಯಿಂದ ಪತಿಯು ವಿಚ್ಛೇದನವನ್ನು ಪಡೆಯಬಹುದೆಂದು ಗಂಡಿನ ಪರವಾಗಿ ಹೇಳುತ್ತಾನೆ.

ಮಹಿಳೆಯನ್ನು ಸಂಪೂರ್ಣವಾಗಿ ಗಂಡು ಹತೋಟಿಯಲ್ಲಿ ಇಟ್ಟುಕೊಳ್ಳಬೇಕೆಂದು ಹೇಳುವ ಮನು ಅದಕ್ಕೆ ನೀಡುವ ಕಾರಣ ಮಹಿಳೆ ಲೈಂಗಿಕ ಬಿಡುಬೀಸುತನ ಹೊಂದಿದ್ದಾಳೆ ಎಂಬುದು. ಆದ ಕಾರಣ ಮಹಿಳೆಯನ್ನು ಭೌತಿಕವಾಗಿ ಬಲ ಪ್ರಯೋಗದಿಂದ ಹತೋಟಿಯಲ್ಲಿ ಇಡುವುದು ಸದಾ ಸಾಧ್ಯವಾಗದು ಮತ್ತು ಕಷ್ಟವಾದುದು ಎಂದು ಆಕೆಗೆ ವಿಶ್ರಾಂತಿ ರಹಿತವಾಗಿ ಅವಿರತವಾದ ದುಡಿಮೆಯಲ್ಲಿ ತೊಡಗಿಸಬೇಕು ಎಂದು ಹೇಳುತ್ತಾನೆ. ಅದಕ್ಕಾಗಿ ಅವಳನ್ನು ಗೃಹಕೃತ್ಯದಲ್ಲಿ ನಿರತಳಾಗಿಸುವುದು, ಮನೆಯ ವಸ್ತುಗಳನ್ನು ಸಂಪತ್ತನ್ನು ಭದ್ರಪಡಿಸುವುದು, ಹಿರಿಯರ ಸೇವೆ ಮಾಡುವುದು, ವ್ರತ ಪೂಜೆಗಳನ್ನು ಆಚರಿಸುವುದು, ಮೊದಲಾದ ಕೆಲಸ ಕಾರ್ಯಗಳಲ್ಲಿ ನಿಯೋಜಿಸುವುದು ಒಳಿತು ಎಂದು ಸೂಚಿಸುತ್ತಾನೆ. ಅಂದರೆ ಮಹಿಳೆಗೆ ತನ್ನ ಬಗ್ಗೆ ತಾನು ಯೋಚಿಸಲು ಸಮಯ ದೊರೆತರೆ ಗಂಡಿನ ಹುನ್ನಾರಗಳು ಅರ್ಥವಾಗಿ ಅವನಿಗೆ ಎದುರಾಗಿ ತಿರುಗಿ ನಿಲ್ಲಬಹುದು ಎನ್ನುವ ಭಯದಲ್ಲಿ ಅವಳನ್ನು ಈ ಮೇಲ್ಕಾಣಿಸಿದ ರೀತಿಯಲ್ಲಿ ನಡೆಸಿಕೊಳ್ಳಬೇಕು ಎಂದು ಹೇಳುತ್ತಾನೆ ಎನ್ನಬಹುದು.

ಹೀಗೆ ಮನುಸ್ಮೃತಿಯಲ್ಲಿನ ಶ್ಲೋಕಗಳು ಮಹಿಳೆಯರ ವಿರುದ್ಧವಾಗಿ ಆದರೆ ಇದನ್ನು ಸಮಾಜದಲ್ಲಿ ದೇವರೇ ರೂಪಿಸಿದ್ದು ಅನುಲ್ಲಂಘನೀಯ ಎಂದು ಮಹಿಳೆಯರ ಬಗ್ಗೆ ಅಭಿಪ್ರಾಯವನ್ನು ರೂಪಿಸಿದೆ. ಈ ನಿಯಮಗಳೆಲ್ಲವೂ ಚಾಚೂ ತಪ್ಪದೆ ಜಾರಿಯಾದವೆಂದು ಹೇಳಲಾಗದು. ಈ ನಿಯಮಗಳ ನಡುವೆಯು ರಾಜ್ಯವನ್ನು ಆಳಿದ ಧೀರ ಮಹಿಳೆಯರು, ವ್ಯಾಪಾರ ವಹಿವಾಟು ನಿರ್ವಹಿಸಿದ ಮಹಿಳೆಯರು, ಅಕ್ಷರ ಲೋಕವನ್ನು ಪ್ರವೇಶಿಸಿದಂತಹ ಜ್ಞಾನವಂತ ಮಹಿಳೆಯರು ರೂಪುಗೊಂಡರು. ಆದರೆ ಈ ಶಾಸ್ತ್ರ ನಿಯಮಗಳು ಜಾರಿಯಾದರೂ ಆಗದಿದ್ದರೂ ಸಮಾಜಕ್ಕೆ ಮಹಿಳೆಯ ಕುರಿತು ಇರುವ ಧೋರಣೆಯನ್ನು  ಮತ್ತು ಅಧಿಕೃತ ನೀತಿಯನ್ನು ನಿರ್ಧರಿಸುತ್ತವೆ. ಆದ ಕಾರಣ ಮಹಿಳೆಯರ ಬಗೆಗೆ ಭಾರತೀಯ ಸಂಸ್ಕೃತಿಯಲ್ಲಿ ರೂಪುಗೊಂಡ ದೃಷ್ಟಿಕೊನವನ್ನು ನಾವು ಆಳವಾಗಿ ಅಧ್ಯಯನ ಮಾಡುವ ಅಗತ್ಯತೆಯಿದೆ.

ಹೆಣ್ಣನ್ನು ದೇವತೆಯಂತೆ ಪೂಜಿಸಬೇಕು ಎಂದು ಹೇಳುವ ಮನು ಅದೇ ಹೆಣ್ಣನ್ನು ಗಂಡು ಹೇಗೆ ಬೇಕಾದರೂ ಬಳಸಬಹುದು ಎಂದು ಹೇಳುತ್ತಾನೆ. ಹೆಣ್ಣನ್ನು ಗಂಡು ಲೈಂಗಿಕವಾಗಿ ಬಳಸಲು

ವಿವಿಧ ರೀತಿಯ ಅವಕಾಶವನ್ನು ಕಲ್ಪಿಸಲಾಗಿದೆ. ಇವೆಲ್ಲವೂ ಸಮಾಜದಲ್ಲಿ ಹೆಣ್ಣನ್ನು ಕೀಳು ಮಟ್ಟದಲ್ಲಿ ಬಳಸಿಕೊಳ್ಳಲು ಕಾರಣವಾಗಿದೆ. ಹೆಣ್ಣನ್ನು ತಂದೆಯೇ ಮಾರುವಂತಹ ಕೃತ್ಯಗಳು ನಡೆಯುತ್ತಿವೆ, ಗಂಡಿನ ತೃಷೆಗೆ ಎಷ್ಟು ಹೆಣ್ಣುಗಳಿದ್ದರೂ ಸಾಲದು ಎಂಬಂತೆ ವೇಶ್ಯಾಗೃಹಗಳಿಗೆ ಸಾವಿರಾರು ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯಾಗುತ್ತಿದೆ. ಹೆಣ್ಣನ್ನು ಚಂಚಲೆ, ಲೈಂಗಿಕ ಬಿಡುಬೀಸುತನ ಹೊಂದಿರುವವಳು ಎಂದು ತೆಗಳುವ ಗಂಡು ಇಂದು ತಾನೆ ಅದಾಗಿದ್ದಾನೆ. ಹೆಣ್ಣು ಸಮಾಜದ ಎಲ್ಲಾ ನಿಯಮಗಳಿಗೆ ಒಳಪಟ್ಟಿದ್ದರೂ, ಕುಟುಂಬದೊಳಗೆ ಜೀವಿಸುತ್ತಿದ್ದರೂ ಸಹ ಇಂದು ಕಾಣೆಯಾಗುತ್ತಿದ್ದಾಳೆ. ಹಾಲು ಕಂದಮ್ಮಗಳ ಮೇಲೆ ಅತ್ಯಾಚಾರವಾಗುತ್ತಿದೆ, ಒಂಟಿ ಹೆಣ್ಣುಮಕ್ಕಳನ್ನು ಅಪಹರಿಸಿ ಗುಂಪುಗಳಲ್ಲಿ ಅತ್ಯಾಚಾರ ಮಾಡಿ ಬರ್ಬರವಾಗಿ ಕೊಲೆ ಮಾಡಲಾಗುತ್ತಿದೆ. ಜನ್ಮ ನೀಡಿದ ತಂದೆಯೇ ಮಗಳ ಮೇಲೆ ಅತ್ಯಾಚಾರ ಮಾಡುತ್ತಿರುವಂತಹ ಅಸಹ್ಯಕರ ವಾತಾವರಣ ಸೃಷ್ಟಿಯಾಗಿದೆ. ಹೆಣ್ಣನ್ನು ಲೈಂಗಿಕವಾಗಿ ಮನಸೋಇಚ್ಛೆ ಬಳಸುತ್ತಿರುವ ಪುರುಷನಲ್ಲವೇ ಚಂಚಲನಾಗಿರುವುದು, ಲಜ್ಜೆ ಇಲ್ಲದೆ ಲೈಂಗಿಕ ಬಿಡುಬೀಸುತನ ಹೊಂದಿರುವುದು. ಇಂದು ಹೆಣ್ಣಿನ ಇಂತಹ ಸ್ಥಿತಿಗೆ ಅವಳ ಸಮಸ್ಯೆಗಳಿಗೆ ಪುರುಷಪ್ರಧಾನತೆಯನ್ನು ಚಾಚು ತಪ್ಪದೆ ಅಳವಡಿಕೆ ಆಗಿರುವ ಮನುವಿನ ಮನುಸ್ಮೃತಿಯೇ ಕಾರಣ. ಒಟ್ಟಾರೆಯಾಗಿ ಮನು ಕೇಂದ್ರಿತ ಚಿಂತನೆಗಳು ಹಾಗೂ ಬಂಡವಾಳವಾದವು ಇಂದಿನವರೆಗೂ ಮಹಿಳೆಯನ್ನು ಗಂಡಿನ ಸಮನಾಗಿ ನೋಡದೆ ಹೆಣ್ಣು-ಗಂಡನ್ನು ವಿಭಜಿಸಿ ನೋಡುತ್ತಿರುವುದೆ ಇಡೀ ಮಾನವ ಸಂಬಂಧಗಳ ಅದಃಪಥನಕ್ಕೆ ಕಾರಣವಾಗಿದೆ.

## ಕೊನೆ ಟಿಪ್ಪಣಿಗಳು


೧. ಮಹಿಳಾ ಅಧ್ಯಯನ-೭, ಸಿಮನ್ ದ ಬೋವಾ ಅವರ ದಿ ಸೆಕೆಂಡ್ ಸೆಕ್ಸ್, ಒಂದು ಸಂಕ್ಷಿಪ್ತ ಪರಿಚಯ, ಹೇಮಲತಾ ಎಚ್.ಎಂ, ಡಿ.ವಿ.ಕೆ.ಮೂರ್ತಿ ಪ್ರಕಾಶನ ಮೈಸೂರು, ೨೦೧೦, ಪು.ಸಂ.೩೧.

೨. ಸಾಮಾಜಿಕ ಮತ್ತು ಮಾನವಿಕ ಅಧ್ಯಯನಗಳ ಪರಿಭಾಷಾಕೋಶ, ಸಂ.ಡಾ.ಎಂ.ಚಂದ್ರ ಪೂಜಾರಿ, ಡಾ.ಟಿ.ಆರ್.ಚಂದ್ರಶೇಖರ, ಡಾ.ಎ.ಎಸ್.ಶ್ರೀಧರ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೫, ಪುಟ-೧೬೮

೩. ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಎಂ.ಉಷಾ, ಪ್ರಸಾರಾಂಗ, ಕವಿ.ಹಂ ೨೦೧೭, ಪು.ಸಂ.೨೮.

೪. ಮಹಿಳಾ ಅಧ್ಯಯನ-೭, ಸಿಮನ್ ದ ಬೋವಾ ಅವರ ದಿ ಸೆಕೆಂಡ್ ಸೆಕ್ಸ್, ಒಂದು ಸಂಕ್ಷಿಪ್ತ ಪರಿಚಯ, ಹೇಮಲತಾ ಎಚ್.ಎಂ, ಡಿ.ವಿ.ಕೆ.ಮೂರ್ತಿ ಪ್ರಕಾಶನ ಮೈಸೂರು, ೨೦೧೦, ಪುಟ-೧೭೪.

೫. ಸಿಮಾನ್ ದ ಬೋವ ದ ಸೆಕೆಂಡ್ ಸೆಕ್ಸ್-ಕನ್ನಡ ಓದು, ಅನು:ಹೆಚ್.ಎಸ್.ಶ್ರೀಮತಿ, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು, ೨೦೧೧, ಪುಟ-೨೬೦.

೬. ಸ್ತ್ರೀವಾದಿ ಸಾಹಿತ್ಯ ವಿಮರ್ಶೆ , ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, ಅಭಿನವ, ಬೆಂಗಳೂರು, ೨೦೧೪, ಪುಟ-೨೪.

೭. ಮಹಿಳಾ ಅಧ್ಯಯನ ಸಂಚಿಕೆ, ಲಿಂಗ ಅಸಮಾನತೆಯ ನೆಲೆಗಳು,ಲೇ: ವಿಜಯಕುಮಾರಿ ಎಸ್.ಕರಿಕಲ್, (ಸಂಯುಕ್ತ ಸಂ) ಸಂ.ಡಾ.ಶಿವಾನಂದ ಎಸ್.ವಿರಕ್ತಮಠ, ಪ್ರಸಾರಾಂಗ, ಕವಿಹಂ, ೨೦೧೧, ಪುಟ-೧೨೨.

೮. ಆಶಯ, ಆಕೃತಿ, ಸಿ.ಎನ್.ರಾಮಚಂದ್ರನ್, ಅಭಿನವ ಪ್ರಕಾಶನ, ಬೆಂಗಳೂರು, ೧೯೯೫, ಪುಟ-೧೦೪.

೯. ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಆರ್.ಇಂದಿರಾ, ಪ್ರಸಾರಾಂಗ, ಕವಿಹಂ, ೨೦೦೨, ಪುಟ-೫೪.

೧೦. ಮಹಿಳಾ ಅಧ್ಯಯನ-೧, ಅರ್ಥ, ಹುಟ್ಟು, ಬೆಳವಣಿಗೆ ಪರಿಕಲ್ಪನೆ ಸಿದ್ಧಾಂತಗಳು, ಹೇಮಲತಾ ಎಚ್.ಎಂ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು-೪, ೨೦೦೪, ಪು.ಸಂ-೩೩)

೧೧. ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಆರ್.ಇಂದಿರಾ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೨, ಪು.ಸಂ-೯

೧೨. ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ (ಸಂಶೋಧನಾ ಮಹಾಪ್ರಬಂಧ) , ಸುನಂದ ಎಂ., ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು, ೨೦೧೧, ಪು.ಸಂ-೯೭, ೯೮.

೧೩. ಸ್ತ್ರೀವಾದ ಪದ ವಿವರಣಾ ಕೋಶ, ಎಚ್.ಎಸ್.ಶ್ರೀಮತಿ, ಅಭಿನವ ಪ್ರಕಾಶನ, ಬೆಂಗಳೂರು, ४೦, ೨೦೧೮, ಪುಟ-೧೪೯.

೧೪. ಎಂಗೆಲ್ಸ್, ಕುಟುಂಬ ಖಾಸಗಿ ಆಸ್ತಿ ಮತ್ತು ರಾಜ್ಯ ಇವುಗಳ ಉಗಮ, ೧೯೮೦, ಪುಟ-೮೨.

೧೫. ಸ್ತ್ರೀವಾದ ಪದ ವಿವರಣಾ ಕೋಶ, ಎಚ್.ಎಸ್.ಶ್ರೀಮತಿ, ಅಭಿನವ ಪ್ರಕಾಶನ, ಬೆಂಗಳೂರು-೪೦, ೨೦೧೮, ಪುಟ-೧೪೯.

೧೬. ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಆರ್.ಇಂದಿರಾ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೨, ಪುಟ-೧೩೩.

೧೭. ಸ್ತ್ರೀವಾದ ಪದ ವಿವರಣಾ ಕೋಶ, ಎಚ್.ಎಸ್.ಶ್ರೀಮತಿ, ಅಭಿನವ ಪ್ರಕಾಶನ, ಬೆಂಗಳೂರು-೪೦, ೨೦೧೮, ಪುಟ-೨೬೫.

೧೮. ಮಹಿಳೆ ಮತ್ತು ಸವಾಲುಗಳು, ಎಸ್.ಇಂದಿರಾ, ಶೃತಿಲೋಕ ಪ್ರಕಾಶನ, ಮೈಸೂರು-೨೩, ೨೦೧೦, ಪುಟ-೭೯

೧೯. ಬುದ್ಧನಿಲ್ಲದ ಅಮ್ರಪಾಲಿ, ಲೀಲಾ ಸಂಪಿಗೆ, ಚಾರುಮತಿ ಪ್ರಕಾಶನ, ಬೆಂಗಳೂರು, ೨೦೧೪, ಪು.ಸಂ.೩೧೬

೨೦. ಬುದ್ಧನಿಲ್ಲದ ಅಮ್ರಪಾಲಿ, ಲೀಲಾ ಸಂಪಿಗೆ, ಚಾರುಮತಿ ಪ್ರಕಾಶನ, ಬೆಂಗಳೂರು, ೨೦೧೪ , ಪು.ಸಂ.೩೧೩–೩೧೪.

೨೧. ಲೈಂಗಿಕ ಜೀತ ಅಪರಾಧಿ ಯಾರು?, ರೂಪ ಹಾಸನ, ಪ್ರಜಾವಾಣಿ, ದಿನಾಂಕ: ೩೦.೦೯.೨೦೧೪, ಬೆಂಗಳೂರು, ೨೦೧೪.

೨೨. ದ ಸೆಕೆಂಡ್ ಸೆಕ್ಸ್ ಸಿಮೊನ್ ದ ಬೋವಾ, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್.ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು, ೨೦೦೭, ಪು.ಸಂ.೫.

೨೩. The sexuality Connection in Reproductive Health, Ruth Dixon- Mueller, Sondra Zeidenstein and Kristen movre, Sexuality, The population Council and International Women's Heath Coalition, New York, 1995, P.P. 139-140,

೨೪. ದ ಸೆಕೆಂಡ್ ಸೆಕ್ಸ್ ಸಿಮೊನ್ ದ ಬೋವಾ, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್., ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು, ೨೦೦೭, ಪು.ಸಂ.೨೭.

೨೫. (SIECUS- 1996)

೨೬. ಸ್ತ್ರೀವಾದ ತಾತ್ವಿಕತೆ, ಶ್ರೀಮತಿ ಎಚ್.ಎಸ್, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨, ಪು.ಸಂ.೩೩೪.

೨೭. ಮೈ ಮನಗಳ ಸುಳಿಯಲ್ಲಿ, ಶಿವರಾಮ ಕಾರಂತ, ಎಸ್.ಬಿ.ಎಸ್.ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ಮುನ್ನುಡಿ, ೧೯೭೦.

೨೮. ದ ಸೆಕೆಂಡ್ ಸೆಕ್ಸ್ ಸಿಮೊನ್ ದ ಬೋವಾ, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್.ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು, ೨೦೦೭, ಪು.ಸಂ.೩೯.

೨೯. ಸ್ತ್ರೀವಾದ : ತಾತ್ವಿಕತೆ, ಶ್ರೀಮತಿ ಎಚ್.ಎಸ್, ಸ್ತ್ರೀವಾದ : ತಾತ್ವಿಕತೆ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨, ಪು.ಸಂ.೩೩೫.

೩೦. ಸ್ತ್ರೀವಾದ, ಪದ ವಿವರಣ ಕೋಶ, ಶ್ರೀಮತಿ ಎಚ್.ಎಸ್., ಅಭಿನವ, ವಿಜಯನಗರ, ಬೆಂಗಳೂರು, ೪೦, ೨೦೧೮, ಪು.ಸಂ.೩೧೨.

೩೧. ಮಹಿಳೆ ಮತ್ತು ಧರ್ಮ ,ಶಿವಾನಂದ ಎಸ್.ವಿರಕ್ತಮಠ, ಪ್ರಸಾರಾಂಗ, ಕವಿಹಂ, ೨೦೧೮. ಪು.ಸಂ.೫೮

೩೨. ಮನುಸ್ಮೃತಿ, ಅನು: ಶೇಷ ನವರತ್ನ, ಸಮಾಜ ಪುಸ್ತಕಾಲಯ, ಧಾರವಾಡ, ೨೦೧೯.ಪು.ಸಂ.೭.

೩೩. ಅದೇ ಪು.ಸಂ.೪೧.

೩೪. ಅದೇ ಪು.ಸಂ.೭೨

೩೫. ಅದೇ ಪು.ಸಂ.೭೨

೩೬. ಅದೇ ಪು.ಸಂ.೭೨

೩೭. ಅದೇ ಪು.ಸಂ.೭೨

೩೮. ಅದೇ ಪು.ಸಂ.೭೭

೩೯. ಅದೇ ಪು.ಸಂ.೮೧

೪೦. ಅದೇ ಪು.ಸಂ.೮೧

೪೧. ಅದೇ ಪು.ಸಂ.೮೧

೪೨. ಅದೇ ಪು.ಸಂ.೮೨

೪೩. ಅದೇ ಪು.ಸಂ.೮೨

೪೪. ಅದೇ ಪು.ಸಂ.೮೨

೪೫. ಅದೇ ಪು.ಸಂ.೮೨

೪೬. ಅದೇ ಪು.ಸಂ.೮೪

೪೭ ಅದೇ ಪು.ಸಂ.೮೬

೪೮. ಅದೇ ಪು.ಸಂ.೮೬

೪೯. ಅದೇ ಪು.ಸಂ.೯೨

೫೦. ಅದೇ ಪು.ಸಂ.೯೨

೫೧. ಅದೇ ಪು.ಸಂ.೯೨

೫೨. ಅದೇ ಪು.ಸಂ.೨೨೫

೫೩. ಅದೇ ಪು.ಸಂ.೨೨೫

೫೪. ಅದೇ ಪು.ಸಂ.೨೨೫

೫೫. ಅದೇ ಪು.ಸಂ.೨೨೬

೫೬ ಅದೇ ಪು.ಸಂ.೨೨೬

೫೭ ಅದೇ ಪು.ಸಂ.೨೨೭

೫೮. ಅದೇ ಪು.ಸಂ.೨೨೭

೫೯. ಅದೇ ಪು.ಸಂ.೨೨೭

೬೦. ಅದೇ ಪು.ಸಂ.೨೨೭

೬೧. ಅದೇ ಪು.ಸಂ.೨೨೯

೬೨. ಅದೇ ಪು.ಸಂ.೨೮೦

೬೩. ಅದೇ ಪು.ಸಂ.೨೮೦

೬೪. ಅದೇ ಪು.ಸಂ.೩೧೧

೬೫. ಅದೇ ಪು.ಸಂ.೩೮೧

೬೬. ಅದೇ ಪು.ಸಂ.೩೮೧

೬೭. ಅದೇ ಪು.ಸಂ.೩೮೨

೬೮. ಅದೇ ಪು.ಸಂ.೩೮೩

೬೯. ಅದೇ ಪು.ಸಂ.೩೮೪

೭೦. ಅದೇ ಪು.ಸಂ.೩೮೪

೭೧. ಅದೇ ಪು.ಸಂ.೩೮೪

೭೨. ಅದೇ ಪು.ಸಂ.೩೮೬

೭೩. ಅದೇ ಪು.ಸಂ.೩೮೭

೭೪. ಅದೇ ಪು.ಸಂ.೩೮೭

೭೫. ಅದೇ ಪು.ಸಂ.೩೯೩

೭೬. ಅದೇ ಪು.ಸಂ.೩೯೩

೭೭. ಅದೇ ಪು.ಸಂ.೩೯೬

೭೮. ಅದೇ ಪು.ಸಂ.೩೯೬

೭೯. ಅದೇ ಪು.ಸಂ.೩೯೬

೮೦. ಅದೇ ಪು.ಸಂ.೩೯೭

೮೧. ಅದೇ ಪು.ಸಂ.೪೦೮

ಅಧ್ಯಾಯ : ನಾಲ್ಕು

# ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಇತಿಹಾಸ

೪.೧ ಭಾರತದಲ್ಲಿ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಇತಿಹಾಸ

೪.೨ ಅನೈತಿಕ ಸಾಗಾಣಿಕೆಯ ಉದ್ದೇಶ

೪.೩ ಬೇಡಿಕೆ ಮತ್ತು ಪೂರೈಕೆ

೪.೪ ಲಿಂಗ ಆಧಾರಿತ ದುರ್ಬಲತೆಗಳು

೪.೫ ಅನೈತಿಕ ಸಾಗಾಣಿಕೆದಾರ ನಡುವಿನ ಸಂಬಂಧ

೪.೬ ವೇಶ್ಯಾವಾಟಿಕೆಗಾಗಿ ಅನೈತಿಕ ಸಾಗಾಣಿಕೆ

೪.೭ ಲೈಂಗಿಕತೆಗಾಗಿ ಅನೈತಿಕ ಸಾಗಾಣಿಕೆ

೪.೮ ಭಾರತದಲ್ಲಿ ಪ್ರಸ್ತುತ ಅನೈತಿಕ ಸಾಗಾಣಿಕೆ

೪.೯ ಅನೈತಿಕ ಸಾಗಾಣಿಕೆಗೆ ಬಲಿಯಾದವರು

೪.೧೦ ಅನೈತಿಕ ಸಾಗಾಣಿಕೆ ಮತ್ತು ವಾಣಿಜ್ಯ ಲೈಂಗಿಕ ಶೋಷಣೆಯ ವ್ಯಾಪ್ತಿ ಮತ್ತು ಪ್ರಮಾಣ

ಅಧ್ಯಾಯ : ನಾಲ್ಕು

# ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಇತಿಹಾಸ

## ಪ್ರಸ್ತಾವನೆ

ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಐತಿಹಾಸಿಕ ಹಿನ್ನೆಲೆ ಬಹಳ ದೊಡ್ಡದಾಗಿದೆ. ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯು ದುಃಖಕರವಾದ ಮತ್ತು ಬಹಳ ದೊಡ್ಡ ಅವಮಾನದ ವಿಷಯವಾಗಿದ್ದು, ಸಾವಿರಾರು ಹೆಣ್ಣುಮಕ್ಕಳು ತಮ್ಮ ಪರಿಶುದ್ಧತೆಯನ್ನು ಪುರುಷರ ಕಾಮಕ್ಕಾಗಿ ಬಲಿ ಕೊಡಬೇಕಾಗುತ್ತದೆ. ಇದರಿಂದ ಕಾನೂನು ಕರ್ತವ್ಯ ನಿರ್ವಹಿಸುವ ಮನುಷ್ಯ ಅವನ ಅವನತಿಗೆ ಭೀಕರವಾದ ದಂಡವನ್ನು ಪಾವತಿಸಬೇಕಾಗುತ್ತದೆ. ಪುರುಷನ ಬಲೆಗಳಿಂದ ಮುಕ್ತವಾದ ಮಹಿಳೆ ಪೂರ್ಣ ಎತ್ತರಕ್ಕೆ ಏರಿದಾಗ ಮತ್ತು ಅವನು ವಿನ್ಯಾಸಗೊಳಿಸಿದ ಶಾಸನ ಮತ್ತು ಸಂಸ್ಥೆಯ ವಿರುದ್ಧ ದಂಗೆ ಎದ್ದಾಗ, ಅವಳ ದಂಗೆ ನಿಸ್ಸಂದೇಹವಾಗಿ ಅಹಿಂಸಾತ್ಮಕವಾದರೂ ಸಹ ಪರಿಣಾಮಕಾರಿಯಾಗಿರುತ್ತದೆ. ಆದರೆ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯು ಅನೇಕ ಕಾನೂನುಬಾಹಿರ ಚಟುವಟಿಕೆಗಳು ಮತ್ತು ವಿವಿಧ ರೀತಿಯ ಶೋಷಣೆಯನ್ನು ಒಳಗೊಂಡಿರುತ್ತದೆ. ಪುರುಷ ತನ್ನ ಕಾಮದ ಆಸೆಯ ಜೊತೆಗೆ ಹೆಣ್ಣನ್ನು ಹಲವಾರು ವಿಧದಲ್ಲಿ ದುಡಿಸಿಕೊಳ್ಳಲು ಬಳಸುತ್ತಾನೆ. ಉದಾ:- ಬಲವಂತದ ಗೃಹ ಕಾರ್ಮಿಕತೆ, ಸುಳ್ಳು ಮದುವೆ ಅಥವಾ ಗುಟ್ಟಾದ ಮದುವೆ, ರಹಸ್ಯ ಉದ್ಯೋಗ, ಸುಳ್ಳು ದತ್ತು, ಭಿಕ್ಷಾಟನೆ, ವೇಶ್ಯಾವಾಟಿಕೆ ಮತ್ತು ಇತರ ಲೈಂಗಿಕ ಚಟುವಟಿಕೆಗಳಿಗೆ ಬಳಸಿಕೊಳ್ಳಲಾಗುತ್ತಿದೆ ಎಂಬುದನ್ನು ವಿವಿಧ ಅಧ್ಯಯನಗಳು ಬಹಿಂಗಪಡಿಸಿವೆ. ಒಟ್ಟು ಮಾನವ ಕಳ್ಳ ಸಾಗಾಣಿಕೆ ಉದ್ಯಮದಲ್ಲಿ ಸುಮಾರು ಶೇ.೯೦%ರಷ್ಟು ಹೆಣ್ಣು ಮಕ್ಕಳು ಮತ್ತು ಅಪ್ರಾಪ್ತ ಬಾಲಕಿಯರು ಇದ್ದಾರೆ.

'ಹೆಣ್ಣುಮಕ್ಕಳ ಕಳ್ಳಸಾಗಾಣಿಕೆ'ಯ ವಿದ್ಯಮಾನವನ್ನು ಅರ್ಥಮಾಡಿಕೊಳ್ಳಲು ಮತ್ತು ಸ್ಪಷ್ಟ ಹಾಗೂ ನಿಸ್ಸಂದಿಗ್ಧವಾದ ವಾಖ್ಯಾನವನ್ನು ಪಡೆಯಲು, 'ಕಳ್ಳಸಾಗಾಣಿಕೆ' (Trafficking) ಪರಿಕಲ್ಪನೆಯ ಐತಿಹಾಸಿಕ ಬೆಳವಣಿಗೆಯನ್ನು ತಿಳಿಯುವುದು ಅತ್ಯಂತ ಮಹತ್ವದ್ದಾಗಿದೆ.

ವೇಶ್ಯಾವಾಟಿಕೆಯು ವಿಶ್ವ ನಾಗರೀಕತೆಯ ಅತ್ಯಂತ ಹಳೆಯ ವೃತ್ತಿಯೆಂದು ಹೇಳಲಾಗುತ್ತದೆ. ಆದರೆ ವೇಶ್ಯಾವಾಟಿಕೆಗೆ ಮುಂಚಿತವಾಗಿ ಕಳ್ಳಸಾಗಾಣಿಕೆಯು ಅಸ್ತಿತ್ವದಲ್ಲಿತ್ತು ಎನ್ನುವುದನ್ನು ಸೂಚಿಸುವ ಕುರುಹುಗಳಿವೆ. ಪೂರ್ವ ಐತಿಹಾಸಿಕ ಯುಗದಿಂದ ಆಧುನಿಕ ನಾಗರೀಕತೆಯವರೆಗೆ ಮೂರು

ಅಂಶಗಳು ಸನಾತನವಾಗಿ ಕಂಡುಬರುತ್ತವೆ. ಮೊದಲನೆಯದಾಗಿ ಹೆಣ್ಣುಮಕ್ಕಳೊಂದಿಗೆ ಲೈಂಗಿಕ ಅನ್ಯೋನ್ಯತೆಗಾಗಿ ಪುರುಷರಲ್ಲಿ ಭೋಗಾಪೇಕ್ಷೆ. ಎರಡನೆಯದಾಗಿ ಹೆಣ್ಣು ಸಾಮಾಜಿಕವಾಗಿ ಮತ್ತು ದೈಹಿಕವಾಗಿ ದುರ್ಬಲ ಲೈಂಗಿಕತೆಯಾಗಿರುವುದು. ಮೂರನೆಯದಾಗಿ ಸಮಾಜದಲ್ಲಿ ಪುರುಷನು ತಾನು ಸುಸಂಸ್ಕೃತ ಮತ್ತು ಸಂರಕ್ಷಕ ಎಂದು ಸೋಗು ಹಾಕುವುದು. ಎಲ್ಲಾ ನಾಗರೀಕತೆಯ ಪುರುಷರು ಮಹಿಳೆಯರೊಂದಿಗೆ ಅನ್ಯೋನ್ಯತೆಯನ್ನು ಪಡೆಯುವ ಅಭಿಲಾಷೆಯನ್ನು ಹೊಂದಿದ್ದಾರೆ. ಈ ಬಯಕೆ ಜೈವಿಕವಾಗಬಹುದು ಅಥವಾ ಇದು ಇತರ ಲಿಂಗಗಳ ಶಕ್ತಿಯ ಪ್ರದರ್ಶನವಾಗಿರಬಹುದು.

ಕ್ರಿ.ಶ ೧೫ರಿಂದ ೧೯ನೇ ಶತಮಾನದವರೆಗೆ ಎಲ್ಲಾ ಸಾಮ್ರಾಜ್ಯಗಳಲ್ಲಿ ಮನರಂಜನೆಗಾಗಿ ಮಹಿಳೆಯರನ್ನು ಸೈನಿಕರಿಗೆ ಮತ್ತು ರಾಜರಿಗೆ ಒದಗಿಸುವುದು ಅತಿರೇಕವಾಗಿತ್ತು. ಮತ್ತು ಈ ಹೆಣ್ಣು ಮಕ್ಕಳು ಸೇನೆಯೊಂದಿಗೆ ಪಯಣಿಸಬೇಕಿತ್ತು. ರಾಜರುಗಳು ತಮ್ಮ ಲೈಂಗಿಕ ಗುಲಾಮರನ್ನು ಇಟ್ಟುಕೊಂಡಿದ್ದರು, ಅದಕ್ಕಾಗಿ ಪ್ರತ್ಯೇಕ ಸ್ಥಳವನ್ನು ಮೀಸಲಿಡುತ್ತಿದ್ದರು. ಈ ಯುದ್ಧದ ಸಮಯದಲ್ಲಿ ಸಮಾಜದಲ್ಲಿ ಗೆದ್ದ ರಾಜರುಗಳಿಗೆ ಹೆಣ್ಣನ್ನು ಒಪ್ಪಿಸುವುದು ಸಾಮಾನ್ಯ ಸಂಗತಿಯಾಗಿತ್ತು. ಈ ಪ್ರಶ್ನಾತೀತರಾಗಿ ಹೆಣ್ಣಿನ ಶರಣಾಗತಿ ಅವರನ್ನು ದುರ್ಬಲ ಮತ್ತು ಶೋಷಣೆಗೆ ಗುರಿಯಾಗುವಂತೆ ಮಾಡಿತು. ಈ ಕಾರಣದಿಂದ ಹೆಣ್ಣನ್ನು ಪುರುಷರು ಅವಳ ಒಪ್ಪಿಗೆಯಿಲ್ಲದೆಯೇ ಬೇರೆ ಯಾವುದೇ ಸರಕುಗಳಂತೆ ಮಾರಾಟ ಮಾಡಲು, ಖರೀದಿಸಲು, ವಿನಿಮಯವಾಗಿ ಬಳಸಲು ಮತ್ತು ಹೆಣ್ಣನ್ನು ಉಡುಗೊರೆಯಾಗಿ ನೀಡಬಹುದಾದ ವಸ್ತುವಂತೆ ಉಪಯೋಗಿಸಲು ಪರಿಗಣಿಸಿದರು. ಈ ಎಲ್ಲಾ ವಿನಾಶಕ ಅಂಶಗಳು ಸೇರಿ ಇಂದು ಸಮಾಜದಲ್ಲಿ ಈ ವ್ಯವಸ್ಥೆಯು ಒಂದು ರೋಗವಾಗಿ ಪ್ರಚಲಿತದಲ್ಲಿದೆ. ಪ್ರಪಂಚದಾದ್ಯಂತ ಇರುವ ಪುರುಷ ಪ್ರಧಾನ ಸಮಾಜಗಳು ಲೈಂಗಿಕತೆಯನ್ನು ನಿಷೇಧಿತವಾದುದು ಎಂದು ನಂಬಿದ್ದರೂ ಅಲ್ಲಿಯವರೆಗೂ ಅಕ್ರಮವಾದಂತಹ ಯಾವುದೇ ಕೆಟ್ಟದ್ದು ಇರಲಿಲ್ಲ ಮತ್ತು ಬಲವಂತದ ಲೈಂಗಿಕತೆಯೂ ಇರಲಿಲ್ಲ. ಆದರೆ ಪುರುಷರು ತಮ್ಮ ಲೈಂಗಿಕ ತೃಷೆಗಾಗಿ ಹೆಣ್ಣನ್ನು ಶೋಷಿಸಲು ಬಯಸಿದ್ದರು. ಈ ಸಂದರ್ಭದಲ್ಲಿ ಉತ್ತಮ ಆಯ್ಕೆ ಎಂದರೆ ದೂರದ ಸ್ಥಳಗಳಿಂದ ಹೆಣ್ಣು ಮಕ್ಕಳನ್ನು ಕರೆತರುವುದು ಇದರಿಂದ ಆ ಕೃತ್ಯ ಯಾರಿಗೂ ತಿಳಿಯುವುದಿಲ್ಲ ಎಂಬ ಧೈರ್ಯ. ಈ ಕೃತ್ಯವನ್ನು ಉತ್ತಮ ನೈತಿಕತೆಯ ಹೆಸರಿನಲ್ಲಿ ಸಂಸ್ಕೃತಿಯಲ್ಲಿ ಸಂರಕ್ಷಿಸಬಹುದು ಎಂಬ ಆಶಯವಿತ್ತು. ಆದರೆ ಇದು ಸ್ಥಳಾಂತರದ ಅವಶ್ಯಕತೆಯನ್ನು ಹುಟ್ಟುಹಾಕಿತು. ಆದ್ದರಿಂದ ಇದು ಶೋಷಣೆಯ ರೂಪದಲ್ಲಿ ಕೊನೆಗೊಳ್ಳುವಂತಾಗುತ್ತಿತ್ತು. ಹೀಗೆ ವೇಶ್ಯಾವಾಟಿಕೆಗೂ ಮೊದಲೇ ಈ ಅನೈತಿಕ ಸಾಗಣಿಕೆಯ ಇತಿಹಾಸವು ಪ್ರಾರಂಭವಾಯಿತು.

"ಹೆಣ್ಣು ಮಕ್ಕಳ ಕಳ್ಳ ಸಾಗಾಣಿಕೆ ಸಮಸ್ಯೆಯನ್ನು ಗ್ರೀಕ್ ರಾಜ್ಯಗಳ ಕಾಲದಿಂದಲೂ ಗುರುತಿಸಬಹುದು. ರಾಜ್ಯಗಳನ್ನು ನಿಯಂತ್ರಿಸಲು ಮತ್ತು ಸಮಾಜದ ಕೆಲವು ವಿಭಾಗಗಳನ್ನು ಮಿತಿಗೊಳಿಸಲು ವೇಶ್ಯಾವಾಟಿಕೆ ಮುಂತಾದ ಚಟುವಟಿಕೆಗಳಿಂದ ಪ್ರಯತ್ನಿಸುತ್ತಿದ್ದ ಸಂಗತಿಗಳು ಇತಿಹಾಸ ತುಂಬಿವೆ. ಗ್ರೀಕ್ ರಾಜ್ಯ ಮತ್ತು ಅದನ್ನು ಅನುಸರಿಸುವ ಇತರರು ವೇಶ್ಯಾವಾಟಿಕೆಯನ್ನು

ನಿಯಂತ್ರಿಸುತ್ತಾರೆ. ಆದರೆ ರಾಜ್ಯ ಮತ್ತು ಇತರ ಸಾಮಾಜಿಕ ಸಂಸ್ಥೆಗಳ ಉತ್ತಮ ಪ್ರಯತ್ನಗಳ ಹೊರತಾಗಿಯೂ ವೇಶ್ಯಾವಾಟಿಕೆ ದೊಡ್ಡ ಪಟ್ಟಣಗಳಲ್ಲಿ ತನ್ನನ್ನು ಉಳಿಸಿಕೊಂಡಿದೆ. ಕಳೆದ ೨,೫೦೦ ವರ್ಷಗಳಿಂದ ಇದು ಮಾನವ ಸಾಮಾಜಿಕ ಜೀವನದಲ್ಲಿ ಎಷ್ಟು ಆಳವಾಗಿ ಬೇರೂರಿದೆ ಎಂಬುದನ್ನು ಸಾಬೀತುಪಡಿಸುತ್ತದೆ".[೧]

ಸಮಾಜದಲ್ಲಿನ ಸಾಮಾಜಿಕ, ಆರ್ಥಿಕ ಮತ್ತು ನೈತಿಕ ಬದಲಾವಣೆಗಳು ಅದರ ಸಾಮಾಜಿಕ ಜೀವನದ ವಿವಿಧ ಅಂಶಗಳನ್ನು ಅಗತ್ಯವಾಗಿ ಪ್ರಭಾವಿಸುತ್ತವೆ. ಹಾಗೆಯೇ ವೇಶ್ಯಾವಾಟಿಕೆ ಮತ್ತು ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯ ಮೇಲೂ ಪರಿಣಾಮ ಬೀರಿವೆ. ೧೯ನೇ ಶತಮಾನದ ಕೊನೆಯಲ್ಲಿ ಹುಟ್ಟಿಕೊಂಡ ನಿರ್ಮೂಲನವಾದಿ ಚಳುವಳಿಯು ವೇಶ್ಯಾವಾಟಿಕೆ ಮೇಲೆ ರಾಜ್ಯ ನಿಯಂತ್ರಣದ ವ್ಯವಸ್ಥೆಯನ್ನು ತಂದಿತು. ಇದು ರಕ್ತನಾಳದ ಕಾಯಿಲೆಗಳನ್ನು ಹರಡುವ ರೀತಿಯಾದ ವ್ಯವಸ್ಥೆಯಾದ್ದರಿಂದ ಅದರ ಒಟ್ಟು ನಿರ್ಮೂಲನೆಯ ಬೇಡಿಕೆಯನ್ನು ಇಡಲಾಯಿತು. ಇದಲ್ಲದೆ ೧೯ನೇ ಶತಮಾನದ ಕೊನೆಯಲ್ಲಿ ವಿವಿಧ ಸಾಮಾಜಿಕ ಸಂಸ್ಥೆಗಳು ನಡೆಸಿದ ವಿಚಾರಣೆಯಲ್ಲಿ ಮಹಿಳೆಯರು ಹೆಚ್ಚಾಗಿ ಈ ವೃತ್ತಿಗೆ ಒತ್ತಾಯಿಸಲ್ಪಡಬಾರದು ಮತ್ತು ಇದನ್ನು ತಪ್ಪು ಕಲ್ಪನೆಯಂತೆ ಇಲ್ಲಿಯವರೆಗೆ ತಿಳಿಯಲಾಗಿತ್ತೋ ಅದನ್ನು ಸ್ವೀಕರಿಸಬಾರದು ಎಂದು ತಿಳಿಸಿದವು. ಸರ್ಕಾರಗಳು ಕಟ್ಟುನಿಟ್ಟಿನ ಶಾಸನಗಳನ್ನು ಪರಿಚಯಿಸಲು ಪ್ರಯತ್ನಿಸಿದವು ಮತ್ತು ಅವುಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವ ಗುರಿಯನ್ನು ಸಹ ಹೊಂದಿದ್ದವು. ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯು ಕೇವಲ ಒಂದು ದೇಶದಲ್ಲಿ ಅಥವಾ ಒಂದು ಪ್ರದೇಶದಲ್ಲಿ ನಡೆಯುತ್ತಿಲ್ಲವಾದ್ದರಿಂದ ಅದರ ಸ್ವರೂಪವು ನಮ್ಮನ್ನು ವಂಚಿಸುತ್ತಲೇ ಇರುತ್ತದೆ. ಸಂಚಿನಿಂದ ಆಕರ್ಷಣೆಯಿಂದ ಹೆಣ್ಣುಮಕ್ಕಳನ್ನು ಒಂದು ದೇಶದಿಂದ ಮತ್ತೊಂದು ದೇಶಕ್ಕೆ, ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಸಂಪೂರ್ಣ ಶೋಷಣೆಗಾಗಿ ಇನ್ನೊಬ್ಬರಿಗೆ ಮಾರಲು ಪ್ರಯತ್ನಿಸುತ್ತದೆ.

Traffficking ಎಂಬ ಪದದ ಆರಂಭಿಕ ತಿಳುವಳಿಕೆಯು ಯುನೈಟೆಡ್ ನೇಷನ್ಸ್ ನಿಂದ ಬಂದಿದೆ. ೧೯೦೦ರ ಆಸುಪಾಸಿನಲ್ಲಿ ಮಹಿಳೆಯರಲ್ಲಿ 'ವೈಟ್ ಗುಲಾಮರ ವ್ಯಾಪಾರ' ಎಂದು ಕರೆಯಲ್ಪಡುವುದನ್ನು ಉಲ್ಲೇಖಿಸಲು 'ಟ್ರಾಫಿಕ್' ಎಂಬ ಪದವನ್ನು ಮೊದಲು ಬಳಸಲಾಯಿತು. ಮಹಿಳೆಯರ ಕಳ್ಳಸಾಗಾಣಿಕೆ ಮತ್ತು ಸ್ವಯಂ ಪ್ರೇರಿತ ವಲಸೆಯು ಯೂರೋಪಿನಿಂದ ಅರಬ್ ರಾಷ್ಟ್ರಗಳಿಗೆ ಮತ್ತು ಪೂರ್ವ ರಾಷ್ಟ್ರಗಳಿಗೆ ನಡೆಯುತ್ತಿತ್ತು. ವೇಶ್ಯೆಯರು, ಉಪಪತ್ನಿಯರು, ಯುರೋಪಿನ ಮಧ್ಯಮ ವರ್ಗದ ಪುರುಷರು, ಮಹಿಳೆಯರು ಮತ್ತು ಸರ್ಕಾರಕ್ಕೆ ವಿಶೇಷ ಕಾಳಜಿಯಾಗಿತ್ತು. ಇದರ ಪರಿಣಾಮವಾಗಿ ೧೯೦೪ರಲ್ಲಿ ಅದರ ನಿಗ್ರಹಕ್ಕಾಗಿ ಅಂತರಾಷ್ಟ್ರೀಯ ಒಪ್ಪಂದವನ್ನು ರಚಿಸಿಲಾಯಿತು."[೨]

ಆರಂಭದಲ್ಲಿ ಈ ವ್ಯಾಖ್ಯಾನಕ್ಕೆ ದೇಶಗಳ ಗಡಿಗಳ ಅಗತ್ಯವಿತ್ತು. ಆದರೆ ೧೯೧೦ರ ಹೊತ್ತಿಗೆ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯು ರಾಷ್ಟ್ರೀಯ ಗಡಿಯೊಳಗೆ ಸಂಭವಿಸಬಹುದು ಎಂದು

ಒಪ್ಪಿಕೊಂಡು ಬದಲಾಯಿಸಲಾಯಿತು. ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯು ಗುಲಾಮಗಿರಿಗೆ ಸಂಬಂಧಿಸಿದೆ ಹಾಗೆಯೇ ಇದು ವೇಶ್ಯಾವಾಟಿಕೆಗೆ ನಿಕಟ ಸಂಬಂಧವನ್ನು ಹೊಂದಿದೆ. ಇವೆರಡರ ನಡುವಿನ ಸಂಬಂಧವು ಮುಂದಿನ ದಶಕಗಳಲ್ಲಿ ಇನ್ನಷ್ಟು ಗಟ್ಟಿಯಾಯಿತು ಇದು ೧೯೪೯ರ Convention for the Suppression of the Traffic in persons ದಲ್ಲಿ ಅತ್ಯಂತ ಸ್ಪಷ್ಟವಾಯಿತು. ಆದರೆ ವೇಶ್ಯಾವಾಟಿಕೆಯೊಂದಿಗೆ ಅನೈತಿಕ ಸಾಗಾಣಿಕೆಯನ್ನು ಗುರುತಿಸುವ ಈ ಗೊಂದಲವು ಅನೈತಿಕ ಸಾಗಾಣಿಕೆ ವಿರೋಧಿ ವ್ಯಕ್ತಿಗಳು, ಸಂಸ್ಥೆಗಳು ಮತ್ತು ಸರ್ಕಾರಕ್ಕೆ ಇಂದಿಗೂ ಇದೆ. ದುರಾದೃಷ್ಟವಶಾತ್, ಕೆಲವು ರಾಷ್ಟ್ರಗಳ ಸರ್ಕಾರಗಳೇ ಅನೈತಿಕ ಸಾಗಾಣಿಕೆಯನ್ನು ದಾಖಲೆ ರಹಿತ ವಲಸೆಯೊಂದಿಗೆ ವಿಶೇಷವಾಗಿ ವೇಶ್ಯಾವಾಟಿಕೆಗೆ ಒಳಪಡಿಸುತ್ತಿವೆ ಮತ್ತು ಅದಕ್ಕೆ ಸಹಾಯ ಮಾಡುತ್ತಿವೆ. ಯಾವುದೇ ಕಟ್ಟುನಿಟ್ಟಿನ ಶಾಸನಗಳು, ಕಾನೂನುಗಳು ಮಹಿಳೆಯ ಹಿತಾಸಕ್ತಿಗೆ ಪರವಾಗಿ ಈ ಸಮಸ್ಯೆಯ ಸಂಪೂರ್ಣ ಹರವನ್ನು ಹೊರತರುವುದಿಲ್ಲ. ವ್ಯಕ್ತಿಗಳಲ್ಲಿ ಅಕ್ರಮ ಕಳ್ಳಸಾಗಣೆ ಎಂಬ ಹೋರಾಟದ ಸೋಗಿನಲ್ಲಿ ಈ ಸರ್ಕಾರಗಳು ಸಾಮಾನ್ಯವಾಗಿ ಕಠಿಣ ವಲಸೆ ನೀತಿಗಳನ್ನು ಅಳವಡಿಸಿಕೊಂಡಿವೆ. ಆದರೆ ಇದು ಚಳುವಳಿಯನ್ನು ಎದುರಿಸಲು ಮಾಡಿದ ತಂತ್ರವಷ್ಟೇ ಆಗಿರುತ್ತದೆ. ಮೇಲಿನ ಹೇಳಿಕೆಗೆ ಸರಿಯಾಗುವಂತೆ ವಿವಿಧ ಹಂತಗಳಲ್ಲಿ ಆಗ ಚಾಲ್ತಿಯಲ್ಲಿರುವ ಅನೈತಿಕ ಸಾಗಾಣೆಯ ಪರಿಕಲ್ಪನೆಯು ಹೀಗಿದೆ:– ಕಳ್ಳಸಾಗಾಣಿಕೆಯಾದ ವ್ಯಕ್ತಿಗಳ ಮಾನವ ಹಕ್ಕುಗಳನ್ನು ನಿರ್ಲಕ್ಷಿಸಲಾಗಿದೆ. ವೇಶ್ಯಾವಾಟಿಕೆಯಲ್ಲಿ ಮಹಿಳೆಯರಿಗೆ ನಿರ್ದೇಶಿಸಲು ನೈತಿಕವಾದಿಗಳು ಮತ್ತು ನಿರ್ಮೂಲನವಾದಿಗಳನ್ನು ಬಳಸಿಕೊಂಡಿದ್ದಾರೆ. ಮಹಿಳೆಯರ ಚಲನವಲನಗಳನ್ನು ನಿರ್ಬಂಧಿಸಲು ಸರ್ಕಾರಗಳು ಈ ತಂತ್ರಗಳನ್ನು ಬಳಸಿಕೊಂಡಿವೆ.

### ೪.೧ ಭಾರತದಲ್ಲಿ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಇತಿಹಾಸ

ಭಾರತದ ಇತಿಹಾಸದಲ್ಲಿ ಇಂದ್ರ, ರಾವಣ, ಭಗವಾನ್ ಕೃಷ್ಣ, ಮಹಾಭಾರತ, ಮೊಘಲ್ ಚಕ್ರವರ್ತಿಗಳು  ನಂತರ ಬ್ರಿಟೀಷರು ಹೀಗೆ ಎಲ್ಲಾ ಸಂದರ್ಭದಲ್ಲೂ ಅನೈತಿಕ ಸಾಗಾಣಿಕೆಯು ಒಂದಿಲ್ಲೊಂದು ರೂಪದಲ್ಲಿ ಅಸ್ತಿತ್ವದಲ್ಲಿದೆ. ಇಲ್ಲಿ ಸ್ತ್ರೀಯರ ಶೋಷಣೆಯ ಪ್ರಕಾರವು ಭಿನ್ನವಾಗಿದ್ದರೂ ಸಹ ಭಾರತವು ಇದಕ್ಕೆ ಹೊರತಾಗಿಲ್ಲ. ಭಗವಾನ್ ಇಂದ್ರನು ತನ್ನ ಜನಾನದಲ್ಲಿ ಬ್ರಹ್ಮಾಂಡದ ಎಲ್ಲೆಡೆಯಿಂದ ಸುಂದರವಾದ ಹೆಣ್ಣುಮಕ್ಕಳನ್ನು (ಅಪ್ಸರೆ) ತುಂಬಿದ್ದಾನೆಂದು ನಂಬಲಾಗಿದೆ. ಎಲ್ಲರೂ ತರಬೇತಿ ಪಡೆದ ನರ್ತಕಿಯರು ಮತ್ತು ಇಂದ್ರನ ಆಸೆಯನ್ನು ಪೂರೈಸಲು ಅವನ ಸುತ್ತ ಸುತ್ತುವರಿದಿದ್ದರು ಎಂದು ನಂಬಲಾಗಿದೆ. ತನ್ನ ದುಷ್ಟ ಉದ್ದೇಶಗಳನ್ನು ಈಡೇರಿಸುವ ಸಲುವಾಗಿ ಸುಂದರವನದಿಂದ ಲಂಕೆಗೆ ಸೀತೆಯನ್ನು ಲಂಕಾದ ರಾಜ ರಾವಣ ಅಪಹರಿಸಿದನು. ಭಾರತೀಯ ಪುರಾಣಗಳ ಪ್ರಕಾರ ಕೃಷ್ಣನು ಸ್ತ್ರೀ ಮೋಹಿತನಾಗಿದ್ದು ಮತ್ತು ಸಾವಿರಾರು ಹೆಂಡತಿಯರೆಲ್ಲರೂ ಭಾರತದ ಎಲ್ಲೆಡೆಯಿಂದ ಇದ್ದ ಸುಂದರ ಹೆಣ್ಣುಗಳಾಗಿದ್ದರು. ಮೊಘಲ್ ಚಕ್ರವರ್ತಿಗಳು ಭಾರತವನ್ನು ೧೬ನೇ ಶತಮಾನದಲ್ಲಿ ಆಳುತ್ತಾರೆ ಮತ್ತು ಮುನ್ನೂರು ವರ್ಷಗಳಲ್ಲಿ ಅವರು ಹಿಂದೂ ಹೆಣ್ಣುಮಕ್ಕಳನ್ನು

ವಿವಾಹವಾದರೂ, ಎಲ್ಲಾ ವಯಸ್ಸಿನ ಮತ್ತು ಧರ್ಮದ ಹೆಣ್ಣುಮಕ್ಕಳಿಂದ ತುಂಬಿದ ತಮ್ಮದೇ ಆದ ಜನಾನವನ್ನು ಹೊಂದಿದ್ದರು. ಇನ್ನು ಬ್ರಿಟಿಷ್ ಸಾಮ್ರಾಜ್ಯದ ಅವಧಿಯಲ್ಲಿ ಅಂದರೆ ೧೯ನೇ ಶತಮಾನದಲ್ಲಿ ದೇಶೀಯ ಮತ್ತು ವಾಣಿಜ್ಯ ಕಾರ್ಮಿಕರಾಗಿ ಹೆಣ್ಣುಮಕ್ಕಳನ್ನು ಲೈಂಗಿಕ ಶೋಷಣೆಯ ಜೊತೆಗೆ ಬಳಸಿದರು. ಭಾರತದಲ್ಲಿ ೨೦೦ ವರ್ಷಗಳ ಬ್ರಿಟಿಷ್ ಆಳ್ವಿಕೆಯಲ್ಲಿ ಸಾವಿರಾರು ಸ್ತ್ರೀಯರನ್ನು ವಾಣಿಜ್ಯ ಲೈಂಗಿಕ ಶೋಷಣೆಗಾಗಿ ಸ್ಥಳಾಂತರಿಸಲಾಯಿತು. ಇತರರನ್ನು ಬಲವಂತವಾಗಿ ಗೃಹ ಸಹಾಯಕರಾಗಿ, ಕಾರ್ಖಾನೆಗಳಲ್ಲಿ ಮತ್ತು ನಿರ್ಮಾಣ ಸ್ಥಳಗಳಲ್ಲಿ ಕೆಲಸಗಾರರಾಗಿ ಬಳಸಲಾಯಿತು.

### ೪.೨ ಅನೈತಿಕ ಸಾಗಾಣಿಕೆಯ ಉದ್ದೇಶ

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಅನೈತಿಕ ಸಾಗಾಣಿಕೆಯು ಸಮಾಜದ ಒಂದು ರೀತಿಯ ಶೋಷಣೆಯಾಗಿದೆ. ಈ ಶೋಷಣೆಯುಕ್ತ ಕಳ್ಳಸಾಗಾಣೆಯ ಆಧಾರದ ಮೇಲೆ ಈ ಕೆಳಗಿನಂತೆ ಎರಡು ವರ್ಗಗಳಾಗಿ ವಿಂಗಡಿಸಬಹುದು.

**೧. ವಾಣಿಜ್ಯ ಲೈಂಗಿಕ ಶೋಷಣೆಗಾಗಿ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ**

ಅ. ವೇಶ್ಯಾಗೃಹ ಆಧಾರಿತ

ಆ. ವೇಶ್ಯಾಗೃಹವಲ್ಲದ ಆಧಾರಿತ

**೨. ಲೈಂಗಿಕತೆಗಲ್ಲದ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ**

### ೧. ವಾಣಿಜ್ಯ ಲೈಂಗಿಕ ಶೋಷಣೆಗಾಗಿ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ

ವ್ಯಾಪಾರ ಅರ್ಥದಲ್ಲಿ ಅನೈತಿಕ ಸಾಗಾಣಿಕೆಯು ಅನೇಕ ರೀತಿಯ ಶೋಷಣೆಯನ್ನು ಒಳಗೊಂಡಿದೆ. ಆದರೆ ಈ ಅನೈತಿಕ ಸಾಗಾಣಿಕೆಯ ಅತಿರೇಕದ ಸಂಗತಿಯೆಂದರೆ ಲೈಂಗಿಕ ಕಳ್ಳಸಾಗಾಣಿಕೆ. ಅಲ್ಲಿ ವೇಶ್ಯಾವಾಟಿಕೆ ಮತ್ತು ಅಶ್ಲೀಲತೆಯಂತಹ ಬಲವಂತದ ವಾಣಿಜ್ಯ ಲೈಂಗಿಕ ಸಂಗತಿಗಳಿಗೆ ಹೆಣ್ಣುಮಕ್ಕಳನ್ನು ಸಾಗಾಣಿಕೆ ಮಾಡಲಾಗುತ್ತದೆ. ಇದನ್ನು ಲೈಂಗಿಕ ಶೋಷಣೆಗಾಗಿ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ ಎಂದು ಕರೆಯಲಾಗುತ್ತದೆ. ಲೈಂಗಿಕ ಉದ್ದೇಶಕ್ಕಾಗಿ ಸಾಗಾಣಿಕೆಯು ವಾಣಿಜ್ಯ ಲೈಂಗಿಕ ಕ್ರಿಯೆಯ ಉದ್ದೇಶಕ್ಕಾಗಿ ವ್ಯಕ್ತಿಯ ನೇಮಕಾತಿ, ಆಶ್ರಯ, ಸಾರಿಗೆ, ಇದು ಮಾನವ ಕಳ್ಳಸಾಗಾಣೆಯ ತೀವ್ರ ಸ್ವರೂಪಗಳಲ್ಲಿ ಒಂದಾಗಿದೆ. ಇದರಲ್ಲಿ ವಾಣಿಜ್ಯ ಲೈಂಗಿಕ ಕ್ರಿಯೆಯನ್ನು ಬಲವಂತದಿಂದ, ವಂಚನೆಯಿಂದ ಅಥವಾ ದಬ್ಬಾಳಿಕೆಯಿಂದ ಪ್ರಚೋದಿಸಲಾಗುತ್ತದೆ. ಈ ಕೃತ್ಯವನ್ನು ಮಾಡಲು ೧೮ ವರ್ಷಕ್ಕಿಂತ ಕಡಿಮೆ ವಯಸ್ಸಿನವರನ್ನು ಒತ್ತಾಯಿಸುವುದು ಆಗಿದೆ. ವಾಣಿಜ್ಯ ಲೈಂಗಿಕ ಕ್ರಿಯೆ ಎಂದರೆ ಯಾವುದೇ ವ್ಯಕ್ತಿಗೆ ಲೈಂಗಿಕ ತೃಷೆ ನೀಗಿಸಿದರೆ ಅದಕ್ಕೆ ಪ್ರತಿಯಾಗಿ ಯಾವುದೇ ಮೌಲ್ಯವನ್ನು ನೀಡಲಾಗುತ್ತದೆ ಅಥವಾ ಸ್ವೀಕರಿಸಲಾಗುತ್ತದೆ. ಇಲ್ಲಿ ವೇಶ್ಯಾವಾಟಿಕೆ ಮತ್ತು ಕಳ್ಳಸಾಗಾಣಿಕೆ ಎಂದು ಪರಸ್ಪರ ಅವಲಂಬಿತ ತುದಿಗಳಾಗಿವೆ. ಅದು ಪರಸ್ಪರ ಭೇಟಿಯಾದಾಗ

ಲೈಂಗಿಕ ಕಳ್ಳಸಾಗಾಣಿಕೆಯೆಂಬ ಅನೈತಿಕ ಸಾಗಾಣಿಕೆಯ ಘೋರ ಅಪರಾದದ ಕೆಟ್ಟ ವೃತ್ತವನ್ನು ಪೂರ್ಣಗೊಳಿಸುತ್ತವೆ.

ಲೈಂಗಿಕ ಕಳ್ಳ ಸಾಗಾಣಿಕೆಯು ಸಾಮಾಜಿಕ, ಕಾನೂನಾತ್ಮಕ ಮತ್ತು ಲಿಂಗ ಆಧಾರಿತ ಮೂರು ಆಯಾಮಗಳ ವ್ಯುತ್ಪತ್ತಿಯಾಗಿದೆ. ಮೊದಲನೆಯದಾಗಿ ಈ ಕನ್ಯತ್ವವು ಪುರುಷರಿಂದ ನಿಗ್ರಹಿಸಲ್ಪಟ್ಟ ಕಾರಣ ಮಹಿಳೆಯರಲ್ಲಿ ಉಂಟಾಗುವ ಸಾಮಾಜಿಕ ದುರ್ಬಲತೆಗಳ ಪರಿಣಾಮವಾಗಿದೆ, ಮತ್ತು ಅವರ ಬಲಹೀನ ಸಾಮಾಜಿಕ ಸ್ಥಾನಮಾನದಿಂದಾಗಿದೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಚಾಲ್ತಿಯಲ್ಲಿರುವ ಒಂದು ಕಲ್ಪನೆ ಅಥವಾ ನಂಬಿಕೆ ಎಂದರೆ ಹೆಣ್ಣು ಯಾವಾಗಲು ಪುರುಷನಿಗೆ ಸಂತೋಷವನ್ನು ನೀಡುವುದು ಮತ್ತು ಅವರಿಗೆ ಸಾಧ್ಯವಿರುವ ಎಲ್ಲಾ ರೀತಿಯಲ್ಲಿ ಅವನ ಸೇವೆಯನ್ನು ಮಾಡುವುದು. ಎರಡನೆಯದಾಗಿ ಲೈಂಗಿಕ ಕಳ್ಳಸಾಗಣೆಯ ಲಿಂಗ ವಿರುದ್ಧದ ಅಪರಾಧ ಮತ್ತು ಒಂದು ರೀತಿಯ ಸ್ತ್ರೀಯಾತ್ಮಕತೆಯ ಶೋಷಣೆಯಾಗಿದೆ. ಮೂರನೆಯದಾಗಿ ಇದು ಹೆಣ್ಣಿನ ದೇಹದ ವಿರುದ್ಧದ ಕಾನೂನು ಪಾವಿತ್ರ್ಯದಲ್ಲದ ಅಪರಾಧವಾಗಿದೆ.

ಈ ಅನೈತಿಕ ಸಾಗಾಣಿಕೆಯು ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ. ಮಾನವನ ಘನತೆ ಮತ್ತು ಸಮಗ್ರತೆಗೆ ಅಪಚಾರವೆಸಗಿದೆ. ಹಾಗೂ ಬಲಿಪಶುಗಳ ಗುಲಾಮಗಿರಿಗೆ ಕಾರಣವಾಗಿದೆ. ಭಾರತೀಯ ಸಂವಿಧಾನದಲ್ಲಿ ವಿವರಿಸಿರುವಂತೆ ಮಾನವ ಹಕ್ಕುಗಳು, ಅಳಿಸಲಾಗದ, ಇನ್ನೊಬ್ಬರಿಗೆ ವರ್ಗಾಯಿಸಲಾಗದ ಮತ್ತು ಸಾರ್ವತ್ರಿಕವಾದವುಗಳಾಗಿವೆ. ಆದರೆ ಲೈಂಗಿಕ ಕಳ್ಳಸಾಗಾಣಿಕೆಯು ಬದುಕುವ ಹಕ್ಕು ಮತ್ತು ಘನತೆಯಿಂದ ಜೀವನವನ್ನು ರೂಪಿಸುವ ಎಲ್ಲಾ ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ.

ಅನೈತಿಕ ಸಾಗಾಣಿಕೆಯ ಸಮಸ್ಯೆಯು ಪ್ರಮುಖವಾಗಿ ಎರಡು ಅಂಶಗಳೊಂದಿಗೆ ನಿಕಟವಾದ ಸಂಬಂಧ ಹೊಂದಿದೆ. ಮೊದಲನೆಯದಾಗಿ ಇದು ಕಟ್ಟುನಿಟ್ಟಾದ ಅರ್ಥದಲ್ಲಿ ಒಂದು ವ್ಯಾಪಾರವಾಗಿದ್ದು, ಬೇಡಿಕೆ ಮತ್ತು ಪೂರೈಕೆ ಮೂಲಭೂತವಾಗಿದೆ. ಇದರ ಜೊತೆಗೆ ಹಲವಾರು ಲೈಂಗಿಕ ಅಭ್ಯಾಸಗಳು ಇರುವುದರಿಂದ ಸಾಗಾಣಿಕೆದಾರರು ಹೆಣ್ಣು ಮಕ್ಕಳನ್ನು ಬಳಸುತ್ತಾರೆ ಮತ್ತು ಅವರನ್ನು ಸಾಗಾಣಿಕೆ ಮಾಡುತ್ತಾರೆ. ಈ ಚಲನೆಯು ಮಹಿಳೆ ಮತ್ತು ಹೆಣ್ಣು ಮಕ್ಕಳ ದೇಹಗಳನ್ನು ಮಾರುಕಟ್ಟೆಗೆ ಸರಬರಾಜು ಮಾಡುವಂತೆ ಬೇಡಿಕೆಯನ್ನಿಡುತ್ತದೆ.

ಈ ಶೋಷಣೆಗೆ ಗುರಿಯಾಗುವ ಮಹಿಳೆಯರು ಮತ್ತು ಹೆಣ್ಣುಮಕ್ಕಳ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಜನಾಂಗೀಯ ಅಂಶಗಳು ಮತ್ತು ಆಂತರಿಕ ಹಾಗೂ ವೈಯಕ್ತಿಕ ಅಂಶಗಳು ಹೆಚ್ಚಾಗಿ ಲೈಂಗಿಕ ಉದ್ಯಮಕ್ಕೆ ಗುರಿಯಾಗಲು ಒತ್ತಾಯಿಸಲ್ಪಡುತ್ತವೆ. ಕಳ್ಳಸಾಗಾಣಿಕೆದಾರರು ಮತ್ತು ಪಿಂಪುಗಳ ತಂತ್ರಗಳು ದೇಶೀಯ ಮತ್ತು ಅಂತರಾಷ್ಟ್ರೀಯ ಸಂದರ್ಭಗಳಿಗೆ ಅನುಗುಣವಾಗಿ ಭಿನ್ನವಾಗಿರಬಹುದು. ಆದರೆ ಸರಕುಗಳನ್ನು ಪೂರೈಸಲು ಅವರ ಉದ್ದೇಶ ಒಂದೇ ಆಗಿರುತ್ತದೆ.

ಅಂದರೆ ಹೆಣ್ಣುಮಕ್ಕಳ ಬೇಡಿಕೆ ಮತ್ತು ಅವರ ಲೈಂಗಿಕ ಶೋಷಣೆಯಿಂದ ಲಾಭ ಪಡೆಯುವುದು. ಎರಡನೆಯದಾಗಿ, ಸಾಗಾಣಿಕೆಯು ಮಾನವ ಹತಾಶೆ, ಅಭದ್ರತೆ ಮತ್ತು ಬಡತನವನ್ನು ಬೆಳೆಸುತ್ತದೆ. ಸುರಕ್ಷಿತ ಜೀವನೋಪಾಯದ ಕೊರತೆಯು ಬಹಳಷ್ಟು ಸಂಖ್ಯೆಯ ಹೆಣ್ಣುಮಕ್ಕಳನ್ನು ಮತ್ತು ಮಹಿಳೆಯರನ್ನು ತಮ್ಮ ಮನೆಗಳನ್ನು ತೊರೆಯುವಂತೆ ಮಾಡುತ್ತದೆ. ಏಕೆಂದರೆ ಅವರ ಕುಟುಂಬಗಳ ಜೀವನ ಪರಿಸ್ಥಿತಿಗಳನ್ನು ಸುಧಾರಿಸಲು ಆದಾಯವನ್ನು ಹುಡುಕುವುದು ಅನಿವಾರ್ಯವಾಗಿರುತ್ತದೆ. ಪ್ರಸ್ತುತ ಜಾಗತೀಕರಣ ಪ್ರಕ್ರಿಯೆಯ ಹಲವಾರು ಆರ್ಥಿಕ ಉದಾರೀಕರಣ ನೀತಿಗಳು ಬಡತನವನ್ನು ಉಂಟುಮಾಡುತ್ತಿವೆ. ಇದರ ಜೊತೆಗೆ ಗ್ರಾಮೀಣ ಭಾಗವಹಿಸುವಿಕೆಯಲ್ಲಿ ಮಹಿಳೆಯರ ಪಾತ್ರ ಕಡಿಮೆಯಾಗುತ್ತಿದೆ. ಮತ್ತು ಮಹಿಳಾ ನಿರುದ್ಯೋಗವನ್ನು ಹೆಚ್ಚಳ ಮಾಡುತ್ತಿದೆ. ಇದು ಪ್ರಚೋದಿಸುವ ಮತ್ತು ಕಿತ್ತುಕೊಳ್ಳುವ ಅಂಶಗಳಿಂದ ಪ್ರೇರಿತವಾಗಿ ಲಿಂಗ ಚಲನಶೀಲತೆಯನ್ನು ಉಂಟುಮಾಡುತ್ತದೆ. ಈ ಎಲ್ಲಾ ಅಂಶಗಳು ಒಟ್ಟಾಗಿ ಲೈಂಗಿಕ ಕಳ್ಳಸಾಗಾಣೆಯನ್ನು ಮಾನವ ವ್ಯಾಪಾರದಂತೆ ಮಾಡುತ್ತದೆ.

ಲೈಂಗಿಕ ಕಳ್ಳಸಾಗಾಣಿಕೆಯನ್ನು ಅದರ ವ್ಯಾಪಾರದ ಎರಡು ಮೂಲಭೂತ ಅಂಶಗಳನ್ನು ಬಹಿರಂಗಪಡಿಸುವುದರ ಮೂಲಕ ಅರ್ಥಮಾಡಿಕೊಳ್ಳಲು ಪ್ರಯತ್ನಿಸಬಹುದು.

* ಬೇಡಿಕೆ ಮತ್ತು ಪೂರೈಕೆ/ಪುಶ್ ಮತ್ತು ಪುಲ್ ಫ್ಯಾಕ್ಟರ್
* ಲಿಂಗ ಆಧಾರಿತ ದುರ್ಬಲತೆಗಳು

### ೪.೩ ಬೇಡಿಕೆ ಮತ್ತು ಪೂರೈಕೆ/ ಪುಶ್ ಮತ್ತು ಪುಲ್ ಫ್ಯಾಕ್ಟರ್

ಬೇಡಿಕೆ ಆಧಾರಿತ ಮಹಿಳೆಯರ ಪೂರೈಕೆ ಸಾಮಾನ್ಯವಾಗಿದೆ ಮತ್ತು ಸ್ಪಷ್ಟವಾಗಿ ಅರ್ಥವಾಗುವಂತಹದ್ದು. ಶೇ.೨೦% ಪುರುಷರಲ್ಲಿ ಬೇಡಿಕೆಯಿದ್ದರೆ ಮಹಿಳೆಯರಲ್ಲಿ ಸರಾಸರಿ ಬೇಡಿಕೆ ೮೦% ಇದೆ. ಇದು ಇಡೀ ವಿದ್ಯಮಾನವನ್ನು ಲಿಂಗಾಧಾರಿತ ಅಪರಾಧವನ್ನಾಗಿ ಮಾಡುತ್ತದೆ. ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ ಬೇಡಿಕೆ ಇರುವ ಸರಕುಗಳ ಪೂರೈಕೆ ಎಂದು ಗುರುತಿಸಬಹುದು. ಪುರುಷರ ಸಾಗಾಣಿಕೆ ೨೧% ಇದ್ದರೆ ಇದು ಹೆಣ್ಣುಮಕ್ಕಳಲ್ಲಿ ೭೯% ಕಳ್ಳಸಾಗಾಣಿಕೆ ಉಂಟಾಗಿರುತ್ತದೆ.

#### ಎ.ಪುಶ್ ಫ್ಯಾಕ್ಟರ್ಸ್

ಇಡೀ ಪ್ರಕ್ರಿಯೆಯನ್ನು ಒಂದು ಏಕೈಕ ಕ್ರಿಯಾತ್ಮಕವು ಏಕೀಕರಿಸಲಾಗುವುದಿಲ್ಲ. ಇದು ದುರ್ಬಲತೆಗಳು ಮತ್ತು ಬೇಡಿಕೆಯ ಕ್ರೋಢಿಕರಣವಾಗಿದ್ದು, ಮಾನವ ಕಳ್ಳ ಸಾಗಾಣೆಯ ವ್ಯಾಪಾರದಲ್ಲಿ ಹೆಣ್ಣುಮಕ್ಕಳನ್ನು ಗುರಿಯಾಗಿಸಲು ಬಹಳ ಅವಶ್ಯಕವಾಗಿರುತ್ತದೆ. ಹೆಣ್ಣುಮಕ್ಕಳನ್ನು ಅವರ ದುರ್ಬಲ ಪರಿಸ್ಥಿತಿಗಳಿಂದಾಗಿಯೇ ಅನೈತಿಕ ಸಾಗಾಣಿಕೆಗೆ ತಳ್ಳಲಾಗುತ್ತದೆ. ಈ ವಿಧದ ರೀತಿಯ ದುರ್ಬಲತೆಗಳನ್ನು ನಂತರದಲ್ಲಿ ಚರ್ಚಿಸಲಾಗಿದೆ. ಒಂದು ಕಡೆ ಆ ದುರ್ಬಲತೆಗಳು ಹೆಣ್ಣುಮಕ್ಕಳನ್ನು ತಮ್ಮ ಕೌಟುಂಬಿಕ ಪ್ರಪಂಚದಿಂದ ಅಥವಾ ಚಿಪ್ಪುಗಳಿಂದ ಹೊರಗೆ ಬರಲು ಮತ್ತು ಉತ್ತಮ ಜೀವನವನ್ನು ನಿರೀಕ್ಷಿಸಿ

ಹೊರಗಿನ ಪ್ರಪಂಚಕ್ಕೆ ಕಾಲಿರಿಸಲು ಪ್ರೇರೇಪಿಸುತ್ತವೆ. ಆದರೆ ಇದೇ ದುರ್ಬಲತೆಗಳನ್ನು ಕಳ್ಳಸಾಗಾಣಿಕೆದಾರರು ತಮ್ಮ ಹಿತಾಸಕ್ತಿಗಾಗಿ ಅಂತಹ ಹೆಣ್ಣುಮಕ್ಕಳನ್ನು ಆಮಿಷಕ್ಕೆ ಒಡ್ಡುವ ಮೂಲಕ ತಮ್ಮದಾಗಿಸಿಕೊಳ್ಳುತ್ತಾರೆ.

**ಬಿ. ಪುಲ್ ಫ್ಯಾಕ್ಟರ್ಸ್**

ಈ ಪುಲ್ ಪ್ಯಾಕ್ಟರ್ ಹೆಣ್ಣು ಪೂರೈಕೆಯನ್ನು ಉತ್ಪಾದಿಸುತ್ತದೆ. ಯಾವುದೇ ಇತರ ವ್ಯಾಪಾರ ಮಾಡುವ ವ್ಯಾಪಾರಿಗಳಂತೆ, ಅಂದರೆ ಕಳ್ಳಸಾಗಾಣಿಕೆದಾರರು ಬೇಡಿಕೆಯಿರುವ ಸರಕುಗಳನ್ನು ಪೂರೈಸುತ್ತಾರೆ. ಹೆಣ್ಣುಮಕ್ಕಳಿಗೆ ಬೇಡಿಕೆಯಿದ್ದರೆ ಸರಬರಾಜು ಅವುಗಳಲ್ಲಿ ಮಾತ್ರ ಇರಬೇಕು. ದಾಖಲೆಗಳು ಸೂಚಿಸುವಂತೆ ಒಟ್ಟು ಕಳ್ಳಸಾಗಾಣಿಕೆ ಮಾಡುವವರಲ್ಲಿ ೯೩% ಹೆಣ್ಣುಮಕ್ಕಳ ಸಾಗಾಣಿಕೆಯು ವಾಣಿಜ್ಯ ಲೈಂಗಿಕ ಶೋಷಣೆಗಾಗಿಯೆ ನಡೆಯುತ್ತಿದೆ. ಅಂದರೆ ಬೇಡಿಕೆ ಎಷ್ಟಿರಬಹುದು ಎಂದು ಊಹಿಸಿದರೂ ಆಘಾತವಾಗುತ್ತದೆ.

ಹೆಣ್ಣುಮಕ್ಕಳ ಬೇಡಿಕೆಯುನ್ನು ಎರಡು ಅಂತರ್ಸಂಬಂಧಿತ ನಡವಳಿಕೆಗಳಲ್ಲಿ ಅರ್ಥೈಸಿಕೊಳ್ಳಬಹುದು, ಒಂದು ಶೋಷಕ ನಡವಳಿಕೆ ಮತ್ತು ಎರಡನೆಯದು ಕಳ್ಳಸಾಗಾಣೆದಾರರ ವರ್ತನೆ ಈ ಎರಡೂ ದೃಷ್ಟಿಕೋನಗಳು ಪರಸ್ಪರ ಅತಿಕ್ರಮಿಸುತ್ತವೆ.

ಹೆಣ್ತನದ ಶೋಷಣೆಯಿಂದ ಆದಾಯವನ್ನು ಗಳಿಸುವುದರಿಂದ ಶೋಷಕರು ಹೆಣ್ಣು ಮಕ್ಕಳಿಗಾಗಿ ಹಾತೊರೆಯುತ್ತಾರೆ. ಸಾಗಾಣಿಕೆಯಾದ ಹೆಣ್ಣು ಅವರ ಕಪಿಮುಷ್ಠಿಯಿಂದ ಹೊರಬರಲು ಯೋಚಿಸುವಂತಿಲ್ಲ. ಸ್ವಾತಂತ್ರ್ಯದ ಹರಣವಾಗಿರುತ್ತದೆ. ಹೊರಹೋಗಲು ಅವಕಾಶವಿರುವುದಿಲ್ಲ. ಅದು ಅವರಿಗಷ್ಟೇ ಅಲ್ಲ ಕಳ್ಳಸಾಗಾಣಿಕೆ ಮಾಡುವ ವ್ಯಕ್ತಿಗಳೂ ಸಹ ನಿರ್ದೇಶಿಸಲ್ಪಟ್ಟಿರುತ್ತಾರೆ.

ಕಳ್ಳಸಾಗಾಣಿಕೆದಾರರು ಈ ಕೆಳಕಂಡ ಅಂಶಗಳಿಂದ ಸಾಗಾಣಿಕೆಗೆ ಹೆಣ್ಣುಮಕ್ಕಳನ್ನು ಗುರುತಿಸುವ ಗುರಿ ಹೊಂದಿದ್ದಾರೆ.

* ಮೊದಲನೆಯದಾಗಿ, ಅವರು ದುರ್ಬಲರಾಗಿದ್ದರೆ.
* ಎರಡನೆಯದಾಗಿ, ಅವರು ಮೃದುವಾಗಿರಬೇಕು.
* ಮೂರನೆಯದಾಗಿ, ಬಾರಿ ಸಂಸ್ಥೆಗಳು ಕಡಿಮೆ ಅನುಮಾನಾಸ್ಪದತೆಯನ್ನು ಹೊಂದಿರಬೇಕು.
* ನಾಲ್ಕನೆಯದಾಗಿ, ಹೆಚ್ಚು ಬೇಡಿಕೆ ಹೊಂದಿರಬೇಕು.
* ಐದನೆಯದಾಗಿ, ಸ್ವಭಾವದಲ್ಲಿ ಅಧೀನರಾಗಿದ್ದರೆ, ಅಪರಾಧದ ವಿರುದ್ಧ ಅಷ್ಟೇನು ವಿರೋಧಿಸುವುದಿಲ್ಲ.

ಹೆಣ್ಣು ಮಕ್ಕಳ ಮೂಲಕ ತಮ್ಮ ದುಷ್ಟ ಉದ್ದೇಶಗಳನ್ನು ಕಾರ್ಯಗತಗೊಳಿಸಬೇಕೆಂದು ಈ ಶೋಷಕರು ಬಯಸುತ್ತಾರೆ. ಕಳ್ಳಸಾಗಾಣೆದಾರರು ಹೆಣ್ಣುಮಕ್ಕಳ ದುರ್ಬಲತೆಗಳನ್ನು ತಮ್ಮ

ಪ್ರಯೋಜನಗಳಿಗೆ ಬಳಸಿಕೊಳ್ಳುತ್ತಾರೆ. ಆಕರ್ಷಕ ಸಂಬಳ, ಉತ್ತಮ ಹಣ, ಉನ್ನತ ಆಧುನಿಕ ಜೀವನಶೈಲಿ ಮತ್ತು ವಿವಾಹಗಳ ಆಸೆ, ಭರವಸೆಗಳೊಂದಿಗೆ ಅವರನ್ನು ಆಮಿಷವೊಡ್ಡುವ ಮೂಲಕ ಕಳ್ಳಸಾಗಾಣಿಕೆಯ ವ್ಯಾಪ್ತಿಗೆ ಎಳೆಯುತ್ತಾರೆ.

ಕಳ್ಳಸಾಗಾಣಿಕೆಯ ಬೇಡಿಕೆಯು ಹೆಣ್ಣುಮಕ್ಕಳ ಕಾರ್ಯನೀತಿಯನ್ನು ಪ್ರೇರೇಪಿಸಿದೆ. ಕಳ್ಳಸಾಗಾಣೆ ಮೂಲಕ ಹೆಣ್ಣು ಪೂರೈಕೆ ಇಡೀ ಸಂಕೀರ್ಣ ಪರಿಕಲ್ಪನೆಯನ್ನು ಸರಳ ವ್ಯಾಪಾರದ ವ್ಯವಹಾರವನ್ನಾಗಿ ಮಾಡುತ್ತದೆ. ಅಲ್ಲಿ ವ್ಯಾಪಾರಿ ಬೇಡಿಕೆಗೆ ತಕ್ಕಂತೆ ಸರಕುಗಳನ್ನು ನೀಡಲು ಪ್ರಯತ್ನಿಸುತ್ತಾನೆ. ಆ ಸಂದರ್ಭದಲ್ಲಿ ಗ್ರಾಹಕ ಮತ್ತು ಪೂರೈಕೆದಾರರಿಬ್ಬರೂ ಸಹ ಪುರುಷರೇ ಆಗಿರುತ್ತಾರೆ.

### ೪.೪ ಲಿಂಗ ಆಧಾರಿತ ದುರ್ಬಲತೆಗಳು

ಹೆಣ್ಣು ಜೈವಿಕ ಸಂರಚನೆಯಿಂದಾಗಿ ದುರ್ಬಲಳು. ಆದರೆ ಅನೇಕ ಸಂಗತಿಗಳ ಮೂಲಕ ಅವಳನ್ನು ಗುರುತಿಸುವುದಾದರೆ, ಯುಗಗಳಿಂದ ಪುರುಷ ಅಧೀನತೆಯಿಂದಾಗಿ ಸಬಲೀಕರಣದ ಕೊರತೆ, ಸಾಮಾಜಿಕ ಮನೋಧರ್ಮದಿಂದ ಅಂತರ್ಗತ ಪ್ರತಿಬಂಧಗಳು ಅಥವಾ ಭಾವನಾತ್ಮಕ ನಂಬಿಕೆಗಳಿಂದ ಹಿಡಿದು ಸ್ವಾರ್ಥದ ಪಾತ್ರದವರೆಗೆ ಹೆಣ್ಣಿನಲ್ಲಿರುವ ದುರ್ಬಲತೆಗಳು ಹೀಗಿವೆ:

#### ೧. ದೈಹಿಕ ದುರ್ಬಲತೆಗಳು

ಸಾಮಾನ್ಯ ರೀತಿಯ ದುರ್ಬಲತೆಯೆಂದರೆ ಲಿಂಗಾಧಾರಿತವಾಗಿ ರಚಿತವಾದ ದುರ್ಬಲತೆಯಾಗಿದೆ. ಕುಟುಂಬದಲ್ಲಿ ಪುರುಷರು ಹೆಣ್ಣು ಮಕ್ಕಳನ್ನು ಅವರ ಹಕ್ಕುಗಳ ಬಗ್ಗೆ ತಿಳಿಯಲು ಸ್ವಾತಂತ್ರ್ಯ ನೀಡದಿರುವ ಕಾರಣ. ಅದರ ಅರಿವು ಇಲ್ಲದ ಕಾರಣ ಅವರನ್ನು ಹೆಚ್ಚು ಶೋಷಣೆಗೆ ಒಳಪಡಿಸುತ್ತದೆ. ಹೆಣ್ಣು ದೈಹಿಕವಾಗಿ ಪುರುಷನಿಗಿಂತ ದುರ್ಬಲಳಾಗಿರುವುದರಿಂದ ಮತ್ತು ಭಾರತದಲ್ಲಿ ಹೆಣ್ಣನ್ನು ಪುರುಷನ ಆಸ್ತಿಯೆಂದು ಪರಿಗಣಿಸಿರುವುದರಿಂದ ಇದು ಒಂದು ದುರ್ಬಲತೆಯಾಗಿದೆ. ಆದರೆ ಪುರುಷರು ಬಯಸಿದ ರೀತಿಯಲ್ಲಿ ಪಾಲ್ಗೊಳ್ಳಲು ಅವರು ಸ್ವತಂತ್ರರು. ಭಾರತದಲ್ಲಿ ಸುಮಾರು ೬೭% ಮಹಿಳೆಯರು ತಮ್ಮ ಸಂಬಂಧಿಕರು ಮತ್ತು ನೆರೆ ಹೊರೆಯವರಿಂದ ಶೋಷಣೆಗೆ ಒಳಗಾಗುತ್ತಾರೆ.

ಮಹಿಳೆಯರು ಮತ್ತು ಮಕ್ಕಳ ದುರ್ಬಲತೆಗೆ ಲಿಂಗತಾರತಮ್ಯ ಮತ್ತು ಪಿತೃಪ್ರಧಾನ ಮನಸ್ಥಿತಿಯು ಬಹಳ ಮುಖ್ಯವಾಗಿ ಕಾರಣವಾಗಿದೆ.

#### ೨. ಅನಕ್ಷರತೆ ಆಧಾರಿತ ದುರ್ಬಲತೆ

೨೦೧೧ರ ಹೊತ್ತಿಗೆ ಮಹಿಳಾ ಅನಕ್ಷರತೆಯ ಪ್ರಮಾಣವು ೬೫.೪೬%ರಷ್ಟಿದೆ. ಅಖಿಲ ಭಾರತ ಸಾಕ್ಷರತಾ ಪ್ರಮಾಣವು ೭೪.೦೪% ಮತ್ತು ಭಾರತೀಯ ವಯಸ್ಕ ಜನಸಂಖ್ಯೆಯ ಪುರುಷ ಸಾಕ್ಷರತೆಯು ೮೨.೧೪% ರಷ್ಟಿದೆ. ಮತ್ತು ಸ್ತ್ರೀ ಜನಸಂಖ್ಯೆಯ ಸುಮಾರು ೧/೪ರಷ್ಟು ಮಹಿಳೆಯರು ಅನಕ್ಷರಸ್ಥರು"[೩] ಶೈಕ್ಷಣಿಕ ಸ್ಥಿತಿಯು ಸಮಾಜದ ಅಭಿವೃದ್ಧಿಗೆ ಸಂಬಂಧಿಸಿದ ಅಂಶವಾಗಿದೆ.

ಇದು ಮಹಿಳಾ ಸ್ಥಾನಮಾನದ ಸಮಸ್ಯೆಯ ಸಬಲೀಕರಣದ ಮಟ್ಟ ಮತ್ತು ಹೊಸ ಅವಕಾಶಗಳಿಗೆ ಪ್ರತಿಕ್ರಿಯಿಸುವ ಅಥವಾ ಪ್ರತಿಕೂಲ ಸಂದರ್ಭಗಳನ್ನು ನಿಭಾಯಿಸುವ ಸಾಮರ್ಥ್ಯವು ಒಂದು ಸಂಕೀರ್ಣವಾದದ್ದು. ಇವುಗಳನ್ನು ಯಾವುದೇ ಅಂಕಿಅಂಶಗಳ ಪ್ರೊಫೈಲ್‌ನಿಂದ ಸಮರ್ಪಕವಾಗಿ ಸೆರೆಹಿಡಿಯಲಾಗುವುದಿಲ್ಲ ಎಂಬುದು ದಾಖಲೆಯಿಂದ ಸ್ಪಷ್ಟವಾಗಿದೆ.

ಅನಕ್ಷರತೆಗೆ ಪ್ರಮುಖ ಕಾರಣಗಳು

೧. ಕಡಿಮೆ ಸಂಪನ್ಮೂಲಗಳು

೨. ಸಾಕ್ಷರತೆಯ ಮಹತ್ವದ ಕುರಿತು ಅರಿವು ಕಡಿಮೆ ಇರುವುದು.

೩. ಹೆಣ್ಣಿಗಿಂತ ಗಂಡಿನ ಶಿಕ್ಷಣಕ್ಕೆ ಆದ್ಯತೆ

೪. ನಮ್ಮ ದೇಶದ ಬಹುತೇಕ ಭಾಗಗಳಲ್ಲಿ ಬಹಳ ಬೇಗ ಚಿಕ್ಕ ವಯಸ್ಸಿಗೆ ಹೆಣ್ಣುಮಕ್ಕಳ ವಿವಾಹ.

**೩. ನಿರುದ್ಯೋಗ ಆಧಾರಿತ ದುರ್ಬಲತೆಗಳು**

ಬಡತನದ ಸ್ತ್ರೀಕರಣ ಮತ್ತು ಹೆಣ್ಣುಮಕ್ಕಳ ವಲಸೆಯು ಕಳ್ಳಸಾಗಣೆಗೆ ಅವಕಾಶವನ್ನು ನೀಡಿದೆ. ಲಾಭದಾಯಕ ಉದ್ಯೋಗದ ಅಗತ್ಯತೆಯಿಂದಾಗಿ, ತಮ್ಮ ಮನೆಯ ನೆಲೆಗಳಲ್ಲಿನ ಉದ್ಯೋಗಗಳ ಕೊರತೆಯೊಂದಿಗೆ ಮಹಿಳೆಯರು ಮತ್ತು ಮಕ್ಕಳನ್ನು, ಸಾಗಾಣೆದಾರರು ಸುಲಭವಾಗಿ ಬೇಟೆಯಾಡುತ್ತಾರೆ. ಅವರ ಪ್ರಯಾಣಕ್ಕಾಗಿ ಹಣ ನೀಡುವ ರೀತಿಯಲ್ಲಿ ಸಹಾಯ ಮಾಡುತ್ತಾರೆ. ಮತ್ತು ವಿಶೇಷವಾಗಿ ಗಡಿ ಭಾಗಗಳಲ್ಲಿ ಉದ್ಯೋಗ ನೀಡುವುದಾಗಿ ನಂಬಿಸುತ್ತಾರೆ. ಹೀಗಾಗಿ ನಿರುದ್ಯೋಗ ಮತ್ತು ಬಡತನವು ಸಂಭಾವ್ಯ ಬಲಿಪಶುಗಳನ್ನು ಕಳ್ಳಸಾಗಾಣಿಕೆದಾರರ ಸಾಗಾಣಿಕೆಗೆ ಗುರಿಯಾಗುವಂತೆ ಮಾಡುತ್ತದೆ. "ಭಾರತದಲ್ಲಿ ನಿರುದ್ಯೋಗ ದರವು ೯.೪% ಮತ್ತು ಬಡತನ ೨೧.೯% ಮತ್ತು ಈ ಕಾರಣಕ್ಕೆ ಬಲಿಯಾದವರಲ್ಲಿ ೩/೪ಕ್ಕಿಂತ ಹೆಚ್ಚು ಅಂದರೆ ೭೬.೩%ರಷ್ಟು ಬಡತನ ಮತ್ತು ನಿರುದ್ಯೋಗದಿಂದಾಗಿ ಕಳ್ಳಸಾಗಾಣಿಕೆದಾರರಿಗೆ ಮಾರಾಟವಾಗಿದ್ದಾರೆ".[೪]

೧೩.೪% ಪ್ರಕರಣಗಳಲ್ಲಿ ೧೦.೩% ಪ್ರಕರಣಗಳು ಹಣದ ದುರಾಸೆಗೆ ಮಾರಾಟವಾಗಿದ್ದಾರೆ. ಸಂಪ್ರದಾಯ ಮತ್ತು ಸಮುದಾಯ ಪದ್ಧತಿಗಳು ಪ್ರಮುಖ ಅಂಶಗಳಾಗಿದೆ. ಸ್ಥಳೀಯ ಉದ್ಯೋಗಕ್ಕೆ ಅವಕಾಶದ ಕೊರತೆಯು ಒಂದು ಮುಂದೆ ತಳ್ಳುವ ಅಂಶವಾಗಿದೆ. ಗಮ್ಯ ಸ್ಥಾನಗಳಲ್ಲಿ, ಪ್ರದೇಶಗಳಲ್ಲಿ ಹೆಚ್ಚು ಉತ್ತಮ ಉದ್ಯೋಗಾವಕಾಶಗಳು, ಹೆಚ್ಚು ಅಭಿವೃದ್ಧಿ ಹೊಂದಿದ ಪ್ರದೇಶಗಳಲ್ಲಿ ಮಹಿಳಾ ವಲಸೆ ಕಾರ್ಮಿಕರಿಗೆ ಬೇಡಿಕೆ ಮತ್ತುಆರ್ಥಿಕತೆಯಲ್ಲಿ ಬೆಲೆಗಳ ಏರಿಕೆಯೂ ಸಹ ಇದಕ್ಕೆ ಕಾರಣವಾದ ಅಂಶಗಳಾಗಿವೆ. ಇದಲ್ಲದೆ. ಗೃಹ ಸಹಾಯಕ್ಕೆಂದು ಆಯ್ಕೆ ಮಾಡಿಕೊಂಡು ಅವರನ್ನು ವೇಶ್ಯಾವಾಟಿಕೆಗೆ ಬಳಸುವಂತಹ ಗಮ್ಯ ಸ್ಥಾನಗಳಲ್ಲಿ ಮಹಿಳೆಯರು ಮತ್ತು ಪುರುಷರ ಸಂಖ್ಯೆ ಹೆಚ್ಚುತ್ತಿದೆ. ತಮ್ಮ

ರಾಜ್ಯಗಳಲ್ಲಿನ ಜಿಲ್ಲೆಗಳಲ್ಲಿ ಮತ್ತು ಇತರ ರಾಜ್ಯಗಳಿಗೆ ಉದ್ಯೋಗ ಅವಕಾಶಗಳಿಂದಾಗಿ ತೆರಳಿದ ಮಹಿಳೆಯರ ಸಂಖ್ಯೆ ಕ್ರಮವಾಗಿ ೪೪.೮% ಮತ್ತು ೧೮.೯%ರಷ್ಟು ಇದೆ.

**೪. ಉದ್ಯೋಗ ಆಧಾರಿತ ದುರ್ಬಲತೆ**

ಈ ಮೊದಲೇ ಹೇಳಿದ ಉದ್ಯೋಗ ಆಧಾರಿತ ದುರ್ಬಲತೆಗಳ ಅಡಿಯಲ್ಲಿಯೇ ಉದ್ಯೋಗ ಆಧಾರಿತ ಇತರ ಉಪವಿಭಾಗಗಳನ್ನು ಹೊಂದಿದೆ. ವ್ಯತ್ಯಾಸವೆಂದರೆ ಇಲ್ಲಿ ಕುಟುಂಬಗಳು ಅಂತಹ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಕಡಿಮೆ ಸಂಬಳವಿರಬಹುದು. ಅಥವಾ ಸಂಬಳವೇ ಇಲ್ಲದಿರಬಹುದು. ಈ ಪರಿಸ್ಥಿತಿಯ ಕೊರತೆಯು ಅಂತಹ ಕುಟುಂಬದ ಹೆಣ್ಣುಮಕ್ಕಳನ್ನು ಅಲಂಕಾರಿಕ ಜೀವನ ಶೈಲಿ ಮತ್ತು ಸುಂದರವಾದ ಜೀವನ ಮತ್ತು ಹೆಚ್ಚಿನ ಆದಾಯದ ಸಂಬಳದೊಂದಿಗೆ ಉದ್ಯೋಗ ಎಂದು ಸುಳ್ಳು ಭರವಸೆಗಳನ್ನು ನೀಡಿ ಅನೈತಿಕ ಸಾಗಾಣೆದಾರರು ತಮ್ಮ ಕಡೆ ಸಳೆಯುತ್ತಾರೆ. "ಉದ್ಯೋಗ ಪಡೆಯುವ ಕಾರಣದಿಂದಾಗಿ ೨೭% ಮಹಿಳೆಯರು ಅನೈತಿಕ ಸಾಗಾಣೆಗೆ ಒಳಗಾಗಿದ್ದಾರೆ".[೫]

**೫. ಸಾಮಾಜಿಕ ದುರ್ಬಲತೆಗಳು**

ಮಹಿಳೆಯರಿಗೆ ತಮ್ಮ ಹಕ್ಕುಗಳ ಕುರಿತು ಅರಿವು ಬಹಳ ಕಡಿಮೆ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ಹೆಣ್ಣುಮಕ್ಕಳನ್ನು ಕಳ್ಳಸಾಗಾಣಿಕೆ ವ್ಯಾಪಾರಕ್ಕೆ ಸುಲಭವಾಗಿ ಬೇಟೆಯಾಡಲಾಗುತ್ತದೆ. ವಿವಿಧ ರೀತಿಯ ಸಮಾನತೆಗಳ ಅನುಪಸ್ಥಿತಿಯಲ್ಲಿ ಮಹಿಳೆಯರನ್ನು ಸಾಮಾಜಿಕ ನಿಯಂತ್ರಣದ ಮೂಲಕ ಹೇಗೆ ಬೇಕೊ ಹಾಗೆ ಬಳಸಲಾಗುತ್ತದೆ. ಜನನದ ಮೊದಲು ಪ್ರಾರಂಭವಾಗುವ ಅನಾನುಕೂಲತೆ, ಹೆಣ್ಣುಮಕ್ಕಳು ಮತ್ತು ಮಹಿಳೆಯರ ಜೀವನದುದ್ದಕ್ಕೂ ಮುಂದುವರಿಯುತ್ತದೆ. ಆದ್ದರಿಂದ ಹೆಣ್ಣಿನ ಮೇಲಿನ ಅಪರಾಧಗಳು ಹೆಚ್ಚು ಹೆಚ್ಚು ಗೋಚರಿಸುತ್ತದೆ. ಹಾಗೆಯೇ ಅನೈತಿಕ ಸಾಗಾಣಿಕೆಯ ಬಗ್ಗೆ ಸಾಹಿತ್ಯದಲ್ಲಿ ಸಾಮಾನ್ಯವಾಗಿ ವ್ಯಕ್ತಪಡಿಸಿದ ದೃಷ್ಟಿಕೋನವೂ ಇದೆ. ಅನೈತಿಕ ಸಾಗಾಣಿಕೆದಾರ ಹಿಡಿತದಿಂದ ಮರಳಿದ ಸಾವಿರಾರರು ಮಹಿಳೆಯರು ತಮ್ಮ ಅನುಭವಗಳ ಬಗ್ಗೆ ಮೌನವಾಗಿರುತ್ತಾರೆ. ವಿಶೇಷವಾಗಿ ಲೈಂಗಿಕ ದೌರ್ಜನ್ಯದ ಕುರಿತು ಮಾತನಾಡುವುದೇ ಇಲ್ಲ. ಆದರೆ ಈ ಮಹಿಳೆಯರಲ್ಲಿ ಕೆಲವರು ತಮ್ಮ ಸಮುದಾಯಗಳಲ್ಲಿ ವೈಯಕ್ತಿಕ ಸಬಲೀಕರಣಕ್ಕೆ ತಮ್ಮ ಅನುಭವಗಳನ್ನು ಹಂಚಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಇವೆಲ್ಲವೂ ಇತರ ಕೆಲವು ಹೆಣ್ಣುಮಕ್ಕಳಿಗೆ ಒಂದು ಉದಾಹರಣೆಯಾಗಿದೆ. ಮತ್ತು ಅವರು ಸಾಮಾಜಿಕ ಕಳಂಕವಾದ ಅನೈತಿಕ ಸಾಗಾಣಿಕೆಯ ಕುರಿತು ಅರಿವು ಮೂಡಿಸುತ್ತಾರೆ. ಆದರೆ ಈ ಕಳಂಕದಿಂದ ಆ ಮಹಿಳೆಯರು ಹೊರಬರಲು ಸಾಧ್ಯವಾಗದೆ ಪರ್ಯಾಯ ಉದ್ಯೋಗವನ್ನು ಹುಡುಕುವಲ್ಲಿ ತೊಂದರೆಗಳಾಗಿ ಅನಿವಾರ್ಯವಾಗಿ ವಾಣಿಜ್ಯ ಲೈಂಗಿಕ ಕೆಲಸ ಮಾಡುತ್ತಾರೆ. ಯಾವುದೇ ಜೀವನೋಪಾಯಕ್ಕೆ ಕಡಿಮೆ ಎಂದರೂ ೨ರಿಂದ ೩ ಸಾವಿರದವರೆಗೂ ಹಣದ ಅವಶ್ಯಕತೆ ಇರುತ್ತದೆ. ಹಾಗಾಗಿ ರಕ್ಷಿಸಿದ ಹೆಣ್ಣುಮಕ್ಕಳು ಹೆಚ್ಚಾಗಿ ಲೈಂಗಿಕ ಕಾರ್ಯಕರ್ತರಾಗಿ ತಮ್ಮ ಉದ್ಯೋಗ ಆಯ್ಕೆ ಮಾಡಿಕೊಳ್ಳುತ್ತಾರೆ.

## ೬. ಬಡತನದ ಸ್ತ್ರೀಕರಣ ಆಧಾರಿತ ದುರ್ಬಲತೆಗಳು

ಹೆಣ್ಣುಮಕ್ಕಳ ಮತ್ತು ಮಕ್ಕಳ ಅನೈತಿಕ ಸಾಗಾಣಿಕೆಯು ಹೆಚ್ಚಾಗಿ ಪೋಷಕರು ಮತ್ತು ಗಂಡಂದಿರ ಶೋಷಣೆಯನ್ನು ಒಳಗೊಂಡಿರುತ್ತದೆ. ಹೆತ್ತವರು, ಗಂಡಂದಿರು ತಮ್ಮ ಸಾಲ ತೀರಿಸಲು ಮಕ್ಕಳನ್ನು ಮತ್ತು ಹೆಂಡತಿಯರನ್ನು ಕಳ್ಳಸಾಗಾಣಿಕೆದಾರರಿಗೆ ಮಾರಾಟ ಮಾಡಬಹುದು. ಅಥವಾ ಕುಟುಂಬದ ಆದಾಯದ ಆಸೆಗಾಗಿ ಹೆಂಡತಿ ಮಕ್ಕಳನ್ನು ನೀಡಬಹುದು. ಬಡತನ ಮತ್ತು ಅಂಚಿನಲ್ಲಿರುವಿಕೆಯು ಅಂತಹ ತೀವ್ರ ಕ್ರಮಗಳನ್ನು ತೆಗೆದುಕೊಳ್ಳಲು ಮತ್ತು ಹೆಣ್ಣುಮಕ್ಕಳ ಕಳ್ಳಸಾಗಾಣಿಕೆಯ ಭಾಗವಾಗಿರಲು ಒತ್ತಾಯಿಸುತ್ತದೆ. ಆರ್ಥಿಕ ಅಸಮಾನತೆ ಆಧಾರಿತ ದುರ್ಬಲತೆಯು ಮತ್ತೆ ಮತ್ತೆ ಬಡತನ ಉಂಟಾಗಲು ಕಾರಣವಾಗುವುದರಿಂದ ಈ ಆರ್ಥಿಕ ಅಸಮಾನತೆಯು ಕಳ್ಳಸಾಗಾಣಿಕೆಯನ್ನು ಹೆಚ್ಚು ಹೆಚ್ಚು ಉಂಟಾಗುವಂತೆ ಮಾಡುವಲ್ಲಿ ಕಾರಣವಾಗುತ್ತದೆ.

## ೭ ಸರ್ಕಾರದಲ್ಲಿ ಭ್ರಷ್ಟಾಚಾರ ಆಧಾರಿತ ದುರ್ಬಲತೆ

ಹೆಣ್ಣು ಮಕ್ಕಳನ್ನು ಉನ್ನತ ಮಟ್ಟಕ್ಕೇರಿಸುವ ಎಲ್ಲಾ ನೀತಿಗಳು ಅವರನ್ನು ಸಬಲೀಕರಣಗೊಳಿಸುವ ಮತ್ತು ಅವರಿಗೆ ಶಿಕ್ಷಣ ನೀಡುವುದರಿಂದ ಅವರ ದುರ್ಬಲತೆಗಳನ್ನು ನಿರ್ಮೂಲನೆ ಮಾಡಬಹುದು. ಆದರೆ ಭ್ರಷ್ಟ ಸರ್ಕಾರದಿಂದಾಗಿ ಅದನ್ನು ಬೆಳೆಸಿಕೊಂಡು ಹೋಗಲು ಸಾಧ್ಯವಾಗುವುದಿಲ್ಲ. ಹಾಗೂ ಹೆಣ್ಣುಮಕ್ಕಳನ್ನು ಬಲಪಡಿಸುವ ಎಲ್ಲಾ ಪ್ರಯತ್ನಗಳು ಯಶಸ್ವಿಯಾಗುವುದಿಲ್ಲ. ಏಕೆಂದರೆ ಬಹಳಷ್ಟು ಸಲ ಪೋಲೀಸ್ ಅಧಿಕಾರಿಗಳು ಅಥವಾ ಇತರ ಜಾರಿ ಸಂಸ್ಥೆಗಳು ಲಂಚವನ್ನು ಪಡೆಯುವ ಮೂಲಕ ಸಾಗಾಣಿಕೆದಾರರ ವ್ಯಾಪ್ತಿಗೆ ಮುಕ್ತವಾಗಿ ಬಿಡುತ್ತವೆ. ಈ ಭ್ರಷ್ಟಾಚಾರವು ಅಪರಾಧಿಗಳನ್ನು ನಿರ್ಭಯರನ್ನಾಗಿ ಮಾಡುತ್ತವೆ ಮತ್ತು ದುರ್ಬಲ ಕಾರ್ಮಿಕ ಬೇಡಿಕೆ ಮತ್ತು ನೀತಿಗಳು ಸಹ ದುರ್ಬಲತೆಯನ್ನು ಪ್ರಭಾವಿಸುತ್ತವೆ.

## ೮. ರಾಜಕೀಯ ಅಸ್ಥಿರತೆ ಆಧಾರಿತ ದುರ್ಬಲತೆಗಳು

ಇಂದಿನ ಜಾಗತಿಕ ಮಾರುಕಟ್ಟೆಯಲ್ಲಿ ಮಹಿಳೆಯರು ಮತ್ತು ಹೆಣ್ಣು ಮಕ್ಕಳನ್ನು ಹೆಚ್ಚಾಗಿ ಸೇವಾ ಪೂರೈಕೆದಾರರನ್ನಾಗಿ ನೇಮಿಸಿಕೊಳ್ಳಲಾಗುತ್ತಿದ್ದು ಇದು ಅವರನ್ನು ಅಪಾಯಕ್ಕೆ ದೂಡಿದೆ. ವಲಸೆ ನೀತಿಗಳು, ಮಾನವ ಹಕ್ಕುಗಳ ಉಲ್ಲಂಘನೆ ಮತ್ತು ಸರ್ಕಾರದ ಆಶ್ವಾಸನೆಗಳು ಮತ್ತು ನಡವಳಿಕೆಗಳ ನಡುವಿನ ಅಂತರ, ಕಳಪೆ ಆಡಳಿತ, ಸೀಮಿತ ಕಾನೂನಿನ ಜಾರಿ ಅಥವಾ ಕಾರ್ಮಿಕ ಮಾನದಂಡಗಳ ಅನುಷ್ಠಾನದ ಜಾರಿ ವಿಫಲತೆಗಳು ಸಹ ದುರ್ಬಲತೆಗಳನ್ನು ಸೃಷ್ಟಿಸುತ್ತವೆ.

ಪರಿಸರ ವಿಪತ್ತುಗಳು ಮತ್ತು ಪರಿಸರ ವಿಕೋಪಗಳು ಜನರನ್ನು ಅಪಾಯಕ್ಕೆ ತಳ್ಳಬಹುದು, ರಸ್ತೆಗಳ ಅಭಿವೃದ್ಧಿಯ ಪರಿಣಾಮವಾಗಿ ಸಂಘಟನೆಯ ಶಕ್ತಿ ಉಲ್ಬಣಗೊಂಡ ಚಲನಶೀಲತೆಯನ್ನು ಪಡೆದು ಸಾಗಾಣಿಕೆಗೆ ತ್ವರಿತತೆ ದೊರೆಯಬಹುದು. ಗ್ರಾಹಕೀಕರಣದ ಸಂಸ್ಕೃತಿಯು ವ್ಯಕ್ತಿಯ ಸರಕು, ಭೌತಿಕವಾದ ಮತ್ತು ಲೈಂಗಿಕತೆಯ ವ್ಯಾಪಾರೀಕರಣವು ಕುಟುಂಬದ ಅಗತ್ಯತೆಗಳ ದುರ್ಬಲತೆಗೆ

ಕಾರಣಾವಾಗುವುದರಿಂದ ಈ ಸಮಸ್ಯೆಯನ್ನು ಎದುರಿಸಲು ಯಾವುದೇ ಒಪ್ಪಿಗೆಯ ನೀತಿಗಳಿಲ್ಲ ಮತ್ತು ಭಾರತದಂತ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ಇದು ವೇಗದಲ್ಲಿದೆ.

**೯. ಕಳ್ಳಸಾಗಾಣಿಕೆದಾರರ ವಿರುದ್ಧ ದಂಡದ ಕೊರತೆ**

ಈಗಾಗಲೇ ಜಾರಿಯಲ್ಲಿರುವ ಕಾನೂನುಗಳು ಸಾಕಷ್ಟಿಲ್ಲ ಮತ್ತು ಅವು ಕಳಪೆ ಜಾರಿ, ನಿಷ್ಪರಿಣಾಮಕಾರಿ ಮಾನದಂಡಗಳನ್ನು ಹೊಂದಿದೆ. ಇವು ಕಾನೂನು ಕ್ರಮಗಳನ್ನು ಜರುಗಿಸುವಲ್ಲಿ ಸಾಧ್ಯತೆಗಳನ್ನು ಕಡಿಮೆ ಮಾಡುತ್ತವೆ. ತುಲನಾತ್ಮಕವಾಗಿ ಕಡಿಮೆ ಅಪಾಯವನ್ನು ಒಳಗೊಂಡಿರುತ್ತದೆ. ಭ್ರಷ್ಟಾಚಾರ ಮತ್ತು ಆತ್ಮವಿಶ್ವಾಸ, ಸಮಸ್ಯೆಯ ಅದೃಶ್ಯತೆ, ಸಂತ್ರಸ್ತರಿಗೆ ಸಮರ್ಪಕ ಸೇವೆಗಳನ್ನು ಒದಗಿಸಲು ಸರ್ಕಾರಗಳು ವಿಫಲವಾಗುವುದು, ಇವೆಲ್ಲವೂ ಕಳ್ಳಸಾಗಾಣಿಕೆ ನಡೆಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

ಕಾನೂನುಗಳು ಮತ್ತು ನಿಯಮಗಳು ಕಳ್ಳಸಾಗಾಣೆದಾರರು, ಪಿಂಪ್‌ಗಳು, ಸಂಗ್ರಹಕಾರರು, ವೇಶ್ಯಾಗೃಹದ ಮಾಲೀಕರು ಮತ್ತು ಕೀಪರ್‌ಗಳನ್ನು ನೇರವಾಗಿ ಅಥವಾ ಸಮರ್ಪಕವಾಗಿ ಗುರಿಯಾಗಿಸುವುದಿಲ್ಲ. ಪ್ರಸ್ತುತ ಕಾನೂನುಗಳು ಗ್ರಾಹಕರಿಗೆ ದಂಡವಿಧಿಸುವ ಕಾರ್ಯತಂತ್ರವನ್ನು ತಿಳಿಸುವುದಿಲ್ಲ. ಕಾನೂನು ಜಾರಿ ಮತ್ತು ನ್ಯಾಯಾ ವಿತರಣಾ ವ್ಯವಸ್ಥೆಯ ವಿರೂಪಗಳು ಹೆಣ್ಣುಮಕ್ಕಳನ್ನು ಹೆಚ್ಚು ಹೆಚ್ಚು ಕಳ್ಳಸಾಗಾಣಿಕೆ ಮಾಡಲು ಸಹಾಯ ಮಾಡುತ್ತವೆ.

**೧೦. ಪ್ರಾದೇಶಿಕ ಅಸಮತೋಲನ ಆಧಾರಿತ ದುರ್ಬಲತೆಗಳು**

ಪ್ರಾದೇಶಿಕ ಅಸಮತೋಲನೆಯು ಜಾತಿ, ವರ್ಗ ಆಧಾರಿತ ಮತ್ತು ಸಂಪನ್ಮೂಲ ಆಧಾರಿತ ಅಥವಾ ಮಾನ್ಯತೆ ಆಧಾರಿತವಾಗಿದ್ದರೆ ಅದು ಹೆಣ್ಣನ್ನು ಮೊದಲು ದುರ್ಬಲಗೊಳಿಸುತ್ತದೆ. ಉತ್ತರ ಪ್ರದೇಶದಿಂದ ಪಂಜಾಬ್ ಹರಿಯಾಣ, ಬಂಗಾಳಕ್ಕೆ ಮಾರಾಟ ಮಾಡಲಾಗುತ್ತಿದೆ. ಅಂದರೆ ಶ್ರೀಮಂತ ರಾಜ್ಯಗಳಿಗೆ ಮಾರಾಟ ಮಾಡಲಾಗುತ್ತಿದೆ. ಕರ್ನಾಟಕದಲ್ಲಿ ಬಿಜಾಪುರ, ಬೀದರ್, ಬಾಗಲಕೋಟೆ, ಯಾದಗಿರಿ, ರಾಯಚೂರು ಮತ್ತು ಬಳ್ಳಾರಿ, ಕೊಪ್ಪಳದಿಂದ ಮುಂಬೈ, ಕೊಲ್ಕತ್ತಾ, ಬೆಂಗಳೂರು, ಮೈಸೂರುಗಳಿಗೆ ಹೆಣ್ಣುಮಕ್ಕಳನ್ನು ಕಳ್ಳಸಾಗಾಣಿಕೆ ಮಾಡಲಾಗುತ್ತಿದೆ. ಅಂದರೆ ಉತ್ತರ ಕರ್ನಾಟಕದ ಜಿಲ್ಲೆಗಳು ಇನ್ನೂ ಅಭಿವೃದ್ಧಿಯಾಗದ ಮತ್ತು ಬರಡು ಭೂಮಿ ಹೊಂದಿರುವ ಬಡತನದ ಸ್ಥಿತಿಯನ್ನು ಹೊಂದಿರುವುದರಿಂದ ಶ್ರೀಮಂತ ಜಿಲ್ಲೆ ಅಥವಾ ಪಟ್ಟಣಗಳಿಗೆ ವಲಸೆ ಹೋಗುವುದು ಸಾಮಾನ್ಯ ಸಂಗತಿಯಾಗಿದೆ. ಹಣ ಸಂಪಾದಿಸಲು ಮತ್ತು ವಿಲಾಸಿ ಜೀವನ ನಡೆಸಲು ಮತ್ತು ಉದ್ಯೋಗ ದೊರಕಿಸುವ ಅವಕಾಶದ ಆಮಿಷಕ್ಕೆ ಅವರನ್ನು ಒಳಪಡಿಸಲಾಗುತ್ತಿದೆ.

**೧೧. ಬಲವಂತದ ಮತ್ತು ಸುಳ್ಳು ಮದುವೆ ಆಧಾರಿತ ದುರ್ಬಲತೆಗಳು**

ದಕ್ಷಿಣ ಏಷ್ಯಾ ಪ್ರದೇಶದಲ್ಲಿ ವರದಕ್ಷಿಣೆ ಇಲ್ಲದ ವಿವಾಹಗಳು ಸ್ವಾಗತಾರ್ಹ, ಹೀಗಾಗಿ ಸುಳ್ಳು ವಿವಾಹಗಳನ್ನು ಏರ್ಪಡಿಸುವುದು ಸುಲಭ, ಕಳ್ಳಸಾಗಾಣಿಕೆದಾರರು ಮಹಿಳೆಯರು ಮತ್ತು ಹೆಣ್ಣುಮಕ್ಕಳನ್ನು

ಗುಂಪುಗಳಾಗಿ ಸಂಪರ್ಕಿಸುತ್ತಾರೆ. ಏಕೆಂದರೆ ಇದು ಅವರ ನಂಬಿಕೆಯನ್ನು ಗೆಲ್ಲಲು ಸಹಾಯ ಮಾಡುತ್ತದೆ. ಭಾರತದಲ್ಲಿ ಇತ್ತೀಚಿನ ಸುದ್ಧಿಗಳು ಕಳ್ಳಸಾಗಾಣಿಕೆದಾರರು ಮದುವೆ ಬ್ಯೂರೋಗಳು, ಉದ್ಯೋಗ, ಟುಟೋರಿಯಲ್ ಏಜೆನ್ಸಿಗಳ ಮೂಲಕ ಜನರನ್ನು ಆಕರ್ಷಿಸಲು ಬಳಸಿಕೊಂಡಿವೆ ಎಂದು ತೋರಿಸಿವೆ. ಬಾಲ್ಯ ವಿವಾಹವು ಪ್ರಮುಖ ಅಂಶಗಳಲ್ಲಿ ಒಂದಾಗಿದೆ. ಮತ್ತು ಕಳ್ಳಸಾಗಾಣಿಕೆದಾರರಿಂದ ವಿವಾಹದ ಸುಳ್ಳು ಭರವಸೆಗಳೊಂದಿಗೆ ಮಹಿಳೆಯರು ಮತ್ತು ಮಕ್ಕಳನ್ನು ಕಳ್ಳ ಸಾಗಾಣಿಕೆಗೆ ಗುರಿಯಾಗಿಸಲಾಗುತ್ತದೆ. ಇದು ಒಂದು ಗಂಭೀರ ವಿಷಯವಾಗಿದ್ದು, ಬಲಿಪಶುಗಳಾಗುವುದು ಹೆಣ್ಣು ಮಕ್ಕಳಷ್ಟೇ ಅಲ್ಲದೆ ಅವರ ಕುಟುಂಬ ಸದಸ್ಯರು, ಸಂಬಂಧಿಕರು ಮತ್ತು ಸಮುದಾಯದವರು ಸಹ ಕಳ್ಳಸಾಗಣೆದಾರರಿಂದ ಮೋಸ ಹೋಗುತ್ತಾರೆ.

**೧೨. ಗಡಿ ಸಮಸ್ಯೆ ಆಧಾರಿತ ದುರ್ಬಲತೆಗಳು**

ಭಾರತದ ೩೦ ಜಿಲ್ಲೆಗಳೊಂದಿಗೆ ಬಾಂಗ್ಲಾದೇಶ ನಾಲ್ಕು ಸಾವಿರದ ಐವತ್ತಾರು ಕಿ.ಮೀ. ಗಡಿಯನ್ನು ಹಂಚಿಕೊಂಡಿದೆ. ಭಾರತವು ಬಿ.ಎಸ್.ಎಫ್ ನಿರ್ವಹಿಸುವ ೨೦ ಅಧಿಕೃತ ಚೆಕ್ ಪಾಯಿಂಟ್‌ಗಳನ್ನು ಹೊಂದಿದೆ. ಆದರೆ ಗಡಿ ಭಾಗದಲ್ಲಿ ನಿರ್ಭೀಡೆಯಿಂದ ಸಂಚರಿಸಲು ಸಾಧ್ಯತೆ ಇದ್ದು, ಬಾಂಗ್ಲಾದೇಶ ಮತ್ತು ಪಶ್ಚಿಮ ಬಂಗಾಳ ನಡುವಿನ ಗಡಿ ದಾಟುವುದು ವಾಡಿಕೆಯ ವ್ಯವಹಾರವಾಗಿದೆ. ಇಲ್ಲಿ ಕಟ್ಟುನಿಟ್ಟಿನ ಜಾಗರೂಕತೆಯನ್ನು ವಹಿಸಲು ವಿಫಲವಾಗಿದೆ. ಇದು ಕಳ್ಳಸಾಗಾಣಿಕೆಯ ಹೆಚ್ಚಳಕ್ಕೆ ಕಾರಣವಾಗಿದೆ.

ಹೀಗಾಗಿ ಜನರ ಚಲನವಲನದ ಬಗ್ಗೆ ನಿಗಾ ಇಡುವುದು ತುಂಬಾ ಕಷ್ಟ ಸಾಧ್ಯವಾಗಿದೆ. ಅಲ್ಲಿ ಕಳ್ಳಸಾಗಾಣೆದಾರರ ಅಕ್ರಮ ನಮೂದುಗಳು ಸಾಮಾನ್ಯ ವಿಷಯವಾಗಿದೆ. ಮತ್ತು ಅವುಗಳನ್ನು ರಕ್ಷಿಸಲಾಗುವುದು ಎಂಬ ಗ್ರಹಿಕೆ ಇದೆ. "ಈ ಗಡಿಯಾಚೆಗಿನ ಚಲನೆಯನ್ನು ಸುಗಮಗೊಳಿಸಲು ಹಲವಾರು ವ್ಯವಹಾರಗಳು ಅಭಿವೃದ್ಧಿಗೊಂಡಿವೆ. ಪ್ರತಿ ಟ್ರಿಪ್‌ಗೆ ಒಬ್ಬ ವ್ಯಕ್ತಿಗೆ ಇಂತಿಷ್ಟು ಎಂದು ನಿಗದಿಪಡಿಸಲಾಗಿದೆ. ಸುಸಂಘಟಿತ ಲಂಚ ವ್ಯವಸ್ಥೆಯು ಜನರಿಗೆ ಗಡಿಯನ್ನು ದಾಟಲು ಸಹಾಯ ಮಾಡುತ್ತವೆ".[೬] ಇದಲ್ಲದೆ ವಿವಿಧ ಪಾಸ್‌ಪೋರ್ಟ್ ವ್ಯವಸ್ಥೆಯು ಬಾಂಗ್ಲಾದೇಶದ ಹುಡುಗಿಯನ್ನು ಕೋಲ್ಕತ್ತಾ ವೇಶ್ಯಾಗೃಹಗಳಿಗೆ ಸುಲಭವಾಗಿ ಪ್ರವೇಶಿಸಲು ಅನುಕೂಲ ಮಾಡಿಕೊಡುತ್ತದೆ. ಆದ್ದರಿಂದ ಕಳ್ಳಸಾಗಾಣಿಕೆದಾರರು ಮತ್ತು ಗಡಿ ಗ್ರಾಮ ಸಮುದಾಯಗಳ ನಡುವೆ ನಿಕಟ ಸಂಬಂಧವನ್ನು ಸ್ಥಾಪಿಸಿಕೊಂಡಿದ್ದಾರೆ.

ಇಂಡೋ-ನೇಪಾಳ್ ಗಡಿಯು ಉದ್ದ ಮತ್ತು ರಂಧ್ರಯುಕ್ತವಾಗಿದ್ದು, ೧೪ ಕಾನೂನು ಪ್ರವೇಶ ಕೇಂದ್ರಗಳನ್ನು ಹೊಂದಿದೆ. ಇದು ಕಾನೂನು ಬಾಹಿರ ಗಡಿಯಾಚೆಗಿನ ಚಲನೆಯನ್ನು ಸುಗಮಗೊಳಿಸುತ್ತದೆ. (Super cote 29) "ಭಾರತದೊಂದಿಗಿನ ಒಪ್ಪಂದದ ಪ್ರಕಾರ, ಪ್ರತಿ ದೇಶದ ನಾಗರೀಕರಿಗೆ ವಾಸಿಸುವ ವಿಷಯದಲ್ಲಿ ಒಂದೇ ರೀತಿಯ ಸವಲತ್ತುಗಳು, ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಭಾಗವಹಿಸುವಿಕೆ ಸೇರಿದಂತೆ ಸಮಾನತೆಯನ್ನು ಖಾತರಿಪಡಿಸಲಾಯಿತು. ೧೯೫೦ರ

ವರ್ಷದಲ್ಲಿ ಇದರರ್ಥ ನೇಪಾಳಕ್ಕೆ ಯಾವುದೇ ವಲಸೆ ನಿಯಂತ್ರಣವಿಲ್ಲ. ಪ್ರಯಾಣವು ಭಾರತಕ್ಕೆ ವಲಸೆ ಹೋಗುತ್ತಿದೆ ಮತ್ತು ಯಾವುದೇ ಗೌರವ ಅಥವಾ ಭದ್ರತೆಯನ್ನು ಕಾಯ್ದುಕೊಳ್ಳಲಾಗುತ್ತಿಲ್ಲ. ಈ ಸೋರುವ ಸ್ಥಳಗಳು ಸರಿಯಾಗಿ ಗಡಿ ಕಾವಲು ಹೊಂದಿಲ್ಲದ ಕಾರಣ ಕಳ್ಳಸಾಗಾಣೆಯನ್ನು ಹೆಚ್ಚು ಸುಲಭಗೊಳಿಸುತ್ತವೆ. ಮತ್ತು ಮಹಿಳೆಯರ ದೈಹಿಕವಾಗಿ ದುರ್ಬಲರಾಗಿರುವುದು ಗಡಿಯಾಚೆಗೆ ಅವರನ್ನು ಕುರಿ, ಮೇಕೆ, ಕೋಳಿಗಳಂತೆ ಸಾಗಿಸಲು ಸಾಧ್ಯವಾಗುತ್ತಿದೆ".[೭]

**೧೨. ಸುಧಾರಿತ ಸಂವಹನ ಆಧಾರಿತ ದುರ್ಬಲತೆ**

ಅಂತರಾಷ್ಟ್ರೀಯ ಮಟ್ಟದಲ್ಲಿ ಕಳ್ಳಸಾಗಣೆಯು ಸಂಘಟಿತ ಅಪರಾಧಗಳಲ್ಲಿ ಕ್ರಿಯಾತ್ಮಕವಾಗಿ ಚಿತ್ರಿಸಿಕೊಂಡಿದೆ. ಕೆಲವು ಸಂದರ್ಭಗಳಲ್ಲಿ ಅತ್ಯಾಧುನಿಕ ಮತ್ತು ಜಾಗತಿಕ ಮಟ್ಟದಲ್ಲಿ ಕೆಲವು ವಿನಾಯಿತಿಗಳನ್ನು ಹೊಂದಿದೆ. "ಭಾರತದಲ್ಲಿ ಅನೈತಿಕ ಸಾಗಾಣಿಕೆ ಕುರಿತು ಸಂಘಟಿತ ಅಪರಾಧ ಗುಂಪುಗಳ ಒಳಗೊಳ್ಳುವಿಕೆ ಕುರಿತು ಸಾಹಿತ್ಯದಲ್ಲಿ ದೊರೆಯುವ ಮಾಹಿತಿಯು ಆಧಾರ ರಹಿತ ಉಲ್ಲೇಖಗಳಿಗೆ ಸಮನಾಗಿರುತ್ತದೆ. ಸುದ್ದಿ ವರದಿಗಳು ಒಳಗೊಂಡಿರುವ ಪ್ರಕರಣಗಳ ಅಧ್ಯಯನದಿಂದ ಸೂಚಿಸಬಹುದು. ಕಳ್ಳ ಸಾಗಣೆದಾರರು ತಮ್ಮ ವಲಯಗಳಲ್ಲಿ ಉಲ್ಲಂಘನೀಯ ಮಾನದಂಡಗಳನ್ನು ಬಳಸುವುದಿಲ್ಲ. ಇದರ ಪರಿಣಾಮವಾಗಿ ವಿಭಿನ್ನ ಜನರು ಒಂದು ಕಡೆಯಿಂದ ಮತ್ತೊಂದು ಕಡೆಗೆ ತಮ್ಮ ಚಟುವಟಿಕೆಗಳನ್ನು ತೆಗೆದುಕೊಂಡು ಹೋಗುತ್ತಾರೆ".[೮]

ಪೋಲಿಸರಿಂದ ತಪ್ಪಿಸಿಕೊಳ್ಳಲು ಮಾತ್ರವಲ್ಲದೆ ತಮ್ಮ ಕಾರ್ಯಾಚರಣೆಯನ್ನು ವಿಸ್ತರಿಸಲು ಅವರು ಆಗಾಗ್ಗೆ ತಮ್ಮ ವಾಸಸ್ಥಳವನ್ನು ಬದಲಾಯಿಸುತ್ತಿರುತ್ತಾರೆ. ಮಕ್ಕಳ ಅಶ್ಲೀಲ ವಿಡಿಯೋ ಮತ್ತು ಲೈಂಗಿಕ ಪ್ರವಾಸೋದ್ಯಮವು ಹೆಚ್ಚು ಬಳಕೆಯಲ್ಲಿದೆ. ಚಿತ್ರಗಳು ಮತ್ತು ಚಲನಚಿತ್ರಗಳ ರೂಪದಲ್ಲಿ ಅಶ್ಲೀಲತೆಯನ್ನು ತಯಾರಿಸುವಲ್ಲಿ ಲೈಂಗಿಕ ಪ್ರವಾಸೋದ್ಯಮವು ಮುಂಚೂಣಿಯಲ್ಲಿದೆ. ಇದು ಚಿಕ್ಕ ಚಿಕ್ಕ ಮಕ್ಕಳ ನಗ್ನ ಚಿತ್ರ ಮತ್ತು ಮಕ್ಕಳೊಂದಿಗೆ ಲೈಂಗಿಕ ಕ್ರಿಯೆಯನ್ನು ಚಿತ್ರಿಸುತ್ತದೆ. ಹಾಗೆಯೇ ಅಶ್ಲೀಲತೆಗೆ ಬಳಸುವ ವಸ್ತುಗಳನ್ನು ಕಳ್ಳಸಾಗಣೆ ಮಾಡುವಲ್ಲಿಯೂ ಭಾಗಿಯಾಗಿ ಇರುತ್ತವೆ. ಇದು ಇಂದು ಅಂತರ್ಜಾಲ ತಂತ್ರಜ್ಞಾನದ ಆಗಮನ ಮತ್ತು ಬೆಳವಣಿಗೆಯ ಕಾರಣವಾಗಿ ಸುಲಭವಾಗಿದೆ. ಮಕ್ಕಳ ಲೈಂಗಿಕ ಶೋಷಕರು ಹೆಚ್ಚಾಗಿ ಮಕ್ಕಳ ಅಶ್ಲೀಲ ಚಿತ್ರಗಳನ್ನು ತಯಾರಿಸುವುದು ಸಂಗ್ರಹಿಸುವುದು ಮತ್ತು ಪ್ರಸಾರ ಮಾಡುವುದು ಕಂಡುಬರುತ್ತದೆ.

ಭಾರತದಲ್ಲಿ ಗೋವಾ ಪಶ್ಚಿಮ ಕರಾವಳಿಯಲ್ಲಿ ಒಂದು ಸಣ್ಣ ರಾಜ್ಯವಾಗಿದ್ದು ಪ್ರವಾಸಿ ತಾಣವಾಗಿದೆ. ದೇಶ ವಿದೇಶಗಳಿಂದ ಇಲ್ಲಿಗೆ ಪ್ರವಾಸಿಗರು ಸಾಗರೋಪಾದಿಯಲ್ಲಿ ಬರುತ್ತಾರೆ. ಆದರೆ ಇಂದು ಇದು ಲೈಂಗಿಕ ತಾಣವಾಗಿ ಮಾರ್ಪಟ್ಟಿದೆ. ಇಲ್ಲಿ ಪ್ರವಾಸಿಗರು ತಮ್ಮ ಲೈಂಗಿಕ ಹಿತಾಸಕ್ತಿಗಳನ್ನು ಅಗ್ಗವಾಗಿ ಪಡೆಯಬಹುದು ಎಂಬ ನಂಬಿಕೆಯಿದೆ. ಇಲ್ಲಿಗೆ ದೇಶದ ಎಲ್ಲಾ ರಾಜ್ಯಗಳಿಂದ ಮತ್ತು ವಿದೇಶಗಳಿಂದಲೂ ಹೆಣ್ಣುಮಕ್ಕಳನ್ನು ಸಾಗಾಣಿಕೆ ಮಾಡಲಾಗುತ್ತಿದೆ. ಲೈಂಗಿಕ ಪ್ರವಾಸೋದ್ಯಮ (Sex tourism)ಕ್ಕೆ ಗೋವಾ ಹೆಸರುವಾಸಿಯಾಗಿದೆ.

## ೪.೫ ಅನೈತಿಕ ಸಾಗಾಣಿಕೆದಾರ ನಡುವಿನ ಸಂಬಂಧ

ಸಾವಿರಾರು ಹೆಣ್ಣುಮಕ್ಕಳು ಮತ್ತು ಹುಡುಗರು ಕಳ್ಳಸಾಗಾಣಿದಾರರು ಮತ್ತು ಅದರ ಏಜೆಂಟರ ಪ್ರಬಲ ನೆಟ್‌ವರ್ಕ್‌ನಲ್ಲಿ ಸಿಕ್ಕಿಬಿದ್ದಿದ್ದಾರೆ. ಅವರು ಲೈಂಗಿಕ ದೌರ್ಜನ್ಯಕ್ಕೆ ಬಲಿಯಾಗುತ್ತಾರೆ. ಲೈಂಗಿಕ ಕೆಲಸಕ್ಕಾಗಿ, ಕಾರ್ಮಿಕರಾಗಿ ಮತ್ತು ಬಿಕ್ಷಾಟನೆ, ಅಂಗಗಳ ವರ್ಗಾವಣೆ, ಅಶ್ಲೀಲ ಚಿತ್ರಗಳ ನಿರ್ಮಾಣ, ಲೈಂಗಿಕ ಪ್ರವಾಸೋದ್ಯಮ ಪ್ರಚಾರ, ಬಾರ್ ಗರ್ಲ್‌ಗಳಾಗಿ, ಮಸಾಜ್ ಪಾರ್ಲರ್‌ಗಳು ಮುಂತಾದವುಗಳಲ್ಲಿ ದೌರ್ಜನ್ಯಕ್ಕೆ ಬಲಿಯಾಗುತ್ತಾರೆ. ಮತ್ತು ಸಶಸ್ತ್ರ ಸಂಘರ್ಷದಲ್ಲಿಯೂ ತೊಡಗುವಂತೆ ಒತ್ತಾಯಿಸಲಾಗುತ್ತದೆ. ಇವರೆಲ್ಲರೂ ಇಂತಹ ಶೋಷಣೆಯಿಂದ ಹೊರಬರಲು ಪ್ರತಿದಿನ ತಮ್ಮ ಜೀವನದ ಏಕಾಂಗಿ ಯುದ್ಧಗಳನ್ನು ನಡೆಸುತ್ತಾರೆ ಮತ್ತು ಹೋರಾಡುತ್ತಿರುತ್ತಾರೆ.

ಕೆಲವರು ಈ ಹೋರಾಟದಲ್ಲಿ ಗೆಲುವು ಸಾಧಿಸುತ್ತಾರೆ. ಆದರೆ ಹೆಚ್ಚಿನವರು ತಮ್ಮ ಅನಾರೋಗ್ಯ, ಖಿನ್ನತೆ, ಒಂಟಿತನ, ಮುರಿದ ಮನಸ್ಸುಗಳ ಕಾರಣದಿಂದ ಸಾವನ್ನಪ್ಪುತ್ತಾರೆ. "ಒಟ್ಟು ಅನೈತಿಕ ಸಾಗಾಣಿಕೆಯಾದವರಲ್ಲಿ ೯೨% ಜನರನ್ನು ರಕ್ಷಿಸಲು ಸಾಧ್ಯವಾಗಿಲ್ಲ. ನಮ್ಮ ದೇಶದ ೨೮ ರಾಜ್ಯಗಳು ಮತ್ತು ೭ ಕೇಂದ್ರಾಡಳಿತ ಪ್ರದೇಶಗಳಲ್ಲಿ ಈ ಅನೈತಿಕ ಸಾಗಾಣಿಕೆ ಜಾಲದ ಮಾರ್ಗಗಳು ಇವೆ. ಇದರಿಂದ ಭಾರತದಲ್ಲಿ ದಿನಕ್ಕೆ ೨೦ ಕೋಟಿ ಅಥವಾ ೨೦೦೦ ಮಿಲಿಯನ್ ಲಾಭಗಳಿಸುತ್ತಾರೆ ಎಂದು ಅಂದಾಜಿಸಲಾಗಿದೆ".[೯]

## ೪.೬ ವೇಶ್ಯಾವಾಟಿಕೆಗಾಗಿ ಅನೈತಿಕ ಸಾಗಾಣಿಕೆ

ಜಗತ್ತಿನಾದ್ಯಂತ ವೇಶ್ಯಾವಾಟಿಕೆಗಾಗಿ ಸಾಮಾಜಿಕ ಕಾರಣ ಅಥವಾ ಸಾಂಪ್ರದಾಯಿಕ ಕಾರಣದಿಂದಾಗಿ ಹೆಚ್ಚಿನ ಸಂಖ್ಯೆಯ ಹೆಣ್ಣು ಮಕ್ಕಳನ್ನು ಅನೈತಿಕ ಸಾಗಾಣಿಕೆ ಮಾಡಲಾಗುತ್ತಿದೆ. ಅವುಗಳಲ್ಲಿ ಒಂದು ದೇವದಾಸಿ ವ್ಯವಸ್ಥೆಯು ಸಹ ಕಾರಣವಾಗಿದೆ. ಇದು ಹೆಣ್ಣುಮಕ್ಕಳ ಮತ್ತು ಮಹಿಳೆಯರ ಮೇಲೆ ಹೆಚ್ಚು ಪರಿಣಾಮ ಬೀರುತ್ತದೆ. ಒಂದು ಸಮೀಕ್ಷೆಯ ಪ್ರಕಾರ ೧ಲಕ್ಷ ವೇಶ್ಯೆಯರು ಮುಂಬೈನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ, ಅವರಲ್ಲಿ ಅತಿ ಹೆಚ್ಚು ೧೮ ವರ್ಷಕ್ಕಿಂತ ಕಡಿಮೆ ವಯಸ್ಸಿನ ಬಾಲಕಿಯರು ಇರುವರು. ಅವರ ಜೀವನವು ನರಕದಲ್ಲಿ ಹೊಸಕಿ ಹೋಗುತ್ತಿದೆ.

ಕರಾಚಿ ಮೂಲದ ಮಾನವ ಹಕ್ಕು ಮತ್ತು ಕಾನೂನು ನೆರವು ವರದಿಗೆ ಸಂಬಂಧಿಸಿದ ಎನ್‌ಜಿಓ ವಕೀಲರ ಗುಂಪು ನೀಡಿದ ವರದಿಯ ಪ್ರಕಾರ ಸುಮಾರು ೨೦೦೦೦೦ ಬಾಲಕಿಯರನ್ನು ಬಾಂಗ್ಲಾದೇಶ್ ಮತ್ತು ಮ್ಯಾನ್ಮಾರ್‌ನಿಂದ ಪಾಕಿಸ್ತಾನಕ್ಕೆ ಕಳ್ಳಸಾಗಾಣೆ ಮಾಡಲಾಗಿದ್ದೂ, ಮದುವೆ ಅಥವಾ ಉದ್ಯೋಗಕ್ಕಾಗಿ ಆಮಿಷವೊಡ್ಡಿ ಸಾಗಾಣಿಕೆ ಮಾಡಿದರೂ ಅವರನ್ನು ಅನೈತಿಕ ವ್ಯವಹಾರಗಳಿಗೆ ಬಳಸಿಕೊಳ್ಳಲಾಗಿದೆ. ಮತ್ತು ವರದಿಯ ಪ್ರಕಾರ ಪ್ರಪಂಚದಾದ್ಯಂತ ೧೪ ವರ್ಷಕ್ಕಿಂತ ಕಡಿಮೆ ವಯಸ್ಸಿನ ೧೦೦೦೦೦೦ ಹುಡುಗಿಯರು ವೇಶ್ಯಾವಾಟಿಕೆಯಲ್ಲಿ ತೊಡಗಿದ್ದಾರೆ. ಮಹಿಳೆಯರನ್ನು ಸ್ವತಃ ಮತ್ತು ಬಲವಂತವಾಗಿ ಮಾಂಸದಂತೆ ಅಥವಾ ವೇಶ್ಯಾವಾಟಿಕೆಯಲ್ಲಿ ತೊಡಗುವಂತೆ

ಒತ್ತಾಯಿಸಲಾಗಿದೆ ಎಂಬುದು ಪೋಲೀಸ್ ಶೋಧ ಮತ್ತು ದಾಳಿಯ ಸಮಯದಲ್ಲಿ ಸಾಬೀತಾಗಿದೆ. ಅಂತಹ ಎಲ್ಲಾ ಚಟುವಟಿಕೆಗಳಲ್ಲಿ ಭಾಗಿಯಾದವರನ್ನು ಐಟಿಪಿಎ ಅಥವಾ ಎಸ್‌ಐಟಿಎ ಕಾಯ್ದೆ ೧೯೫೬ರ ಅಡಿಯಲ್ಲಿ ವಿಚಾರಣೆಗೆ ಒಳಪಡಿಸಲಾಗುತ್ತದೆ.

## ೪.೭ ಲೈಂಗಿಕತೆಗಾಗಿ ಅನೈತಿಕ ಸಾಗಾಣಿಕೆ

ಮಹಿಳೆಯರು ಮತ್ತು ಮಕ್ಕಳು ಸಾವಿರಾರು ವರ್ಷಗಳಿಂದ ಲೈಂಗಿಕ ಕಳ್ಳಸಾಗಣೆಗೆ ಬಲಿಯಾಗುತ್ತಿದ್ದಾರೆ. ಶತಮಾನಗಳಾದ್ಯಂತ ನಡೆಯುತ್ತಿರುವ ಈ ಘಟನೆಯು ಅಂತಿಮವಾಗಿ ೧೯೦೦ರ ದಶಕದ ಆರಂಭದಲ್ಲಿ ರಾಜಕೀಯ ವಿಷಯವಾಯಿತು. “೧೯೦೨ರಲ್ಲಿ ಶ್ವೇತ ಗುಲಾಮರ ಸಂಚಾರವನ್ನು ನಿಗ್ರಹಿಸುವ ಅಂತರಾಷ್ಟ್ರೀಯ ಒಪ್ಪಂದವನ್ನು ರಚಿಸಲಾಯಿತು. ಇದರ ಉದ್ದೇಶ ವಿದೇಶದಲ್ಲಿ ಅನೈತಿಕ ಉದ್ದೇಶಗಳಿಗಾಗಿ ಮಹಿಳೆಯರು ಮತ್ತು ಹೆಣ್ಣು ಮಕ್ಕಳನ್ನು ಸಂಗ್ರಹಿಸುವುದನ್ನು ತಡೆಯುವುದು”.[೧೦] ಕೆಲವು ವರ್ಷಗಳ ನಂತರ ಇದನ್ನು ವಿಶ್ವದ ಹನ್ನೆರಡು ದೇಶಗಳು ಅಂಗೀಕರಿಸಿದವು. ಇದು ಅಂತಿಮವಾಗಿ ಯುನೈಟೆಡ್ ಸ್ಟೇಟ್ಸ್ ೧೯೧೦ರ ಮುಖ್ಯ ಕಾಯ್ದೆಯನ್ನು ಅಂಗೀಕರಿಸಲು ಕಾರಣವಾಯಿತು. ಅದು “ವೇಶ್ಯಾವಾಟಿಕೆ ಅಥವಾ ಇತರ ಅನೈತಿಕ ಉದ್ದೇಶಗಳಿಗಾಗಿ ವ್ಯಕ್ತಿಯನ್ನು ರಾಜ್ಯ ಅಥವಾ ಅಂತರಾಷ್ಟ್ರೀಯ ಮಾರ್ಗಗಳಲ್ಲಿ ಸಾಗಿಸುವುದನ್ನು ನಿಷೇಧಿಸುತ್ತದೆ. ಲೈಂಗಿಕ ಕಳ್ಳ ಸಾಗಣೆಯ ಸಮಸ್ಯೆ ಈ ಶತಮಾನದಲ್ಲಿ ಬೆಳೆಯುತ್ತಿದೆ. ಈ ಸಮಸ್ಯೆಯನ್ನು ಪರಿಹರಿಸುವುದು ಅಗತ್ಯವೆಂದು ವಿಶ್ವಸಂಸ್ಥೆ ಅಭಿಪ್ರಾಯಪಟ್ಟಿತು. ಇದನ್ನು ೧೯೪೯ರ ವ್ಯಕ್ತಿಗಳ ಅನೈತಿಕ ಸಾಗಾಣಿಕೆಯನ್ನು ಮತ್ತು ವೇಶ್ಯಾವಾಟಿಕೆ ಶೋಷಣೆಯಿಂದ ನಿಗ್ರಹಿಸುವ ಕನ್ವೆನ್ಷನ್ ಅನ್ನು ವಿಶ್ವದಾದ್ಯಂತ ನಲವತ್ತೊಂಬತ್ತು ದೇಶಗಳು ಅಂಗೀಕರಿಸಿದವು”.[೧೧]

ಅನಾದಿ ಕಾಲದಿಂದಲೂ ಮಹಿಳೆಯರನ್ನು ಲೈಂಗಿಕ ಉದ್ದೇಶಕ್ಕಾಗಿ ಕಳ್ಳಸಾಗಣೆ ಮಾಡಲಾಗುತ್ತಿತ್ತು. ಏಕೆಂದರೆ ದಕ್ಷಿಣ ಭಾರತದಲ್ಲಿ ದೇವದಾಸಿ ಪದ್ಧತಿಯು ಆಚರಣೆಯಲ್ಲಿದ್ದು, ಅದು ದೇವಾಲಯಗಳಲ್ಲಿ ಜನರ ಕಾಮವನ್ನು ಪೂರೈಸಲು ಬಳಕೆಯಾಗುತ್ತಿತ್ತು.

### ಅನೈತಿಕ ಸಾಗಾಣಿಕೆಯ ಮಾದರಿಗಳು

ಈ ಶತಮಾನದ ಆರಂಭದಲ್ಲಿ ಅಂಗೀಕರಿಸಲ್ಪಟ್ಟ ಆಕ್ಟ್‌ಗಳು ಮತ್ತು ಕನ್ವೆಷನ್‌ಗಳ ಹೊರತಾಗಿಯೂ ಅನೈತಿಕ ಸಾಗಾಣಿಕೆ ಸಂಭವಿಸುತ್ತಿರುವುದು ಕಡಿಮೆಯಾಗುತ್ತಿಲ್ಲ. ಲಕ್ಷಾಂತರ ಹೆಣ್ಣು ಮಕ್ಕಳನ್ನು ಅಪಹರಿಸಿ ಸಾಗಿಸಲಾಗುತ್ತಿದೆ. ಕೆಲವರನ್ನು ಅವರ ಕುಟುಂಬಗಳೇ ಹಣದ ಆಸೆಗೆ ಮಾರಾಟ ಮಾಡುತ್ತಾರೆ. ಪ್ರಪಂಚದಾದ್ಯಂತ ಅನೈತಿಕ ಸಾಗಾಣಿಕೆಗೆ ಹಲವಾರು ಮಾದರಿಗಳಿವೆ. ವಿಶೇಷವಾಗಿ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ, ಉತ್ತಮ ಉದ್ಯೋಗದ ಭರವಸೆಯಿಂದ ಹೆಣ್ಣುಮಕ್ಕಳು ಸಾಗಾಣೆಗೆ ಒಳಗಾಗುತ್ತಾರೆ. ತನ್ನ ತಾಯ್ನಾಡಲ್ಲಿ ಅಥವಾ ಸ್ವಂತ ಊರುಗಳಲ್ಲಿ ಯಾವುದೇ ಉತ್ತಮ ಆಯ್ಕೆಗಳಿಲ್ಲದ ಕಾರಣ, ಹೆಣ್ಣು ಮಕ್ಕಳು ಮುಂದೆ ಆಗುವ ತೊಂದರೆ, ಹಿಂಸೆಗಳ ಬಗ್ಗೆ ಮಾಹಿತಿ

ಇಲ್ಲದೆ ದೂರ ಪ್ರಯಾಣಿಸಲು ನಿರ್ಧರಿಸುತ್ತಾರೆ. ಸಾಗಾಣಿಕೆದಾರರು ಅವರ ಬೆಂಗಾವಲಾಗಿ ಇರಲು ಹಲವರನ್ನು ನೇಮಿಸಿರುತ್ತಾರೆ. ಸಂಪೂರ್ಣ ಪ್ರಯಾಣ ಅವರ ಕಣ್ಗಾವಲಲ್ಲೇ ಮುಗಿಯುತ್ತದೆ. ತಮ್ಮ ನಿಗಧಿತ ಸ್ಥಳ ತಲುಪಿದ ಕೂಡಲೇ ನೇರವಾಗಿ ಅವರನ್ನು ಉದ್ಯೋಗ ಸ್ಥಳಕ್ಕೆ ಕರೆದೊಯ್ಯಲಾಗುತ್ತದೆ. ಈ ಸಮಯದಲ್ಲಿ ಹೆಣ್ಣು ಮಕ್ಕಳು ತಮ್ಮ ಉದ್ಯೋಗದ ಪರಿಸ್ಥಿತಿಗಳ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿರುವುದಿಲ್ಲ. ಅವರ ಉದ್ಯೋಗದ ನೈಜ ಸ್ವರೂಪವನ್ನು ಕಂಡು ಹಿಡಿದ ನಂತರ ಅದು ಬಹಳ ತಡವಾಗಿರುತ್ತದೆ. ಅಲ್ಲಿಂದ ಅವರು ತಪ್ಪಿಸಿಕೊಳ್ಳುವುದು ಅಸಾಧ್ಯ ಮತ್ತು ಅಪಾಯಕಾರಿಯಾಗಿರುತ್ತದೆ. ಉತ್ತಮ ಉದ್ಯೋಗ ಭಾವನೆಗಳೊಂದಿಗೆ ಆಮಿಷಕ್ಕೆ ಒಳಗಾಗುವುದರ ಮೂಲಕ ಹೆಣ್ಣು ಮಕ್ಕಳು ಅನೈತಿಕ ಸಾಗಾಣಿಕೆಗೆ ಸಿಲುಕುವ ಇತರ ಸಂದರ್ಭಗಳಿವೆ. ಕೆಲವೊಮ್ಮೆ ಹೆಣ್ಣು ಮಕ್ಕಳು ಮಾರಾಟಗಾರರಿಂದ ಸುಳ್ಳು ಮದುವೆ ಪ್ರಸ್ತಾಪಗಳನ್ನು ಸ್ವೀಕರಿಸುತ್ತಾರೆ. ತಕ್ಷಣದ ಹಣಕಾಸಿನ ತೊಂದರೆಗಳಿಗಾಗಿ ಸ್ವಲ್ಪ ಹಣಕಾಸನ್ನು ಸಂಪಾದಿಸಲು ಬಡ ಪೋಷಕರು ತಮ್ಮ ಹೆಣ್ಣು ಮಕ್ಕಳನ್ನು ಲೈಂಗಿಕ ವ್ಯಾಪಾರಕ್ಕೆ ಮಾರುತ್ತಾರೆ ಮತ್ತು ಹಲವಾರು ಬಾರಿ ಹೆಣ್ಣು ಮಕ್ಕಳನ್ನು ಸಹಜವಾಗಿ, ಸರಳವಾಗಿ ಅಪಹರಿಸಲಾಗುತ್ತದೆ.

ಲೈಂಗಿಕ ಕಳ್ಳಸಾಗಣೆಯಲ್ಲಿ ಅಪಹರಿಸಿದ, ಮಾರಾಟವಾದ ಹೆಣ್ಣುಮಕ್ಕಳನ್ನು ಸಾಲ ಬಂಧನದಲ್ಲಿ ಸಿಲುಕಿಸಲಾಗುತ್ತದೆ. ಸಾಗಾಣಿಕೆದಾರರು ಆ ಹೆಣ್ಣುಮಕ್ಕಳಿಗೆ ಪಾವತಿಸಿದ ಖರ್ಚಿಗೆ ಮರುಪಾವತಿ ಮಾಡಲು ಅವರಿಂದ ಸಾಕಷ್ಟು ಹಣವನ್ನು ಗಳಿಸುವವರೆಗೂ ಅವರನ್ನು ಬಂಧಿಸಿಡುತ್ತಾರೆ. ಆ ನಿಗದಿತ ಮೊತ್ತವು ಸಾಮಾನ್ಯವಾಗಿ ನಿಜವಾದ ವೆಚ್ಚಗಳನ್ನು ಮೀರಿರುತ್ತದೆ. ಆದರೆ ಅದನ್ನು ತೀರಿಸಲು ಆ ಹೆಣ್ಣು ಮಕ್ಕಳು ವರ್ಷಗಳನ್ನೇ ತೆಗೆದುಕೊಳ್ಳಬಹುದು. ಆ ಸಂದರ್ಭದಲ್ಲಿ ಅವರು ತಪ್ಪಿಸಿಕೊಳ್ಳದಂತೆ ವ್ಯವಸ್ಥೆ ಮಾಡಲಾಗಿರುತ್ತದೆ. ಸಾಲ ತೀರುವವರೆಗೂ ಲೈಂಗಿಕ ದಂದೆಯಲ್ಲಿ ದುಡಿಯಲು ಒತ್ತಾಯಿಸುವುದು, ಸಾಮಾನ್ಯವಾಗಿರುತ್ತದೆ. ಆದರು ಅಲ್ಲಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದು AIDS ಕಾಯಿಲೆ ಬಂದು ಸತ್ತರೆ ಮಾತ್ರ.

ಈ ಅನೈತಿಕ ಸಾಗಾಣಿಕೆಯ ಆಧುನಿಕ ಗುಲಾಮಗಿರಿಯ ಒಂದು ರೂಪವಾಗಿದ್ದು, ಅದು ಪ್ರಪಂಚದಾದ್ಯಂತ ಅಸ್ತಿತ್ವದಲ್ಲಿದೆ. ಈ ಸಾಗಾಣಿಕೆದಾರರು ಹೆಣ್ಣುಮಕ್ಕಳು, ಪುರುಷರು ಮತ್ತು ಚಿಕ್ಕಮಕ್ಕಳನ್ನು ಲಿಂಗತಾರತಮ್ಯವಿಲ್ಲದೆ ಹಿಂಸಿಸಿ, ಬೆದರಿಸಿ, ಸುಳ್ಳು ಹೇಳಿ, ಸಾಲ ಬಂಧನದಲ್ಲಿ ಸಿಲುಕಿಸಿ ಮತ್ತು ಇತರ ಬಲಾತ್ಕಾರಗಳ ಮೂಲಕ ಅವರ ಇಚ್ಛೆಗೆ ವಿರುದ್ಧವಾಗಿ ವಾಣಿಜ್ಯ ಲೈಂಗಿಕ ಕ್ರಿಯೆಯಲ್ಲಿ ತೊಡಗಿಸಿಕೊಳ್ಳಲು ಒತ್ತಾಯಿಸುತ್ತಾರೆ. ಹೆಚ್ಚಿನ ಹಣದ ಆಮಿಷವನ್ನು ಒಡ್ಡಬಹುದು.

ಹಾಗೆಯೇ ಸುಳ್ಳು ಪ್ರೀತಿಯ ಭರವಸೆ ನೀಡುತ್ತಾರೆ. ಮೊದಲು ಪ್ರೀತಿಯಲ್ಲಿ ಬೀಳುವಂತೆ ಮಾಡಿ ನಂಬಿಕೆ ಬರಲು ಪ್ರೀತಿವಾತ್ಸಲ್ಯ ತೋರಿಸುತ್ತಾರೆ. ಈ ಅವಧಿಯಲ್ಲಿ ಹಲವಾರು ಉಡುಗೊರೆಗಳನ್ನು ನೀಡಿ ಅವರ ಸಾಮೀಪ್ಯ ಸಂಪಾದಿಸುತ್ತಾರೆ. ನಂತರ ದೈಹಿಕ ಮತ್ತು ಲೈಂಗಿಕ ಅನ್ಯೋನ್ಯತೆಯನ್ನು

ಸಾಧಿಸುತ್ತಾರೆ. ಜೊತೆಗೆ ವಿಲಾಸಿ ಜೀವನ, ವೇಗವಾಗಿ ಹಣ ಗಳಿಸುವುದು ಮತ್ತು ಭವಿಷ್ಯದ ಐಷಾರಾಮಿ ಜೀವನದ ಬಗ್ಗೆ ಬಹಳಷ್ಟು ಭರವಸೆಗಳನ್ನು ನೀಡಲಾಗುತ್ತದೆ.

ಹೇಗಾದರೂ ಸರಿ ಸಾಗಾಣಿಕೆದಾರರು ಅಂತಿಮವಾಗಿ ದೈಹಿಕ ಮತ್ತು ಭಾವನಾತ್ಮಕ ನಿಂದನೆ, ಲೈಂಗಿಕ ದೌರ್ಜನ್ಯ, ಹಣವನ್ನು ಮುಟ್ಟಗೋಲು ಹಾಕಿಕೊಳ್ಳುವುದು, ಹೆಣ್ಣು ಮಕ್ಕಳನ್ನು ಗುರುತಿಸುವುದು, ಅವರನ್ನು ಸ್ನೇಹಿತರು ಮತ್ತು ಕುಟುಂಬದಿಂದ ಪ್ರತ್ಯೇಕಿಸುವುದು ಹಾಗೂ ಅವರನ್ನು ಬಲಿಪಶು ಮಾಡುವುದೇ ಅಲ್ಲದೆ ಅವರನ್ನು ನಿಯಂತ್ರಿಸುವ ಎಲ್ಲಾ ತಂತ್ರಗಳನ್ನು ಬಳಸಿಕೊಳ್ಳುತ್ತಾರೆ. ನಕಲಿ ಪಾರ್ಲರ್, ಮಸಾಜ್ ಪಾರ್ಲರ್, ಆನ್‌ಲೈನ್ ಬೆಂಗಾವಲು ಸೇವೆಗಳು, ವಸತಿ ವೇಶ್ಯಾಗೃಹಗಳು, ನಗರ ಬೀದಿಗಳಲ್ಲಿ ಮತ್ತು ಟ್ರಕ್ ಸ್ಟಾಪ್‌ಗಳು, ಹೈವೇ ದಾಬಾಗಳು, ಸ್ಟ್ರಿಪ್ ಕ್ಲಬ್‌ಗಳು, ಹೋಟೆಲ್‌ಗಳು, ಕ್ಯಾಬರೆ ಡಾನ್ಸ್‌ಕ್ಲಬ್ ಮತ್ತು ಇತರೆಡೆಗಳಲ್ಲಿ ಅನೈತಿಕ ಕಳ್ಳ ಸಾಗಾಣಿಕೆ ಅಸ್ತಿತ್ವದಲ್ಲಿದೆ.

ರಸ್ತೆ ಅಥವಾ ಹೈವೆ ಆಧಾರಿತ ಅನೈತಿಕ ಕಳ್ಳಸಾಗಾಣಿಕೆಯಲ್ಲಿ ಬಲಿಪಶುಗಳಿಗೆ ಅಂದರೆ ಸಾಗಾಣಿಕೆಯಾದ ಹೆಣ್ಣುಮಕ್ಕಳಿಗೆ ರಾತ್ರಿ ಪೂರ್ತಿ ಕಾರ್ಯ ನಿರ್ವಹಿಸಬೇಕಾದ ಒತ್ತಡವಿರುತ್ತದೆ. ಅವರ ಆದಾಯ ೫೦೦ರಿಂದ ೨೦೦೦ ಅಥವಾ ಇದಕ್ಕೂ ಹೆಚ್ಚಿನದು ಇರಬಹುದು. ಮಸಾಜ್ ಪಾರ್ಲರ್ ವ್ಯವಹಾರದ ವೇಷದಲ್ಲಿರುವ ವೇಶ್ಯಾಗೃಹಗಳಲ್ಲಿ ಸಾಮಾನ್ಯವಾಗಿ ಬಲಿಪಶುಗಳು ಅಲ್ಲೇ ವಾಸಿಸುತ್ತಾರೆ. ಅಲ್ಲಿ ಅವರು ವಾರದಲ್ಲಿ ೭ ದಿನಗಳು ಒಂದು ದಿನದಲ್ಲಿ ೬ರಿಂದ ೧೦ ಪುರುಷರಿಗೆ ವಾಣಿಜ್ಯ ಲೈಂಗಿಕತೆಯನ್ನು ಒದಗಿಸುವಂತೆ ಒತ್ತಾಯಿಸಲಾಗುತ್ತದೆ.

ಮಹಿಳೆಯರು, ಹುಡುಗಿಯರು, ಪುರುಷರು, ಮಕ್ಕಳು, ವಿದೇಶಿ ಪ್ರಜೆಗಳು ಮತ್ತು LGBT ವ್ಯಕ್ತಿಗಳು, ಮನೆಯಿಂದ ಓಡಿಹೋದ ಮತ್ತು ಮನೆಯಿಲ್ಲದ ಯುವಕರು, ಕೌಟುಂಬಿಕ ಹಿಂಸಾಚಾರ, ಲೈಂಗಿಕ ದೌರ್ಜನ್ಯ, ಯುದ್ಧ ಮತ್ತು ಸಂಘರ್ಷಗಳು ಅಥವಾ ಸಾಮಾಜಿಕ ತಾರತಮ್ಯದ ಬಲಿಪಶುಗಳು ಲೈಂಗಿಕ ಕಳ್ಳಸಾಗಾಣಿಕೆಗೆ ಬಲಿಯಾಗಬಹುದು. ಇಂತವರನ್ನೇ ಅನೈತಿಕ ಕಳ್ಳಸಾಗಾಣಿಕೆದಾರರು ಹುಡುಕುತ್ತಿರುತ್ತಾರೆ ಮತ್ತು ಗುರಿಯಾಗಿಸುತ್ತಾರೆ.

ಲೈಂಗಿಕ ಕಳ್ಳಸಾಗಣೆ ಒಂದು ದೇಶದೊಳಗೆ ಅಥವಾ ರಾಷ್ಟ್ರೀಯ ಗಡಿಗಳಲ್ಲಿ ದೈಹಿಕ ಹಕ್ಕುಗಳ ಉಲ್ಲಂಘನೆ, ದೈಹಿಕ ಸಮಗ್ರತೆ, ಸಮಾನತೆ, ಘನತೆ, ಆರೋಗ್ಯ, ಭದ್ರತೆ ಮತ್ತು ಹಿಂಸೆ ಮತ್ತು ಚಿತ್ರಹಿಂಸೆಗಳಿಂದ ಸ್ವಾತಂತ್ರ್ಯ ಸೇರಿದಂತೆ ಮೂಲಭೂತವಾದ ಹಕ್ಕುಗಳನ್ನು ಉಲ್ಲಂಘಿಸುತ್ತದೆ. ಮಹಿಳೆಯರ ಮೇಲಿನ ಎಲ್ಲಾ ರೀತಿಯ ತಾರತಮ್ಯವನ್ನು ನಿರ್ಮೂಲನೆ ಮಾಡುವ ಸಮಾವೇಶ (CEDAW) ಸೇರಿದಂತೆ ಹಲವಾರು ಮಾನವ ಹಕ್ಕುಗಳ ಒಪ್ಪಂದಗಳಿವೆ. ಲೈಂಗಿಕ ಕಳ್ಳಸಾಗಣೆಕೆಯನ್ನು ಒಂದು ಈ ರೀತಿಯ ಲೈಂಗಿಕ ತಾರತಮ್ಯ ಮತ್ತು ಮಾನವ ಹಕ್ಕುಗಳ ಉಲ್ಲಂಘನೆ ಎಂದು ಪರಿಗಣಿಸಲಾಗಿದೆ. ಅನೈತಿಕ ಕಳ್ಳಸಾಗಾಣೆಯಿಂದ ಬದುಕುಳಿದವರು, ಮನಸ್ಸು ಮತ್ತು ದೇಹದ ದೈನಂದಿನ ಅವನತಿಯ ಕಥೆಗಳನ್ನು ಹೇಳುತ್ತಾರೆ. ಹೆಚ್ಚಾಗಿ ಅವರನ್ನು ಸಾಮಾನ್ಯ ಜನರಿಂದ

ಪ್ರತ್ಯೇಕಿಸಲಾಗುತ್ತದೆ. ದೈಹಿಕ ಮತ್ತು ಮಾನಸಿಕ ಮತ್ತು ಲೈಂಗಿಕ ದೌರ್ಜನ್ಯಕ್ಕೆ ಒಳಪಡಿಸಲಾಗುತ್ತದೆ. ಬಹಳಷ್ಟು ಹೆಣ್ಣು ಮಕ್ಕಳು ನಿರಂತರ ಮಾನಸಿಕ ಮತ್ತು ದೈಹಿಕ ಚಿಕಿತ್ಸೆಗೆ ಒಳಗಾಗಬೇಕಾಗುತ್ತದೆ. ಅಷ್ಟೇ ಅಲ್ಲದೆ ಆಘಾತಕಾರಿ ಒತ್ತಡದ ಕಾಯಿಲೆ ಮತ್ತು ಡಿಸ್ ಅಸೋಸಿಯೇಷನ್‌ನ ಲಕ್ಷಣಗಳು ಸೇರಿದಂತೆ ಅನೇಕರು ಭಾವನಾತ್ಮಕ ಆಘಾತಕ್ಕೆ ಒಳಗಾಗುತ್ತಾರೆ. HIV/AIDS ಸೇರಿದಂತೆ ಲೈಂಗಿಕತೆಯಿಂದ ಹರಡುವ ಸೋಂಕುಗಳಿಗೆ ಹೆಚ್ಚಿನದಾಗಿ ತುತ್ತಾಗುತ್ತಾರೆ. ಅನೇಕ ಹೆಣ್ಣುಮಕ್ಕಳು ಗರ್ಭಿಣಿಯಾಗುತ್ತಾರೆ ಮತ್ತು ಆಗಾಗ್ಗೆ ಅದನ್ನು ತೆಗೆಸಲು ಅಸುರಕ್ಷಿತ ಗರ್ಭಪಾತಕ್ಕೆ ಒಳಗಾಗುತ್ತಾರೆ. ಇದರಿಂದ ಸಾವಿರಾರು ಹೆಣ್ಣುಮಕ್ಕಳು ತಮ್ಮ ಪ್ರಾಣವನ್ನೇ ಕಳೆದುಕೊಂಡಿದ್ದಾರೆ. ಇಂತಹ ದುಷ್ಟತನವನ್ನು ಹೊಂದಿರುವ ಅನೈತಿಕ ಸಾಗಾಣಿಕೆಯನ್ನು ಸಮಾಜದಿಂದ ತೊಡೆದು ಹಾಕಲು ಮತ್ತು ಅದನ್ನು ಎದುರಿಸಲು ಸಮಗ್ರ ಕಾರ್ಯತಂತ್ರದ ಅಗತ್ಯವಿದೆ.

ಅನೈತಿಕ ಸಾಗಾಣಿಕೆಯ ಮೂಲತತ್ವಗಳು: ನೇಮಕಾತಿ, ಸಾರಿಗೆ ಮತ್ತು ವರ್ಗಾವಣೆ ಆಶ್ರಯ ಅಥವಾ ಸ್ವೀಕೃತಿ.

ಅರ್ಥ: ಬಲ, ದಬ್ಬಾಳಿಕೆ, ಅಪಹರಣ, ವಂಚನೆ, ಬಲತ್ಕಾರ, ಮೋಸ, ಅಧಿಕಾರ ದುರುಪಯೋಗ, ಬಲಿಪಶುವಿನ ನಿಯಂತ್ರಣದಲ್ಲಿರುವ ವ್ಯಕ್ತಿಗೆ ಪಾವತಿ ಅಥವಾ ಪ್ರಯೋಜನಗಳನ್ನು ನೀಡುವುದು.

ಉದ್ದೇಶ: ವೇಶ್ಯಾವಾಟಿಕೆ, ಲೈಂಗಿಕ ಶೋಷಣೆ, ಬಲವಂತದ ಕಾರ್ಮಿಕ ಅಥವಾ ಸೇವೆಗಳು ಅಥವಾ ಗುಲಾಮಗಿರಿ.

### ೪.೮ ಭಾರತದಲ್ಲಿ ಅನೈತಿಕ ಸಾಗಾಣಿಕೆ

ಭಾರತದಲ್ಲಿ ಮಾನವ ಕಳ್ಳಸಾಗಾಣಿಕೆ ಪ್ರಚಲಿತವಾಗಿದೆ. ಮತ್ತು ಸಾಮಾನ್ಯವಾಗಿ ಹೆಣ್ಣುಮಕ್ಕಳ ಸಾಗಾಣಿಕೆಗೆ ಸುಲಭವಾಗಿ ಗುರಿಯಾಗುತ್ತಾರೆ. ಜೀವನ ನಿರ್ವಹಿಸಲು ಸಾಮರ್ಥ್ಯವಿಲ್ಲದ ಮಹಿಳೆಯರು ಮಕ್ಕಳು ಮತ್ತು ಹೆಣ್ಣುಮಕ್ಕಳು ಸುಲಭವಾಗಿ ಇವರ ಕೈಗೆ ಸಿಕ್ಕಿಬೀಳುತ್ತಾರೆ. ಅಂದರೆ ಆಧುನಿಕ ಜೀವನವನ್ನು ನಡೆಸುವ ಭರವಸೆಯೊಂದಿಗೆ ವಾಣಿಜ್ಯ ಲೈಂಗಿಕತೆಯ ಭಾರತದಲ್ಲಿ ಪ್ರವರ್ಧಮಾನಕ್ಕೆ ಬರುತ್ತಿದೆ. ೨೦೧೩ರಲ್ಲಿ ದೆಹಲಿಯಲ್ಲಿ ನಡೆದ ಕ್ರೂರ ಸಾಮೂಹಿಕ ಅತ್ಯಾಚಾರವು ರಾಷ್ಟ್ರೀಯ ಗಮನ ಸೆಳೆಯಿತು ಮತ್ತು ಸಾರ್ವಜನಿಕರಿಂದ ಭಾರೀ ಆಕ್ರೋಶಕ್ಕೆ ಕಾರಣವಾಯಿತು. ಆದರೆ ಅನೈತಿಕ ಸಾಗಾಣಿಕೆಯ ಸುದ್ದಿಗಳು ಆಗಾಗ್ಗೆ ಪ್ರಕಟನೆಯಾಗುತ್ತಿದ್ದರೂ ಸಹ ಅಪರಾಧಿಗಳನ್ನು ಹಿಡಿದರೂ ಸಹ ಇದು ಅಂತಹ ದೊಡ್ಡ ಪ್ರಮಾಣದಲ್ಲಿ ಪ್ರತಿಭಟಿಸುವಂತಹ ಸುದ್ದಿಯಾಗುವುದೇ ಇಲ್ಲ. ಅತ್ಯಾಚಾರದಂತಹ ಆಕ್ರೋಶವನ್ನು ಉಂಟುಮಾಡಲಿಲ್ಲ. ಭಾರತದಲ್ಲಿ ಎಷ್ಟು ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ ಮಾಡಲಾಗುತ್ತಿದೆ ಎಂದು ನಿಖರವಾಗಿ ತಿಳಿಯುವುದು ಕಷ್ಟ. ಆದರೆ ದಿ ಸ್ಟೇಟ್ ಡಿಪಾರ್ಟ್‌ಮೆಂಟ್ ಆಫ್ ಯುನೈಟೆಡ್ ಸ್ಟೇಟ್, ಯುನೈಟೆಡ್ ನೇಷನ್ಸ್ ಮತ್ತು ಮಾನವ ಹಕ್ಕುಗಳ ಆಯೋಗ ಇವೆಲ್ಲವೂ ಭಾರತವನ್ನು ಅನೈತಿಕ ಸಾಗಾಣಿಕೆಯ ಕೇಂದ್ರವೆಂದು ಗುರುತಿಸಿದೆ.

ಒಮ್ಮೆ ಹೆಣ್ಣುಮಕ್ಕಳು ಈ ಅನೈತಿಕ ಸಾಗಾಣಿಕೆಯ ಉದ್ಯಮದಲ್ಲಿ ಸಿಲುಕಿಕೊಂಡರೆ ಅದರಿಂದ ತಪ್ಪಿಸಿಕೊಳ್ಳುವುದು ತುಂಬಾ ಕಷ್ಟವಾಗುತ್ತದೆ. ಈ ಬಲಿಪಶುಗಳು ಕಾನೂನು ಅಡೆತಡೆಗಳನ್ನು ಎದುರಿಸಬೇಕಾಗುತ್ತದೆ. ಏಕೆಂದರೆ ಸಾಗಾಣಿಕೆದಾರರು ಎಲ್ಲಾ ರೀತಿಯ ವಲಸೆ ಮತ್ತು ನಾಗರೀಕ ದಾಖಲಾತಿಗಳನ್ನು ಮುಟ್ಟುಗೋಲು ಹಾಕಿಕೊಂಡು ಬಂಧನದಲ್ಲಿಟ್ಟಿರುತ್ತಾರೆ.

ಭಾಷೆಯ ಅಡೆತಡೆಗಳು ಭಯ, ಸಾಮಾನ್ಯ ಜ್ಞಾನದ ಕೊರತೆ ಮತ್ತು ಹಣದ ಕೊರತೆಯು ಸಾಗಾಣಿಕೆದಾರರಿಂದ ತಪ್ಪಿಸಿಕೊಳ್ಳಲು ಮತ್ತೊಂದು ಅಡೆತಡೆಯಾಗಿದೆ. "ಪ್ರಪಂಚದ ಅನೇಕ ಭಾಗಗಳಲ್ಲಿ ಪರಂಪರೆ ವೇಶ್ಯಾವಾಟಿಕೆ ಅಥವಾ ಲೈಂಗಿಕ ಕಳ್ಳಸಾಗಾಣೆ ಉದ್ಯಮದಲ್ಲಿ ಭವಿಷ್ಯದ ಪೀಳಿಗೆಯ ಹೆಣ್ಣು ಮಕ್ಕಳನ್ನು ಬಲವಂತವಾಗಿ ಗುಲಾಮರನ್ನಾಗಿ ಮಾಡಲಾಗುತ್ತಿರುವುದು ನಿರೀಕ್ಷಿತ ಸಾಮಾಜಿಕ ನಿಯಮವಾಗುತ್ತಿದೆ".[೨] ಇತ್ತೀಚಿಗೆ ಅತ್ಯಾಚಾರದ ಹಿನ್ನೆಲೆಯಲ್ಲಿ, ಭಾರತದ ಸಂಸತ್ತು ಲೈಂಗಿಕ ದೌರ್ಜನ್ಯಕ್ಕೆ ಸಂಬಂಧಿಸಿದ ಕಾನೂನುಗಳನ್ನು ತಿದ್ದುಪಡಿ ಮಾಡುವ ಮತ್ತು ಲೈಂಗಿಕ ಕಳ್ಳಸಾಗಣೆಯನ್ನು ಕ್ರಿಮಿನಲ್ ಅಪರಾಧವನ್ನಾಗಿ ಮಾಡುವ ಮಸೂದೆಯನ್ನು ಅಂಗೀಕರಿಸಿತು. ಆದರೆ ಕಾಯಿದೆ ಮತ್ತು ಅದನ್ನು ಜಾರಿಗೊಳಿಸುವಿಕೆಯ ನಡುವಿನ ಅಂತರವು ಸ್ವೀಕಾರಾರ್ಹವಲ್ಲ. ದಿವಂಗತ ನ್ಯಾಯಮೂರ್ತಿ ಜಗದೀಶ್ ಶರಣ್ ವರ್ಮಾ ನೇತೃತ್ವದ ನ್ಯಾಯಾಂಗ ಸಮಿತಿಯ ಶಿಫಾರಸ್ಸುಗಳಿಗೆ ಪ್ರತಿಕ್ರಿಯೆಯಾಗಿ ಸಂಸತ್ತು ಕಾನೂನು ಜಾರಿಗೆ ತಂದಿತು. ಮಹಿಳೆಯರು ಮತ್ತು ಮಕ್ಕಳನ್ನು ದುರುಪಯೋಗ ಪ್ರವೃತ್ತಿಯಿಂದ ರಕ್ಷಿಸುವ ಕಠಿಣ ಕಾನೂನುಗಳನ್ನು ಒತ್ತಾಯಿಸುವುದರ ಜೊತೆಗೆ, ವರ್ಮಾ ವರದಿಯ ಲೈಂಗಿಕ ಸಂಬಂಧಿತ ಅಪರಾಧಗಳಿಗೆ ಕಠಿಣವಾದ ದಂಡವನ್ನು ವಿಧಿಸುವುದರ ಜೊತೆಗೆ ಅಪರಾಧಗಳಿಗೆ ತ್ವರಿತ ನ್ಯಾಯವನ್ನು ಶಿಫಾರಸ್ಸು ಮಾಡಿದೆ.

ಭಾರತದಲ್ಲಿ ಇತ್ತೀಚಿಗೆ ಸ್ವಂತ ಲೈಂಗಿಕ ವ್ಯಾಪಾರವು ಹೆಚ್ಚುತ್ತಿದೆ. ನ್ಯೂಯಾರ್ಕ್ ಟೈಮ್ಸ್ ಇತ್ತೀಚಿಗೆ ಜಾರ್ಖಂಡ್ ರಾಜ್ಯದಲ್ಲಿ ಯುವತಿಯರ ವ್ಯಾಪಕ ಮಾನವ ಕಳ್ಳಸಾಗಾಣಿಕೆ ಮತ್ತು ನೆರೆಯ ನೇಪಾಳ ಹಾಗೂ ಬಾಂಗ್ಲಾದೇಶದಿಂದ ಭಾರತಕ್ಕೆ ಬಡ ಹೆಣ್ಣುಮಕ್ಕಳನ್ನು ಕಳ್ಳಸಾಗಣೆ ಮಾಡುವ ಬಗ್ಗೆ ವರದಿ ಮಾಡಿದೆ. ಹೆಣ್ಣುಮಕ್ಕಳನ್ನು ಭಾರತ ಮತ್ತು ದಕ್ಷಿಣ ಏಷ್ಯಾದ ಇತರ ದೇಶಗಳಿಂದ ಕೊಲ್ಲಿ ಮತ್ತು ಆಗ್ನೇಯ ಏಷ್ಯಾಕ್ಕೆ ರಫ್ತು ಮಾಡಲಾಗುತ್ತಿದೆ. ಇದಕ್ಕೆ ನಿರಂತರ ಬಡತನ ಒಂದು ಪ್ರಮುಖ ಅಂಶವಾಗಿದೆ. ಅನೇಕ ದುರ್ಬಲ ಹೆಣ್ಣುಮಕ್ಕಳು ಉದ್ಯೋಗದ ಭರವಸೆಗಳಿಂದ ಆಮಿಷಕ್ಕೊಳಗಾಗುತ್ತಾರೆ. ಮತ್ತು ಕೆಲವು ಪೋಷಕರು ತಮ್ಮ ಹೆಣ್ಣು ಮಕ್ಕಳನ್ನು ಕಳ್ಳಸಾಗಾಣೆದಾರರಿಗೆ ಮಾರಾಟ ಮಾಡುವಷ್ಟು ಹತಾಶರಾಗಿದ್ದಾರೆ. ತ್ವರಿತ ನಗರೀಕರಣ ಮತ್ತು ನಿರಂತರ ಬೆಳೆಯುತ್ತಿರುವ ನಗರಗಳಿಗೆ ಹೆಚ್ಚಿನ ಸಂಖ್ಯೆಯ ಪುರುಷರು ವಲಸೆ ಹೋಗುವುದು ವಾಣಿಜ್ಯ ಲೈಂಗಿಕತೆಗೆ ಮಾರುಕಟ್ಟೆಯನ್ನು ಸೃಷ್ಟಿಸುತ್ತಿದೆ. ಹಾಗೆಯೇ ಸಾಮಾಜಿಕ ಕಾರಣಗಳಿಂದ ಹೆಣ್ಣು ಶಿಶುಹತ್ಯೆ ಮತ್ತು ಗರ್ಭಪಾತಗಳು ಹೆಚ್ಚಾಗುತ್ತಿರುವುದರಿಂದ ಲಿಂಗ ಅಸಮತೋಲನವು ಹೆಚ್ಚಾಗುತ್ತಿವೆ. ಇದರಿಂದ ಪ್ರತಿಯೊಬ್ಬ ಗಂಡಿಗೂ ಒಂದು ಹೆಣ್ಣು ಸಿಗುವ ಅವಕಾಶಗಳು ಕಡಿಮೆಯಾಗಿವೆ. ಮತ್ತು ಸಂಗಾತಿಯ

ಆಯ್ಕೆಗೆ ಪುರುಷರಿಗೆ ಅವಕಾಶ ಸಿಗುವ ಯಾವುದೇ ಭರವಸೆಗಳಿಲ್ಲ. ಭಾರತದ ಧನ ಸಮೃದ್ಧಿ ಅಥವಾ ಸಂಪತ್ತು ಸಹ ಒಂದು ಅಂಶವಾಗಿದ್ದು ಯುರೋಪಿಯನ್ ಮಹಿಳೆಯರನ್ನು ಭಾರತದ ಲೈಂಗಿಕ ವ್ಯಾಪಾರಕ್ಕೆ ಸೆಳೆಯುತ್ತಿದೆ.

ಜಾತಿ ವ್ಯವಸ್ಥೆಯು ಸಹ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಸಮಸ್ಯೆಯನ್ನು ಹೆಚ್ಚಿಸುತ್ತಿದೆ. ನಮ್ಮ ಭಾರತೀಯ ಸಮಾಜದ ಅನಾನುಕೂಲಕರ ಭಾಗಗಳಿಂದ ಮತ್ತು ಕೆಳವರ್ಗದ ಹೆಣ್ಣುಮಕ್ಕಳು ಈ ಅನೈತಿಕ ಸಾಗಾಣಿಕೆಗೆ ಬಲಿಯಾಗುತ್ತಿದ್ದಾರೆ. ಭಾರತದಲ್ಲಿ ಕಾನೂನುಗಳನ್ನು ತಿದ್ದುಪಡಿ ಮಾಡುವುದು ಉತ್ತಮ ಹೆಜ್ಜೆಯಾಗಿದೆ. ಆದರೆ ಆ ಕಾನೂನುಗಳನ್ನು ಜಾರಿಗೊಳಿಸಲು ತೆಗೆದುಕೊಳ್ಳುವ ಸಮಯ ಅಷ್ಟು ಉತ್ತಮವಲ್ಲ. ಅನೈತಿಕ ಸಾಗಾಣಿಕೆ ಲಾಭದಾಯಕ ಮತ್ತು ಭ್ರಷ್ಟಾಚಾರ ವ್ಯಾಪಕವಾಗಿದೆ. ಸಾಗಾಣಿಕೆದಾರರಿಗೆ ಪೋಲೀಸ್ ಮತ್ತು ಇತರ ಕಾನೂನು ಜಾರಿ ಏಜೆಂಟರಿಂದ ಹೊರಗುಳಿಯುವುದು ತುಂಬಾ ಸುಲಭ, ಆದ್ದರಿಂದ ಪೋಲೀಸ್ ಮತ್ತು ಕಾನೂನು ವ್ಯವಸ್ಥೆ ಬಲವಾದ ಶಿಸ್ತಿನ ನಿಯಮಗಳನ್ನು ಕಟ್ಟುನಿಟ್ಟಾಗಿ ಬಳಸುವುದರಿಂದ ಅವರನ್ನು ಇವರ ಕಣ್ತಪ್ಪಿನಿಂದ ಹೊರಗುಳಿಯುವುದರಿಂದ ತಡೆಯಬಹುದು. ಮತ್ತು ಲೈಂಗಿಕ ಅಪರಾಧಗಳನ್ನು ಮಾಡುವವರು ಶೀಘ್ರವಾಗಿ ಕಾನೂನು ಕ್ರಮ ಜರುಗಿಸುವ ಮತ್ತು ಕಠಿಣ ಶಿಕ್ಷೆಗೆ ಗುರಿಯಾಗುವುದರ ಕುರಿತು ಭಯಪಡುವಂತೆ ಮಾಡಬೇಕು. ಹಾಗೆಯೇ ಭಾರತ ಸರ್ಕಾರವು ಐತಿಹಾಸಿಕ ಜಾತಿ, ಧರ್ಮ, ವರ್ಗ ತಾರತಮ್ಯದ ಮಾದರಿಗಳನ್ನು ಪರಿಹರಿಸಬೇಕು. ಅನಾನುಕೂಲ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಲು ಸಂಪನ್ಮೂಲವನ್ನು ನೀಡಬೇಕು. ಹೆಣ್ಣಿನ ಬಗೆಗಿನ ವರ್ತನೆಗಳು ಬದಲಾಗುವವರೆಗೆ ಮತ್ತು ಬಡಮಕ್ಕಳು ತಮ್ಮ ಭವಿಷ್ಯವನ್ನು ತಾವೇ ನಿರ್ಮಿಸಿಕೊಳ್ಳಲು ಸಾಧ್ಯವಾಗುವವರೆಗೆ ಅನೈತಿಕ ಕಳ್ಳಸಾಗಾಣಿಕೆ ಮತ್ತು ಅದು ಉಂಟುಮಾಡುವ ಹಾನಿ ಮುಂದುವರಿಯುತ್ತಲೇ ಇರುತ್ತದೆ.

## ೪.೯ ಅನೈತಿಕ ಸಾಗಾಣಿಕೆಗೆ ಬಲಿಯಾದವರು

ಈ ಅನೈತಿಕ ಸಾಗಾಣಿಕೆಗೆ ಬಲಿಯಾಗುವವರಲ್ಲಿ ಮಹಿಳೆಯರು ಅಥವಾ ಪುರುಷರು, ಹೆಣ್ಣುಮಕ್ಕಳು, ಹುಡುಗರು ಆಗಿರಬಹುದು. ಹೆಚ್ಚಿನವರಲ್ಲಿ ಮಹಿಳೆಯರು ಮತ್ತು ಹೆಣ್ಣು ಮಕ್ಕಳೇ ಆಗಿರುತ್ತಾರೆ. ಅನೈತಿಕ ಸಾಗಾಣಿಕೆಗೆ ಬಲಿಪಶುಗಳನ್ನು ಆಮಿಷವೊಡ್ಡಲು ಕೆಲವು ಸಾಮಾನ್ಯ ಮಾದರಿಗಳಿವೆ.

ಅ. ಬೇರೆ ಪ್ರದೇಶಗಳಲ್ಲಿ ಅಥವಾ ದೇಶಗಳಲ್ಲಿ ಉತ್ತಮ ಉದ್ಯೋಗದ ಭರವಸೆ.

ಆ. ಸುಳ್ಳು ವಿವಾಹ ಪ್ರಸ್ತಾಪ ಅಥವಾ ಗುಜ್ಜರ್ ಮದುವೆಗಳು.

ಇ. ಪೋಷಕರು, ಗಂಡ, ಗೆಳೆಯ ಸಂಬಂಧಿಕರಿಂದ ಲೈಂಗಿಕ ವ್ಯಾಪಾರಕ್ಕೆ ಮಾರಾಟ ಮಾಡುತ್ತಾರೆ.

ಈ. ಅನೈತಿಕ ಸಾಗಾಣಿಕೆದಾರರಿಂದ ಅಪಹರಣ.

ಅನೈತಿಕ ಸಾಗಾಣಿಕೆದಾರರು ಆಗಾಗ್ಗೆ ತಮ್ಮ ಬಲಿಪಶುಗಳನ್ನು ಸಾಲ ಸಂಬಂಧಕ್ಕೆ ಗುರಿಯಾಗಿಸಿ ಹಿಂಸಿಸುತ್ತಾರೆ. ಅವರ ಜೀವನ ವೆಚ್ಚ ಮತ್ತು ಸಾಗಾಣಿಕೆಗೆ ಸಂಬಂಧಿಸಿದ ವೆಚ್ಚವನ್ನು ಅವರಿಂದಲೇ ಪಾವತಿಸುವಂತೆ ಒತ್ತಾಯ ಮಾಡಲಾಗುತ್ತದೆ. ಬಲಿಪಶುಗಳು ತಮ್ಮ ವೈಯಕ್ತಿಕ ಸೇವೆಗಳನ್ನು ಸಾಲ ಮರುಪಾವತಿಗೆ ಒತ್ತೆಯಾಗಿ ಇಡಬೇಕಾಗುತ್ತದೆ. ವಿಪರ್ಯಾಸವೆಂದರೆ ಬಲಿಪಶುವಾದ ಹೆಣ್ಣೇ ಅವರ ಬಂಡವಾಳ ಅವಳಿಂದ ಆದಾಯ ದೊರೆತರೂ ಮತ್ತೆ ತನ್ನ ಜೀವನದ ವೆಚ್ಚಕ್ಕೆ ಅದನ್ನು ಅವಳಿಗೆ ಸಾಲದ ರೂಪದಲ್ಲಿ ನೀಡಲಾಗುತ್ತದೆ.

ಅನೈತಿಕ ಸಾಗಾಣಿಕೆದಾರರು ಬಲಿಪಶುಗಳಿಗೆ ಹಸಿವು, ಬಂಧನ, ಹೊಡೆತ, ದೈಹಿಕ ಮಾನಸಿಕ ಕಿರುಕುಳ, ಸಾಮೂಹಿಕ ಅತ್ಯಾಚಾರ, ಸಂತ್ರಸ್ತರಿಗೆ ಮತ್ತು ಸಂತ್ರಸ್ತರ ಕುಟುಂಬಗಳಿಗೆ ಹಿಂಸಾಚಾರದ ಬೆದರಿಕೆಗಳು, ಬಲವಂತ ಮಾದಕ ವಸ್ತು ಬಳಕೆ ಮತ್ತು ಅವರ ಚಟುವಟಿಕೆಗಳನ್ನು ಬಹಿರಂಗಪಡಿಸುವ ಮೂಲಕ ಸಂತ್ರಸ್ತರನ್ನು ಅವಮಾನಕ್ಕೀಡು ಮಾಡುವ ಬೆದರಿಕೆಗಳು ಸೇರಿದಂತೆ ವಿವಿಧ ವಿಧಾನಗಳನ್ನು ಬಳಸುತ್ತಾರೆ.

ಈ ಕೃತ್ಯಕ್ಕೆ ಬಲಿಯಾದವರು ಹಲವಾರು ಆರೋಗ್ಯದ ಅಪಾಯಗಳನ್ನು ಎದುರಿಸುತ್ತಾರೆ. ದೈಹಿಕ ಅಪಾಯಗಳ ಜೊತೆಗೆ ಮಾದಕವಸ್ತು ಮತ್ತು ಕುಡಿತದ ಚಟ, ದೈಹಿಕ ಗಾಯಗಳು ಅಂದರೆ ಮುರಿದ ಮೂಳೆಗಳು, ಸಿಗರೇಟಿನಿಂದ ಸುಟ್ಟ ಗಾಯಗಳು, ಯೋನಿ ಹರಿದು ಹೋಗುವಿಕೆ, ಮೆದುಳಿನ ಆಘಾತ ಅದರಿಂದ ನೆನಪಿನ ಮರೆವು, ತಲೆ ತಿರುಗುವಿಕೆ, ತಲೆನೋವು, ಮರಗಟ್ಟುವಿಕೆ, ಲೈಂಗಿಕತೆಯಿಂದ ಹರಡುವ ರೋಗಗಳಾದ ಎಚ್.ಐ.ವಿ/ಏಡ್ಸ್ ಗೋನೋರಿಯಾ, ಸಿಫಿಲಿಸ್, ಸಂತಾನ ಹೀನತೆ, ಗರ್ಭಪಾತ, ಮುಟ್ಟಿನ ಸಮಸ್ಯೆ ಇತರ ಕಾಯಿಲೆ ಮತ್ತು ಬಲವಂತದ ಗರ್ಭಪಾತ ಮುಂತಾದವುಗಳನ್ನು ಎದುರಿಸಬೇಕಾಗುತ್ತದೆ. ಮಾನಸಿಕ ಹಿಂಸೆಯನ್ನು ಅನುಭವಿಸಬೇಕಾಗುತ್ತದೆ. ಅವಮಾನ, ದುಃಖ, ಭಯ, ಅಪನಂಬಿಕೆ, ಪುರುಷರ ಮೇಲೆ ದ್ವೇಷ, ಸ್ವಯಂ ದ್ವೇಷ, ಆತ್ಮಹತ್ಯೆ, ಮತ್ತು ಆತ್ಮಹತ್ಯಾ ಆಲೋಚನೆಗಳು ಸೇರಿವೆ. ತೀವ್ರವಾದ ಆತಂಕ, ಖಿನ್ನತೆ, ನಿದ್ರಾಹೀನತೆ, ದೈಹಿಕವಾಗಿ ಅತಿಹೆಚ್ಚು ಜಾಗರೂಕತೆ, ಸ್ವಯಂ ಅಸಹ್ಯಪಡುವುದು, ಬದಲಾವಣೆಗೆ ಒಪ್ಪದಂತಹ ಮನಸ್ಥಿತಿ ಒತ್ತಡದ ಕಾಯಿಲೆ ಮುಂತಾದವು ಅವರನ್ನು ಅಪಾಯದಂಚಿನಲ್ಲಿಡುತ್ತದೆ.

**ವಾಣಿಜ್ಯ ಲೈಂಗಿಕ ಶೋಷಣೆಗೆ ಕಾರಣವಾಗುವ ವಿಧಾನಗಳು**

ಹೆಣ್ಣುಮಕ್ಕಳು ಮತ್ತು ಮಕ್ಕಳ ವಾಣಿಜ್ಯ ಲೈಂಗಿಕ ಶೋಷಣೆಗೆ ಕಾರಣಗಳು ಹಲವು ಮಾರ್ಗಗಳ ಮೂಲಕ ಈ ಶೋಷಣೆಯು ನಡೆಯುತ್ತದೆ.

ಮೊದಲನೆಯದಾಗಿ ಮಕ್ಕಳು ಅಪಹರಣ, ಕಳ್ಳಸಾಗಾಣೆ ಮತ್ತು ವಂಚನೆಯ ಮೂಲಕ ಮಹಿಳೆಯರನ್ನು ಬಲವಂತವಾಗಿ ಈ ಕೃತ್ಯದಲ್ಲಿ ಭಾಗಿಯಾಗುವಂತೆ ಮಾಡಲಾಗುತ್ತದೆ. ಎರಡನೆಯದಾಗಿ ಪಿಂಪ್ಸ್‌ಗಳಿಂದ, ವೇಶ್ಯಾಗೃಹ ಕೀಪರ್ಸ್‌ಗಳು ಮತ್ತು ಸಾಗಾಣಿಕೆಗೆ ಒಳಗಾದ ತಾಯಿಯರಿಂದ

ಮಕ್ಕಳು ಬಲಿಯಾಗುತ್ತಿದ್ದಾರೆ. ಮೂರನೆಯದಾಗಿ ಬುಡಕಟ್ಟು ಜನಾಂಗಗಳಲ್ಲಿ ಆಚರಿಸುವ ಧಾರ್ಮಿಕ ನಿರ್ಭಂದಗಳು ಉದ: ಉತ್ತರ ಪ್ರದೇಶ, ರಾಜಸ್ಥಾನ, ಮಹಾರಾಷ್ಟ್ರಗಳಲ್ಲಿ ಕ್ರಿಮಿನಲ್ ಸಮುದಾಯಗಳು ಎಂದು ಕರೆಯಲ್ಪಡುವ, ಭಾರ್ತು(Bhartu) ಮತ್ತು ಹಬುರಾ(Habura) ಜನಾಂಗದವರು, ಗಾಯಕರು, ನರ್ತಕಿಯರು, ಅಲೆಮಾರಿ ಸಮುದಾಯದಿಂದ ಕಂಜರ್ಸ್(Kanjars) ಸಮುದಾಯ ಮತ್ತೊಂದು ಮಾರ್ಗವಾಗಿದೆ. ಆಧುನಿಕ ಮನರಂಜನೆಯನ್ನು ಹರಡುವಿಕೆಗಾಗಿ, ಈ ಸಮುದಾಯಗಳಲ್ಲಿ ಅನೇಕರು ತಮ್ಮ ಹೆಣ್ಣುಮಕ್ಕಳು ಮತ್ತು ಮಹಿಳೆಯರನ್ನು ಈ ಕೂಪಕ್ಕೆ ತಳ್ಳುತ್ತಾರೆ ಮತ್ತು ಒತ್ತಾಯಿಸುತ್ತಾರೆ. ನಾಲ್ಕನೆಯದಾಗಿ ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ ಮತ್ತು ತಮಿಳುನಾಡು ಮತ್ತು ಗೋವಾಗಳಲ್ಲಿ ನಿಷೇಧಿಸಲಾಗಿರುವ, ದೇವದಾಸಿ, ಜೋಗಿನ್, ಬಸವಿ, ವೆಂಕಟೇಶಣಿ, ದೇವರ ಹೆಸರಿನಲ್ಲಿ ಹೆಣ್ಣುಮಕ್ಕಳನ್ನು ಸಮರ್ಪಿಸುವ ಧಾರ್ಮಕ ಆಚರಣೆಗಳು ಇಂದಿಗೂ ಕಡಿಮೆ ಪ್ರಮಾಣದಲ್ಲಿ ನಡೆಯುತ್ತಿರುವುದು ಒಂದು ಮಾರ್ಗವಾಗಿದೆ. ಐದನೆಯದಾಗಿ, ಜೀವನೋಪಾಯಕ್ಕೆ ಆರ್ಥಿಕ ಸಂಕಷ್ಟದಲ್ಲಸಿರುವ ಮಹಿಳೆಯರು, ಗಂಡಂದಿರಿಂದ ಬೇರ್ಪಟ್ಟ ಮಹಿಳೆಯರು, ವಿಧವೆಯರು, ಕುಟುಂಬದಿಂದ ತ್ಯಜಿಸಲ್ಪಟ್ಟ ಹೆಣ್ಣುಮಕ್ಕಳು ಅವರ ಆಯ್ಕೆಗೆ ವಿರುದ್ಧವಾಗಿ ವಾಣಿಜ್ಯ ಲೈಂಗಿಕ ಶೋಷಣೆಗೆ ಬಲಿಯಾಗಬೇಕಾಗುತ್ತದೆ. ಆರನೆಯದಾಗಿ, ನೆರೆಯ ದೇಶಗಳಿಂದ, ನೆರೆಯ ರಾಜ್ಯಗಳಿಂದ, ವಲಸೆ ಬಂದ ಹೆಣ್ಣುಗಳನ್ನು, ಬಲಿಪಶುಗಳಾಗಲು ಒತ್ತಾಯಿಸುವ ಸಾಧ್ಯತೆ ಹೆಚ್ಚು. ಏಳನೆಯದಾಗಿ, ಮನರಂಜನಾ ಉದ್ಯಮದಲ್ಲಿ ಅಂಚಿನಲ್ಲಿರುವ ಬಾರ್‌ಗರ್ಲ್ಸ್, ಕ್ಯಾಬರೆ ನರ್ತಕಿಯರು ಮುಂತಾದವರು ಸಹ ವಾಣಿಜ್ಯ ಲೈಂಗಿಕ ಶೋಷಣೆಗೆ ಒಳಗಾಗುತ್ತಾರೆ. (Report of the Committee an prostitution, Child prostituter and Children of Prostituter and Plan action to Cambot trafficking and commercial sexual oxplotation of women and children by dept. of women and child development ministry of human resource devlopment. Govt of India)

## ೪.೧೦ ಅನೈತಿಕ ಸಾಗಾಣಿಕೆ ಮತ್ತು ವಾಣಿಜ್ಯ ಲೈಂಗಿಕ ಶೋಷಣೆಯ ವ್ಯಾಪ್ತಿ ಮತ್ತು ಪ್ರಮಾಣ

ಹೆಣ್ಣುಮಕ್ಕಳು ಮತ್ತು ಮಕ್ಕಳ ವಾಣಿಜ್ಯ ಲೈಂಗಿಕ ಶೋಷಣೆಯ ಕುರಿತು ಹಲವಾರು ಅಧ್ಯಯನಗಳು ಮತ್ತು ವರದಿಗಳು ಇದ್ದರೂ, ಭಾರತದಲ್ಲಿ ಅನೈತಿಕ ಸಾಗಾಣಿಕೆ ಮತ್ತು ವಾಣಿಜ್ಯ ಲೈಂಗಿಕ ಶೋಷಣೆಯ ವ್ಯಾಪ್ತಿ ಮತ್ತು ಪ್ರಮಾಣದ ಬಗ್ಗೆ ಯಾವುದೇ ವಿಶ್ವಾಸಾರ್ಹ ಅಂದಾಜುಗಳಲ್ಲಿ ಈ ಸಮಸ್ಯೆಯ ಪ್ರಮಾಣವನ್ನು ಅಂದಾಜು ಮಾಡಲು ಪ್ರಯತ್ನಿಸುವಲ್ಲಿ ಪ್ರಮುಖ ಅಡೆತಡೆಗಳು ಇವೆ. ಅವುಗಳಲ್ಲಿ ಸಾಮಾಜಿಕ ಕಳಂಕ ಮತ್ತು ಅದಕ್ಕೆ ಲಗತ್ತಿಸಲಾದ ಕಾನೂನು ನಿರ್ಬಂಧಗಳು ಸುಲಭವಾಗಿ ಸಾಗಾಣಿಕೆದಾರರ ಭದ್ರಕೋಟೆ, ಮತ್ತು ಹಿಂಸಾಚಾರದ ಮೂಲಕ ನಡೆಸುವ ವೇಶ್ಯಾಗೃಹದಲ್ಲಿನ ಮಹಿಳೆಯರು ಮತ್ತು ಮಕ್ಕಳನ್ನು ಗುರುತಿಸಲು ತಡೆಯುತ್ತದೆ. ಮತ್ತು ಮಹಾನಗರದ ಕೆಲವು ಸ್ಥಳಗಳನ್ನು ಹೊರತುಪಡಿಸಿ ಉಳಿದ ಸ್ಥಳಗಳನ್ನು ಗುರುತಿಸಲು ಸಾಧ್ಯವಾಗದೆ ಹೋಗುತ್ತದೆ.

ಭಾರತದಲ್ಲಿ ೧೯೯೧ರಲ್ಲಿ ಕೇಂದ್ರ ಸಮಾಜ ಕಲ್ಯಾಣ ಮಂಡಳಿಯು ಆರು ಮಹಾನಗರಗಳಲ್ಲಿ ನಡೆಸಿದ ಸಮೀಕ್ಷೆಯು ವಾಣಿಜ್ಯ ಲೈಂಗಿಕ ಶೋಷಣೆಗೆ ಒಳಗಾದ ಮಹಿಳೆಯರು ಮತ್ತು ಮಕ್ಕಳ ಸಂಖ್ಯೆ, ೭೦,೦೦೦ರಿಂದ ೧೦೦೦೦೦೦ರ ನಡುವೆ ಎಂದು ಸೂಚಿಸಿದೆ. ಅವರಲ್ಲಿ ಸುಮಾರು ೩೦%ರಷ್ಟು ೧೮ ವರ್ಷಕ್ಕಿಂತ ಕಡಿಮೆ ವಯಸ್ಸಿನವರು ಎಂದು ತಿಳಿದುಬಂದಿದೆ. ಈ ವಾಣಿಜ್ಯ ಲೈಂಗಿಕ ಶೋಷಣೆಗೆ ಪ್ರಮುಖ ಕಾರಣವೆಂದರೆ ಬಡತನ ಮತ್ತು ನಿರುದ್ಯೋಗ, ಸೂಕ್ತ ಪುನರ್ವಸತಿಯ ಕೊರತೆ, ಅದರಲ್ಲಿ ಸುಮಾರು ೭೦% ಜನರು ಅನಕ್ಷರಸ್ಥರು ಮತ್ತು ೪೩% ಜನರು ರಕ್ಷಣೆಗಾಗಿ ಕಾಯುತ್ತಿರುವವರಾಗಿದ್ದಾರೆ. ಈ ಕೂಪದಿಂದ ಹೊರಹೋಗಲು ಬಯಸುವವರಲ್ಲಿ ಹೆಚ್ಚಿನವರು ತಮ್ಮ ಮಕ್ಕಳನ್ನು ವಾಣಿಜ್ಯ ಲೈಂಗಿಕ ಶೋಷಣೆ ಮತ್ತು ಸಾಂಕ್ರಾಮಿಕ ಕಾಯಿಲೆಯಿಂದ ರಕ್ಷಿಸುವುದು ಮತ್ತು ಅವರ ಭವಿಷ್ಯವನ್ನು ಉತ್ತಮ ಪಡಿಸುವುದಾಗಿ ಕಾರಣಗಳನ್ನು ನೀಡಿದ್ದಾರೆ. ಇತರರು ಪರ್ಯಾಯ ಆದಾಯದ ಮೂಲಗಳು ದೊರೆಯದ ಕಾರಣ, ಸಾಮಾಜಿಕವಾಗಿ ಅವರನ್ನು ಸ್ವೀಕಾರಾರ್ಹರು ಎಂದು ಪರಿಗಣಿಸದಿರುವುದು, ಕುಟುಂಬ ಪದ್ಧತಿಗಳು ಮತ್ತು ಮರ್ಯಾದೆ, ಬಡತನ, ಅನಾರೋಗ್ಯ ಮತ್ತು ನಿರಾಶಾಭಾವದಿಂದಾಗಿ ಅಲ್ಲೇ ಉಳಿಯಲು ಇಚ್ಛಿಸುತ್ತಾರೆ.

ವಾಣಿಜ್ಯ ಲೈಂಗಿಕ ಶೋಷಣೆಯು ವೇಶ್ಯಾಗೃಹಗಳು ಮತ್ತು ಕೆಂಪು ದೀಪ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿ ಕಂಡುಬರುತ್ತವೆ. ಮಸಾಜ್ ಪಾರ್ಲರುಗಳು, ಅತಿಥಿ ಗೃಹಗಳು, ಕಾಲ್‌ಗರ್ಲ್ ರಾಕೆಟ್‌ಗಳು, ಕ್ಯಾಬರೆ ಪ್ರದರ್ಶನ ಮಹಿಳಾ ಬೆಂಗಾವಲು ಸೇವೆಗಳು ಪ್ರಮುಖ ಹೆದ್ದಾರಿಗಳಲ್ಲಿ ಹೀಗೆ ಚದುರಿದ ರೂಪವನ್ನು ಹೊಂದಿದೆ.

**ಅನೈತಿಕ ಕಳ್ಳಸಾಗಣೆ ಪ್ರಕಾರಗಳು**

ಸಾಗಾಣಿಕೆ ಬಲಿಯಾದವರನ್ನು ವೇಶ್ಯಾವಾಟಿಕೆ, ಅಶ್ಲೀಲತೆ, ಬೆತ್ತಲೆ ಮಾಡುವುದು ನೇರ ಪ್ರಸಾರದ ಲೈಂಗಿಕ ಶೋಗಳು, ಅಂತರ್ಜಾಲ ವಧುಗಳು ಮಿಲಿಟರಿ ವೇಶ್ಯಾವಾಟಿಕೆ ಮತ್ತು ಲೈಂಗಿಕ ಪ್ರವಾಸೋದ್ಯಮ ಸೇರಿದಂತೆ ವಿವಿಧ ರೀತಿಯ ವಾಣಿಜ್ಯ ಲೈಂಗಿಕ ಶೋಷಣೆಗೆ ಒತ್ತಾಯಿಸಲಾಗುತ್ತದೆ. ಆದರೆ ವೇಶ್ಯಾವಾಟಿಕೆ ಮತ್ತು ಅಶ್ಲೀಲತೆಗೆ (Pormography)ಸಾಮಾನ್ಯವಾಗಿ ಹೆಚ್ಚಿನದಾಗಿ ಬಳಸಲಾಗುತ್ತದೆ. ಬೀದಿ ವೇಶ್ಯಾವಾಟಿಕೆ, ಮತ್ತು ವಸತಿಮನೆಗಳಿಂದ ಕಾರ್ಯನಿರ್ವಹಿಸುವ ಮುಚ್ಚಿದ ವೇಶ್ಯಾಗೃಹಗಳಂತಹ ಹೆಚ್ಚು ಭೂಗತ ವ್ಯವಸ್ಥೆಗಳಲ್ಲಿ ಲೈಂಗಿಕ ಕಳ್ಳಸಾಣೆ ಕಾರ್ಯಾಚರಣೆಗಳ ನಡೆಯುತ್ತವೆ. ಮಸಾಜ್ ಪಾರ್ಲರ್, ಸ್ಪಾಗಳು, ಸ್ಟ್ರಿಪ್ ಕ್ಲಬ್‌ಗಳು ಮತ್ತು ಸಾರ್ವಜನಿಕ ಮತ್ತು ಖಾಸಗಿ ಸ್ಥಳಗಳಲ್ಲಿ ಲೈಂಗಿಕ ಕಳ್ಳಸಾಗಾಣೆ ನಡೆಯುತ್ತದೆ. ಮೊದಲಿಗೆ ಕ್ಲಬ್‌ಗಳಲ್ಲಿ ನೃತ್ಯ ಮತ್ತು ಬೆತ್ತಲೆ ನೃತ್ಯ ಮಾಡುವುದನ್ನು ಪ್ರಾರಂಭಿಸಿ ನಂತರ ವೇಶ್ಯಾವಾಟಿಕೆ ಮತ್ತು ಅಶ್ಲೀಲತೆಯ ಸಂದರ್ಭಗಳಿಗೆ ಒತ್ತಾಯಿಸಲಾಗುತ್ತದೆ.

**ಅ. ಸಮಸ್ಯೆಯ ಪ್ರಮಾಣ**

ಜಾಗತಿಕ ಲೈಂಗಿಕ ವ್ಯಾಪಾರವು ವಾರ್ಷಿಕವಾಗಿ ೩೨ ಬಿಲಿಯನ್ ಮೌಲ್ಯದ ವಾಣಿಜ್ಯ ವಹಿವಾಟು ನಡೆಸುತ್ತಿದ್ದು ವೇಗವಾಗಿ ಬೆಳೆಯುತ್ತಿದೆ. ಮಾನವ ಕಳ್ಳಸಾಗಣೆ ಒಂದು ಸಂಘಟಿತ ಅಪರಾಧವಾಗಿದ್ದು, ಅತ್ಯಂತ ವೇಗವಾಗಿ ಬೆಳೆಯುತ್ತಿದ್ದು, ಮಾದಕ ವಸ್ತು ಮತ್ತು ಶ್ರಸ್ತ್ರಾಸ್ತ್ರ ಮಾರಾಟದ ನಂತರ ಈ ಸಂಘಟಿತ ಅಪರಾಧಕ್ಕೆ ಮೂರನೇ ಅತಿದೊಡ್ಡ ಆದಾಯದ ಉದ್ಯಮವಾಗಿದೆ. ಈ ವ್ಯವಹಾರವನ್ನು ಅನನ್ಯವಾಗಿಸುವ ಸಂಗತಿಯೆಂದರೆ, ಲೈಂಗಿಕ ಕಳ್ಳಸಾಗಾಣಿಕೆಗೆ ಮಾರಾಟವಾಗುವ ಮಹಿಳೆಯರು ಮತ್ತು ಹುಡುಗಿಯರು ತಮ್ಮನ್ನು ಮಾರಾಟ ಮಾಡುವ ಪಿಂಪ್‌ಗಳು ಮತ್ತು ಕಳ್ಳಸಾಗಾಣೆದಾರರಿಗೆ ಹೆಚ್ಚಿನ ಲಾಭವನ್ನು ತಂದುಕೊಡುತ್ತಾರೆ. ಮತ್ತೆ ಮತ್ತೆ ಮಾರಾಟಗೊಳ್ಳುತ್ತಲೇ ಇರುತ್ತಾರೆ. ಆದರೆ ಮಾದಕ ದ್ರವ್ಯಗಳು ಮತ್ತು ಮಾದಕ ವಸ್ತುಗಳನ್ನು ಒಮ್ಮೆ ಮಾತ್ರ ಮಾರಾಟ ಮಾಡುತ್ತಾರೆ ಮತ್ತು ಬಳಸುತ್ತಾರೆ.

**ಆ. ಯುನೈಟೆಡ್ ಸ್ಟೇಟ್‌ಗಳಲ್ಲಿ ಅನೈತಿಕ ಸಾಗಾಣಿಕೆ**

ಯುಎಸ್‌ಸ್ಟೇಟ್ ಡಿಪಾರ್ಟ್ಮೆಂಟ್ ಅಂದಾಜಿನ ಪ್ರಕಾರ ಯುನೈಟೆಡ್ ಸ್ಟೇಟ್ಸ್‌ನಲ್ಲಿ ವಾರ್ಷಿಕವಾಗಿ ೧೪೫೦೦ರಿಂದ ೧೭೫೦೦ ಜನರನ್ನು ಅನೈತಿಕ ಸಾಗಾಣಿಕೆ ಮಾಡಲಾಗುತ್ತದೆ. ಬಲಿಪಶುಗಳನ್ನು ಹೆಚ್ಚಾಗಿ ಮೆಕ್ಸಿಕೊ ಮತ್ತು ಪೂರ್ವ ಏಷ್ಯಾದಿಂದ ನೇಮಕ ಮಾಡಿಕೊಳ್ಳಲಾಗುತ್ತದೆ. ನಂತರದಲ್ಲಿ ಸೋವಿಯತ್ ಒಕ್ಕೂಟ, ಆಫ್ರಿಕಾ, ಪೂರ್ವ ಯುರೋಪ್ ಮತ್ತು ಅಂತಿಮವಾಗಿ ಲ್ಯಾಟಿನ್ ಅಮೇರಿಕ ವಿಶೇಷವಾಗಿ, ಅನೇಕ ಬಲಿಪಶುಗಳು ಹುಟ್ಟಿದ ರಾಷ್ಟ್ರಗಳು ಅಸ್ಥಿರ ರಾಜಕೀಯ ಹವಾಮಾನವನ್ನು ಹೊಂದಿವೆ. ಮತ್ತು ಆರ್ಥಿಕವಾಗಿ ಹಿಂದುಳಿದಿರುತ್ತವೆ. ಇದು ಅನೈತಿಕ ಸಾಗಾಣಿಕೆಗೆ ಅನುಕೂಲವಾಗುತ್ತದೆ. ಏಕೆಂದರೆ ಹೆಣ್ಣುಮಕ್ಕಳನ್ನು ನೇಮಕ ಮಾಡುವುದು, ಅಪಹರಿಸುವುದು ಮತ್ತು ಸಾಗಿಸುವುದು ಸುಲಭ, ಲಂಚಕೋರ ಅಧಿಕಾರಿಗಳು ಮತ್ತು ನಕಲಿ ಪಾಸ್‌ಪೋರ್ಟ್‌ಗಳು ಮತ್ತು ಇತರ ಪ್ರಯಾಣ ದಾಖಲೆಗಳನ್ನು ಸುಳ್ಳು ಸೃಷ್ಟಿಸುವುದು ಸುಲಭವಾಗಿ ಸಾಗಾಣಿಕೆ ಮಾಡಲು ಸಹಾಯಕವಾಗಿರುತ್ತದೆ. ಯುನೈಟೆಡ್ ಸ್ಟೇಟ್ಸ್ ಲೈಂಗಿಕ ಕಳ್ಳಸಾಗಾಣಿಕೆ ಪ್ರಮುಖ ತಾಣಗಳಲ್ಲಿ ಒಂದಾಗಿದೆ. ಮತ್ತು ಬಹಳಷ್ಟು ಮಕ್ಕಳನ್ನು ನೆದರ್ಲ್ಯಾಂಡ್ಸ್, ಜರ್ಮನಿ ಮತ್ತು ಜಪಾನ್ ಸೇರಿದಂತೆ ಇತರ ಕೈಗಾರಿಕೀರಣಗೊಂಡ ರಾಷ್ಟ್ರಗಳಿಗೆ ಸಾಗಿಸಲಾಗುತ್ತದೆ.

**ಇ. ಆರೋಗ್ಯ ಪರಿಣಾಮಗಳು**

ಅನೈತಿಕ ಸಾಗಾಣಿಕೆಯಲ್ಲಿ ಲೈಂಗಿಕ ಕಳ್ಳಸಾಗಣೆಗೆ ಬಲಿಯಾದವರು ದೈಹಿಕ, ಮಾನಸಿಕ ಮತ್ತು ಭಾವನಾತ್ಮಕ ಆರೋಗ್ಯದ ಮೇಲೆ ಋಣಾತ್ಮಕವಾದ ಪರಿಣಾಮವನ್ನು ಉಂಟು ಮಾಡುವ ಪ್ರತಿಕೂಲ ಪರಿಸ್ಥಿತಿಗಳಿಗೆ ಒಡ್ಡಿಕೊಳ್ಳುತ್ತಾರೆ. ಈ ರೀತಿ ಅನೈತಿಕ ಸಾಗಾಣಿಕೆಗೆ ಒಳಗಾದವರನ್ನು ಗುರುತಿಸಲು ಸಹಾಯ ಮಾಡುವಲ್ಲಿ ವೈದ್ಯರು, ದಾದಿಯರು, ಶುಶ್ರೂಷಕಿಯರು ಮತ್ತು ಇತರ ಆರೋಗ್ಯ ಸೇವೆ ಒದಗಿಸುವವರು ಪ್ರಮುಖ ಪಾತ್ರವಹಿಸಬಹುದು.

**ಈ. ಶಾರೀರಿಕ ಪರಿಣಾಮಗಳು**

ಅನೈತಿಕ ಸಾಗಾಣಿಕೆಗೆ ಬಲಿಯಾದವರು ವಿಶೇಷವಾಗಿ ಗೊನೋರಿಯಾ, ಸಿಫಿರಿಸ್, ಮೂತ್ರದ ಸೋಂಕುಗಳು ಮತ್ತು ಹೆಚ್‌ಐವಿ/ಏಡ್ಸ್ ಸೋಂಕುಗಳಿಗೆ ಗುರಿಯಾಗುತ್ತಾರೆ. ಕಿಬ್ಬೊಟ್ಟೆಯ ನೋವು, ಯೋನಿ/ಗುದ ಹರಿದು ಹೋಗುವುದು, ಮೂತ್ರದ ತೊಂದರೆಗಳನ್ನು ಅನುಭವಿಸುವವರು. ಇಲ್ಲಿ ಬಲಿಯಾಗುವವರನ್ನು ಹೆಚ್ಚಾಗಿ ದೈಹಿಕವಾಗಿ ನಿಂದಿಸಲಾಗುತ್ತದೆ. ಮತ್ತು ಹಿಂಸಿಸಲಾಗುತ್ತದೆ. ಮುರಿದ ಮೂಳೆಗಳು, ಮೂಗೇಟುಗಳು, ಸುಟ್ಟಗಾಯಗಳು, ಚರ್ಮ ಸಮಸ್ಯೆ, ಮುರಿದ ಹಲ್ಲುಗಳು, ಹಲ್ಲಿನ ಸಮಸ್ಯೆಗಳಂತಹ ದೈಹಿಕ ಗಾಯಗಳಿಗೆ ಪೂರೈಕೆದಾರರು ಅವರನ್ನು ಪರೀಕ್ಷಿಸುತ್ತಿರಬೇಕಾಗುತ್ತದೆ.

**ಒ. ಮಾನಸಿಕ ಪರಿಣಾಮಗಳು**

ಅನೈತಿಕ ಸಾಗಾಣಿಕೆಗೆ ಬಲಿಯಾದವರು ದಿನನಿತ್ಯ ಮಾನಸಿಕ, ಭಾವನಾತ್ಮಕ ಕಿರುಕುಳ ಮತ್ತು ಚಿತ್ರಹಿಂಸೆಯಿಂದಾಗಿ ತೀವ್ರವಾದ ಮಾನಸಿಕ ಆಘಾತವನ್ನು ಎದುರಿಸಬೇಕಾಗುತ್ತದೆ. ತೀವ್ರವಾದ ಒತ್ತಡದ ಕಾಯಿಲೆ, ತೀವ್ರ ಆತಂಕ ಮತ್ತು ಖಿನ್ನತೆ ಇವೆಲ್ಲವೂ ಲೈಂಗಿಕ ಉದ್ಯಮದಲ್ಲಿ ಕಾರ್ಯನಿರ್ವಹಿಸುವುದರಲ್ಲಿ ಸಾಮಾನ್ಯ ಮಾನಸಿಕ ಸಮಸ್ಯೆಗಳಾಗಿವೆ. ಹಾಗಾಗಿ ಬಲಿಪಶುಗಳಲ್ಲಿನ ಸಹಾಯಕತೆ, ಅವಮಾನ, ಅಪನಂಬಿಕೆ, ಸ್ವಯಂ ದ್ವೇಷ, ನಿರಾಕರಣೆ, ಆತ್ಮಹತ್ಯಾ ಆಲೋಚನೆಗಳು, ದಿಗ್ಭ್ರಮೆ, ಗೊಂದಲ ಮತ್ತು ಭಯದ ಭಾವಗಳಿಗೆ ಪೂರೈಕೆದಾರರು ತಪಾಸಣೆ ಮಾಡಿಸಿ ಚಿಕಿತ್ಸೆ ಕೊಡಿಸಬೇಕಾಗುತ್ತದೆ. ೩೦ನೇ ವಯಸ್ಸಿನಲ್ಲೇ ಅನೈತಿಕ ಸಾಗಾಣಿಕೆ ಒಳಗಾಗಿ ಸಂತ್ರಸ್ಥರು ವೇಶ್ಯಾವಾಟಿಕೆಯಲ್ಲಿ ದುಡಿಯುವುದರಿಂದ ಮಾನಸಿಕವಾಗಿ ಅಂಗವಿಕಲರಾಗಿರುವರು. ಇದು ಸಾಮಾನ್ಯ ಸಂಗತಿಯಲ್ಲ. ಇದರ ಮೂಲಕ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ಪರಿಣಾಮವನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ.

**ಓ. ಸಾಮಾಜಿಕ ಪರಿಣಾಮಗಳು**

ಅನೈತಿಕ ಸಾಗಾಣಿಕೆಯ ಸಾಮಾಜಿಕ ಪರಿಣಾಮಗಳನ್ನು ವರದಿ ಮಾಡುವ ಸಾಕಷ್ಟು ಮಾಹಿತಿ ಲಭ್ಯವಿಲ್ಲದಿದ್ದರೂ, ಸಂತ್ರಸ್ಥರು ಅನಕ್ಷರತೆ, ಮನೆಯಿಲ್ಲದಿರುವಿಕೆ, ಬಡತನ ಮತ್ತು ಸಾಮಾಜಿಕ ಪ್ರತ್ಯೇಕತೆಯನ್ನು ಅನುಭವಿಸುತ್ತಾರೆ ಎಂದು ಗುರುತಿಸಬಹುದು. ಅನೈತಿಕ ಸಾಗಾಣಿಕೆಗೆ ಒಳಗಾದ ಹೆಣ್ಣುಮಕ್ಕಳು ವೇಶ್ಯಾವಾಟಿಕೆಯಲ್ಲಿ ದುಡಿದರೂ ಸಹ ಸಾಗಾಣಿಕೆಯಾಗದ ಹೆಣ್ಣುಮಕ್ಕಳಿಗಿಂತ ಸಂಪನ್ಮೂಲ, ಸೀಮಿತ ಆಯ್ಕೆಗಳು ಮತ್ತು ನಿಂದನೆಗಳ ಹೆಚ್ಚಿನ ದುರ್ಬಲತೆಯನ್ನು ಹೊಂದಿರುತ್ತಾರೆ.

**ಔ. ಅನೈತಿಕ ಸಾಗಾಣಿಕೆಯಾದವರನ್ನು ಗುರುತಿಸಲು ಪ್ರಶ್ನೆಗಳು**

೨೦೦೪ರಲ್ಲಿ ಯು.ಎಸ್.ಆರೋಗ್ಯ ಮತ್ತು ಮಾನವ ಸೇವೆಗಳ ಇಲಾಖೆಯು ಆರೋಗ್ಯ ಕಾರ್ಯಕರ್ತರಲ್ಲಿ ಮಾನವ ಕಳ್ಳಸಾಗಣೆಯ ಜಾಗೃತಿಯನ್ನು ಹೆಚ್ಚಿಸುವ ಅಭಿಯಾನವನ್ನು ಜಾರಿಗೆ

ತಂದಿತು. ಏಕೆಂದರೆ ದಿನನಿತಕ್ಯದ ಕಾರ್ಯಚಟುವಟಿಕೆ ಮತ್ತು ಸಂವಹನದಲ್ಲಿ ಅವರು ಬಲಿಪಶುಗೊಂದಿಗೆ ಸಂವಹನ ನಡೆಸಬಹುದು. ಈ ಆರೋಗ್ಯ ರಕ್ಷಣೆ ನೀಡುವವರು ಅನ್ಯೆತಿಕ ಕಳ್ಳಸಾಗಣೆ ಬಲಿಯಾದವರೊಂದಿಗೆ ಸಂಪರ್ಕಕ್ಕೆ ಬರಬಹುದಾದ ವೃತ್ತಿಪರರ ಕೆಲವು ಗುಂಪುಗಳಲ್ಲಿ ಒಂದನ್ನು ಪ್ರತಿನಿಧಿಸಬಹುದು. ವಾಸ್ತವವಾಗಿ ಒಂದು ಅಧ್ಯಯನದ ಪ್ರಕಾರ ೨೮% ಸಾಗಾಣಿಕೆಯಾದ ಹೆಣ್ಣುಮಕ್ಕಳು ಸೆರೆಯಲ್ಲಿದ್ದಾಗಲೇ ಅವರನ್ನು ಆರೋಗ್ಯ ವೃತ್ತಿಪರರಿಗೆ ಗುರುತಿಸಲಾಗಿದೆ.

ಹೀಗೆ ಒಟ್ಟಾರೆಯಾಗಿ ಹೆಣ್ಣು ಮಕ್ಕಳ ಅನ್ಯೆತಿಕ ಸಾಗಾಣಿಕೆಯ ಇತಿಹಾಸವನ್ನು ಗಮನಿಸಿದರೆ, ಅನ್ಯೆತಿಕತೆಯ ಹೆಸರಲ್ಲಿ ಬಲಿಯಾದವರು ಮುಗ್ದ ಹೆಣ್ಣುಮಕ್ಕಳು. ಸಣ್ಣ ವಯಸ್ಸಿನಲ್ಲಿ ಮಾರಾಟವಾಗಿ ಶೋಷಣೆಗೆ ಒಳಗಾಗುತ್ತಾರೆ. ಈ ದಂದೆಯಿಂದ ಹೊರ ಬಂದರೂ ಅವರನ್ನು ಕುಟುಂಬ, ಸಮಾಜ ನೋಡುವ ಬಗೆಯು ಏನು ಬಿನ್ನವಾಗಿಲ್ಲ ಅವಳನ್ನು ಕೀಳಾಗಿ ನೋಡಲಾಗುವುದು. ಅವಮಾನ ತಾಳಲಾರದೆ, ದುಡಿಮೆ ಮಾಡಿಕೊಂಡು ಬದುಕನ್ನು ಸಾಗಿಸಲಾಗದೆ, ಪುನಃ ರೆಡ್ ಲೈಟ್ ಏರಿಯದಲ್ಲಿ ಮೈಮಾರಿ ಬದುಕಬೇಕಾದ ಸ್ಥಿತಿಯನ್ನು ಈ ಸಮಾಜವು ನಿರ್ಮಾಣ ಮಾಡಿರುವುದನ್ನು ಇತಿಹಾಸವು ಕಟ್ಟಿಕೊಡುತ್ತದೆ.

**ಕೊನೆ ಟಿಪ್ಪಣಿಗಳು**

1. From Bondage to Freedom : An analysis of International legal regime on human trafficking, Kinnu Gujan: 2006, Pg-9.
2. From Bondage to Freedom : An analysis of International legal regime on human trafficking, Kinnu Gujan:2006, Pg-9.
3. Census of India 2011
4. number of Percentage of Population below poverty line: Reserve Bank of India retrieved 06th June 2016.
5. Dreams and hunger Drive Trafficking in to India, Anindita Darhupta:- Inter press service, 09th December, 2003.
6. Bangladesh National women Lawyers association (BNWLA): A Survey in the area of Child and women Trafficuing Dhake, 1997.
7. Innocent Victims : Trafficking in women and girls across Nepal India Border A Paper for Regional Conference on trafficking in women, Gauri Pradhan, Banglkok, 1998

8. Report of Institute of Social Science, 2003, Pg-76

9. www. unodc.cvgl.. meauarer to Combat human trafficking umapathi

10. www.pvotection project.org

11. http://Faculthy webster, edulwookltlm/Trafficking.Ltml

12. http://www.ncbi.nlm.nihgov/pmclarticler-/pmc 3051545.

ಅಧ್ಯಾಯ : ಐದು

# ಮಾನವ ಕಳ್ಳಸಾಗಾಣಿಕೆ : ರಾಷ್ಟ್ರೀಯ ಕಾನೂನಿನ ಆಯಾಮ

೫.೧ ರಾಷ್ಟ್ರೀಯ ದೃಷ್ಟಿಕೋನ

೫.೨ ಮಾನವ ಕಳ್ಳಸಾಗಣೆಯ ವಿಸ್ತಾರ: ರಾಷ್ಟ್ರೀಯ ಅಂದಾಜು

೫.೩ ಮಾನವ ಕಳ್ಳಸಾಗಣೆಗೆ ಸಂಬಂಧಿಸಿದ ಕಾನೂನು ಚೌಕಟ್ಟು

೫.೪ ಅನೈತಿಕ ಸಾಗಣೆ ಕಾಯ್ದೆ ೧೯೫೬:

೫.೫ ಅನೈತಿಕ ಸಾಗಣೆ (ತಡೆಯುವಿಕೆ) ಕಾಯ್ದೆ ೧೯೫೬ ರ ಸಾಂವಿಧಾನಿಕ ಸಿಂಧುತ್ವ

೫.೬ ಅನೈತಿಕ ಸಾಗಣೆ ಕಾಯ್ದೆ ೧೯೫೬ ರ ವಿಮರ್ಶೆ

೫.೭ ಒಡಂಬಡಿಕೆಗಳು

೫.೮ ಕಾರ್ಯಕ್ರಮಗಳು ಮತ್ತು ಯೋಜನೆಗಳು

೫.೯ ಸುತ್ತೋಲೆಗಳು

೫.೧೦ ಸರ್ಕಾರೇತರ ಸಂಸ್ಥೆಗಳು (ಎನ್.ಜಿ.ಓ.)

ಅಧ್ಯಾಯ : ಐದು

# ಮಾನವ ಕಳ್ಳಸಾಗಾಣಿಕೆ : ರಾಷ್ಟ್ರೀಯ ಕಾನೂನಿನ ಆಯಾಮ

## ಪ್ರಸ್ತಾವನೆ

ಭಾರತದಲ್ಲಿ ಮಾನವ ಕಳ್ಳಸಾಗಣೆ ಪ್ರಕರಣಗಳು ಗಂಭೀರ ಪ್ರಮಾಣದಲ್ಲಿ ಹೆಚ್ಚುತ್ತ ಜ್ವಲಂತ ಸಮಸ್ಯೆಯಾಗಿ ಪರಿಣಮಿಸುತ್ತಿವೆ. ಆಘಾತಕಾರಿ ವಿಚಾರವೆಂದರೆ, ಭಾರತದಲ್ಲಿ ನಡೆಯುತ್ತಿರುವ ಮಾನವ ಕಳ್ಳಸಾಗಣೆಯು ಸುಳ್ಳು ಮದುವೆ, ಬಲವಂತದ ಜೀತ ಮತ್ತು ಮಾರಾಟಗಳ್ಳತನದ ಮೂಲ ನೆಲೆಯಾಗುತ್ತಿದೆ. ಮಾನವನ ಘನತೆ, ಹಕ್ಕುಗಳು, ಇಚ್ಛಾಸಾಮರ್ಥ್ಯ ಮತ್ತು ಸ್ವಾತಂತ್ರ್ಯವನ್ನು ಉಲ್ಲಂಘಿಸುವುದರಿಂದ ಇದು ಮಾನವೀಯತೆಗೆ ವಿರುದ್ಧವಾಗಿರುವ ಅಪರಾಧವಾಗಿದೆ. ಇದು ವ್ಯವಸ್ಥಿತ ಅಪರಾಧದ ಭಾಗವಾಗಿದ್ದು, ಮಾನವ ಸಂಸ್ಕೃತಿ ಮತ್ತು ಭೌಗೋಳಿಕತೆಯನ್ನು ಮೀರುತ್ತ ಬೆಳೆಯುತ್ತಿದೆ. ಈ ಅಧ್ಯಾಯದಲ್ಲಿ ಮಾನವ ಕಳ್ಳಸಾಗಣೆಗೆ ತುತ್ತಾಗುವವರ ತೊಂದರೆಗಳನ್ನು ಸಮಗ್ರವಾಗಿ ವಿಶ್ಲೇಷಿಸಲಾಗಿದೆ. ಇದರ ಜೊತೆಗೆ, ಈ ಅಧ್ಯಾಯವು ಮಾನವ ಕಳ್ಳಸಾಗಣೆಯನ್ನು ತಡೆಗಟ್ಟಲು ರೂಪಿಸಲಾಗಿರುವ ಕಾನೂನುಗಳನ್ನು ಸಹ ವಿಮರ್ಶಿಸಲಾಗುವುದು. ಪ್ರಮುಖವಾಗಿ, ಮಾನವ ಕಳ್ಳಸಾಗಣೆ ತಡೆಗಟ್ಟಲು ಜಾರಿಯಲ್ಲಿರುವ ಸಾಂವಿಧಾನಿಕ ಕ್ರಮಗಳು, ನ್ಯಾಯಮೂರ್ತಿ ವರ್ಮ ಸಮಿತಿಯ ವರದಿ ೨೦೧೩, ಮತ್ತು ಮಾನವ ಅನೈತಿಕ ಸಾಗಣೆ (ತಡೆಗಟ್ಟುವಿಕೆ) ಕಾಯ್ದೆ ೧೯೫೬ ಮತ್ತು ಅಪರಾಧ ಕಾಯ್ದೆ (ತಿದ್ದುಪಡಿ) ೨೦೧೩ ಇವುಗಳನ್ನು ಕೂಲಂಕುಶವಾಗಿ ಅಭ್ಯಸಿಸಲಾಗುವುದು.

## ೫.೧ ರಾಷ್ಟ್ರೀಯ ದೃಷ್ಟಿಕೋನ

ಭಾರತ ದೇಶವು ದೇಹ ಮಾರಾಟ, ಲೈಂಗಿಕ ಶೋಷಣೆ, ಬಲವಂತದ ಜೀತ, ಮಹಿಳೆಯರ ಮತ್ತು ಮಕ್ಕಳ ಕಳ್ಳಸಾಗಣೆಯ ತಾಣವಾಗಿ ಖ್ಯಾತಿ ಪಡೆಯುತ್ತಿದೆ. ಭಾರತದಲ್ಲಿ ಮಾನವ ಸಾಗಣೆಯ ದೊಡ್ಡ ಜಾಲಕ್ಕೆ ಸಿಲುಕಿರುವವರಲ್ಲಿ ಬಲವಂತದ ಜೀತದಾಳುಗಳ ಪ್ರಮಾಣ ಅತಿ ಹೆಚ್ಚಿನ ಮಟ್ಟದಲ್ಲಿದೆ. ದಾಖಲೆಗಳ ಪ್ರಕಾರ ಶೇಕಡ ೯೦ ರಷ್ಟು ಬಲವಂತದ ಜೀತದಾಳುಗಳು ಸಮಾಜದ ಅಂಚಿನ ಸಮುದಾಯಕ್ಕೆ ಒಳಪಟ್ಟವರಾಗಿದ್ದಾರೆ. ಇವರಲ್ಲಿ ಆದಿವಾಸಿಗಳು ಮತ್ತು ಕೆಳಜಾತಿಯವರೂ ಸೇರಿರುವುದು ಕಂಡುಬಂದಿದೆ. ಭಾರತದಲ್ಲಿ ನಡೆಯುತ್ತಿರುವ ಮಾನವ ಕಳ್ಳಸಾಗಣೆಯ ಪ್ರಮುಖ ಲಕ್ಷಣವೆಂದರೆ

ಸಾಲದ ಜೀತ. ಈ ಸಾಲದ ಜೀತದಲ್ಲಿ ಕೇವಲ ಪುರುಷರು ಮಾತ್ರವಲ್ಲ, ಮಹಿಳೆಯರು ಮತ್ತು ಮಕ್ಕಳು ತಾವು ಮಾಡಿದ ಸಾಲವನ್ನು ತಿರಿಸಲು ಸಾಧ್ಯವಾಗದೆ, ಅದರ ಬದಲಾಗಿ ಇಟ್ಟಿಗೆ ಗೂಡುಗಳಲ್ಲಿ, ಕಾರ್ಖಾನೆಗಳಲ್ಲಿ, ಮಿಲ್ಲುಗಳಲ್ಲಿ ಜೀತದಾಳುಗಳಾಗಿ ದುಡಿಯುತ್ತಿದ್ದಾರೆ[೧]. ಇಂತಹ ಸಾಲದ ಜೀತದಾಳುಗಳು ಲೈಂಗಿಕ ಮತ್ತು ದೈಹಿಕ ದೌರ್ಜನ್ಯಕ್ಕೆ ತುಂಬ ಸುಲಭವಾಗಿ ತುತ್ತಾಗುತ್ತಾರೆ. ಸಮೀಕ್ಷೆಗಳ ಪ್ರಕಾರ, ಭಾರತದಲ್ಲಿ ೨೦-೬೫ ಮಿಲಿಯನ್ ಬಲವಂತದ ಜೀತದಾಳುಗಳು ಮಾನವ ಕಳ್ಳಸಾಗಣೆಗೆ ಬಲಿಯಾಗಿದ್ದಾರೆಂದು ಹೇಳಲಾಗಿದೆ. ಮಹಿಳೆಯರು ಮಾಂಸ ದಂಧೆಗಾಗಿ ಮತ್ತು ಸುಳ್ಳು ಮದುವೆಗಾಗಿ ಸಾಗಣೆಯಾಗಲ್ಪಟ್ಟಿದ್ದರೆ, ಮಕ್ಕಳು ಜೀತಕ್ಕಾಗಿ, ಮನೆಗೆಲಸಕ್ಕಾಗಿ, ಭಿಕ್ಷಾಟನೆಗಾಗಿ ಮತ್ತು ಸಮಾಜ ಘಾತುಕ ಸಂಘಗಳ ಗುಪ್ತ ಸಹಾಯಕರಾಗಿ ಕೆಲಸ ಮಾಡಲು ಸಾಗಣೆಯಾಗಲ್ಪಟ್ಟಿದ್ದಾರೆ. ಇದಲ್ಲದೆ, ಬಾಂಗ್ಲಾದೇಶ ಮತ್ತು ನೇಪಾಳದಿಂದ ಅಕ್ರಮವಾಗಿ ನುಸುಳಿ ಬರುವ ಅನೇಕರಿಗೆ ಭಾರತ ಸುರಕ್ಷಿತ ತಾಣವಾಗಿದೆ. ಈ ಎರಡು ನೆರೆ ದೇಶಗಳಿಂದ ಅಕ್ರಮವಾಗಿ ವಲಸೆ ಬರುವ ಮಹಿಳೆಯರನ್ನು ವೇಶ್ಯಾವೃತ್ತಿಗಾಗಿ ಮತ್ತು ಜೀತಕ್ಕಾಗಿ ಮತ್ತು ಬಲವಂತದ ಮದುವೆಗಾಗಿ ಬಳಸಿಕೊಳ್ಳಲಾಗುತ್ತಿದೆ.

ಜಾಗತಿಕ ಜೀತದಾಳುಗಳಿಗೆ ಮತ್ತು ಒತ್ತೆಯಾಳುಗಳಿಗೆ ಭಾರತವು ಉತ್ತಮ ತಾಣವೆಂದು ವಿಶ್ವ ಸಂಸ್ಥೆಯು ತನ್ನ ಅಧಿಕೃತ ಪಟ್ಟಿಯಲ್ಲಿ ನಮೂದಿಸಿದೆ. ಒತ್ತೆಯಾಳುಗಳಿಗೆ ಸುರಕ್ಷಿತವೆನಿಸಿರುವ ವಿಶ್ವ ಸಂಸ್ಥೆಯ ಜಾಗತಿಕ ಪಟ್ಟಿಯಲ್ಲಿ ಭಾರತಕ್ಕೆ ೨೩ನೇ ಸ್ಥಾನ ಲಭಿಸಿದೆ. ಇದಲ್ಲದೆ, ಮಾನವ ಕಳ್ಳಸಾಗಣೆಗೆ ನಿರಪಾಯಕಾರಿ ತಾಣವೆಂದು ಸಹ ವಿಶ್ವಸಂಸ್ಥೆಯ ವರದಿಗಳು ಹೇಳುತ್ತವೆ. 'ವಿಶ್ವಸಂಸ್ಥೆಯು ಮಾನವ ಕಳ್ಳಸಾಗಣೆಯ ಪ್ರಕರಣೆಗಳನ್ನು ಗಣನೆಗೆ ತೆಗೆದುಕೊಂಡು ಅವುಗಳಿಗೆ ಶ್ರೇಣಿ ನೀಡಿದರೆ. ಅಮೇರಿಕವು ಜಾಗತಿಕವಾಗಿ ಮಾನವ ಕಳ್ಳಸಾಗಣೆಯನ್ನು ತಡೆಯಲು ತೆಗೆದುಕೊಂಡ ಕ್ರಮಗಳನ್ನು ಆಧರಿಸಿ ವಿವಿಧ ದೇಶಗಳಿಗೆ ಶ್ರೇಣಿ ನೀಡುತ್ತದೆ. ಈ ನಿಟ್ಟಿನಲ್ಲಿ ಅಮೇರಿಕ ದೇಶವು ಭಾರತವನ್ನು ಟೈಯರ್-೨ ದೇಶವೆಂದು ಪಟ್ಟಿ ಮಾಡಿದೆ. ಟೈಯರ್-೨ ದೇಶವೆಂದರೆ ಮಾನವ ಕಳ್ಳಸಾಗಣೆಯನ್ನು ಸಂಪೂರ್ಣವಾಗಿ ತಡೆಗಟ್ಟಲು ಭಾರತ ದೇಶವು ಸಾಮಾನ್ಯ ದರ್ಜೆಯ ಕ್ರಮಗಳನ್ನು ಸಹ ಹೊಂದಿಲ್ಲ ಎಂದು ಅರ್ಥ. ಆದರೆ ಮಾನವ ಕಳ್ಳಸಾಗಣೆಯನ್ನು ತಡೆಗಟ್ಟಲು ವ್ಯವಸ್ಥಿತ ಪ್ರಯತ್ನ ಮಾಡಲಾಗುತ್ತಿದೆ ಎಂದೂ ಸಹ ಹೇಳಲಾಗಿದೆ. ಇದಕ್ಕು ಮುನ್ನ, ಭಾರತವನ್ನು ಟೈಯರ್-೨ ಕಾವಲು ಪಟಿಯ್ಯಲ್ಲಿ ಸೇರ್ಪಡೆಗೊಳಿಸಲಾಗಿತ್ತು, ಅಂದರೆ ಈ ಶ್ರೇಣಿಯು ಪ್ರಸ್ತುತ ಟೈಯರ್-೨ ಶ್ರೇಣಿಗಿಂತಲು ಕೆಳಮಟ್ಟದ ಶ್ರೇಣಿಯಲ್ಲಿದ್ದ ಭಾರತವು ೨೦೧೩ ರಲ್ಲಿ ಟೈಯರ್-೨ ಶ್ರೇಣಿಯಲ್ಲಿ ಸ್ಥಾನ ಪಡೆದಿದೆ'[೨] ಎನ್ನುವುದನ್ನು ಸಮೀಕ್ಷೆಗಳು ಹೇಳುತ್ತವೆ.

### ೫.೨ ಮಾನವ ಕಳ್ಳಸಾಗಣೆಯ ವಿಸ್ತಾರ: ರಾಷ್ಟ್ರೀಯ ಅಂದಾಜು

ಮಾನವ ಕಳ್ಳಸಾಗಣೆ ದಂಧೆಯು ಗುಟ್ಟಿನ ದಂಧೆಯಾಗಿರುವುದರಿಂದ ಇದರ ಆಳ ಮತ್ತು ವಿಸ್ತಾರತೆಯನ್ನು ಕರಾರುವಕ್ಕಾಗಿ ಅಂದಾಜಿಸುವುದು ಸುಲಭವಲ್ಲ. ಈ ಕುರಿತಂತೆ ಅನೇಕ ಅಧ್ಯಯನಗಳು

ನಡೆದಿದ್ದರೂ ಸಹ ಈ ದಂಧೆಯಿಂದ ಸೃಷ್ಟಿಯಾಗಿರುವ ತೊಂದರೆಗಳು ಮತ್ತು ಸಮಸ್ಯೆಗಳನ್ನು ಅರಿಯಲು ನಿಖರ ಅಂದಾಜು ಲಭ್ಯವಿಲ್ಲ. "ಒಂದು ಅಂದಾಜಿನ ಪ್ರಕಾರ, ಭಾರತದಲ್ಲಿ ೨.೩ ಮಿಲಿಯನ್ ಮಹಿಳೆಯರು ಮತ್ತು ಹೆಣ್ಣು ಮಕ್ಕಳು ವೇಶ್ಯಾವೃತ್ತಿಯಲ್ಲಿ ತೊಡಗಿದ್ದಾರೆ. ಇವರಲ್ಲಿ ಕಾಲು ಭಾಗದಷ್ಟು ಅರೆವಯಸ್ಕ ಹೆಣ್ಣು ಮಕ್ಕಳು ಭಾರತದ ತುಂಬೆಲ್ಲ ಹರಡಿರುವ ೧೨೦೦ ಸೂಳೆಗೇರಿಗಳಲ್ಲಿ ಬದುಕುತ್ತಿದ್ದಾರೆ. ಹಾಗೆಯೇ, ಭಾರತಕ್ಕೆ ೫೦,೦೦೦ ಮಹಿಳೆಯರು ಮತ್ತು ಮಕ್ಕಳನ್ನು ಮಾನವಸಾಗಣೆ ಮಾಡಲಾಗಿದ್ದು, ಪ್ರತಿ ವರ್ಷ ನೇಪಾಳದಿಂದ ಭಾರತಕ್ಕೆ ೫೦೦೦ ದಿಂದ ೧೧,೦೦೦ ಮಹಿಳೆಯರು ಮತ್ತು ಮಕ್ಕಳು ಅಕ್ರಮವಾಗಿ ಸಾಗಣೆಯಾಗಲ್ಪಡುತ್ತಾರೆ. ಕಳೆದ ಹತ್ತು ವರ್ಷಗಳಲ್ಲಿ ಬಾಂಗ್ಲಾದೇಶದಿಂದ ೩೦,೦೦೦ ಮಹಿಳೆಯರು ಮತ್ತು ಮಕ್ಕಳು ಭಾರತಕ್ಕೆ ಅಕ್ರಮವಾಗಿ ಸಾಗಣೆಯಾಗಿದ್ದಾರೆ. ಭಾರತದಲ್ಲಿ ಮಾನವಸಾಗಣೆಗೆ ತುತ್ತಾಗುವವರು ಆಂದ್ರಪ್ರದೇಶ, ಕರ್ನಾಟಕ, ಒರಿಸ್ಸ, ಗುಜರಾತ್ ಮತ್ತು ರಾಜಾಸ್ಥಾನಕ್ಕೆ ಸೇರಿದವರಾಗಿದ್ದಾರೆ. ಇವರಲ್ಲಿ ಶೇಕಡ ೬೦ ರಿಂದ ೮೦ ರಷ್ಟು ಪೀಡಿತರು ಹೆಚ್.ಐ.ವಿ ಮತ್ತು ಅನೇಕ ಲೈಂಗಿಕ ಮತ್ತು ಮಾರಣಾಂತಿಕ ಕಾಯಿಲೆಗಳಿಗೆ ಸಿಲುಕಿದ್ದಾರೆ"[೩].

ರಾಷ್ಟ್ರೀಯ ಅಪರಾಧ ದಾಖಲೆಗಳ ಕೇಂದ್ರವು (NCRB) ಮತ್ತು ಗೃಹ ಸಚಿವಾಲಯವು ೨೦೧೩ರಲ್ಲಿ ಭಾರತದಲ್ಲಿ ನೆಡೆದ ಅಪರಾಧಗಳ ಅಂಕಿ ಅಂಶಗಳನ್ನು ೨೦೧೪ನೇ ಜೂನ್ ೩೦ ರಂದು ಬಿಡುಗಡೆಮಾಡಿದೆ. ಆದರೆ ಈ ಅಂಕಿಅಂಶಗಳಲ್ಲಿ ಮಾನವ ಕಳ್ಳಸಾಗಣೆಗೆ ಸಂಬಂಧಿಸಿದಂತೆ ಅನೈತಿಕ ಅಪರಾಧ ತಡೆ ಕಾಯ್ದೆ ೧೯೫೬ ರ ಅಡಿಯಲ್ಲಿ ದಾಖಲಿಸಲಾದ ಅಪರಾಧಗಳನ್ನು ಸೇರ್ಪಡೆ ಮಾಡಿಲ್ಲ. ಇದರ ಬದಲಾಗಿ, "ರಾಷ್ಟ್ರೀಯ ಅಪರಾಧ ದಾಖಲೆಗಳ ಕೇಂದ್ರವು ೨೦೧೨ ರಲ್ಲಿ ಇತ್ಯರ್ಥವಾಗದೇ ಇದ್ದ ಕೆಲವು ಪ್ರಕರಣಗಳನ್ನು ಸೇರಿಸಿ, ೨೦೧೩ರ ಪಟ್ಟಿ ಬಿಡುಗಡೆ ಮಾಡಿದೆ"[೪]. ಇಂತಹ ಅಪೂರ್ಣ ವರದಿಗಳು ಮಾನವ ಕಳ್ಳಸಾಗಣೆಯ ಗಂಭೀರ ಸ್ವರೂಪವನ್ನು ಅರಿಯಲು ಸಹಕಾರಿಯಾಗುವುದಿಲ್ಲ ಇವುಗಳು ಮತ್ತಷ್ಟು ಸಮಸ್ಯೆಗಳನ್ನು ಸೃಷ್ಟಿಸುವುದು ಹೆಚ್ಚು.

### ೫.೩ ಮಾನವ ಕಳ್ಳಸಾಗಣೆಗೆ ಸಂಬಂಧಿಸಿದ ಕಾನೂನು ಚೌಕಟ್ಟು

ನಮ್ಮ ದೇಶದ ಪರಮೋಚ್ಛ ಅಂಗವಾದ ಭಾರತ ಸಂವಿಧಾನವು ಸ್ವತಂತ್ರದ ಹಕ್ಕನ್ನು ಪ್ರತಿಪಾದಿಸುತ್ತ ತನ್ನ ೨೩ನೇ ಪರಿಚ್ಛೇದದಲ್ಲಿ ಎಲ್ಲರಿಗೂ ಸ್ವಾತಂತ್ರ್ಯದ ಹಕ್ಕನ್ನು ದಯಪಾಲಿಸಿದೆ. ಈ ಪರಿಚ್ಛೇದದ ಪ್ರಕಾರ 'ಮಾನವ ಕಳ್ಳ ಸಾಗಣೆ ಅಥವ ಬಲವಂತದ ಜೀತವು ಸಂವಿಧಾನಾತ್ಮಕವಾಗಿ ನಿಷಿದ್ಧವಾಗಿದ್ದು, ಯಾವುದೇ ವ್ಯಕ್ತಿಯ ಸ್ವಾತಂತ್ರ ಹರಣವಾದಲ್ಲಿ ಅಂತಹ ಪ್ರಕರಣವು ಕಾನೂನಿನ ದೃಷ್ಟಿಯಲ್ಲಿ ಶಿಕ್ಷಾರ್ಹ ಅಪರಾಧವಾಗುತ್ತದೆ'. ಇದರ ಜೊತೆಗೆ, ಮಾನವ ಕಳ್ಳಸಾಗಣೆಗೆ ಸಂಬಂಧಿಸಿದಂತೆ, ಇನ್ನು ಕೆಲವು ಸಂವಿಧಾನಿಕ ಕಲಂಗಳಿದ್ದು ಅವುಗಳನ್ನು ಈ ಕೆಳಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ:

* ಸಂವಿಧಾನದ ಕಲಂ ೧೪ ಸಮಾನತೆಯನ್ನು ಒದಗಿಸುತ್ತದೆ.

* ಸಂವಿಧಾನದ ೧೫(೧) ನೇ ಕಲಂ ಧರ್ಮ, ಜಾತಿ, ವರ್ಣ, ಲಿಂಗ, ಅಥವಾ ಜನ್ಮ ಸ್ಥಳ ಮತ್ತಿತರೆ ವಿಚಾರಗಳಿಗೆ ಸಂಬಂಧಿಸಿದಂತೆ ತಾರತಮ್ಯ ಮಾಡತಕ್ಕದ್ದಲ್ಲವೆಂದು ಹೇಳುತ್ತದೆ.

* ಕಲಂ ೧೫(೩)ರ ಪ್ರಕಾರ ಮಹಿಳೆ ಮತ್ತು ಮಕ್ಕಳಿಗೆ ವಿಶೇಷ ರಕ್ಷಣೆಯನ್ನು ಒದಗಿಸುತ್ತದೆ. ಇದರ ಪ್ರಕಾರ ಮಹಿಳೆಯರು ಮತ್ತು ಮಕ್ಕಳ ಸಲುವಾಗಿ ಸರ್ಕಾರವು ವಿಶೇಷ ಸೌಲಭ್ಯಗಳನ್ನು ಕಲ್ಪಿಸಲು ಅಧಿಕಾರ ನೀಡುತ್ತದೆ.

* ಕಲಂ ೧೬(೧): ಸಾರ್ವಜನಿಕ ಉದ್ಯೋಗದ ವಿಷಯದಲ್ಲಿ ಸಮಾನ ಅವಕಾಶವನ್ನು ಒದಗಿಸುತ್ತದೆ.

* ಕಲಂ ೨೧: ಜೀವ ಸಂರಕ್ಷಣೆ ಮತ್ತು ವ್ಯಕ್ತಿ ಸ್ವಾತಂತ್ರ್ಯದ ಸಂರಕ್ಷಣೆಯ ಕುರಿತು ಹೇಳುತ್ತದೆ. ಅಂದರೆ ಕಾನೂನಿನ ಮೂಲಕ ಸ್ಥಾಪಿತವಾಗಿರುವ ಪ್ರಕ್ರಿಯೆಗೆ ಅನುಸಾರವಾಗಿ ಹೊರತು, ಯಾವುದೇ ವ್ಯಕ್ತಿಯ ಜೀವವನ್ನು ಅಥವಾ ವ್ಯಕ್ತಿಯ ಸ್ವಾತಂತ್ರ್ಯವನ್ನು ಹರಣ ಮಾಡತಕ್ಕದ್ದಲ್ಲ ಎಂದು ಹೇಳುತ್ತದೆ.

* ಕಲಂ ೨೪ ಅಪಾಯಕಾರಿ ಉದ್ಯೋಗಗಳಲ್ಲಿ ಮಕ್ಕಳ ನೇಮಕವನ್ನು ನಿಷೇಧಿಸುತ್ತದೆ. ಹೀಗೆ ಭಾರತದ ಸಂವಿಧಾನವು ಹೆಳವರ ಹಕ್ಕುಗಳನ್ನು ಸಮಸ್ತ ಮಾನವರಿಗೆ ಒದಗಿಸಿಕೊಟ್ಟಿದೆ.

* ಕಲಂ ೩೮(೧) ಸಾಮಾಜಿಕ–ಆರ್ಥಿಕ– ರಾಜಕೀಯ ನ್ಯಾಯ ಒದಗಿಸುವ ವ್ಯವಸ್ಥೆಯನ್ನು ರೂಪಿಸುವುದರ ಜೊತೆಗೆ ಅದರ ರಕ್ಷಣೆಗೆ ಆದ್ಯತೆ ನೀಡುವುದು.

* ಕಲಂ ೩೯ ಪುರುಷರು ಮತ್ತು ಮಹಿಳೆಯರಿಗೆ ಸಮಾನವಾದ ಆರ್ಥಿಕ ಸಂಪನ್ಮೂಲಗಳನ್ನು ಒದಗಿಸುವ ಮತ್ತು ಎಲ್ಲರಿಗೂ ಸಮಾನ ವೇತನ ನೀಡುವ ಕುರಿತು ವಿವರಿಸುತ್ತದೆ.

* ಕಲಂ ೩೯(ಎಫ್) ಮಕ್ಕಳು ಆರೋಗ್ಯಕರ ಪರಿಸರದಲ್ಲಿ ಬೆಳೆಯುವ ಮತ್ತು ಘನತೆ ಮತ್ತು ಸ್ವಾತಂತ್ರದಿಂದ ಬದುಕುವು ಹಕ್ಕನ್ನು ನೀಡುತ್ತದೆ.

* ಕಲಂ ೪೨ ಪ್ರತಿಯೊಬ್ಬ ಪ್ರಜೆಯನ್ನು ಅಮಾನವೀಯ ಕೆಲಸ ಅಥವಾ ವೃತ್ತಿಗಳಲ್ಲಿ ತೊಡಗಿಸುವುದನ್ನು ನಿಷೇಧಿಸಿದೆ.

* ಕಲಂ ೪೫ರ ಪ್ರಕಾರ ಎಲ್ಲ ಮಕ್ಕಳಿಗು ಶಿಕ್ಷಣ ಉಚಿತ ಮತ್ತು ಕಡ್ಡಾಯವಾಗಿದ್ದು, ಶಿಕ್ಷಣ ಪ್ರತಿಯೊಬ್ಬ ಭಾರತೀಯನ ಮೂಲಭೂತ ಹಕ್ಕಾಗಿದೆ.

* ಕಲಂ ೪೬ ರ ಪ್ರಕಾರ ಸರಕಾರವು ಹಿಂದುಳಿದ ಮತ್ತು ಅಲಕ್ಷಿತ ಸಮುದಾಯಗಳ ಮಹಿಳೆಯರು ಮತ್ತು ಮಕ್ಕಳಿಗೆ ಸಾಮಾಜಿಕ ಅನ್ಯಾಯ ಮತ್ತು ಎಲ್ಲ ರಿತಿಯ ಶೋಷಣೆಗಳಿಂದ ರಕ್ಷಿಸಲು ಅವಕಾಶ ಕಲ್ಪಿಸಲಾಗಿದೆ.

ಹೀಗೆ ಭಾರತದ ಸಂವಿಧಾನವು ವ್ಯಕ್ತಿ ಗೌರವ ಮತ್ತು ಘನತೆಯ ಬದುಕನ್ನು ಎತ್ತಿ ಹಿಡಿಯುವುದರ ಜೊತೆಗೆ ಕಳ್ಳ ಸಾಗಾಣಿಕೆಯನ್ನು ಅಪರಾದವೆಂದು ಘೋಷಿಸಿದೆ. ಇಂತಹ ಕಾನೂನು ವಿರೋಧಿ ಚಟುವಟಿಕೆ ಮಾಡುವವರಿಗೆ ಶಿಕ್ಷೆಯನ್ನು ನೀಡಿದೆ. ಆದರೂ ಸಹ ಕಳ್ಳ ಮಾರ್ಗದಲ್ಲಿ ಕಾನೂನು ಕಣ್ಣಿಗೆ ಮಣ್ಣೆರಚಿ ಈ ಜಾಲಕ್ಕೆ ಹೆಣ್ಣು ಮಕ್ಕಳನ್ನು ದೂಡಲಾಗುತ್ತಿದೆ.

ಭಾರತದಲ್ಲಿ ಮಾನವ ಕಳ್ಳಸಾಗಣೆಯು ೨೦ನೇ ಶತಮಾನದ ಆದಿಯಿಂದಲೂ ಕಳವಳಕಾರಿ ವಿಚಾರವಾಗಿದೆ. ಆದರೆ, ದೆಹಲಿ (ನಿರ್ಭಯ ಅತ್ಯಾಚಾರ) ಗ್ಯಾಂಗ್ ರೇಪ್ ಪ್ರಕರಣದ ನಂತರ ಲಿಂಗ ಸಂಬಂಧಿ ವಿಚಾರಗಳು ಮುನ್ನಲೆಗೆ ಬಂದಿದ್ದು, ನ್ಯಾಯಮೂರ್ತಿ ವರ್ಮ ಸಮಿತಿಯನ್ನು ಇದೇ ಉದ್ದೇಶಕ್ಕಾಗಿ ರಚಿಸಲಾಯಿತು. ಈ ಸಮಿತಿಯು ಕೇವಲ ಒಂದು ತಿಂಗಳಿನಲ್ಲಿ ತನ್ನ ವರದಿಯನ್ನು ಸರಕಾರಕ್ಕೆ ಸಲ್ಲಿಸಿದ ನಂತರ, ಸಮಿತಿಯ ಶಿಫಾರಸ್ಸುಗಳನ್ನು ಸರಕಾರವು ಮಸೂದೆ ಜಾರಿಗೆ ತರುವ ಮೂಲಕ ರಾಷ್ಟ್ರಪತಿಗಳ ಅಂಕಿತ ಪಡೆದು ಅದನ್ನು ಕಾಯ್ದೆಯನ್ನಾಗಿ ಜಾರಿಗೊಳಿಸಿದೆ. ಈ ಕಾಯ್ದೆಯನ್ನು ಅಪರಾಧ ಕಾಯ್ದೆ (ತಿದ್ದುಪಡಿ) ೨೦೧೩ ಎಂದು ಕರೆಯಲಾಯಿತು[೫]. ಈ ತಿದ್ದುಪಡಿಯ ಮೂಲಕ ಭಾರತೀಯ ದಂಡ ಸಂಹಿತೆಯ ಸೆಕ್ಷನ್ ೩೭೦ ನ್ನು ಬದಲಾಯಿಸಿ ೩೭೦(ಎ) ಎಂದು ಜಾರಿಗೆ ತರಲಾಯಿತು. ಈ ಸೆಕ್ಷನ್‌ನ ತಿದ್ದುಪಡಿಗಳು ಏನೆಂದರೆ:

**೩೭೦:**(೧) ಶೋಷಣೆ ಮಾಡುವ ಉದ್ದೇಶದಿಂದ ಯಾವುದಾದರೂ ವ್ಯಕ್ತಿಯು ಯಾರನ್ನಾದರು ೧) ನೇಮಕ ಮಾಡಿಕೊಂಡಲ್ಲಿ, ೨) ಸಾಗಿಸಿದಲ್ಲಿ ೩) ಸ್ವೀಕರಿಸಿದಲ್ಲಿ ೪) ಗೌಪ್ಯವಾಗಿ ರಕ್ಷಣೆ ನೀಡಿದ್ದಲ್ಲಿ

ಮೊದಲಿಗೆ– ಬೆದರಿಸಿದರೆ, ಎರಡನೆಯದಾಗಿ–ಬಲವಂತವಾಗಿ ಅಥವಾ ಪೀಡಿಸಿದಲ್ಲಿ, ಮೂರನೆಯದಾಗಿ– ಅಪಹರಿಸಿದಲ್ಲಿ, ನಾಲ್ಕನೆಯದಾಗಿ– ಮೋಸ, ಕಪಟತನದಿಂದ, ಐದನೆಯದಾಗಿ– ಅಧಿಕಾರದ ದುರುಪಯೋಗ ಮಾಡಿದಲ್ಲಿ, ಆರನೆಯದಾಗಿ– ಮನವೊಲಿಸಿದಲ್ಲಿ ಹಾಗೆಯೇ ಇದಕ್ಕಾಗಿಯೇ ಹಣವನ್ನು ಅಥವಾ ಸೌಲಭ್ಯಗಳನ್ನು ಸ್ವೀಕರಿಸಿದಲ್ಲಿ ಅಂತಹ ವ್ಯಕ್ತಿಯು ಮಾನವ ಕಳ್ಳಸಾಗಣೆಯ ಅಪರಾಧವೆಸಗಿದ್ದಾನೆಂದು ನಿರ್ಧರಿಸುವುದು[೬].

ಸ್ಪಷ್ಟೀಕರಣ ೧– ಶೋಷಣೆ ಎಂಬ ಪದ ದೈಹಿಕ ಮತ್ತು ಮಾನಸಿಕ ಹಿಂಸೆ ಮತ್ತು ಶೋಷಣೆಗಳನ್ನು ಅರ್ಥೈಸುವ ಪದವಾಗಿದ್ದು ಇದರ ಅಡಿಯಲ್ಲಿ ಬಲವಂತದಿಂದ, ಗುಲಾಮಗಿರಿಯಿಂದ ಅಥವಾ ಈ ತರಹದ ಯಾವುದೇ ಅಮಾನವೀಯ ರೂಢಿಯನ್ನು ಬಳಸಿ ಮಾನವನ ಅಂಗಾಂಗಗಳನ್ನು ದೇಹದಿಂದ ಬೇರ್ಪಡಿಸಿದರೆ.

ಸ್ಪಷ್ಟೀಕರಣ ೨_ ಮಾನವ ಕಳ್ಳಸಾಗಣೆ ಅಪರಾಧವನ್ನು ನಿರ್ಧರಿಸುವದರಲ್ಲಿ ಪೀಡಿತನ ಒಪ್ಪಿಗೆ ಕಡ್ಡಾಯವಲ್ಲ.

೨. ಮಾನವ ಕಳ್ಳ ಸಾಗಣೆ ಅಪರಾಧವನ್ನು ಎಸಗಿದ ಯಾವುದೇ ವ್ಯಕ್ತಿಗೆ ಕನಿಷ್ಟ ಏಳು ವರ್ಷಗಳಿಂದ ಹತ್ತು ವರ್ಷಗಳ ತನಕ  ಕಠಿಣ ಶಿಕ್ಷೆ ಮತ್ತು ದಂಡ ವಿಧಿಸಲಾಗುವುದು[೭].

೩. ಒಬ್ಬರಿಗಿಂತ ಹೆಚ್ಚು ವ್ಯಕ್ತಿಗಳನ್ನು ಅಕ್ರಮವಾಗಿ ಸಾಗಣೆ ಮಾಡಿದಲ್ಲಿ ದಂಡ ಸಹಿತ ಹತ್ತು ವರ್ಷಗಳ ಕಠಿಣ ಶಿಕ್ಷೆ ಅಥವಾ ಜೀವಾವಧಿ ಶಿಕ್ಷೆ.[೮]

೪. ಅಕ್ರಮವಾಗಿ ಸಾಗಿಸಲ್ಪಟ್ಟ ವ್ಯಕ್ತಿಯು ಅಪ್ರಾಪ್ತನಾದಲ್ಲಿ ಅಂತಹ ಅಪರಾಧ ಎಸಗಿದ ತಪ್ಪಿತಸ್ಥನಿಗೆ ದಂಡ ಸಹಿತ ಹತ್ತು ವರ್ಷ ಅಥವಾ ಜೀವಾವಧಿ ಶಿಕ್ಷೆ ವಿಧಿಸಲಾಗುವುದು.[೯]

೫. ಅಕ್ರಮವಾಗಿ ಸಾಗಿಸಲ್ಪಟ್ಟ ಅಪ್ರಾಪ್ತರು ಒಂದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿದ್ದರೆ ಅಂತಹ ಕೃತ್ಯ ಎಸಗಿದ ತಪ್ಪಿತಸ್ಥನಿಗೆ ದಂಡ ಸಹಿತ ಹತ್ತು ವರ್ಷ ಅಥವಾ ಜೀವಾವಧಿ ಶಿಕ್ಷೆ ವಿಧಿಸಲಾಗುವುದು[೧೦].

೬. ಒಂದಕ್ಕಿಂತ ಹೆಚ್ಚು ಬಾರಿ ಅಪ್ರಾಪ್ತ ವಯಸ್ಕರನ್ನು ಅಕ್ರಮವಾಗಿ ಸಾಗಣೆ ಮಾಡಿದ ತಪ್ಪಿತಸ್ಥನಿಗೆ ಜೀವಾವಧಿ ಶಿಕ್ಷೆ ಮತ್ತು ದಂಡ ಸಮೇತ ಕಠಿಣ ಶಿಕ್ಷೆ ನೀಡಲಾಗುವುದು.[೧೧]

೭. ಮಾನವ ಕಳ್ಳಸಾಗಣೆಯಲ್ಲಿ ಸರಕಾರಿ ನೌಕರ ಅಥವಾ ಅಧಿಕಾರಿ ಶಾಮೀಲಾದ ಪ್ರಕರಣದಲ್ಲಿ ಅಂತಹ ನೌಕರ ಆತವ ಅಧಿಕಾರಿಗೆ ಜೀವಾವಧಿ ಶಿಕ್ಷೆ ಮತ್ತು ದಂಡ ಸಹಿತ ಕಠಿಣ ಶಿಕ್ಷೆಯ ಆದೇಶ ಹೊರಡಿಸಲಾಗುವುದು[೧೨]. ಎಂದು ೩೭೦(೧) ಸೆಕ್ಷನು ಹೇಳುತ್ತದೆ.

೩೭೦(ಏ)– ೧) ಮಾನವ ಕಳ್ಳ ಸಾಗಣೆಗೆ ಸಿಲುಕಿದ ಅಪ್ರಾಪ್ತ ವಯಸ್ಸಿನ ಪೀಡಿತನನ್ನು ಯಾವುದೇ ರೀತಿಯ ಲೈಂಗಿಕ ಶೋಷಣೆಗೆ ಒಳಪಡಿಸಿದಲ್ಲಿ ದಂಡ ಸಹಿತ ಐದು ಅಥವ ಏಳು ವರ್ಷಗಳ ಕಠಿಣ ಶಿಕ್ಷೆ ವಿಧಿಸಲಾಗುವುದು[೧೩].

೨) ಮಾನವ ಕಳ್ಳಸಾಗಣೆಗೆ ಸಿಲುಕಿದ ಪೀಡಿತನನ್ನು ಯಾವುದೇ ರೀತಿಯ ಲೈಂಗಿಕ ಶೋಷಣೆಗೆ ಒಳಪಡಿಸಿದಲ್ಲಿ ದಂಡ ಸಹಿತ ಮೂರು ಅಥವಾ ಐದು ವರ್ಷಗಳ ಕಠಿಣ ಶಿಕ್ಷೆ ವಿಧಿಸಲಾಗುವುದು[೧೪] ಎಂದು ಹೇಳುತ್ತದೆ.

ಸೆಕ್ಷನ್ ೩೭೦ ಮತ್ತು ೩೭೦ (ಏ) ಮಾತ್ರವಲ್ಲದೆ, ಭಾರತೀಯ ದಂಡ ಸಂಹಿತೆಯ ಇನ್ನು ಕೆಲವು ನಿಬಂಧನೆಗಳು ಅಪ್ರಾಪ್ತ ವಯಸ್ಕರನ್ನು ವೇಶ್ಯಾವಾಟಿಕೆಗೆ ತಳ್ಳುವ, ಪೀಡಿಸುವ, ಅಥವಾ ಅಪಹರಣ ಮಾಡುವ ಅಪರಾಧಗಳಿಗೆ ಗಂಭೀರವಾದ ಶಿಕ್ಷೆ ನೀಡುತ್ತವೆ. ಅಧ್ಯಯನದ ಸಲುವಾಗಿ ಅವುಗಳನ್ನು ಈ ಕೆಳಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ:

* ಹನ್ನೆರಡು ವರ್ಷಕ್ಕಿಂತಲೂ ಕಡಿಮೆ ವಯಸ್ಸಿನ ಮಗುವಿನ ತಂದೆ ಅಥವಾ ಪೋಷಕರು ತಮ್ಮ ಮಗುವನ್ನು ವೇಶ್ಯಾವಾಟಿಕೆಗೆ ದೂಡುವ ಅಥವಾ ಅಂತಹ ವಾತಾವರಣದಲ್ಲಿ ಮಗುವನ್ನು ಪರಿತ್ಯಜಿಸುವ ಪ್ರಕರಣಗಳಲ್ಲಿ ಭಾಗಿಯಾದರೆ ಅಂತಹ ಕೃತ್ಯವು ದಂಡ ಸಹಿತ ಏಳು ವರ್ಷಗಳ ಶಿಕ್ಷೆಗೆ ಗುರಿಯಾಗುತ್ತಾರೆ.

* ಯಾವುದಾದರೂ ವ್ಯಕ್ತಿಯನ್ನು ಅವನಿಗೆ ಪ್ರಾಪ್ತವಾದ ಸ್ವಾತಂತ್ರದ ವಿರುದ್ದವಾಗಿ ಮುಂದುವರೆಯಲು ಅಡ್ಡಿ ಪಡಸಿದರೆ ಅಂತಹ ವ್ಯಕ್ತಿಯು ಶಿಕ್ಷಾರ್ಹ ಅಪರಾಧಕ್ಕೆ ಗುರಿಯಾಗುತ್ತಾನೆ.

* ಯಾವುದಾದರೂ ವ್ಯಕ್ತಿಯನ್ನು ಬಲವಂತವಾಗಿ ಅಥವಾ ಅವನ ಸ್ವೇಚ್ಛೆಯ ವಿರುದ್ಧವಾಗಿ ನೆಡೆದುಕೊಂಡಲ್ಲಿ ಅಂತಹ ಕೃತ್ಯವು ಬಲವಂತದ ಅಪರಾಧವಾಗುತ್ತದೆ.

* ಯಾವುದಾದರು ಮಹಿಳೆಯನ್ನು ಬಲವಂತವಾಗಿ ಅಥವಾ ಶೀಲಕ್ಕೆ ಧಕ್ಕೆ ತರುವ ರೀತಿಯಲ್ಲಿ ನೆಡೆದುಕೊಂಡರೆ ಅಂತಹ ಕೃತ್ಯವು ದಂಡ ಸಹಿತ ಎರಡು ವರ್ಷದ ಶಿಕ್ಷೆಗೆ ಅರ್ಹವಾಗುತ್ತದೆ.

* ಯಾವುದಾದರು ಮಹಿಳೆಯ ಇಚ್ಛೆಯ ವಿರುದ್ಧ ವಿವಾಹವಾದಲ್ಲಿ ಅಥವಾ ಅವಳ ಜೊತೆ ಅನೈತಿಕ ದೈಹಿಕ ಸಂಪರ್ಕ ಹೊಂದುವ ಉದ್ದೇಶದಿಂದ ಅವಳನ್ನು ಅಪಹರಿಸಿ ಮಾನಸಿಕ ಮತ್ತು ದೈಹಿಕವಾಗಿ ಪೀಡಿಸಿದಲ್ಲಿ ಅಂತಹ ಅಪರಾಧವು ದಂಡ ಸಹಿತವಾದ ಹತ್ತು ವರ್ಷಗಳ ಶಿಕ್ಷೆಗೆ ಅರ್ಹವಾಗುತ್ತದೆ.

* ೧೮ ವರ್ಷಕ್ಕಿಂತ ಕಡಿಮೆ ಪ್ರಾಯದ ಅಪ್ರಾಪ್ತ ವಯಸ್ಸಿನ ಹುಡುಗಿಯನ್ನು ದೇಶದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಅಕ್ರಮವಾಗಿ ಸಾಗಿಸಿದರೆ ಅಂತಹ ಕೃತ್ಯವು ಶಿಕ್ಷಾರ್ಹ ಅಪರಾಧವಾಗಿದೆ.

* ೨೧ ವರ್ಷಕ್ಕಿಂತಲೂ ಕಡಿಮೆ ಪ್ರಾಯದ ಹುಡುಗಿಯನ್ನು ಸಾಗಣೆ ಮಾಡುವುದು ಶಿಕ್ಷಾರ್ಹ ಅಪರಾಧ.

* ಜೀತಕ್ಕಾಗಿ ಅಥವಾ ಅಪಾಯಕಾರಿ ದೈಹಿಕ ಕೆಲಸಕ್ಕಾಗಿ ದುಡಿಸಿಕೊಳ್ಳುವ ಅಥವಾ ಅಸಹಜ ದೈಹಿಕ ಸುಖಕ್ಕಾಗಿ ಯಾವುದಾದರು ವ್ಯಕ್ತಿಯನ್ನು ಅಪಹರಿಸಿದಲ್ಲಿ ಅಂತಹ ಕೃತ್ಯವು ಕನಿಷ್ಟ ಹತ್ತು ವರ್ಷಗಳ ಶಿಕ್ಷೆ ಮತ್ತು ದಂಡಕ್ಕೆ ಅರ್ಹವಾದ ಅಪರಾಧವಾಗುತ್ತದೆ.

* ೧೮ ವರ್ಷಕ್ಕಿಂತ ಕಡಿಮೆ ವಯಸ್ಸಿನ ವ್ಯಕ್ತಿಯನ್ನು ವೇಶ್ಯಾವಾಟಿಕೆಗಾಗಿ ಅಥವಾ ಅನೈತಿಕ ದೈಹಿಕ ಸುಖಕ್ಕಾಗಿ ಮಾರಾಟ, ಖರೀದಿ ಅಥವಾ ಬಲವಂತವಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಾಗಿಸಿದಲ್ಲಿ ಹತ್ತು ವರ್ಷದ ಕಠಿಣ ಶಿಕ್ಷೆಗೆ ಗುರಿಯಾಗಿಸಲಾಗುವುದು.

* ಯಾವುದೇ ವ್ಯಕ್ತಿಯ ಇಚ್ಛೆಯ ವಿರುದ್ಧ ಅವನನ್ನು ಕೆಲಸಕ್ಕಾಗಿ ನೇಮಿಸಿಕೊಂಡಲ್ಲಿ ಅದು ಶಿಕ್ಷಾರ್ಹ ಅಪರಾಧವಾಗುತ್ತದೆ.

* ಲೈಂಗಿಕ ದೌರ್ಜನ್ಯ ಶಿಕ್ಷಾರ್ಹ ಅಪರಾಧವಾಗಿದೆ.

ಹೀಗೆ ಅಪರಾಧ ತಿದ್ದುಪಡಿ ಕಾಯ್ದೆ ೨೦೧೩ರ ಕಾಯ್ದೆಯ ವಿವರಗಳು ಗಮನಿಸಿದರೆ ಸ್ಪಷ್ಟವಾಗಿ ಅನೈತಿಕತೆಯ ಹೆಸರಲ್ಲಿ ಹೆಣ್ಣು ಮಕ್ಕಳನ್ನು ಮಾರಾಟ ಮಾಡುವವರಿಗೆ ಶಿಕ್ಷೆ ಘೋಷಿಸಿದೆ. ಆದರೂ ಸಹ ಈ ಸಮಸ್ಯೆ ಸಮಾಜದಲ್ಲಿ ಜೀವಂತವಾಗಿ ಇದೆ. ಇದರ ನಿರ್ಮೂಲನೆಗೆ ಸಾಮಾಜಿಕ ಪರಿವರ್ತನೆಯು ಅಗತ್ಯ ಅನಿಸುತ್ತದೆ.

ಜೀತ ಪದ್ಧತಿ (ನಿರ್ಮೂಲನೆ) ಕಾಯ್ದೆ ೧೯೭೬ ಮತ್ತು ಬಾಲ ಕಾರ್ಮಿಕ ಕಾಯ್ದೆ ೧೯೮೬ರ ರ ಪ್ರಕಾರ ಮಕ್ಕಳನ್ನು ಬಲಂತವಾಗಿ ಜೀತದಾಳುಗಳನ್ನಾಗಿಸುವ ಕೃತ್ಯವು ಕಾನೂನು ಪ್ರಕಾರ ನಿಷೇಧವಾಗಿದೆ. "೧೯೮೬ ರ ಕಾಯ್ದೆ ಪ್ರಕಾರ ಕೆಲವು ವೃತ್ತಿ ಕ್ಷೇತ್ರಗಳಲ್ಲಿ ಕೆಲಸಕ್ಕೆಂದು ನೇಮಕ ಮಾಡುವುದು ಶಿಕ್ಷಾರ್ಹ ಅಪರಾವಾಗಿದ"[೧೫]. "ಮಾಹಿತಿ ತಂತ್ರಜ್ಞಾನ ಕಾಯ್ದೆ ೨೦೦೦ ಪ್ರಕಾರ ಕಾಮ ಪ್ರಚೋದಕ ಸಾಹಿತ್ಯ ಅಥವಾ ಲೇಖನಗಳನ್ನು ಪ್ರಸಾರ ಮಾಡುವ ಅಥವಾ ಮುದ್ರಣ ಮಾಡುವ ಕೃತ್ಯವು ಶಿಕ್ಷಾರ್ಹ ಅಪರಾಧವಾಗಿದೆ"[೧೬]. ೧೯೮೯ರ ಬಾಲಹಕ್ಕು ಕಾಯ್ದೆಯ ಅನುರೂಪದಲ್ಲಿ ಬಾಲ ನ್ಯಾಯ ಕಾಯ್ದೆ ೨೦೦೦ (ಸುರಕ್ಷತೆ ಮತ್ತು ರಕ್ಷಣೆ)ಯನ್ನ ಜಾರಿಗೆ ತರಲಾಗಿದ್ದು, ಈ ಕಾಯ್ದೆಯ ಪ್ರಕಾರ ಘೋರ ಅಪರಾಧ ಎಸಗಿದರೆ ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ಸಹ ವಿಚಾರಣೆ ನಡೆಸಲು ಅನುಮತಿ ನೀಡಲಾಗಿದೆ. ಹಾಗೆಯೇ, ದೇಶದ ಪ್ರತಿ ಜಿಲ್ಲೆಯಲ್ಲಿ ಬಾಲ ನ್ಯಾಯ ಮಂಡಳಿ (ಜೆ ಜೆ ಬಿ) ಮತ್ತು ಮಕ್ಕಳ ಕ್ಷೇಮಾಭಿವೃದ್ಧಿ ಸಮಿತಿ ರಚನೆಗೆ ಅವಕಾಶ ನೀಡಲಾಗಿದೆ. ಹಾಗೆಯೇ, ಬಾಲಾರೋಪಿಯ ಪ್ರಾಥಮಿಕ ತನಿಖೆ ನಡೆಸುವ ಜೆ ಜೆ ಬಿ, ಪುನರ್ವಸತಿ ಕೇಂದ್ರಕ್ಕೆ ಕಳುಹಿಸಬೇಕೋ, ಅಪ್ರಾಪ್ತ ವಯಸ್ಕನನ್ನು ವಯಸ್ಕನಂತೆ ವಿಚಾರಣೆಗೊಳಿಬೇಕೊ ಎಂಬುದನ್ನು ನಿರ್ದರಿಸುತ್ತೆ. ನಿರ್ಭಯಾ ಪ್ರಕರಣವೇ ಈ ವಿಧೇಯಕದ ಮೂಲ ಬದಲಾವಣೆಗೆ ಮುನ್ನುಡಿ ಬರೆದಿದೆ. ಹೊಸ ಕಾನೂನಿನ ಅಡಿಯಲ್ಲಿ ಪ್ರಾಥಮಿಕ ತನಿಖೆ ನೆಡೆಸಿದ ನಂತರ ಆರೋಪಿಗಳ ವಿಚಾರಣೆಯನ್ನು ಸೆಷನ್ಸ್ ಕೋರ್ಟನಲ್ಲಿಯೇ ನಡಸುವ ಅವಕಾಶವಿದೆ. ನಿರ್ಭಯಾ ಪ್ರಕರಣದಲ್ಲಿ ಬಾಲಾಪರಾಧಿಯೊಬ್ಬ ತಪ್ಪಿಸಿಕೊಂಡ ನಂತರ ಬರಿ ಜನಾಗ್ರಹದ ಹಿನ್ನೆಲೆಯಲ್ಲಿ ಬಾಲಾಪರಾಧ ಕಾನೂನು ತಿದ್ದುಪಡಿ ಮಸೂದೆಗೆ ಲೋಕಸಭೆಯಲ್ಲಿ ಅಂಗೀಕಾರ ದೊರೆತಿದೆ. ಈ ಹೊಸ ಕಾನೂನಿನ ಪ್ರಕಾರ ಬಾಲಾಪರಾಧಿಗಳ ವಯೋಮಿತಿ ೧೬ ವರ್ಷಕ್ಕೆ ಇಳಿಕೆಯಾಗಿದ್ದು ೧೬–೧೮ ವಯೋಮಾನದವರನ್ನು ವಯಸ್ಕರಂತೆಯೇ ವಿಚಾರಣೆ ನಡೆಸಲಾಗುವುದು. ಅಲ್ಲದೆ, ಈ ಕಾನೂನ ಪ್ರಕಾರ ಅಪ್ರಾಪ್ತ ವಯಸ್ಕನು ಹೀನಾಯ ಮತ್ತು ಅತಿ ಹಿಂಸಾತ್ಮಕ ಕೃತ್ಯಗಳಲ್ಲಿ ತಪ್ಪಿತಸ್ಥನೆಂದು ಸಾಬೀತಾದಲ್ಲಿ ಅವನಿಗೆ ಜೀವಾವಧಿ ಶಿಕ್ಷೆ ವಿಧಿಸಲಾಗುವುದು.

ಮಹಿಳೆಯರ ಅಶ್ಲೀಲ ನಿರೂಪಣೆ ಕಾಯ್ದೆ ೧೯೮೬ ಪ್ರಕಾರ ಪುಸ್ತಕಗಳಲ್ಲಿ, ಪ್ರಕಟಣೆಗಳಲ್ಲಿ, ಮತ್ತು ಚಿತ್ರಕಲೆಗಳಲ್ಲಿ ಮಹಿಳೆಯರ ಬಗ್ಗೆ ಅಶ್ಲೀಲವಾಗಿ ನಿರೂಪಣೆ ಮಾಡುವುದನ್ನು ೧೯೮೬ ರಲ್ಲಿ ಕೇಂದ್ರ ಸರಕಾರ ಈ ಕಯ್ದೆಯನ್ನು ಜಾರಿಗೆ ತಂದಿದೆ. "ಬಾಲ್ಯ ವಿವಾಹ ತಡೆ ಕಾಯ್ದೆ ೧೯೨೯ರ ಪ್ರಕಾರ ಬಾಲ್ಯ ಎಂದರೆ ಗಂಡಿಗೆ ೨೧ ವರ್ಷ ಮತ್ತು ಹೆಣ್ಣು ಮಗುವಿಗೆ ೧೮ಕ್ಕಿಂತ ಕಡಿಮೆ ಪ್ರಾಯ. ಬಾಲ್ಯ ವಿವಾಹದ ಒಪ್ಪಂದ ಮಾಡಿಕೊಳ್ಳುವವರು, ನೆರವೇರಿಸುವವರು ಮತ್ತು ಭಾಗಿಯಾಗುವವರು ಈ ಕಾಯ್ದೆಯಡಿಯಲ್ಲಿ ಶಿಕ್ಷಾರ್ಹ ಅಪರಾಧಿಗಳಾಗುತ್ತಾರೆ"[೧೭]. ಇದಲ್ಲದೆ ರಾಜ್ಯ ಸರಕಾರಗಳು ಬಾಲ್ಯವಿವಾಹವನ್ನು ತಡೆಗಟ್ಟಲು ಅನೇಕ ಕ್ರಮಗಳನ್ನು ಕೈಗೊಂಡಿದೆ. ಆದರೆ ಸರಕಾರದ ಎಲ್ಲ ಕ್ರಮಗಳು ಬಾಲ್ಯವಿವಾಹವನ್ನು ತಡೆಗಟ್ಟುವಲ್ಲಿ ಯಶಸ್ವಿಯಾಗಿಲ್ಲ. ಮೈಸೂರು ರಾಜ್ಯವು ಬಾಲ್ಯವಿವಾಹ

ತಡೆಗಟ್ಟುವ ಕಾನೂನು ಹೊರಡಿಸಿದ ಮೊದಲ ರಾಜ್ಯವೆಂದು ಖ್ಯಾತಿ ಪಡೆದಿದೆ. ೧೯೨೪ರಲ್ಲಿ ಭಾರತೀಯ ದಂಡ ಸಂಹಿತೆಗೆ ತಿದ್ದುಪಡಿ ತಂದು, ಈ ಸಂಹಿತೆಯ ಸೆಕ್ಷನ್ ೩೭೨ ಮತ್ತು ೩೭೩ ರ ಪ್ರಕಾರ ದೇವಸ್ಥಾನಗಳಿಗೆ ದೇವರ ಸೇವಕಿಯೆಂಬ ನೆಪವೊಡ್ಡಿ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳನ್ನು ವೇಶ್ಯಾವೃತ್ತಿಗೆ ತಳ್ಳುವ ಅಮಾನವೀಯ ಪದ್ಧತಿಯನ್ನು ರದ್ದು ಮಾಡಲಾಯಿತು[೧೮]. ಕರ್ನಾಟಕ ದೇವದಾಸಿ ಪದ್ಧತಿ (ಸಮರ್ಪಣ ನಿಷೇಧ) ೧೯೮೨ ಪ್ರಕಾರ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳನ್ನು ದೇವರ ಸೇವೆಗೆಂದು ಸಮರ್ಪಿಸುವ ಪದ್ಧತಿಯನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ. ಹಾಗೆಯೇ ಆಂಧ್ರಪ್ರದೇಶ ದೇವದಾಸಿ ಕಾಯ್ದೆ ೧೯೮೮(ಸಮರ್ಪಣ ನಿಷೇಧ) ಪ್ರಕಾರ ಅಪ್ರಾಪ್ತ ಹೆಣ್ಣು ಮಕ್ಕಳನ್ನು ದೇವರ ಹೆಸರಿನಲ್ಲಿ ದೇವಸ್ಥಾನಕ್ಕೆ ಸಮರ್ಪಿಸುವ ಅಥವಾ ಪ್ರಚೋದಿಸುವ ಅಥವಾ ಬೆಂಬಲಿಸುವ ಕೃತ್ಯಗಳಿಗೆ ದಂಡ ಸಹಿತ ಮೂರು ವರ್ಷಗಳ ಶಿಕ್ಷೆ ಪ್ರಕಟಿಸಿದೆ.

ಗೋವ ಸರಕಾರವು ಗೋವಾ ಚಿಲ್ಡ್ರನ್ಸ್ ಆಕ್ಟ್ ೨೦೦೩ ಎಂಬ ಕಾನೂನನ್ನು ಜಾರಿಗೊಳಿಸಿದೆ. ಈ ಕಾಯ್ದೆಯು ಭಾರತೀಯ ನ್ಯಾಯಶಾಸ್ತ್ರದಲ್ಲಿ ಪ್ರಥಮ ಬಾರಿಗೆ ಮಾನವ ಕಳ್ಳಸಾಗಣೆಯ ಬಗ್ಗೆ ವ್ಯಾಖ್ಯಾನ ನೀಡಿರುವ ಕಾಯ್ದೆಯಾಗಿದೆ. ಈ ಕಾಯ್ದೆಯು ಮಕ್ಕಳ ಹಕ್ಕುಗಳ ಬಗ್ಗೆ ವಿಸ್ತೃತವಾಗಿ ಚರ್ಚಿಸುತ್ತದೆ. ಈ ಕಾನೂನಿನ ಪ್ರಕಾರ ಮಕ್ಕಳು ವಾಸವಿರುವ ಅವರಣದಲ್ಲಿ ಅವರ ಹಕ್ಕುಗಳನ್ನು ಕಾಪಾಡುವ ಕರ್ತವ್ಯ ಆ ಮನೆಯ ಅಥವಾ ಆವರಣದ ಮಾಲೀಕನದ್ದಾಗಿರುತ್ತದೆ. ಮಕ್ಕಳು ಆಟವಾಡುವ ಅಥವಾ ಕಲಿಯುವ ಪ್ರದೇಶದಲ್ಲಿ ಅವರ ಹಕ್ಕುಗಳಿಗೆ ಚ್ಯುತಿ ಬಂದಲ್ಲಿ ಅಥವಾ ರಕ್ಷಣೆಗೆ ತೊಡಕುಂಟು ಮಾಡಿದ್ದಲ್ಲಿ ಅಥವಾ ಮಕ್ಕಳನ್ನು ಲೈಂಗಿಕವಾಗಿ ಬಳಸಿದಲ್ಲಿ ಅಂತಹ ವ್ಯಕ್ತಿಯು ಶಿಕ್ಷಾರ್ಹ ಅಪರಾದಿಯಾಗುತ್ತಾನೆ  ಎಂದು ಕಾಯ್ದೆ ಹೇಳುತ್ತದೆ.

ಭಾರತದಲ್ಲಿ ಅಂಗಾಂಗಳನ್ನು ಮಾರಾಟ ಮಾಡುವ ದೊಡ್ಡ ಜಾಲವೇ ಇದೆ. ಬಡ ಜನರನ್ನು ದೊಡ್ಡ ನಗರಗಳಿಗೆ ಕರೆತಂದು ಅವರ ಅಂಗಾಂಗಗಳನ್ನು ಕಸಿ ಮಾಡಿ ಅವರಿಗೆ ಹಣ ನೀಡುವ ಪದ್ಧತಿ ಅವ್ಯಾಹತವಾಗಿ ನಡೆಯುತ್ತಿದೆ. ಅನೇಕ ಬಡವರು ತಮ್ಮ ಅಂಗಾಂಗಗಳನ್ನು ದುಬಾರಿ ಬೆಲೆಗೆ ಮಾರುವ ಪ್ರಕರಣಗಳು ಬೆಳಕಿಗೆ ಬಂದಿವೆ. ಈ ಅಮಾನವೀಯ ಅಪರಾಧಗಳು ಅನೇಕರ ಬಡಜನರ ಬದುಕನ್ನು ಕಸಿದುಕೊಂಡಿವೆ. ಇದನ್ನು ತಡೆಗಟ್ಟಲು ಮಾನವ ಅಂಗಾಂಗಗಳ ಕಸಿ ಕಾಯ್ದೆ ೧೯೯೪ ರಲ್ಲಿ ಜಾರಿಗೆ ಬಂದಿದ್ದು ಈ ಕಾನೂನಿನ ೧೯ನೇ ಸೆಕ್ಷನ್ ಪ್ರಕಾರ ಮಾನವ ಅಂಗಾಂಗಗಳ ಅಕ್ರಮ ವ್ಯವಾಹಾರ ಮಾಡುವ ಯಾವುದೇ ವ್ಯಕ್ತಿಗೆ ಶಿಕ್ಷಾರ್ಹ ಅಪರಾಧಿಯೆಂದು ಪ್ರಕಟಿಸಲಾಗಿದೆ[೧೯]. ಈ ಕಾಯ್ದೆಯ ಪ್ರಕಾರ

* ಯಾವುದಾದರು ವ್ಯಕ್ತಿ ಮಾನವ ಅಂಗಾಂಗಗಳನ್ನು ಸರಬರಾಜು ಮಾಡುವ ಉದ್ದೇಶಕ್ಕಾಗಿ ಹಣ ಪಡೆದರೆ ಅಂತಹ ವ್ಯಕ್ತಿಯು ಶಿಕ್ಷೆಗೆ ಅರ್ಹನಾಗುತ್ತಾನೆ.

* ಹಣಕ್ಕಾಗಿ ತನ್ನ ಅಂಗಾಂಗಗಳನ್ನು ಮಾರಲು ಸಿದ್ಧನಿರುವ ವ್ಯಕ್ತಿಯನ್ನು ಬೇಟಿ ಮಾಡಿ ವ್ಯವಹಾರ ಕುದುರಿಸುವ ಕೃತ್ಯವು ಶಿಕ್ಷಾರ್ಹ ಅಪರಾಧವಾಗುತ್ತದೆ.

* ಹಣಕ್ಕಾಗಿ ತನ್ನ ಅಂಗಾಂಗಗಳನ್ನು ಮಾರಲು ಸಿದ್ದನಾದರೆ ಅಂತಹ ವ್ಯಕ್ತಿಯು ಶಿಕ್ಷೆಗೆ ಒಳಪಡುತ್ತಾನೆ.

* ಮಾನವ ಅಂಗಾಂಗಳನ್ನು ಹಣ ನೀಡಿ ಖರೀದಿಸಲು ಮುಂದಾದರೆ ಅಂತಹ ವ್ಯಕ್ತಿಯೂ ಸಹ ಶಿಕ್ಷೆಗೆ ಒಳಪಡುತ್ತಾನೆ.

* ಮಾನವ ಅಂಗಾಂಗಳನ್ನು ಮಾರಾಟ ಮಾಡುವ ಯಾವುದೇ ಸಂಸ್ಥೆ, ಸಮೂಹ ಅಥವಾ ಒಕ್ಕೂಟದಲ್ಲಿ ಭಾಗಿಯಾದರೆ ಅಂತಹ ಕೃತ್ಯವು ಶಿಕ್ಷೆಗೆ ಅರ್ಹವಾಗುತ್ತದೆ.

* ಮಾನವ ಅಂಗಾಂಗಗಳನ್ನು ಮಾರುವಂತೆ ಪ್ರಚೋದಿಸುವ ಅಥವಾ ಪರೋಕ್ಷವಾಗಿ ಅಂತಹ ಕೃತ್ಯಗಳಿಗೆ ಬೆಂಬಲಿಸುವ ಪ್ರಕಟಣೆ ಅಥವ ಜಾಹೀರಾತುಗಳನ್ನು ಹೊರಡಿಸಿದರೆ ಅದೂ ಸಹ ಶಿಕ್ಷಾರ್ಹ ಅಪರಾಧವಾಗುತ್ತದೆ.

ಈ ಎಲ್ಲ ಕಾನೂನುಗಳ ಜೊತೆಗೆ, ಲೈಂಗಿಕತೆಯನ್ನು ವ್ಯಾಪಾರೀಕರಣಗೊಳಿಸುವ ಮತ್ತು ಲೈಂಗಿಕ ದೌರ್ಜನ್ಯವನ್ನು ತಡೆತಟ್ಟುವ ನಿಟ್ಟಿನಲ್ಲಿ ಮತ್ತೊಂದು ಮಹತ್ವದ ಕಾನೂನೆಂದರೆ ಹೆಣ್ಣುಮಕ್ಕಳ ಅನೈತಿಕ ಸಾಗಣೆ ಕಾಯ್ದೆ ೧೯೫೬. ಮುಂದುವರೆದು ಈ ಕಾಯ್ದೆಗೆ ೧೯೮೬ರಲ್ಲಿ ತಿದ್ದುಪಡಿ ತರಲಾಗಿದ್ದು ಇದನ್ನು ಅನೈತಿಕ ಮಾನವ ಸಾಗಣೆ (ತಡೆಗಟ್ಟುವಿಕೆ) ಕಾಯ್ದೆ ೧೯೫೬ ಎಂದು ಕರೆಯಲಾಗಿದೆ.

## ೫.೪ ಅನೈತಿಕ ಸಾಗಣೆ ಕಾಯ್ದೆ ೧೯೫೬

ಈ ಕಾಯ್ದೆಯು ಮಹಿಳೆಯರ ಹಕ್ಕು ಮತ್ತು ಅಕ್ರಮ ಕಳ್ಳಸಾಣೆಯನ್ನು ತಡೆಯುವ ನಿಟ್ಟಿನಲ್ಲಿ ಪ್ರಮುಖ ನಿಬಂಧನೆಗಳನ್ನು ಪ್ರಸ್ತಾಪಿಸುತ್ತದೆ. ಈ ಕಾಯ್ದೆಯನ್ನು ಎರಡು ಬಾರಿ ಅಂದರೆ ೧೯೭೮ ಮತ್ತು ೧೯೮೬ ರಲ್ಲಿ ತಿದ್ದುಪಡಿ ಮಾಡಲಾಗಿದೆ. ೧೯೮೬ರ ತಿದ್ದುಪಡಿ ಕಾಯ್ದೆಯು ಮಾನವ ಕಳ್ಳ ಸಾಗಣೆಯನ್ನು ತಡೆಯುವ ಕುರಿತು ನೂತನ ನಿಬಂಧನೆಗಳನ್ನು ಪ್ರಸ್ತಾಪಿಸಿದೆ. ಆದರೆ ಈ ಕಾನೂನಿನ ಕೆಲವು ಕ್ರಮುಗಳನ್ನು ಪ್ರತ್ಯಕ್ಷ ಮತ್ತು ಪರೋಕ್ಷ ಕಾರಣಾಂತರಗಳಿಂದ ಅನುಷ್ಠಾನಗೊಳಿಸಲಾಗಿಲ್ಲ. ಅಲ್ಲದೆ ಈ ಕಾನೂನನ್ನು ಹಲರು ಬಾರಿ ದುರುಪಯೋಗ ಪಡಿಸಿಕೊಂಡಿರುವ ಪ್ರಕರಣಗಳು ಕಂಡುಬಂದಿವೆ.[೨೦] ಈ ಕಾನೂನಿನ ಬಗ್ಗೆ ಜನರಿಗೆ ಅರಿವಿನ ಕೊರತೆಯಿರುವ ಕಾರಣ ಹಲವಾರು ಪ್ರಕರಣಗಳಲ್ಲಿ ಈ ಕಾಯ್ದೆಯ ದುರುಪಯೋಗವಾಗಿದೆ. ಈ ಕಾಯ್ದೆಯನ್ನು ಭಾರತವು ೧೯೫೦ ರಲ್ಲಿ ಸಹಿ ಮಾಡಿದ International Convention for the Suppression of Immoral Traffic in Persons and the Exploitation of the Prostitution and Others ಎಂಬ ಅಂತರಾಷ್ಟ್ರೀಯ ಒಪ್ಪಂದಕ್ಕೆ ಅನುಗುಣವಾಗಿ ಜಾರಿಗೆ ತರಲಾಗಿದೆ. ಈ ಕಾಯ್ದೆಗೂ ಮುನ್ನ ಆಯಾ ರಾಜ್ಯದಲ್ಲಿನ ಕಾನೂನಿನ ಅನ್ವಯ ವ್ಯವಹರಿಸಲಾಗುತ್ತಿತ್ತು. ಈ ಕಾನೂನಿನ ಪ್ರಕಾರ ಒಬ್ಬ ವ್ಯಕ್ತಿಯನ್ನು ವ್ಯವಹಾರ ಕಾರಣಗಳಿಗಾಗಿ ಶೋಷಣೆ ಮಾಡಿದಾಗ ಮಾತ್ರ ಅಥವಾ ಒಬ್ಬ ಮಹಿಳೆ ಅಥವಾ ಮಗುವನ್ನು

ಲೈಂಗಿಕ ಶೋಷಣೆಗೊಳಗಾಗಿಸಿ ಇದರ ಮೂಲಕ ಮತ್ತೊಬ್ಬ ವ್ಯಕ್ತಿಯು ಲಾಭ ಪಡೆದಾಗ ಮಾತ್ರ ಇದನ್ನು ಲೈಂಗಿಕ ಶೋಷಣೆಯ ವ್ಯಾಪಾರ ಎಂದು ಕರೆಯಲಾಗುತ್ತದೆ. ಇದು ಕಾನೂನಿನ ಪ್ರಕಾರ ಶಿಕ್ಷಾರ್ಹ ಅಪರಾಧವಾಗಿದೆ.

ಅನೈತಿಕ ಮಾನವ ಸಾಗಾಣಿಕೆಯ ವಿವರಣೆಯನ್ನು ಹಲವು ವಿಭಾಗಗಳಲ್ಲಿ ನೋಡಬಹುದಾಗಿದೆ. ವೇಶ್ಯಾ ವೃತ್ತಿಗಾಗಿ ಒಬ್ಬ ವ್ಯಕ್ತಿಯನ್ನು ತೆಗೆದುಕೊಳ್ಳುವುದು ಅಥವಾ ತೊಡಗಿಸುವುದು, ಪಡೆಯುವುದು, ಕರೆದುಕೊಂಡು ಹೋಗುವುದು, ಹೋಗಲು ಪ್ರಚೋದಿಸುವುದು ಇವೂ ಕೂಡ ಮಾನವ ಸಾಗಾಣಿಕೆ ಎಂದೆನಿಸುತ್ತದೆ. ಮಹಿಳೆ ಮತ್ತು ಮಕ್ಕಳ ಅನೈತಿಕ ಸಾಗಾಣಿಕೆ ಕಾಯ್ದೆಯು ಲೈಂಗಿಕ ದುಡಿಮೆಗಾರರು/ಕೆಲಸಗಾರರು ಎಂದರೆ ಹೆಣ್ಣು ಎಂದು ವಿವರಿಸುತ್ತದೆ. ಈ ಕಾಯ್ದೆಯು ಮಹಿಳೆ ಮತ್ತು ಪುರುಷ ಎಂಬ ಬೇಧವಿಲ್ಲದೆ ವಾಣಿಜ್ಯ ಉದ್ದೇಶಗಳಿಗಾಗಿ ಲೈಂಗಿಕವಾಗಿ ಶೋಷಿತರಾಗುವ ವ್ಯಕ್ತಿಗಳೆಲ್ಲರನ್ನೂ ಒಳಗೊಳ್ಳುವ ಸಲುವಾಗಿ ೧೯೮೬ರಲ್ಲಿ ತಿದ್ದುಪಡಿಯನ್ನು ತರಲಾಯಿತು. ಇದಕ್ಕೆ ದಿ ಸಪ್ರೆಷನ್ ಅಫ್ ಇಮ್ಮಾರಲ್ ಟ್ರಾಫಿಕಿಂಗ್(ಪ್ರಿವೆನ್ಷನ್) ಆಕ್ಟ್ ಎಂಬ ಹೆಸರಿಡಲಾಯಿತು. ಈ ಕಾಯಿದೆಯು ವಾಣಿಜ್ಯ ಉದ್ದೇಶಗಳಿಗಾಗಿ ಮಾಡುವ ವ್ಯಕ್ತಿಗಳ ಕಳ್ಳ ಸಾಗಾಣಿಕೆ ಮತ್ತು ಲೈಂಗಿಕ ಶೋಷಣೆಯನ್ನು ದಂಡನೀಯ ಅಪರಾಧವಗಿಸುತ್ತದೆ. ಈ ತಿದ್ದುಪಡಿ ಕಾಯ್ದೆಯ ಪ್ರಮುಖ ಅಂಶಗಳೇನೆಂದರೆ:

* ಈ ಕಾನೂನಿನ ಅನ್ವಯ ಸಾರ್ವಜನಿಕರ ಹಿತದೃಷ್ಟಿಯಿಂದ ರಾಜ್ಯ ಸರಕಾರಗಳು ಕೆಲವೊಂದು ನಿರ್ದಿಷ್ಟ ಪ್ರದೇಶಗಳಲ್ಲಿ ವೇಶ್ಯವಾಟಿಕೆಯನ್ನು ನಿಷೇಧಗೊಳಿಸಬಹುದು. ಹೀಗೆ ಗುರುತಿಸಲ್ಪಡುವ ಪ್ರದೇಶಗಳಲ್ಲಿ ಜನಸಂದಣಿಯನ್ನು ಮುಖ್ಯವಾಗಿ ಗಮನದಲ್ಲಿರಿಸತಕ್ಕದ್ದು.

* ಈ ಕಾನೂನಿನ ಚೌಕಟ್ಟಿನಲ್ಲಿ ಅಪರಾಧವೆಸಗುವವರನ್ನು ಬಂಧಿಸಲು ಮತ್ತು ನಿಯಂತ್ರಿಸಲು ಸಬ್ ಇನ್ಸ್‌ಪೆಕ್ಟರ್ ಹುದ್ದೆಗೆ ಸಮನಾದ ಪೋಲೀಸ್ ಅಧಿಕಾರಿಗಳನ್ನು ನೇಮಿಸುವುದು. ಹಾಗೆಯೇ, ಜಿಲ್ಲಾ ಸತ್ರ ನ್ಯಾಯಾಧೀಶರು ನಿವೃತ್ತ ಸೇನಾಧಿಕಾರಿ ಅಥವಾ ಪೋಲೀಸ್ ಅಧಿಕಾರಿಯನ್ನು ನೇಮಿಸುವ ಅಧಿಕಾರವನ್ನು ಹೊಂದಿರುತ್ತಾರೆ. ಹಾಗೆಯೇ, ಇವರಿಂದ ನೇಮಕವಾಗಲ್ಪಟ್ಟ ಅಧಿಕಾರಿಗಳು ತಮಗೆ ಪೂರಕವಾದ ಸಿಬ್ಬಂದಿಯನ್ನು ನೇಮಕ ಮಾಡಿಕೊಳ್ಳಬಹುದಾಗಿದೆ.

* ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಮಹಿಳೆಯರನ್ನು ಗುರುತಿಸಲು ಮಹಿಳಾ ಸಾಕ್ಷಿಗಳು ಅವಶ್ಯಕ. ಆದರೆ ವೇಶ್ಯವಾಟಿಕೆ ನೆಡೆಯುತ್ತಿರುವ ಪ್ರದೇಶ ಅಥವ ಬೀದಿಯನ್ನು ಗುರುತಿಸುವ ಸಲುವಾಗಿ ಅಥವಾ ಪೋಲೀಸ್ ಅಧಿಕಾರಿಗಳಿಗೆ ಈ ವಿಚಾರ ತಿಳಿಸುವ ಮಹಿಳಾ ಸಾಕ್ಷಿಗಳು ಆಯಾ ಪ್ರದೇಶದವರೇ ಆಗಿರಬೇಕಿಲ್ಲ. ವೇಶ್ಯವಾಟಿಕೆ ಗೃಹಗಳಲ್ಲಿ ಶೋಧ ಮಾಡುವಾಗ ಮಹಿಳಾ ಸಾಕ್ಷಿಗಳು ಯಾವ ಪ್ರದೇಶದವರಾದರೂ ಅವರು ಪೋಲೀಸ್ ಅಧಿಕಾರಿಗಳಿಗೆ ಸಹಕರಿಸಬಹುದಾಗಿದೆ.

* ಈ ಕಾಯ್ದೆಯಡಿ ದಾಖಲಾದ ಪ್ರಕರಣಗಳಿಗೆ ಸಾಮೂಹಿಕ ವಿಚಾರಣೆಯ ಅಗತ್ಯವಿಲ್ಲ. ಹೀಗಾಗಿ ಕೆಲವರು ಈ ಪ್ರಕರಣಗಳಲ್ಲಿ ತಮಗೆ ಅನುಕೂಲವಾಗುವ ರೀತಿಯಲ್ಲಿ ಸಾಕ್ಷಿಗಳನ್ನು

ಪ್ರಭಾವಿಸಬಹುದು ಅಥವ ಪ್ರಕರಣವು ಕೋರ್ಟನಲ್ಲಿ ದೀರ್ಘ ಕಾಲದವರೆಗೆ ವಿಚಾರಣೆಗೊಳಪಡುವಂತೆ ನೋಡಿಕೊಳ್ಳಬಹುದು. ವೇಶ್ಯವಾಟಿಕೆಯನ್ನು ಸಂಪೂರ್ಣ ದಂಧೆಯ ರೀತಿಯಲ್ಲಿ ನಡೆಸುತ್ತಿರುವವರು ಈ ಕಾನೂನನ್ನು ತಮ್ಮ ಅನುಕೂಲಕ್ಕಾಗಿ ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ. ಹೀಗಾಗಿ, ಜಿಲ್ಲಾ ಮ್ಯಾಜಿಸ್ಟ್ರೇಟ್ ರವರು ಈ ಪ್ರಕರಣಗಳಿಗೆ ಸಂಬಂದಿಸಿದಂತೆ ಕ್ರಮಬದ್ಧ ವಿಚಾರಣೆಯನ್ನು ನೆಡೆಸುವ ಆದೇಶ ಹೊರಡಿಸಬಹುದಾಗಿದೆ.

೧೯೭೮ ರಲ್ಲಿ ಈ ಕಾಯ್ದೆಗೆ ತರಲಾದ ತಿದ್ದುಪಡಿಗಳು ಮಾನವಕಳ್ಳ ಸಾಗಣೆಯನ್ನು ಪರಣಾಮಕಾರಿಯಾಗಿ ನಿಯಂತ್ರಿಸಲು ಸಾಧ್ಯವಾಗಿಲ್ಲ. ಮಹಿಳಾ ಗುಂಪುಗಳು, ವಕೀಲರ ಸಂಘಗಳು, ಸರಕಾರಿ ಮತ್ತು ಅರೆಸರಕಾರಿ ಸಂಸ್ಥೆಗಳು ಈ ಕಾಯ್ದೆಯ ನಿಬಂಧನೆಗಳನ್ನು ಮತ್ತಷ್ಟು ಕಠಿಣ ಮತ್ತು ಪರಿಣಾಮಕಾರಿಯನ್ನಾಗಿ ಮಾಡುವಂತೆ ಸಂಬಂಧಿಸಿದವರಿಗೆ ಕೇಳಿಕೊಂಡಿದ್ದು, ಮಾನವ ಕಳ್ಳಸಾಗಣೆಗೆ ಸಿಲುಕಿದ ಪೀಡಿತರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆಯೂ ಮನವರಿಕೆ ಮಾಡಿದ್ದಾರೆ. ಈ ಕಾಯ್ದೆಯನ್ನು ಕೇವಲ ಮಹಿಳೆಯರಿಗೆ ಮಾತ್ರವಲ್ಲದೆ ದೈಹಿಕ ದೌರ್ಜನ್ಯಕ್ಕೆ ತುತ್ತಾಗುವ ಮಕ್ಕಳಿಗೂ ಈ ಕಾಯ್ದೆಯ ನಿಬಂಧನೆಗಳು ಅನ್ವಯವಾಗಬೇಕೆಂದು ಆಗ್ರಹಿಸಿದ ಪರಿಣಾಮ ೧೯೮೬ ರಲ್ಲಿ ಈ ಕಾಯ್ದೆಗೆ ತಿದ್ದುಪಡಿ ತರಲಾಯಿತು. ೧೯೮೬ ತಿದ್ದುಪಡಿಯ ಮುಖ್ಯ ನಿಬಂಧನೆಗಳೆಂದರೆ–

* "೧೯೫೬ರ ಅನೈತಿಕ ವ್ಯವಹಾರ ನಿಗ್ರಹಣಾ ಅಧಿನಿಯಮವು (ಸಪ್ರೇಶನ್ ಆಫ್ ಇಮ್ಮಾರಲ್ ಟ್ರಾಫಿಕಿಂಗ್ ಆಕ್ಟ್) ಭಾರತ ಸರಕಾರವು ವೇಶ್ಯಾ ಸಮಸ್ಯೆಯನ್ನು ನಿರ್ಮೂಲನಗೊಳಿಸಲು ಮಾಡಿದ ಕಾನೂನಾಗಿದೆ. ೧೯೮೬ರಲ್ಲಿ ಈ ಅಧಿನಿಯಮಕ್ಕೆ ತಿದ್ದುಪಡಿ ತಂದು ಅದನ್ನು ಅನೈತಿಕ ವ್ಯವಹಾರ ಪ್ರತಿಬಂಧಕ ಕಾಯಿದೆ (ಪ್ರಿವೆನ್ಶನ್ ಆಫ್ ಇಮ್ಮಾರಲ್ ಟ್ರಾಫಿಕಿಂಗ್ ಆಕ್ಟ್) ಎಂದು ಮಾರ್ಪಡಿಸಲಾಯಿತು. ಈ ಕಾಯ್ದೆಯು ವೇಶ್ಯಾ ಸಮಸ್ಯೆಯನ್ನು ನಿವಾರಿಸುವ ಉದ್ದೇಶದಿಂದ ರೂಪಿಸಲಾಗಿದೆ. ವಯಸ್ಸಿಗೆ ಬಂದ ಯುವತಿಯರು ವೇಶ್ಯೆಯರಾಗಬಾರದು ಮತ್ತು ಯುವಕರು ವಿಟರಾಗಬಾರದು ಹಾಗೂ ಬದುಕಲು ಹೆಣ್ಣಾಗಲಿ, ಗಂಡಾಗಲಿ ವೇಶ್ಯಾವೃತ್ತಿಯನ್ನು ಅವಲಂಬಿಸಬಾರದು"[೨೧].

* ಮಕ್ಕಳು ಮತ್ತು ಅಪ್ರಾಪ್ತ ವಯಸ್ಕರ ಮೇಲೆ ಲೈಂಗಿಕ ದೌರ್ಜನ್ಯ ಎಸಗಿದವರಿಗೆ ನೀಡಲಾಗುವ ಶಿಕ್ಷೆಯ ಪ್ರಮಾಣವನ್ನು ಹೆಚ್ಚಿಸುವುದು.

* ಮಾನವಕಳ್ಳ ಸಾಗಣೆ ಪ್ರಕರಣಗಳ ತನಿಖೆ ನೆಡೆಸುವ ಪೋಲೀಸ್ ಅಧಿಕಾರಿಗಳು ಅಂತರ್ ರಾಜ್ಯ ಮಟ್ಟದ ಜಾಲವನ್ನು ಬೇಧಿಸುವ ಅಧಿಕಾರವನ್ನು ಹೊಂದಿರುತ್ತಾರೆ.

* ಹೋಟೆಲ್ ಅಥವ ಲಾಡ್ಜ್‌ಗಳಲ್ಲಿ ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ಬಳಸಿಕೊಂಡು ಅಸಹಜ ಲೈಂಗಿಕ ಕೃತ್ಯಗಳನ್ನು ಅಥವ ವೇಶ್ಯಾವೃತ್ತಿಯನ್ನು ನೆಡೆಸುವ ಪ್ರಕರಣಗಳು ಕಂಡುಬಂದರೆ ಅಂತಹ ಹೋಟೆಲ್ ಮತ್ತು ಲಾಡ್ಜ್‌ಗಳ ಪರವಾನಗಿಯನ್ನು ಸಕ್ಷಮ ಪ್ರಾಧಿಕಾರವು ಕೂಡಲೇ ರದ್ದುಗೊಳಿಸುವುದು.

* ವಿಚಾರಣಾಧೀನ ಆರೋಪಿಗಳ ಮೇಲೆ ಲೈಂಗಿಕ ಆರೋಪಗಳು ಕೇಳಿಬಂದಲ್ಲಿ ಅಂತಹ ಪ್ರಕರಣಗಳು ಭಾರತೀಯ ದಂಡ ಸಂಹಿತೆ ಪ್ರಕಾರ ಗಂಭೀರ ಶಿಕ್ಷೆಗೆ ಗುರಿಯಾಗುತ್ತವೆ.

* ಪೋಲೀಸರು ವೇಶ್ಯಾಗೃಹಗಳ ಮೇಲೆ ದಾಳಿ ನೆಡೆಸಿದಾಗ ಸಿಕ್ಕಿ ಬೀಳುವ ಲೈಂಗಿಕ ಕಾರ್ಯಕರ್ತೆಯರು ಮತ್ತು ವೇಶ್ಯೆಯರನ್ನು ಖಡ್ಡಾಯವಾಗಿ ವೈದ್ಯಕೀಯ ತಪಾಸಣೆಗೊಳಪಡಿಸಬೇಕು.

* ಪೋಲೀಸರು ದಾಳಿ ಮಾಡಿದ ಸಂದರ್ಭದಲ್ಲಿ ಸಿಕ್ಕಿ ಬಿದ್ದ ವೇಶ್ಯೆಯರನ್ನು ವಿಚಾರಿಸಲು ಈ ಕಾನೂನಿನ ಸೆಕ್ಷನ್ ೧೫ರ ರೀತ್ಯ ಕಡ್ಡಾಯವಾಗಿ ಮಹಿಳಾ ಸಿಬ್ಬಂದಿಯನ್ನು ಮಾತ್ರ ನೇಮಕಗೊಳಿಸಬೇಕು. ಮಹಿಳಾ ಸಿಬ್ಬಂದಿಯು ಅನುಪಸ್ಥಿತಿಯಲ್ಲಿ ಮಹಿಳಾ ಸಾಮಾಜಿಕ ಕಾರ್ಯಕರ್ತೆಯರ ಸಮ್ಮುಖದಲ್ಲಿ ವಿಚಾರಣೆ ನೆಡೆಸಬೇಕಿರುವುದು ಅಗತ್ಯವಾಗಿದೆ.

* ಅಂತರರಾಜ್ಯ ಆರೋಪಿಗಳನ್ನು ವಿಚಾರಿಸಲು ಕೇಂದ್ರ ಸರಕಾರವು ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಬಹುದು.

**ಅನೈತಿಕ ಸಾಗಣೆ (ತಡೆ) ಕಾಯ್ದೆ ೧೯೫೬ ರ ಪ್ರಮುಖ ಅಂಶಗಳು:**

ಈ ಕಾನೂನಿನ ಮಹತ್ವವನ್ನು ಅರಿಯಬೇಕಾದರೆ ಇದರಲ್ಲಿರುವ ಪ್ರಮುಖ ನಿಬಂಧನೆಗಳನ್ನು ಸಮಗ್ರವಾಗಿ ಅಭ್ಯಸಿಸುವ ಅಗತ್ಯವಿದೆ. ಈ ಕಾನೂನಿನ ಕಲಂ ೨(ಎ) ಪ್ರಕಾರ ವೇಶ್ಯಾಗೃಹ ಎಂದರೆ ಬೇರೊಬ್ಬ ವ್ಯಕ್ತಿಯ ಲಾಭಕ್ಕಾಗಿ ಅಥವಾ ಇಬ್ಬರು ಅಥವಾ ಇಬ್ಬರಿಗಿಂತ ಹೆಚ್ಚಿನ ವೇಶ್ಯೆಯರು ವಾಣಿಜ್ಯ ಉದ್ದೇಶಕ್ಕಾಗಿ ಉಪಯೋಗಿಸಲಾದ ಮನೆ, ವಾಹನ, ಸ್ಥಳ ವೇಶ್ಯಾಗೃಹ ಎನಿಸಿಕೊಳ್ಳುತ್ತದೆ. ಅಪ್ರಾಪ್ತ ವಯಸ್ಕರು ಎಂದರೆ ಹದಿನಾರು ವರ್ಷ ವಯಸ್ಸು ತುಂಬಿಲ್ಲದವರು ಇಂಥ ಗೃಹಗಳಿಗೆ ಮಾರಾಟವಾಗುತ್ತಾರೆ. ಇಲ್ಲವೆ ಇಂತಿಷ್ಟು ಹಣಕ್ಕೆಂದು ಅವರ ದೇಹವನ್ನು ಬಾಡಿಗೆ ಕೊಡುವ ಪರಿಪಾಟವಿದೆ. ವೇಶ್ಯಾವೃತ್ತಿಯಲ್ಲಿ ತೊಡಗಿಕೊಂಡ ಹೆಣ್ಣು ಮತ್ತು ಗಂಡು ಇಬ್ಬರೂ ಅಪರಾಧಿ ಆಗುತ್ತಾರೆ.

* ಕಲಂ ೩ರ ಪ್ರಕಾರ ವೇಶ್ಯಾಗೃಹಗಳನ್ನು ನಡೆಸಲು ಸ್ಥಳಾವಕಾಶ ಕಲ್ಪಿಸಿಕೊಡುವುದು ಅಪರಾಧವಾಗಿದ್ದು, ಅದಕ್ಕಾಗಿ ಒಂದರಿಂದ ಮೂರು ವರ್ಷಗಳ ಸೆರೆಮನೆ ವಾಸ ಮತ್ತು ರೂ. ೨೦೦೦ ದಂಡ ವಿಧಿಸಬಹುದು.

* ಕಲಂ ೪ರ ಪ್ರಕಾರ ವೇಶ್ಯಾವಾಟಿಕೆಯ ಉದ್ದೇಶಕ್ಕಾಗಿ ಹೆಣ್ಣು ಮಕ್ಕಳನ್ನು ಕರೆತರುವುದು ಅಥವಾ ಕರೆತರುವ ಪ್ರಯತ್ನ ಮಾಡುವುದು. ಅಂಥ ಅಪರಾಧವೆಸಗಿದ ವ್ಯಕ್ತಿಗೆ ಎರಡು ವರ್ಷ ಶಿಕ್ಷೆ ಮತ್ತು ರೂ. ೨೦೦೦ ಗಳವರೆಗೆ ದಂಡ ವಿಧಿಸಬಹುದಾಗಿದೆ.

* ಕಲಂ ೬ ರ ಪ್ರಕಾರ ಯಾವುದೇ ಸಾರ್ವಜನಿಕ ಸ್ಥಳಕ್ಕೆ ೧೨೦೦ ಅಡಿಗಳ ದೂರದಲ್ಲಿ ವೇಶ್ಯಾವಾಟಿಕೆಯನ್ನು ನಡೆಸುವುದು ದಂಡಾರ್ಹವಾದ ಅಪರಾಧವಾಗಿದೆ.

* ಕಲಂ ೮ ರ ಪ್ರಕಾರ  ವ್ಯಕ್ತಿಯೊಬ್ಬರು ಯಾವುದೇ ಸಾರ್ವಜನಿಕ ಸ್ಥಳದಲ್ಲಿ ನಿಂತು ಪ್ರಚೋದನಾಕಾರಿಯಾದ ನಡವಳಿಕೆ ಅಥವಾ ಹಾವಭಾವಗಳ ಮೂಲಕ ಗಿರಾಕಿಗಳನ್ನು ಆಹ್ವಾನಿಸುವುದು ದಂಡನಾರ್ಹವಾದ ಅಪರಾಧವಾಗಿದೆ. ಇಂತಹ ಅಪರಾಧಕ್ಕೆ ಮಹಿಳೆಯರಿಗೆ ಆರು ತಿಂಗಳ ಶಿಕ್ಷೆ ಮತ್ತು ರೂ. ೫೦೦ ದಂಡ ಹಾಗೂ ಪುರುಷನಾಗಿದ್ದರೆ ಏಳು ದಿನಗಳಿಂದ ಮೂರು ತಿಂಗಳವರೆಗೆ ಶಿಕ್ಷೆ ಇದೆ.

* ಕಲಂ ೧೩ ರ ಪ್ರಕಾರ ಈ ಕಾಯ್ದೆಯ ವ್ಯಾಪ್ತಿಯಲ್ಲಿ ಬರುವ ಅಪರಾಧಗಳ ವಿಚಾರಣೆ ನಡೆಸಲು ವಿಶೇಷ ಪೊಲೀಸ ಅಧಿಕಾರಿಗಳನ್ನು ನೇಮಕ ಮಾಡಬಹುದಾಗಿದೆ.

* ಕಲಂ ೧೪ ರ ಪ್ರಕಾರ ವೇಶ್ಯೆಯರಿಗೆ ರಕ್ಷಣೆ ಕೋರುವ ಹಾಗೂ ತಮ್ಮನ್ನು 'ರಕ್ಷಣಾ ಗೃಹ'ಗಳಿಗೆ ಸೇರ್ಪಡೆಗೊಳಿಸಬೇಕು ಎಂದು ಕೋರುವ ಹಕ್ಕನ್ನು ನೀಡಲಾಗಿದೆ .

* ಕಲಂ ೧೮ ರ ಪ್ರಕಾರ ವೇಶ್ಯಾವಾಟಿಕೆಯನ್ನು ನಡೆಸುತ್ತಿರುವಳೆಂದು ಕಂಡು ಬಂದ ಸ್ತ್ರೀಯೊಬ್ಬಳನ್ನು ಆಕೆಯ ಸ್ಥಾನವನ್ನು ಬದಲಾಯಿಸಿ ಬೇರೆಡೆಗೆ ಕಳುಹಿಸುವ ಅಧಿಕಾರವನ್ನು ನ್ಯಾಯಾಧೀಶರಿಗೆ ನೀಡಲಾಗಿದೆ .

* ಸೆಕ್ಷನ್ ೧೫ ರ ಪ್ರಕಾರ ಈ ಕಾನೂನಿನ ಅಡಿಯಲ್ಲಿ ನೇಮಕವಾದ ಪೋಲೀಸ್ ಅಧಿಕಾರಿಗಳು ಯಾವುದೇ ವಾರಂಟ್ ಇಲ್ಲದೆ ವೇಶ್ಯಾಗೃಹದ ಮೇಲೆ ದಾಳಿ ನಡೆಸಬಹುದು.

* ಸೆಕ್ಷನ್ ೨೧ರ ಪ್ರಕಾರ ಸರಕಾರವು ಮಾನವ ಕಳ್ಳಸಾಗಣೆಗೆ ತುತ್ತಾದ ಪೀಡಿತರಿಗೆ ರಕ್ಷಣಾಗೃಹಗಳನ್ನು ನೇಮಿಸುವುದು.

**೫.೫. ಅನೈತಿಕ ಸಾಗಣೆ (ತಡೆಯುವಿಕೆ) ಕಾಯ್ದೆ ೧೯೫೬ ರ ಸಾಂವಿಧಾನಿಕ ಸಿಂಧುತ್ವ**

ಶಾಮಾ ಬಾಯಿ ವರ್ಸಸ್ ಉತ್ತರಪ್ರದೇಶ ಸರಕಾರದ  ಪ್ರಕರಣದಲ್ಲಿ ಈ ಕಾಯ್ದೆಯ ಸಾಂವಿಧಾನಿಕ ನ್ಯಾಯ ಸಮ್ಮತೆಯನ್ನು ವಿವರವಾಗಿ ಹೇಳಲಾಗಿದೆ.  ಈ ಪ್ರಕರಣವನ್ನು ವಿಚಾರಣೆ ಮಾಡಿದ ನ್ಯಾಯಾಧೀಶರು ಈ ಕಾನೂನಿನ ಸೆಕ್ಷನ್ ೪(೨) ರ ಬಗ್ಗೆ ಅನುಮಾನ ವ್ಯಕ್ತಪಡಿಸಿದ್ದಾರೆ. ಅವರ ಪ್ರಕಾರ ಈ ಕಾಯ್ದೆಯು ಸಂವಿಧಾನವು ನೀಡಿದ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸುತ್ತದೆ. ಮುಂದುವರಿದು ಅವರು ಹೇಳುವುದೇನೆಂದರೆ ಈ ಕಾನೂನಿನ ಸೆಕ್ಷನ್ ೪(೨) ಮತ್ತು ಸೆಕ್ಷನ್ ೨೦ ಅಸಿಂಧುವೆಂದು ಪರಿಗಣಿಸಿದರೂ ಸಹ ಈ ಕಾಯ್ದೆಯು ತನ್ನ ಮಹತ್ವವನ್ನು ಕಳೆದುಕೊಳ್ಳುವುದಿಲ್ಲ. ಈ ಕಾಯಿದೆಯಲ್ಲಿ ಹಲವಾರು ಲೋಪದೋಷಗಳು ಇರುವುದನ್ನು ಗುರುತಿಸಲಾಗಿದೆ. ಮುಖ್ಯವಾಗಿ ಮಾನವ ಕಳ್ಳಸಾಗಾಣಿಕೆ ಮತ್ತು ದಂಧೆಯನ್ನು ತಡೆಯುವ ಬಗ್ಗೆ ಕಾಯಿದೆಯನ್ನು ಸೂಚಿಸಿರುವುದು ತುಂಬಾನೇ ಕಡಿಮೆಯಾಗಿದೆ. ಬಹಳ ಮುಖ್ಯವಾಗಿ ಲೈಂಗಿಕ ಉದ್ದೇಶಕ್ಕಾಗಿ ನಡೆಯುವ ಸಾಗಾಣಿಕೆಯನ್ನು ಮಾತ್ರ ಅಪರಾಧ ಎಂದು ಗುರುತಿಸಿರುವುದು. ಬದಲಾಗಿ ಇನ್ನು ಬೇರೆ ಬೇರೆ ಉದ್ದೇಶಗಳಿಗಾಗಿ

ನಡೆಯುವ ಸಾಗಾಣಿಕೆಯನ್ನು ಇದು ಅಪರಾಧ ಎಂದು ಗುರುತಿಸಿಲ್ಲ. ಇದು ವೇಶ್ಯಾವಾಟಿಕೆಗೆ ಸಂಬಂಧಪಟ್ಟಂತೆ ಮಾತ್ರ ಚರ್ಚಿಸುತ್ತದೆ. ಆದರೆ ಮನೆಗೆಲಸ, ಬಾಲ ದುಡಿಮೆ, ಅಂಗಾಂಗಗಳನ್ನು ಕದಿಯಲು ಇತ್ಯಾದಿ ಉದ್ದೇಶಗಳಿಗಾಗಿ ನಡೆಯುವ ಮಾನವ ಸಾಗಾಣಿಕೆಯನ್ನು ಇದು ಒಳಗೊಂಡಿಲ್ಲವೆಂದೇ ಹೇಳಬಹುದು.

ಸೆಕ್ಷನ್ ೪ ರ ಪ್ರಕಾರ ೧೮ ವರ್ಷ ಮೀರಿದ ಯಾವುದೇ ವ್ಯಕ್ತಿಯು ಜೀವನೋಪಾಯಕ್ಕಾಗಿ ವೇಶ್ಯಾವೃತ್ತಿಯನ್ನು ನೆಡೆಸಲು ಅನುಮತಿ ನೀಡುತ್ತದೆ. ಆದರೆ ಪರೋಕ್ಷವಾಗಿ ಇದು ವೇಶ್ಯಾವೃತ್ತಿಯನ್ನು ಬೆಂಬಲಿಸುವ ಕ್ರಮವಾಗಿದ್ದು, ಇನ್ನು ಅನೇಕರು ವೇಶ್ಯಾವೃತ್ತಿಯನ್ನು ಅವಲಂಬಿಸುವ ಅಪಾಯವಿದೆ. ಇದರ ಜೊತೆಗೆ ವೇಶ್ಯಾವೃತ್ತಿಗೆ ಸಂಬಂಧಿಸಿದಂತೆ ತಲೆಹಿಡುಕರು, ದಲ್ಲಾಳಿಗಳು ಮತ್ತು ಏಜೆಂಟರು ವೇಶ್ಯೆಯರ ಮೇಲೆ ನಿಯಂತ್ರಣ ಅಥವ ಹತೋಟಿ ಸಾಧಿಸುವ ಎಲ್ಲ ಸಾಧ್ಯತೆಗಳಿವೆ. ಹಾಗೆಯೇ ಸೆಕ್ಷನ್ ೫ ರ ಪ್ರಕಾರ  ಈ ವೃತ್ತಿಯನ್ನ ಕೆಲವೊಂದು ಸಾರ್ವಜನಿಕ ಸ್ಥಳಗಳಲ್ಲಿ ನಿಷೇಧಿಸಲಾಗಿದೆ. ಇದೂ ಸಹ ಪರೋಕ್ಷವಾಗಿ ನಿರ್ಜನ ಸ್ಥಳಗಳಲ್ಲಿ ಅಥವ ಕಡಿಮೆ ಜನಸಂದಣಿಯಿರುವ ಪ್ರದೇಶಗಳಲ್ಲಿ ನೆಡೆಸಲು ಉತ್ತೇಜಿಸುತ್ತದೆ ಎಂಬುದನ್ನು ಹೇಳುವ ಅಗತ್ಯವಿಲ್ಲ. ಹಾಗೆಯೇ, ಸೆಕ್ಷನ್ ೬ ರ ಪ್ರಕಾರ ವೇಶ್ಯಾವೃತ್ತಿ ನೆಡೆಯುವ ಸ್ಥಳದಲ್ಲಿ ಕಂಡುಬರುವ ಮಹಿಳೆಯನ್ನು ವಿಚಾರಣೆಗೆ ಒಳಪಡಿಸಬಹುದಾಗಿದೆ.

ಸೆಕ್ಷನ್ ೭ ರಲ್ಲಿ ಹೇಳಿದಂತೆ ಶಾಲಾ ಕಾಲೇಜು, ದೇವಸ್ಥಾನ, ಮಸೀದಿ, ಆಸ್ಪತ್ರೆ, ಹಾಸ್ಟೆಲ್, ನರ್ಸಿಂಗ್ ಹೋಮ್, ಮುಂತಾದ ಸಾರ್ವಜನಿಕ ಸ್ಥಳಗಳಿಂದ ೨೦೦ ಅಡಿ ಅಂತರದಲ್ಲಿ ಯಾವುದೇ ವೇಶ್ಯವಾಟಿಕೆ ಚಟುವಟಿಕೆಗಳು ನೆಡೆಯದಂತೆ ಜಿಲ್ಲಾಧಿಕಾರಿಗಳು ಆದೇಶ ಹೊರಡಿಸುವುದು. ಈ ಕ್ರಮವು ಸಾರ್ವಜನಿಕರ ಹಿತದೃಷ್ಟಿಯಿಂದ ತೆಗೆದುಕೊಂಡ ಕ್ರಮವೆಂದು ಹೇಳಬಹುದು. ಈ ಕ್ರಮದ ಉದ್ದೇಶವೆಂದರೆ, ಶಾಲಾ ಕಾಲೇಜು, ದೇವಸ್ಥಾನ, ಮಸೀದಿ, ಆಸ್ಪತ್ರೆ, ಹಾಸ್ಟೆಲ್, ನರ್ಸಿಂಗ್ ಹೋಮ್, ಮುಂತಾದ ಸಾರ್ವಜನಿಕ ಸ್ಥಳಗಳನ್ನು ಅನ್ಯೆತಿಕ ಚಟುವಟಿಕೆಗಳಿಂದ ಸುರಕ್ಷಿತವಾಗಿ ಇಡುವುದಾಗಿದೆ. ಇದಲ್ಲದೇ, ಈ ಸಾರ್ವಜನಿಕ ಸ್ಥಳಗಳ ಆಸುಪಾಸಿನಲ್ಲಿ ಆಸ್ತಿ, ಮನೆ, ಕಟ್ಟಡ ಮುಂತಾದವುಗಳನ್ನು ಹೊಂದಿರುವ ಖಾಸಗಿ ಮಾಲೀಕರು ಸಹ ಈ ಕಾನೂನನ್ನು ಪಾಲಿಸುವುದು ಕಡ್ಡಾಯವಾಗಿದೆ. ಸೆಕ್ಷನ್ ೮ ರಲ್ಲಿ ಲೈಂಗಿಕ ಚಟುವಟಿಕೆಗೆಗಾಗಿ ಯಾವುದೇ ವ್ಯಕ್ತಿಯನ್ನು ಸಾರ್ವಜನಿಕ ಸ್ಥಳಗಳಲ್ಲಿ ಓಡಾಡುತ್ತಿರುವವರನ್ನು ಸನ್ನೆಯ ಮೂಲಕ, ಮಾತಿನ ಮೂಲಕ, ಅಥವ ದೈಹಿಕ ಅಂಗಗಳ ಪ್ರದರ್ಶನದ ಮೂಲಕ ದಂಧೆಗೆ ಪ್ರೇರೇಪಿಸುವುದು, ಅಕರ್ಷಿಸುವುದು ಮತ್ತು ಹೀಗೆ ಮಾಡುವುದರಿಂದ ಸಾರ್ವಜನಿಕ ಸ್ಥಳಗಳಲ್ಲಿ ಅನ್ಯೆತಿಕ ಪರಿಸರ ಸೃಷ್ಟಿ ಮಾಡುವುದನ್ನು ನಿಷೇಧಿಸಲಾಗಿದೆ. ಈ ಕ್ರಮವೂ ಸಹ ಸಾರ್ವಜನಿಕರ ಹಿತಾಸಕ್ತಿಯಿಂದ ಕೂಡಿರುವ ಉದ್ದೇಶವಾಗಿದೆ.

ಹಾಗೆಯೇ, ಸೆಕ್ಷನ್ ೯ ರ ಪ್ರಕಾರ ಲೈಂಗಿಕ ಚಟುವಟಿಕೆಗಾಗಿ ಪ್ರಚೋದಿಸುವುದು ಅಥವ ಬೆಂಬಲಿಸುವುದು ಮತ್ತು ಸಹಕಾರ ನೀಡುವುದು ಸಹ  ಶಿಕ್ಷಾರ್ಹ ಅಪರಾಧವಾಗಿದೆ. ಸೆಕ್ಷನ್ ೧೨ರ

ಪ್ರಕಾರ ಪದೇ ಪದೇ ಅನೈತಿಕ ಚಟುವಟಿಕೆಗಳನ್ನು ಎಸಗುವ ಮತ್ತು ಪದೆ ಪದೇ ಪೋಲೀಸರ ಕೈಗೆ ಸಿಕ್ಕಿಬೀಳುವ ಆರೋಪಿಯನ್ನು ಮೂರು ವರ್ಷಗಳವರೆಗೆ ಬಂಧಿಸಲು ಮ್ಯಾಜಿಸ್ಟ್ರೇಟ್‌ರವರಿಗೆ ಅಧಿಕಾರ ಪ್ರಾಪ್ತವಾಗಿದೆ.

ರಾಜ್ ಬಹದ್ದೂರ್ ಮತ್ತು ಪಶ್ಚಿಮ ಬಂಗಾಳ ಸರಕಾರದ ಪ್ರಕರಣದಲ್ಲಿ ಬೆಂಗಾಲ್ ಸಪ್ರೆಷನ್ ಆಪ್ ಇಮ್ಮಾರಲ್ ಟ್ರಾಫಿಕ್ ಆಕ್ಟ್ ನ ಸೆಕ್ಷನ್ ೧೩ರ ಸಿಂಧುತ್ವವನ್ನು ಪ್ರಸ್ತುತ ಅನೈತಿಕ ಸಾಗಣೆ ಕಾಯ್ದೆಯ ಸೆಕ್ಷನ್ ೧೫ ರ ಜೊತೆಗೆ ತುಲನೆ ಮಾಡಿ ಪರಿಶೀಲಿಸಿದ ಕಲ್ಕತ್ತ ಹೈಕೋರ್ಟ ಹೇಳಿರುವುದೇನೆಂದರೆ 'ಬೆಂಗಾಲ್ ಸಪ್ರೆಷನ್ ಆಪ್ ಇಮ್ಮಾರಲ್ ಟ್ರಾಫಿಕ್ ಆಕ್ಟ್‌ನ ಸೆಕ್ಷನ್ ೧೩ ರಲ್ಲಿ ಅಪ್ರಾಪ್ತ ವಯಸ್ಸಿನ ಹೆಣ್ಣುಮಗಳನ್ನು ವೇಶ್ಯಾಗೃಹದಿಂದ ಅಥವ ವೇಶ್ಯಾವೃತ್ತಿ ನೆಡೆಯುತ್ತಿರುವ ಪರಿಸರದಿಂದ ಹೊರತರುವುದನ್ನು ಮಾತ್ರ ಅನುಮತಿಸುತ್ತದೆ. ಅದರೆ ಅವಳನ್ನು ಬಂಧಿಸುವ ಅಗತ್ಯವಿಲ್ಲ. ಸಂವಿಧಾನದ ಸೆಕ್ಷನ್ ೨೨ ರ ಪ್ರಕಾರ ಬಂಧನ ಎಂಬ ಪದಕ್ಕೆ ಸೀಮಿತ ಅರ್ಥವಿದೆ ಮತ್ತು ಬೆಂಗಾಲ್ ಸಪ್ರೆಷನ್ ಆಪ್ ಇಮ್ಮಾರಲ್ ಟ್ರಾಫಿಕ್ ಆಕ್ಟ್‌ನ ಸೆಕ್ಷನ್ ೧೩ರಲ್ಲಿ ಬಂಧನದ ಪ್ರಸ್ತಾಪವಿಲ್ಲ. ಆದರೆ ವೇಶ್ಯವಾವೃತ್ತಿಯ ಪರಿಸರದಿಂದ ಅಪ್ರಾಪ್ತ ವಯಸ್ಸಿನ ಹೆಣ್ಣನ್ನು ಹೊರತೆಗೆಯುವುದನ್ನ ಮಾತ್ರ ಪ್ರಸ್ತಾಪಿಸಲಾಗಿದೆ. ಅಪ್ರಾಪ್ತ ವಯಸ್ಸಿನ ಹೆಣ್ಣನ್ನು ಅಂತಹ ಚಟುವಟಿಕೆಗಳಿಂದ ಸುರಕ್ಷಿತವಾಗಿಡುವ ಉದ್ದೇಶ ಈ ಕ್ರಮದಲ್ಲಿದೆ. ಆದರೆ ಸಂವಿಧಾನದ ೨೧ ಮತ್ತು ೨೩ನೇ ಪರಿಚ್ಛೇದಗಳು ಹೆಣ್ಣುಮಕ್ಕಳ ಮತ್ತು ಮಕ್ಕಳ ನಡುವೆ ಯಾವುದೇ ತಾರತಮ್ಯಗಳನ್ನು ಸಹಿಸುವುದಿಲ್ಲವಾದ್ದರಿಂದ, ಅಪ್ರಾಪ್ತ ವಯಸ್ಸಿನ ಹೆಣ್ಣುಮಗುವನ್ನು ವೇಶಾವಾಟಿಕೆ ಮತ್ತು ಅನೈತಿಕ ಚಟುವಟಿಕೆಗಳಿಂದ ಉಂಟಾಗುವ ಶೋಷಣೆ ಮತ್ತು ಹಿಂಸೆಯಿಂದ ರಕ್ಷಿಸಲು ಬಂಧನ ಮಾಡುವುದು ಕಾನೂನಾತ್ಮಕವಾಗಿ ಸರಿಯಾದ ಕ್ರಮವಾಗಿದೆ.

ಅಜೈಬ್ ಸಿಂಗ್ ಮತ್ತು ಪಂಜಾಬ್ ಸರಕಾರದ ಪ್ರಕರಣದಲ್ಲಿ ಅಪಹರಿತ ವ್ಯಕ್ತಿಗಳ ಕಾಯ್ದೆ ೧೯೪೯ ಅಡಿಯಲ್ಲಿ ಸುಪ್ರಿಂ ಕೋರ್ಟನ ಆದೇಶವನ್ನು ಪರಾಮರ್ಶಿಸಿದ ಕಲ್ಕತ್ತ ಹೈಕೋರ್ಟ ಹೇಳಿರುವುದೇನೆಂದರೆ ಅಪಹರಿತ ವ್ಯಕ್ತಿಗೆ ದೈಹಿಕ ನಿರ್ಬಂಧನೆ ಹಾಕುವುದು ಈ ಕಾಯ್ದೆಯ ಸೆಕ್ಷನ್ ೪ ಪ್ರಕಾರ ಸಿಂದುವಾಗಿದೆ ಮತ್ತು ಈ ದೈಹಿಕ ನಿರ್ಬಂಧನೆ ಸಂವಿಧಾನದ ೨೨ (೧) ಮತ್ತು ೨೨ (೨) ರ ರೀತ್ಯ ಬಂಧನ ಎನಿಸಿಕೊಳ್ಳುವುದಿಲ್ಲ. ಹೀಗಾಗಿ ಅನೈತಿಕ ಸಾಗಣೆ ಕಾಯ್ದೆ ೧೯೫೬ ಸಂವಿಧಾನಿಕವಾಗಿ ಸಿಂಧುವಾಗಿರುವ ಕಾಯ್ದೆಯಾಗಿದೆ ಮತ್ತು ಸಂವಿಧಾನದ ಮೂಲಕ ಪ್ರಾಪ್ತವಾದ ಮೂಲಭೂತ ಹಕ್ಕುಗಳ ಉಲ್ಲಂಘನೆಯಾಗಿಲ್ಲ ಎಂದು ಹೇಳಬಹುದು.

### ೫.೬ ಅನೈತಿಕ ಸಾಗಣೆ ಕಾಯ್ದೆ ೧೯೫೬ ರ ವಿಮರ್ಶೆ

ಮಾನವ ಕಳ್ಳಸಾಗಣೆ ಕುರಿತಂತೆ ಅನೈತಿಕ ಸಾಗಣೆ ಕಾಯ್ದೆ ೧೯೫೬ ರ ಕ್ರಮಗಳು ಪರಿಣಾಮಕಾರಿಯಾಗಿ ಇಲ್ಲವೆಂಬ ಆಕ್ಷೇಪಣೆಗಳು ಮತ್ತು ಟೀಕೆಗಳು ಕೇಳಿಬಂದಿವೆ. ಇದರ ಸಂಕ್ಷಿಪ

ವಿವರಣೆ ಈ ಕೆಳಕಂಡಂತಿದೆ. ಈ ಕಾಯ್ದೆಯ ಸೆಕ್ಷನ್ ೨ ರ ಪ್ರಕಾರ ವೇಶ್ಯಾಗೃಹವೆಂದರೆ ಮನೆ, ರೂಮು, ಕಟ್ಟಡದ ಒಂದು ಭಾಗವನ್ನು ಲೈಂಗಿಕ ದಂಧೆಗಾಗಿ ಮತ್ತು ಆ ಮೂಲಕ ಹಣ ಗಳಿಸುವ, ಲಾಭಗಳಿಸುವ ಉದ್ದೇಶವಿರುವ ಹಾಗೂ ಈ ಕೃತ್ಯದಲ್ಲಿ ಒಂದಕ್ಕಿಂತ ಹೆಚ್ಚು ವೇಶ್ಯೆಯರ ಸಹಕಾರ ಮತ್ತು ಸಮ್ಮತಿ ಇರುವುವದನ್ನು ವೇಶ್ಯಾಗೃಹ ಎನ್ನಲಾಗಿದೆ. ಸುಶೀಲ ಮತ್ತು ತಮಿಳುನಾಡು ಸರಕಾರದ ಪ್ರಕರಣದಲ್ಲಿ ಆದೇಶ ಹೊರಡಿಸಿರುವ ನ್ಯಾಯಾಲಯವು 'ಕೇವಲ ಒಂದು ಬಾರಿ ವೇಶ್ಯಾವೃತ್ತಿ ನೆಡೆಯುತ್ತಿದೆ ಎಂದು ಕಂಡುಬಂದ ತಕ್ಷಣ ಲೈಂಗಿಕ ಚಟುವಟಿಕೆ ನೆಡೆಯುತ್ತಿದ್ದ ಆ ಸ್ಥಳ ಸೂಳೆಗೇರಿಯಾಗುವುದಿಲ್ಲ'. ಮತ್ತೊಂದು ಮಹತ್ವದ ಪ್ರಕರಣದಲ್ಲಿ ತೀರ್ಪು ನೀಡಿದ ನ್ಯಾಯಾಲವು 'ಒಂದು ಸ್ಥಳ ಅಥವ ಪ್ರದೇಶವನ್ನು ಸೂಳೆಗೇರಿ ಎಂದು ಕರೆಯಬೇಕೆಂದರೆ ಆ ನಿರ್ದಿಷ್ಟ ಸ್ಥಳದಲ್ಲಿ ಒಬ್ಬ ವೇಶ್ಯೆಯು ಆದಾಯ ಮತ್ತೊಬ್ಬನ ಗಳಿಕೆಯಾಗಬೇಕು'. ಹೀಗಾಗಿ ಸೂಳೆಗೇರಿಯು ಕೇವಲ ಒಬ್ಬ ವ್ಯಕ್ತಿಗೆ ಮಾತ್ರವಲ್ಲದೆ ಇಬ್ಬರು ವ್ಯಕ್ತಿಗಳ ಪರಸ್ಪರ ಸಹಕಾರದಿಂದ ಹಣ ಗಳಿಸುವ ಮೂಲವಾಗಿರಬೇಕು ಮತ್ತು ಸ್ವಇಚ್ಛೆಯಿಂದ  ವೇಶ್ಯಾವೃತ್ತಿಯಲ್ಲಿ ತೊಡಗಿರುವವರು ಯಾವುದೇ ಅಡ್ಡಿ ಆಂತಂಗಳಿಲ್ಲದೆ ತಮ್ಮ ಆದಾಯಗಳಿಸುವ ಕ್ರಮವಾಗಿರಬೇಕು.

ಅನೈತಿಕ ಸಾಗಣೆ ಕಾಯ್ದೆಯು ಬಾಲ ವೇಶ್ಯೆಯರ ಸಮಸ್ಯೆಗಳನ್ನು ವಿಸ್ತುತವಾಗಿ ಪರಿಹರಿಸುವುದಿಲ್ಲ. ಹಾಗೆ ನೋಡಿದರೆ ಈ ಕಾಯ್ದೆಯಲ್ಲಿ ಬಾಲ ವೇಶ್ಯೆಯರ ಬಗ್ಗೆ ಯಾವುದೇ ಪ್ರತಿಬಂಧಕಗಳನ್ನು ಪ್ರಸ್ತಾಪಿಸುವುದಿಲ್ಲ. ವಿಶೇಷವಾಗಿ ವೇಶ್ಯಾವೃತ್ತಿಯಿಂದ ರಕ್ಷಣೆ ಮಾಡಲಾದ ಮಕ್ಕಳ ಆರೈಕೆ ಕುರಿತು ಹೇಳುವುದಿಲ್ಲ. ಸೆಕ್ಷನ್ ೬ ರ ಪ್ರಕಾರ ಯಾವುದಾದರು ವ್ಯಕ್ತಿಯು ಒಂದು ಅಪ್ರಾಪ್ತ ಮಗುವಿನ ಜೊತೆ ಲೈಂಗಿಕ ಚಟುವಟಿಕೆ ಮಾಡುವಾಗ ಸಿಕ್ಕಿಬಿದ್ದರೆ ಮಾತ್ರ ಅವನನ್ನು ಅರೋಪಿಯೆಂದು ಪರಿಗಣಿಸಲಾಗುತ್ತದೆ.

ಅನೈತಿಕ ಸಾಗಣೆ ಕಾಯ್ದೆಯು ಮಾನವ ಕಳ್ಳ ಸಾಗಣೆಯನ್ನು ಕುರಿತು ಶಾಸನಾತ್ಮಕ ಕ್ರಮಗಳನ್ನು ಪ್ರಸ್ತಾಪಿಸುತ್ತದೆಯೇ ಹೊರತು ಮಾನವ ಕಳ್ಳಸಾಗಣೆಯನ್ನು ವ್ಯಾಖ್ಯಾನಿಸುವುದಿಲ್ಲ. ಅನೈತಿಕ ಸಾಗಣೆ ಕಾಯ್ದೆ ೨೦೦೬ ರ ತಿದ್ದುಪಡಿಯು ಸಹ ಮಾನವ ಕಳ್ಳ ಸಾಗಣೆ ಮಾಡುವ ವ್ಯಕ್ತಿ ಅಥವ ವ್ಯಕ್ತಿಗಳನ್ನು ದಂಡಿಸುವ, ಶಿಕ್ಷಿಸುವ ಅಥವ ದಮನಿಸುವ ಕುರಿತು ಪ್ರಸ್ತಾಪಿಸುವುದಿಲ್ಲ. ಅಲ್ಲದೆ, ಮಹಿಳೆಯರು ಮತ್ತು ಮಕ್ಕಳನ್ನು ಅಕ್ರಮವಾಗಿ ಸಾಗಣೆ ಮಾಡುವ ಆರೋಪಿಗಳನ್ನು ಕುರಿತು ಯಾವುದೇ ಪ್ರತಿಬಂದಕಗಳನ್ನು ಪ್ರಸ್ತಾಪಿಸಿಲ್ಲ. ಮುಂದುವರೆದು, ಈ ಕಾಯ್ದೆಯು ಮಾನವ ಕಳ್ಳ ಸಾಗಣೆಯನ್ನು ಕೇವಲ ಲೈಂಗಿಕ ಶೋಷಣೆಗಾಗಿ ಮಾತ್ರ ಮಾಡುವ ದಂಧೆಯಾಗಿದೆ ಎಂದು ಹೇಳುತ್ತದೆ ವಿನಃ ಮಾನವ ಅಂಗಾಂಗಗಳ ಅಕ್ರಮ ಕಸಿ, ಬಲವಂತದ ಜೀತ, ಭಿಕ್ಷಾಟನೆ, ಮುಂತಾದವುಗಳನ್ನು ಪ್ರಸ್ತಾಪಿಸುವುದಿಲ್ಲ.

ಈ ಕಾಯ್ದೆಯ ಸೆಕ್ಷನ್ ೧೦೭ ಸಾರ್ವಜನಿಕ ಸ್ಥಳಗಳಲ್ಲಿ ನೆಡೆಯುವ ವೇಶ್ಯಾವಾಟಿಕೆ ದಂಧೆಯನ್ನು ಅಪರಾಧವೆಂದು ಪರಿಗಣಿಸಿದೆ ಮತ್ತು ಈ ಕೃತ್ಯಕ್ಕೆ ಹೆಚ್ಚಿನ ದಂಡ ವಿಧಿಸುತ್ತದೆ. ೧೮

ವರ್ಷಕ್ಕಿಂತಲು ಕಡಿಮೆ ವಯಸ್ಸಿನ ಮಕ್ಕಳ ಮೇಲೆ ಲೈಂಗಿಕ ದೌರ್ಜನ್ಯ ನಡೆಸುವವರಿಗೆ ಈ ಕಾಯ್ದೆಯ ತಿದ್ದುಪಡಿಯು ದಂಡದ ಮೊತ್ತವನ್ನು ಹೆಚ್ಚಿಸಿದೆ. ಈ ಕ್ರಮವು ಸ್ವಾಗತಾರ್ಹವಾಗಿದ್ದರು ಲೈಂಗಿಕ ದಂಧೆಗೆ ಬಳಸಲಾದ ಮಕ್ಕಳಿಗೆ ಯಾವುದೇ ರಕ್ಷಣೆ ಒದಗಿಸುವುದಿಲ್ಲ.

ವೇಶ್ಯಾವೃತ್ತಿಯನ್ನು ಬೆಂಬಿಲಿಸುವುದನ್ನು ಸಹ ಅನೈತಿಕ ಸಾಗಣೆ ಕಾಯ್ದೆಯು ಅಪರಾಧವೆಂದು ಪರಿಗಣಿಸುತ್ತದೆ. ಈ ಕಾಯ್ದೆಯಡಿಯಲ್ಲಿ ದೈಹಿಕ ಸುಖಕ್ಕಾಗಿ ಗ್ರಾಹಕರನ್ನು ಸೆಳೆಯುವ ಮಹಿಳೆಯರನ್ನು ಮತ್ತು ವೇಶ್ಯೆಯರನ್ನು ಪೋಲೀಸರು ಬಂದಿಸುತ್ತಾರೆ ಆದರೆ ಇದನ್ನು ಪ್ರಚೋದಿಸುವ, ಬೆಂಬಲಿಸುವ ಮತ್ತು ಇದರಿಂದ ಉಪಯೋಗ ಪಡೆಯುವ ದಲ್ಲಾಳಿಗಳನ್ನು ಬಹುತೇಕ ಪ್ರಕರಣಗಳಲ್ಲಿ ಬಂಧಿಸುವುದಿಲ್ಲ. ವೇಶ್ಯಾವಾಟಿಕೆಯಲ್ಲಿ ತೊಡಗಿದ ಹೆಣ್ಣು ಮಕ್ಕಳು ದಲ್ಲಾಳಿಗಳನ್ನು ಗುರುತಿಸಿ ಅವರ ವಿರುದ್ಧ ಸಾಕ್ಷ್ಯ ನೀಡಿದರೆ ಮಾತ್ರ ಅವರನ್ನು ಬಂಧಿಸುವ ಅವಕಾಶವಿದೆ. ವಾಸ್ತವದಲ್ಲಿ, ವೇಶ್ಯಾವೃತ್ತಿಯಲ್ಲಿರುವ ಮಹಿಳೆಯರಿಗೆ ದಲ್ಲಾಳಿಗಳು ಆದಾಯದ ಮೂಲವಾಗಿರುವುದರಿಂದ ಅನೇಕರು ಇವರ ವಿರುದ್ಧ ಸಾಕ್ಷ್ಯ ಹೇಳುವುದಿಲ್ಲ. ಹೀಗಾಗಿ ಈ ಕಾಯ್ದೆಯ ತಿದ್ದುಪಡಿಗಳು ಈ ಸಮಸ್ಯೆಯನ್ನು ಪರಿಹರಿಸುವುದಿಲ್ಲ.

ಸೆಕ್ಷನ್ ೧೦ ರ ಪ್ರತಿಬಂಧಕದ ಪ್ರಕಾರ ಸೆಕ್ಷನ್ ೭ ಮತ್ತು ೮ ರ ಅಡಿಯಲ್ಲಿ ಬಂಧಿಸಲ್ಪಟ್ಟ ಮಹಿಳೆಯನ್ನು ಕನಿಷ್ಠ ಎರಡರಿಂದ ಐದು ವರ್ಷಗಳ ತನಕ ಪುನರ್ವಸತಿ ಅಥವ ರಕ್ಷಣಾ ಕೇಂದ್ರದ ಆಶ್ರಯದಲ್ಲಿಡಬೇಕು. ಹೀಗೆ ರಕ್ಷಣಾ ಕೇಂದ್ರದಲ್ಲಿ ಇರಿಸಲ್ಪಟ್ಟ ಮಹಿಳೆಯರು ವೇಶ್ಯಾವೃತ್ತಿಯನ್ನು ಮತ್ತಷ್ಟು ಅಪರಾಧೀಕರಣಗೊಳಿಸುತ್ತಾರೆ.

ಒಟ್ಟಾರೆಯಾಗಿ ಮಹಿಳೆಯರ ಮತ್ತು ಮಕ್ಕಳ ಸಾಗಾಣೆಯು ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿದ್ದು ಇದು ಆತಂಕಕಾರಿಯಾದ ಬೆಳವಣಿಗೆಯಾಗಿರುತ್ತದೆ. ಈ ಪಿಡುಗನ್ನು ಸ್ಥಳೀಯ ಮಟ್ಟದಲ್ಲಿ ತಡೆಯುವುದು ಅನಿವಾರ್ಯವಾಗಿರುತ್ತದೆ. ಮಾನವ ಸಾಗಾಣಿಕೆಯನ್ನು ತಡೆಗಟ್ಟಲು ಮತ್ತು ಸಾಗಣೆಗೆ ಒಳಪಟ್ಟ ಮಹಿಳೆಯರ ಮತ್ತು ಮಕ್ಕಳ ಪುನರ್‌ವಸತಿ ಮಾಡುವುದು ನಾಗರೀಕ ಸಮಾಜದ ಪ್ರತಿಯೊಬ್ಬರ ಕರ್ತವ್ಯವಾಗಿರುತ್ತದೆ. ಈ ವ್ಯವಸ್ಥಿತ ಪಿಡುಗನ್ನು ನಿಯಂತ್ರಿಸಲು ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಮಟ್ಟದಲ್ಲಿ ಜಾಗೃತಿಯನ್ನು ಮೂಡಿಸುವುದು ಅಗತ್ಯವಾಗಿದೆ.

**೫.೭ ಒಡಂಬಡಿಕೆಗಳು**

ಮಕ್ಕಳು ಮತ್ತು ಮಹಿಳೆಯರಿಗೆ ಸಂಬಂಧಿಸಿದಂತೆ ಅನೇಕ ಬಗೆಯ ಆಡಳಿತಾತ್ಮಕ ಚರ್ಚೆಗಳು ಎರಡನೆಯ ಮಹಾಯುದ್ಧದ ನಂತರ ಹೆಚ್ಚು ನಡೆಯಲು ಪ್ರಾರಂಭಿಸಿ ೧೯೪೪ರಲ್ಲಿ ನಡೆದ ಬ್ರಿಟನ್ ವುಡ್ ಸಮಾವೇಶವು ಮೊದಲನೆಯ ಮತ್ತು ಎರಡನೆಯ ಮಹಾಯುದ್ಧದಲ್ಲಿ ನಡೆದ ಮಾನವ ಹಾನಿಯನ್ನು ವಿಶ್ಲೇಷಣೆಗೆ ಒಳಪಡಿಸಿರುತ್ತದೆ. ಆ ಮೂಲಕ ಪ್ರಾಪಂಚಿಕವಾಗಿ ಅಭಿವೃದ್ಧಿ ಮತ್ತು ಮಾನವ ರಕ್ಷಣೆ ಕುರಿತು ಚರ್ಚೆಗಳು ಪ್ರಾರಂಭವಾಗುತ್ತವೆ. ೧೯೪೮ ಡಿಸೆಂಬರ್‌ನಲ್ಲಿ ನಡೆದ ಸಮಾವೇಶದಲ್ಲಿ ಮಾನವ ಹಕ್ಕುಗಳ ಒಡಂಬಡಿಕೆಗಳಿಗೆ ಬಹುತೇಕ ಎಲ್ಲ ರಾಷ್ಟ್ರಗಳು ಸಹಿ

ಹಾಕುತ್ತವೆ. ಆ ಮೂಲಕ ಮಕ್ಕಳು ಮತ್ತು ಮಹಿಳೆಯರ ರಕ್ಷಣೆ ಕುರಿತಂತೆ ಹೊಸ ಆಯಾಮ ಗರಿಗಟ್ಟಲು ಪ್ರಾರಂಭಿಸುತ್ತದೆ. ಅದರಲ್ಲಿ ಮಹಿಳೆಯರು ಮತ್ತು ಮಕ್ಕಳನ್ನು ಅನೈತಿಕ ವ್ಯವಹಾರಗಳಿಗೆ ಸಾಗಾಣಿಕೆ ಮಾಡುವ ಮತ್ತು ಅವರ ಮೇಲಿನ ಶೋಷಣೆಯನ್ನು ತಪ್ಪಿಸುದಕ್ಕಾಗಿ ನಡೆದ ಕೆಲವು ಒಡಂಬಡಿಕೆಗಳನ್ನು ಇಲ್ಲಿ ವಿವರಿಸಲಾಗಿದೆ.

ಮಹಿಳೆ ಮತ್ತು ಮಕ್ಕಳನ್ನು (ಬಾಲಕಿಯರ) ಅನೈತಿಕ ವ್ಯವಹಾರಕ್ಕಾಗಿ ಸಾಗಾಣಿಕೆ ಮಾಡುವುದನ್ನು ದಮನ ಮಾಡುವುದಕ್ಕಾಗಿ ನ್ಯೂಯಾರ್ಕ್ ನಗರದಲ್ಲಿ ಅಂತಾರಾಷ್ಟ್ರೀಯ ಸಮಾವೇಶವು ನಡೆಯಿತು. ಆ ಸಮಾವೇಶದ ಒಡಂಬಡಿಕೆಗೆ ಭಾರತವು ೧೯೫೦ರ ಮೇ ೯ರಂದು ಸಹಿ ಹಾಕಿತು. ಇದರ ಪರಿಣಾಮವಾಗಿಯೇ ಭಾರತವು ೧೯೫೬ರಲ್ಲಿ ಮಹಿಳೆ ಮತ್ತು ಮಕ್ಕಳ (ಬಾಲೆ)ನ್ನು ಅನೈತಿಕ ಸಾಗಾಣಿಕೆ ದಮನ ಕಾಯಿದೆ (ಎಸ್.ಆಯ್.ಟಿ.ಎ.)ಯನ್ನು ಜಾರಿಗೊಳಿಸಿತು (ಎಸ್.ಆರ್.ಮೈನೇನಿ, ೨೦೦೨).

ವಿಶ್ವಸಂಸ್ಥೆಯ ಸಾಮಾನ್ಯ ಸಭೆಯು ಮಹಿಳೆಯರ ವಿರುದ್ಧ ಎಲ್ಲಾ ರೀತಿಯ ತಾರತಮ್ಯಗಳನ್ನು ತೊಡೆದು ಹಾಕುವುದಕ್ಕಾಗಿ ೧೯೭೯ರಲ್ಲಿ ಅಂತಾರಾಷ್ಟ್ರೀಯ ಒಡಂಬಡಿಕೆಯನ್ನು ಅಂಗೀಕರಿಸಿತು. ಭಾರತವು ೧೯೮೦ರಲ್ಲಿ ಇದಕ್ಕೆ ಒಪ್ಪಿಗೆ ಸೂಚಿಸಿ ಸಹಿ ಹಾಕಿ ೯.೭.೧೯೯೩ರಲ್ಲಿ ಈ ಒಡಂಬಡಿಕೆಯ ಆಶಯಗಳ ಜಾರಿಗೆ ಅನುಮೋದನೆ ನೀಡಿದೆ. ಈ ಒಡಂಬಡಿಕೆಯು ಮಹಿಳೆಯರ ಹಕ್ಕುಗಳ ಮಸೂದೆಯಾಗಿದ್ದು, ಮಹಿಳೆಯು ಪುರುಷರಂತೆ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ನಾಗರಿಕ ಮತ್ತು ರಾಜಕೀಯ ಕ್ಷೇತ್ರಗಳ ಸಮಾನತೆ ಸಾಧಿಸುವುದನ್ನು ಈ ಒಡಂಬಡಿಕೆಯು ಉತ್ತೇಜಿಸುತ್ತದೆ.

ಮಕ್ಕಳು ತಮ್ಮ ಬಾಲ್ಯದ ೧೮ ವರ್ಷಗಳನ್ನು ಯಾವುದೇ ಒತ್ತಡ, ಶೋಷಣೆಗಳಿಲ್ಲದೆ ಅರ್ಥಪೂರ್ಣವಾಗಿ ಬದುಕಬೇಕೆಂಬ ಉದ್ದೇಶದಿಂದ ೧೯೮೯ರಲ್ಲಿ ವಿಶ್ವಸಂಸ್ಥೆಯು ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ತನ್ನ ಸಾಮಾನ್ಯ ಸಭೆಯಲ್ಲಿ ಮಂಡಿಸಿತು. ಆ ಪ್ರಕಾರ ಎಲ್ಲ ರಾಷ್ಟ್ರಗಳು ಒಪ್ಪಿಕೊಂಡಿವೆ. ಭಾರತವೂ ಸಹ ಈ ಒಡಂಬಡಿಕೆಗೆ ಒಪ್ಪಿಕೊಂಡು ಡಿಸೆಂಬರ್ ೧೧, ೧೯೯೨ರಲ್ಲಿ ಸಹಿ ಹಾಕಿದೆ. ಈ ಒಡಂಬಡಿಕೆಯಲ್ಲಿ ಪ್ರಮುಖವಾಗಿ ಬದುಕುವ ಹಕ್ಕು, ರಕ್ಷಣೆಯ ಹಕ್ಕು, ಅಭಿವೃದ್ಧಿ ಹೊಂದುವ ಹಕ್ಕು ಮತ್ತು ಭಾಗವಹಿಸುವ ಹಕ್ಕು ಎಂಬ ನಾಲ್ಕು ಹಕ್ಕುಗಳಿಗೆ ಮಕ್ಕಳ ಹಕ್ಕುಗಳ ಈ ಒಡಂಬಡಿಕೆಯನ್ನು ೫೪ ಪರಿಚ್ಛೇದಗಳು ಮತ್ತು ೧೦ ಭಾಗಗಳಲ್ಲಿ ವಿಂಗಡಿಸಲಾಗಿದೆ. ಈ ಒಡಂಬಡಿಕೆಗೆ ಒಪ್ಪಿಕೊಂಡು ಸಹಿ ಹಾಕಿದ ಭಾರತವು ಒಡಂಬಡಿಕೆಯಲ್ಲಿ ತಿಳಿಸಿದ ಎಲ್ಲ ವಿಷಯಗಳನ್ನು ಅಳವಡಿಸಿಕೊಂಡು, ಈಗಾಗಲೇ ಅಸ್ತಿತ್ವದಲ್ಲಿದ್ದ ಬಾಲನ್ಯಾಯ ಕಾಯಿದೆ ೧೯೮೬ ಇದನ್ನು ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ ೨೦೦೦ ಎಂದು ತಿದ್ದುಪಡಿ ತರುತ್ತದೆ.

## ೪.೮ ಕಾರ್ಯಕ್ರಮಗಳು ಮತ್ತು ಯೋಜನೆಗಳು

ಮಕ್ಕಳ ಲೈಂಗಿಕ ಶೋಷಣೆ ಮತ್ತು ಲೈಂಗಿಕ ಜೀತವನ್ನು ನಿರ್ಬಂಧಿಸಿ, ಮಕ್ಕಳನ್ನು ರಕ್ಷಿಸಿ, ಪುನರ್ವಸತಿಗೊಳಿಸಲು ಮತ್ತು ಪುನರ್ನೆಲೆಗೊಳಿಸುವ ಆಶಯದಿಂದ ಸರ್ಕಾರಗಳು ಅನೇಕ ಕಾರ್ಯಕ್ರಮಗಳು ಮತ್ತು ಯೋಜನೆಗಳನ್ನು ರೂಪಿಸಿವೆ.

ಮಹಿಳೆ ಮತ್ತು ಮಕ್ಕಳನ್ನು ಸಾಗಾಣಿಕೆ ಹಾಗೂ ಲೈಂಗಿಕ ದಂದೆಗೆ ಬಲಿಯಾಗದಂತೆ ತಡೆಯಲು, ಬಲಿಯಾದವರನ್ನು ರಕ್ಷಿಸಲು, ಪುನರ್ವಸತಿಗೊಳಿಸಲು ಮತ್ತು ಪುನರ್ನೆಲೆಗೊಳಿಸಲು ಬಹು ಆಯಾಮದ ಪ್ರಯತ್ನವು (ಮಲ್ಟಿ-ಸೆಕ್ಟರಲ್ ಅಪ್ರೋಚ್) ಬೇಕೆಂದು ಯೋಜನಾಕಾರರು ಒಪ್ಪಿಕೊಳ್ಳುತ್ತಾರೆ. ಬಹುತೇಕ ಮಹಿಳೆಯರು ಮತ್ತು ಮಕ್ಕಳು ಅಭಿವೃದ್ಧಿಯ ದುಸ್ಥಿತಿಯಿಂದಾಗಿಯೇ ಲೈಂಗಿಕ ಶೋಷಣೆ ಮತ್ತು ಜೀತದ ಸ್ಥಿತಿಗೆ ಒಳಗಾಗುತ್ತಾರೆಂದು ಬಹಳಷ್ಟು ಅಧ್ಯಯನಗಳು ಹೇಳುತ್ತವೆ. ಹಾಗಾಗಿ ಸರ್ಕಾರಗಳು ಬಡತನ ರೇಖೆಗಿಂತ ಕೆಳಮಟ್ಟದಲ್ಲಿ ಜೀವಿಸುತ್ತಿರುವ ಗ್ರಾಮೀಣ ಪ್ರದೇಶಗಳ ಮತ್ತು ನಗರ ಪ್ರದೇಶಗಳ ಕೊಳಚೆ ಪ್ರದೇಶಗಳ ಜನರ ಬಡತನವನ್ನು ನಿರ್ಮೂಲನಗೊಳಿಸುವುದಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತಂದಿದೆ.

ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಗಳ ಸಹಯೋಗದಲ್ಲಿ ಸ್ವರ್ಣ ಜಯಂತಿ ಗ್ರಾಮೀಣ ಮತ್ತು ಶಹರಿ ರೋಜಗಾರ ಯೋಜನೆ, ಉದ್ಯೋಗ ಖಾತರಿ ಯೋಜನೆ, ಆಹಾರಕ್ಕಾಗಿ ಕೆಲಸ, ಸ್ವಯಂ ಉದ್ಯೋಗ ತರಬೇತಿ ಮತ್ತು ಕಿರುಸಾಲ ಯೋಜನೆಗಳು ಜಾರಿಯಲ್ಲಿವೆ. ಆಹಾರ ಮತ್ತು ನಾಗರಿಕ ಪೂರೈಕೆಗಳ ಮಂತ್ರಾಲಯವು ಬಡತನ ರೇಖೆಗಿಂತ ಕೆಳಗಿರುವ ಜನರಿಗೆ ಅನುಕೂಲವಾಗುವ ದರದಲ್ಲಿ ಆಹಾರ ಧಾನ್ಯಗಳನ್ನು ದೇಶದಾದ್ಯಂತ ಪೂರೈಸಲು ಪ್ರಯತ್ನ ಮಾಡುತ್ತಿದೆ.

ಬಾಲ ಕಾರ್ಮಿಕ, ಬಾಲ್ಯ ವಿವಾಹ, ಲೈಂಗಿಕ ಶೋಷಣೆ, ಲೈಂಗಿಕ ಜೀತದಂತಹ ವಿಷಮ ಪರಿಸ್ಥಿತಿಗಳಿಂದ ಮಕ್ಕಳನ್ನು (ಗಂಡು ಮತ್ತು ಹೆಣ್ಣು) ಕಾಪಾಡಿಕೊಳ್ಳುವುದಕ್ಕಾಗಿ ಸಮಗ್ರ ಶಿಶು ಅಭಿವೃದ್ಧಿ ಯೋಜನೆ (ಐಸಿಡಿಎಸ್)ಯು ಜಾರಿಯಲ್ಲಿದೆ. ಈ ಮೂಲಕ ದೇಶದ ೦-೬ ವಯೋಮಾನದ ಎಲ್ಲ ಮಕ್ಕಳಿಗೂ ಪೌಷ್ಟಿಕ ಆಹಾರ, ಚುಚ್ಚು ಮದ್ದು ಮತ್ತು ಶಾಲಾ ಪೂರ್ವ ಚಟುವಟಿಕೆಗಳು ನಡೆಯುತ್ತಿವೆ.

೧೪ ವರ್ಷದ ಎಲ್ಲ ಮಕ್ಕಳಿಗೂ ಕಡ್ಡಾಯವಾದ ಶಿಕ್ಷಣವನ್ನು ಒದಗಿಸಲು ಸರ್ಕಾರವು ಬದ್ಧವಾಗಿದ್ದು, ಸರ್ವ ಶಿಕ್ಷಣ ಅಭಿಯಾನದ ಮೂಲಕ ಈ ಉದ್ದೇಶವನ್ನು ಅನುಷ್ಠಾನಗೊಳಿಸುತ್ತಿದೆ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಮೂಲಕ ವಿಶೇಷವಾಗಿ ಹೆಣ್ಣುಮಕ್ಕಳಿಗಾಗಿ ಬಾಲಿಕಾ ಸಮೃದ್ಧಿ ಯೋಜನೆ ಮತ್ತು ಕಿಶೋರಿ ಶಕ್ತಿ ಯೋಜನೆಯು ಜಾರಿಯಲ್ಲಿದ್ದು, ಇದರಿಂದ ಹೆಣ್ಣುಮಕ್ಕಳ ಬದುಕುಳಿಯುವಿಕೆ, ಶಿಕ್ಷಣ ಮತ್ತು ಸಶಕ್ತೀಕರಣಕ್ಕೆ ಸಹಾಯವಾಗಿದೆ.

**ಸ್ವಧಾರ** : ಈ ಯೋಜನೆಯ ಅಡಿಯಲ್ಲಿ ರಕ್ಷಿತಗೊಂಡ ಸಂತ್ರಸ್ಥರಿಗೆ ಆಶ್ರಯ, ಸಮಾಲೋಚನೆ, ವೈದ್ಯಕೀಯ ಸಹಾಯ ಮತ್ತು ವೃತ್ತಿ ತರಬೇತಿಗಳನ್ನು ನೀಡಲಾಗುತ್ತಿದೆ. ಸಂತ್ರಸ್ಥರ ಪುನರ್ವಸತಿ ಮತ್ತು ಪುನರ್ನೆಲೆಗಾಗಿ ಸಮಗ್ರವಾದ ಪೋಷಣೆಯನ್ನು ಒದಗಿಸುವಂತಹ ಯೋಜನೆಗಳನ್ನು ಎಲ್ಲ ಜಿಲ್ಲೆಗಳಲ್ಲಿಯೂ ಪ್ರಾರಂಭಿಸಲಾಗಿದೆ. ಇದಕ್ಕಾಗಿ ಸರ್ಕಾರೇತರ ಸಂಸ್ಥೆಗಳಿಗೆ ಅನುದಾನವನ್ನು ನೀಡಲಾಗುತ್ತಿದ್ದು, ಇವು ಮಹಿಳೆ ಮತ್ತು ಮಕ್ಕಳನ್ನು ಅನೈತಿಕ ವ್ಯವಹಾರಗಳಿಗೆ ಸಾಗಾಣಿಕೆಯಾಗುವುದನ್ನು ತಡೆಗಟ್ಟುವಲ್ಲಿ ಮತ್ತು ಬಲಿಯಾದವರನ್ನು ರಕ್ಷಿಸಿ ಪುನರ್ವಸತಿಗೊಳಿಸುವಲ್ಲಿ ಕಾರ್ಯನಿರ್ವಹಿಸುತ್ತಿವೆ.

**ಉಜ್ವಲಾ** : ಹೆಣ್ಣುಮಕ್ಕಳ ಮತ್ತು ಮಹಿಳೆಯರು ಸಾಗಾಣಿಕೆಗೆ ಒಳಗಾಗದಂತೆ ತಡೆಗಟ್ಟುವುದು ಈ ಯೋಜನೆಯ ಆಶಯವಾಗಿದೆ. ಲೈಂಗಿಕ ದೌರ್ಜನ್ಯಕ್ಕೆ ಒಳಪಟ್ಟವರನ್ನು ರಕ್ಷಿಸಿ ಪುನರ್ವಸತಿ ಮತ್ತು ಪುನರ್ನೆಲೆಗೊಳಿಸುವ ದಿಕ್ಕಿನಲ್ಲಿ ಈ ಕಾರ್ಯಕ್ರಮ ಜಾರಿಗೆ ಬಂದಿದೆ. ಶೋಷಣೆಗೊಳಗಾದವರಿಗೆ ಅಗತ್ಯವಾಗಿ ಬೇಕಾದ ಮೂಲ ಸೌಲಭ್ಯಗಳನ್ನು ನೀಡಿ ಅವರನ್ನು ಪುನರ್ನೆಲೆಗೊಳಿಸುವ ದೃಷ್ಟಿಯಿಂದ ಸ್ವಯಂ ಉದ್ಯೋಗ ಕಾರ್ಯಕ್ರಮಗಳನ್ನು ಈ ಯೋಜನೆಯ ಮೂಲಕ ನೀಡಲಾಗುತ್ತಿದೆ. ಇದಕ್ಕೆ ಬೆಂಬಲವಾಗಿ ಕೆಲಸ ಮಾಡುತ್ತಿರುವ ಸರ್ಕಾರೇತರ ಸಂಸ್ಥೆಗಳಿಗೆ, ಕೇಂದ್ರ ಸರಕಾರ ಅನುದಾನ ಸೇರಿದಂತೆ ಅನೇಕ ರೀತಿಯ ಬೆಂಬಲವನ್ನು ನೀಡುತ್ತಿದೆ. ಈ ಕಾರ್ಯಕ್ರಮದ ಜೊತೆಗೆ ದೌರ್ಜನ್ಯಕ್ಕೊಳಗಾದ ಮಹಿಳೆಯರಿಗೆ ಮತ್ತು ಮಕ್ಕಳಿಗಾಗಿ ಅಲ್ಪಕಾಲಿಕ (ಶಾರ್ಟ ಸ್ಟೇ ಹೋಮ್) ವಸತಿಗೃಹಗಳನ್ನು ಕಲ್ಪಿಸಲಾಗುತ್ತಿದೆ. ಇದರ ಜೊತೆ ಜೊತೆಗೆ ವೃತ್ತಿ ನಿರತ ಮಹಿಳೆಯರಿಗಾಗಿ ವಸತಿಗೃಹಗಳನ್ನು ಕಲ್ಪಿಸಲಾಗುತ್ತಿದೆ.

**ಸಾಂತ್ವನ** : ಇದು ರಾಜ್ಯ ಸರ್ಕಾರದ ಯೋಜನೆಯಾಗಿದೆ. ನೊಂದ ಮತ್ತು ಶೋಷಣೆಗೊಳಗಾದ ಮಹಿಳೆಯರಿಗೆ ತಾತ್ಕಾಲಿಕ ಆಶ್ರಯ ನೀಡುವ ಆಶಯ ಹೊಂದಿದೆ. ದೌರ್ಜನ್ಯಕ್ಕೆ ಒಳಗಾದ ಮಹಿಳೆಯರಿಗೆ ತಾತ್ಕಾಲಿಕ ಆಶ್ರಯ, ರಕ್ಷಣೆ, ಉಚಿತ ಕಾನೂನು ಸಲಹೆ, ಆರ್ಥಿಕ ಪರಿಹಾರ ನೀಡುವುದರ ಜೊತೆಗೆ ವಿವಿಧ ಕೌಶಲ್ಯಗಳ ತರಬೇತಿ ನೀಡಿ ಆರ್ಥಿಕವಾಗಿ ಸಬಲರನ್ನಾಗಿ ಮಾಡುವುದು ಈ ಯೋಜನೆಯ ಉದ್ದೇಶವಾಗಿದೆ. ಸ್ವಯಂ ಸೇವಾ ಸಂಸ್ಥೆಗಳ ಸಹಯೋಗದಲ್ಲಿ ಕರ್ನಾಟಕ ರಾಜ್ಯದ ಎಲ್ಲ ಜಿಲ್ಲೆಗಳಲ್ಲಿಯೂ ಸಾಂತ್ವಾನ ಕೇಂದ್ರಗಳನ್ನು ತೆರೆಯಲಾಗಿದ್ದು, ಎಲ್ಲ ಕೇಂದ್ರಗಳಲ್ಲಿಯೂ ಮಹಿಳಾ ಸಹಾಯ ವಾಣಿ ಲಭ್ಯವಿದೆ. ಇಲ್ಲಿ ಬೆಳಿಗ್ಗೆ ೮ರಿಂದ ರಾತ್ರಿ ೮ರವರೆಗೆ ೧೯೦೧ ಮೂಲಕ ದೂರು ಸ್ವೀಕರಿಸಲಾಗುತ್ತದೆ.

**ಸ್ತ್ರೀ ಶಕ್ತಿ ಯೋಜನೆ** : ಈ ಯೋಜನೆಯಲ್ಲಿ ಮಹಿಳೆಯರಿಗಾಗಿ ಸ್ವ-ಸಹಾಯ ಸಂಘಗಳನ್ನು ರಚಿಸಲಾಗುತ್ತದೆ. ಇವು ಮಹಿಳೆಯರಲ್ಲಿ ಉಳಿತಾಯ ಮನೋಭಾವನೆಯನ್ನು ಹೆಚ್ಚಿಸುವುದರ ಜೊತೆಗೆ ಆರ್ಥಿಕವಾಗಿ ಸಬಲರಾಗಲು ತರಬೇತಿಗಳನ್ನು ನೀಡಿ ವೈಯಕ್ತಿಕ ಮತ್ತು ಗುಂಪು ಚಟುವಟಿಕೆಗಳನ್ನು ಪ್ರಾರಂಭಿಸಲು ಸಹಾಯ ಮತ್ತು ಮಾರ್ಗದರ್ಶನ ನೀಡಲಾಗುತ್ತದೆ.

**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ** : ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯು ಈ ನಿಗಮದ ಆಶಯವಾಗಿದೆ. ಅರ್ಹ ಮಹಿಳೆರಿಗೆ ಆದಾಯ ಉತ್ಪನ್ನಕರ ಚಟುವಟಿಕೆಗಳನ್ನು ಪ್ರಾರಂಭಿಸಲು ಎಲ್ಲ ರೀತಿಯ ಮಾರ್ಗದರ್ಶನ, ತಾಂತ್ರಿಕ ಸಹಾಯ, ಆರ್ಥಿಕ ಸಹಾಯ ಧನ ಮತ್ತು ಸಾಲ ಸೌಲಭ್ಯಗಳನ್ನು ನೀಡುವ ಉದ್ದೇಶಗಳನ್ನು ಹೊಂದಿದೆ. ಈ ಉದ್ದೇಶಗಳ ಈಡೇರಿಕೆಗಾಗಿ ಹಲವಾರು ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಅದರಲ್ಲಿ ದೇವದಾಸಿ ಪುನರ್ವಸತಿ ಯೋಜನೆ ಮತ್ತು ದೇವದಾಸಿ ಮಾಶಾಸನ ಯೋಜನೆಗಳು ನಮ್ಮ ಅಧ್ಯಯನಕ್ಕೆ ಮುಖ್ಯವಾಗುತ್ತವೆ.

ದೇವದಾಸಿ ಪುನರ್ವಸತಿ ಯೋಜನೆಯಲ್ಲಿ ದೇವದಾಸಿ ಪದ್ಧತಿಯ ವಿರುದ್ಧ ವ್ಯಾಪಕ ಪ್ರಚಾರ, ಜನಾಂದೋಲನ, ಮಾಜಿ ದೇವದಾಸಿಯರ ಸ್ವ-ಸಹಾಯ ಸಂಘಗಳ ರಚನೆ, ಅರಿವು, ಜಾಗೃತಿ ಶಿಬಿರ, ಆರೋಗ್ಯ ತಪಾಸಣೆ ಮುಂತಾದ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತದೆ. ಆದಾಯ ಉತ್ಪನ್ನಕರ ಚಟುವಟಿಕೆಗಳಿಗಾಗಿ ಬ್ಯಾಂಕ್‌ಗಳಿಂದ ೨೦,೦೦೦=೦೦ ಸಾವಿರ ರೂಪಾಯಿಗಳವರೆಗೆ ಸಾಲ ಸೌಲಭ್ಯ ಮತ್ತು ಆ ಸಾಲದ ಶೇ.೫೦%ರಷ್ಟು ನಿಗಮದಿಂದ ಸಹಾಯಧನವಾಗಿ ಮಂಜೂರು ಮಾಡಲಾಗುತ್ತದೆ. ಮಾಜಿ ದೇವದಾಸಿಯರಿಗೆ (೪೫ ವಯಸ್ಸು ಮೀರಿದವರಿಗೆ) ವಸತಿ ಸೌಲಭ್ಯ, ನಿವೇಶನವಿರದ ಮಹಿಳೆಯರಿಗೆ, ಅವರಿರುವ ಊರಿನಲ್ಲಿ ಗಾವಠಾಣಾ ಜಾಗವಿದ್ದರೆ ಅದರಲ್ಲಿ ನಿವೇಶನ ಒದಗಿಸಲಾಗುತ್ತದೆ. ಟೆನನ್ಸಿಯಲ್ಲಿ ಹೊಲಗಳಿದ್ದರೆ ಅದರಲ್ಲಿ ದೇವದಾಸಿ ಮಹಿಳೆಯರಿಗೆ ೨ ಎಕರೆ ಜಮೀನು ಕೊಟ್ಟ ಉದಾಹರಣೆಗಳು ಇವೆ. ಇದಲ್ಲದೇ ಅವರಿಗೆ ಮಾಶಾಸನ ಕೊಡುವ ಯೋಜನೆ ಇದ್ದು, ಅದರಲ್ಲಿ ಪ್ರತಿ ತಿಂಗಳು ೧,೦೦೦=೦೦ ರೂಪಾಯಿ ಮಶಾಸನ ದೊರೆಯುತ್ತದೆ.

**ಸಮಗ್ರ ಶಿಶು ಸಂರಕ್ಷಣಾ ಯೋಜನೆ (ಐ.ಸಿ.ಪಿ.ಎಸ್.)** : ಮಗುವಿನ ಹಿತಾಸಕ್ತಿಯ ಆಧಾರದ ಮೇಲೆ ಮಕ್ಕಳ ಹಕ್ಕುಗಳನ್ನು ರಕ್ಷಿಸುವುದು ಈ ಯೋಜನೆಯ ಆಶಯವಾಗಿದೆ. ಮಗುವಿಗೆ ಸಂಬಂಧಿಸಿದ ಸೇವೆಗಳು ಮತ್ತು ಅವುಗಳನ್ನು ಪಡೆಯುವ ದಾರಿಯನ್ನು ಉತ್ತಮಗೊಳಿಸುವುದು, ಮಕ್ಕಳ ಹಕ್ಕುಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕರಲ್ಲಿ ಜಾಗೃತಿಯನ್ನು ಹೆಚ್ಚಿಸುವುದು, ಮಕ್ಕಳ ರಕ್ಷಣೆಯ ಕುರಿತಾದ ಜವಾಬ್ದಾರಿಗಳನ್ನು ಸ್ಪಷ್ಟವಾಗಿ ನಿರೂಪಿಸುವುದು, ಅವು ಪಾರದರ್ಶಕವಾಗಿರುವಂತೆ ನೋಡಿಕೊಳ್ಳುವುದು, ವಿವಿಧ ವಿಷಮ ಸ್ಥಿತಿಗಳನ್ನು ಎದುರಿಸುತ್ತಿರುವ ಮಕ್ಕಳಿಗಾಗಿ ಸರ್ಕಾರದ ಮಟ್ಟದಲ್ಲಿ ರಚನಾತ್ಮಕ ಕಾರ್ಯಗಳನ್ನು ಸ್ಥಾಪಿಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ.

ಹಾಗೆಯೇ ಹೆಣ್ಣುಮಕ್ಕಳನ್ನು ರಕ್ಷಿಸುವ ದಿಶೆಯಲ್ಲಿ, ಹದಿಹರೆಯದ ಹೆಣ್ಣುಮಕ್ಕಳಿಗೆ ಪೌಷ್ಠಿಕ ಆಹಾರ, ಭಾಗ್ಯಲಕ್ಷ್ಮಿ, ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳಿಗೆ ಹಾಜರಾತಿ ಶಿಷ್ಯವೇತನ, ಕಾಳಜಿ ಮತ್ತು ರಕ್ಷಣೆಯ ಅಗತ್ಯ ಇರುವ ಮಕ್ಕಳಿಗೆ ಕಲ್ಯಾಣ ಯೋಜನೆ, ಮಹಿಳೆ ಮತ್ತು ಮಕ್ಕಳ ಸಾಗಾಣಿಕೆಯನ್ನು

ನಿರ್ಬಂಧಿಸುವುದು, ವಿಷಮ ಪರಿಸ್ಥಿತಿಯಲ್ಲಿರುವ ಮಕ್ಕಳಿಗೆ ಆರ್ಥಿಕ ಸಹಾಯಧನ, ಆರ್ಥಿಕವಾಗಿ ತೊಂದರೆಯಲ್ಲಿರುವ ಗ್ರಾಮೀಣ ಭಾಗದ ಹೆಣ್ಣುಮಕ್ಕಳ ಶಿಕ್ಷಣ ಮತ್ತು ಉನ್ನತ ವ್ಯಾಸಂಗಕ್ಕಾಗಿ ವಸತಿಗೃಹಗಳಲ್ಲಿ ಆಶ್ರಯ ಪಡೆಯಲು ಸಹಾಯಧನ ಯೋಜನೆ, ಅನಾಥ ವಿಧವೆಯರು ಮತ್ತು ದೇವದಾಸಿಯರ ಮದುವೆಗಳಿಗಾಗಿ ಆರ್ಥಿಕ ಸಹಾಯಧನ, ಸಾಮಾಜಿಕ ಪಿಡುಗುಗಳನ್ನು ನಿವಾರಿಸುವ ಕೇಂದ್ರ, ಕರ್ನಾಟಕ ಮಹಿಳಾ ಅಭಿವೃದ್ಧಿ ಯೋಜನೆ, ವೃತ್ತಿ ತರಬೇತಿ ಪಡೆಯಲು ಮಹಿಳೆಯರಿಗೆ ಸಹಾಯಧನ ನೀಡುವ ಯೋಜನೆ ಮತ್ತು "ಸ್ಥೈರ್ಯ" ಯೋಜನೆಯಡಿ ದೌರ್ಜನ್ಯಕ್ಕೊಳಗಾದ ಅತ್ಯಾಚಾರ, ಸಾಮೂಹಿಕ ಅತ್ಯಾಚಾರ, ತೀವ್ರರ ಅತ್ಯಾಚಾರ ಮತ್ತು ಆಸಿಡ್ ದಾಳಿಗೆ ಒಳಗಾದ ಮಹಿಳೆಯರಿಗೆ ಆರ್ಥಿಕ ಪರಿಹಾರ, ಮರಣ ಪರಿಹಾರ ನೀಡುತ್ತಾರೆ.

### ೫.೯ ಸುತ್ತೋಲೆಗಳು

ಸಂವಿಧಾನದ ಆಶಯದಂತೆ ಮಕ್ಕಳು ಮತ್ತು ಮಹಿಳೆಯರ ಅನೈತಿಕ ಸಾಗಾಣಿಕೆ ಮತ್ತು ಲೈಂಗಿಕ ಶೋಷಣೆಯಿಂದ ರಕ್ಷಣೆ ಮಾಡಲು ಸರ್ಕಾರವು ತನ್ನ ವಿವಿಧ ಇಲಾಖೆಗಳಿಗೆ ಸುತ್ತೋಲೆಗಳನ್ನು ಹೊರಡಿಸಿದೆ ಮತ್ತು ಕಾವಲು ಸಮಿತಿಗಳನ್ನು ರಚಿಸಿದೆ.

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಪ್ರತಿವರ್ಷ ೧೪ರಿಂದ ೩೦ರವರೆಗೆ ಮಕ್ಕಳ ಹಕ್ಕುಗಳ ಸಪ್ತಾಹವನ್ನು ಹಮ್ಮಿಕೊಂಡು, ಗ್ರಾಮಸ್ಥರು, ಪಾಲಕರು, ಜನಪ್ರತಿನಿಧಿಗಳು, ಅಧಿಕಾರಿಗಳನ್ನೊಳಗೊಂಡ ಮಕ್ಕಳ ಗ್ರಾಮ ಸಭೆಗಳನ್ನು ಏರ್ಪಡಿಸುವಂತೆ ತಿಳಿಸಲಾಗಿದೆ. ಇದರಲ್ಲಿ ಮಕ್ಕಳ ಅನೈತಿಕ ಸಾಗಾಟವನ್ನು ತಡೆಗಟ್ಟಲು ಕೈಗೊಳ್ಳಬೇಕಾದ ಕ್ರಮಗಳ ಕುರಿತು ಗ್ರಾಮದ ೬ ವರ್ಷದ ಒಳಗಿನ ಎಲ್ಲ ಮಕ್ಕಳು ಅಂಗನವಾಡಿಗೆ ಬರುತ್ತಿರುವ ಕುರಿತು, ಶಾಲೆಗೆ ಹೋಗಬೇಕಾದ ಮಕ್ಕಳು ನಿರಂತರವಾಗಿ ಶಾಲೆಗೆ ಹೋಗುತ್ತಿರುವ ಕುರಿತು, ಮಧ್ಯದಲ್ಲಿ ಬಿಟ್ಟಿದ್ದರೆ ಅದಕ್ಕೆ ಕಾರಣವನ್ನು ಕಂಡುಕೊಳ್ಳುವ ಕುರಿತು ಮೇಲ್ವಿಚಾರಣೆ ಮಾಡಿ ಸೂಕ್ತ ಕ್ರಮ ಕೈಗೊಳ್ಳುವಂತೆ ಸುತ್ತೋಲೆ ಹೊರಡಿಸಲಾಗಿದೆ. ಹಾಗೆಯೇ ಗ್ರಾಮ ಪಂಚಾಯತಿಯ ವಾರ್ಡ್ ಸಭೆಗಳಲ್ಲಿ ಬಾಲ್ಯ ವಿವಾಹದಂತಹ ಅನಿಷ್ಟ ಪಿಡುಗಿನ ಕುರಿತು ಚರ್ಚಿಸಿ ಅದನ್ನು ತಡೆಗಟ್ಟಲು ಕ್ರಮ ವಹಿಸಲು ತಿಳಿಸಲಾಗಿದೆ.

ರಾಜ್ಯ ಪೊಲೀಸ್ ಇಲಾಖೆಯು ಲೈಂಗಿಕ ಅಪಾರದಗಳಿಂದ ಮಕ್ಕಳ ಸಂರಕ್ಷಣಾ ಕಾಯಿದೆ ೨೦೧೨ ಇದನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವ ಕುರಿತು ಮಾನವ ಕಳ್ಳ ಸಾಗಾಣಿಕೆ ನಿಷೇಧ ಘಟಕಗಳು ಲೈಂಗಿಕ ಕಾರ್ಯಕರ್ತೆಯರು ಹಾಗೂ ಅವರ ಮಕ್ಕಳಿಗೆ, ಅವರದೆ (ಲೈಂಗಿಕ ಕಾರ್ಯಕರ್ತೆಯರ) ಕುಟುಂಬಗಳಿಂದ, ಸಾಮಾಜಿಕ ಸದಸ್ಯರಿಂದ, ಸ್ಥಳೀಯ ಪೊಲೀಸ್‌ರಿಂದ ಯಾವುದೇ ಕಿರುಕುಳ, ತೊಂದರೆಯಾಗದಂತೆ ರಕ್ಷಣೆ ನೀಡಬೇಕೆಂದು ಸೂಚಿಸಲಾಗಿದೆ. ಹಾಗೆಯೇ ಮಕ್ಕಳ ವಿಶೇಷ ಪೊಲೀಸ್ ಘಟಕವನ್ನು ರಚಿಸುವ ಕುರಿತು, ಮಹಿಳೆಯರ ಮತ್ತು ಮಕ್ಕಳ ಸಾಗಾಣಿಕೆ ತಡೆ ಕುರಿತು ಹಾಗೂ ಮಾನವ ಸಾಗಾಣಿಕೆ ವಿರುದ್ಧ ಕ್ರಮ ಜರುಗಿಸುವ ಕುರಿತು ಸುತ್ತೋಲೆಗಳನ್ನು ಹೊರಡಿಸಲಾಗಿದೆ.

ಸಾರ್ವಜನಿಕ ಶಿಕ್ಷಣ ಇಲಾಖೆಯು ರಾಜ್ಯದ ಎಲ್ಲಾ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಮೇಲೆ ಲೈಂಗಿಕ ಕಿರುಕುಳ, ಅತ್ಯಾಚಾರ ಹಾಗೂ ದೈಹಿಕ ಹಿಂಸೆ ನಡೆಯುತ್ತಿರುವುದನ್ನು ತಡೆಗಟ್ಟುವ ಕುರಿತು ತ್ರಿಸದಸ್ಯ ಸಮಿತಿಯ ಮೂಲಕ ಪರಿಶೀಲಿಸಿ ಕ್ರಮಕೈಗೊಳ್ಳುವ ಕುರಿತು ತಿಳಿಸಲಾಗಿದೆ. ಅನೇಕ ಮಕ್ಕಳು, ಶಾಲೆಯ ಅಹಿತಕರ ವಾತಾವರಣ, ಶಿಕ್ಷಕರ ನಕಾರಾತ್ಮಕ ಮನೋಭಾವ, ಮಕ್ಕಳನ್ನು ದೈಹಿಕವಾಗಿ ಹಿಂಸೆ ನೀಡಿರುವುದನ್ನು ನಿಷೇಧಿಸಿ ಸುತ್ತೋಲೆ ಹೊರಡಿಸಲಾಗಿದೆ. ೬ರಿಂದ ೧೪ ವಯೋಮಿತಿಯ ಎಲ್ಲಾ ಮಕ್ಕಳಿಗೆ ೧ರಿಂದೆ ನೆರೆಹೊರೆಯ ಶಾಲೆಯಲ್ಲಿ ಸಮಾನ ಗುಣಮಟ್ಟದ ಶಿಕ್ಷಣ ಒದಗಿಸಬೇಕಾಗಿದ್ದು, ಶಾಲೆಗೆ ದಾಖಲಾದ ಎಲ್ಲಾ ಮಕ್ಕಳನ್ನು ವಿವಿಧ ಕಾರ್ಯತಂತ್ರಗಳ ಮೂಲಕ ದಾಖಲು ಮಾಡುವುದರ ಜೊತೆಗೆ ದಾಖಲಾದ ಮಕ್ಕಳು ಯಾವ ಕಾರಣದಿಂದಲೂ ಶಾಲೆಯಿಂದ ಹೊರಗುಳಿಯದಂತೆ ನಿರಂತರವಾಗಿ ಶಾಲೆಗೆ ಹಾಜರಾಗಿ, ಗುಣಮಟ್ಟದ ಶಿಕ್ಷಣ ಪಡೆಯುವುದನ್ನು ಖಾತರಿಪಡಿಸಿಕೊಳ್ಳಬೇಕೆಂದು ತಿಳಿಸಲಾಗಿದೆ.

ಕಾರ್ಮಿಕ ಇಲಾಖೆಯು ಬಾಲ ಕಾರ್ಮಿಕ ನಿಷೇಧ ಕಾಯಿದೆಯನ್ನು ಕಟ್ಟುನಿಟ್ಟಾಗಿ ಪಾಲಿಸುವ ಕುರಿತು ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಸತಿ ನಿಲಯಗಳಲ್ಲಿ ಬಿಡುಗಡೆಗೊಂಡ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬಾಲ ಕಾರ್ಮಿಕರಿಗೆ ವಸತಿ ಸೌಲಭ್ಯವನ್ನು ಒದಗಿಸುವುದು ಮತ್ತು ಇಲಾಖೆಯು ಹಮ್ಮಿಕೊಂಡ 'ಬಡತನ ನಿರ್ಮೂಲನಾ ಯೋಜನಾ' ಕಾರ್ಯಕ್ರಮಗಳ ಅಡಿಯಲ್ಲಿ ಸೌಲಭ್ಯಗಳನ್ನು ಒದಗಿಸುವ ಕುರಿತು ತಿಳಿಸಲಾಗಿದೆ.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಕೆಯು ಮಹಿಳೆಯರ ಮತ್ತು ಮಕ್ಕಳ ಸಾಗಾಣೆಯನ್ನು ತಡೆಗಟ್ಟಲು ಮತ್ತು ಸಾಗಣೆಗೊಳಗಾದ ಮಹಿಳೆಯರ ರಕ್ಷಣೆ ಮತ್ತು ಪುನರ್ವಸತಿ ಕಲ್ಪಸುವ ಸಲುವಾಗಿ ಜಿಲ್ಲೆ, ತಾಲೂಕು ಮತ್ತು ಗ್ರಾಮ ಮಟ್ಟದಲ್ಲಿ ಕಾವಲು ಸಮಿತಿಗಳನ್ನು ರಚಿಸಬೇಕೆಂದು ೩೦.೦೫.೨೦೦೫ರಲ್ಲಿ ಸರ್ಕಾರವು ಆದೇಶ ಹೊರಡಿಸಿದೆ. ಜಿಲ್ಲಾ ಮಟ್ಟದ ಕಾವಲು ಸಮಿತಿಯಲ್ಲಿ ಜಿಲ್ಲಾಧಿಕಾರಿಗಳು ಅಧ್ಯಕ್ಷರು ಮತ್ತು ಜಿಲ್ಲಾ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಸಮಿತಿಯಲ್ಲಿ ಒಟ್ಟು ೧೦ ಜನ ಸದಸ್ಯರಾಗಿರುತ್ತಾರೆ. ಇವರ ಮುಖ್ಯ ಕರ್ತವ್ಯಗಳೆಂದರೆ,

೧. ಮಹಿಳೆಯರ ಮತ್ತು ಮಕ್ಕಳ ಸಾಗಣೆಗೆ ಮುಖ್ಯ ಕಾರಣಗಳು, ಸಮಸ್ಯೆಯ ತೀವ್ರತೆಯನ್ನು ಗುರುತಿಸಿ ಇದರ ವಿರುದ್ಧ ಅರಿವು ಮೂಡಿಸಲು ಸ್ವ-ಸಹಾಯ ಗುಂಪು, ಯುವ ಸಂಘಗಳು, ಚಲನಚಿತ್ರ ಹಾಗೂ ಪತ್ರಿಕೆಗಳ ಮೂಲಕ ಅರಿವು ಮೂಡಿಸುವುದು. ೨. ತಾಲೂಕು ಮತ್ತು ಗ್ರಾಮ ಮಟ್ಟದ ಸಾಗಣೆ ವಿರುದ್ಧ ಕ್ರಿಯಾ ಯೋಜನೆ ತಯಾರಿಸುವಲ್ಲಿ ಪರಿಗಣಿಸಬೇಕಾಗಿರುವ ಗುರುತಿಸುವುದು. ೩. ಜಿಲ್ಲಾಮಟ್ಟದಲ್ಲಿ ಮಹಿಳೆಯರ ಮತ್ತು ಮಕ್ಕಳ ಸಾಗಣೆ ತಡೆಗಟ್ಟುವ ಕಾವಲು ಪಡೆ ನೇಮಿಸುವುದಲ್ಲದೇ ಸೂಕ್ಷ್ಮ ಪ್ರದೇಶ ಗುರುತಿಸುವುದು. ೪. ಸಾಗಾಣಿಕೆಗೆ ಒಳಪಟ್ಟವರಿಗೆ ವಸತಿಯನ್ನೊದಗಿಸಿ, ಶಿಕ್ಷಣವನ್ನೊದಗಿಸಿ

ಅವರನ್ನು ಮುಖ್ಯ ವಾಹಿನಿಗೆ ತರುವುದು. ೫. ಸಾಗಣೆಗೊಳಪಟ್ಟವರನ್ನು ಮತ್ತೆ ಕುಟುಂಬದೊಡನೆ ಸೇರಿಸಿ, ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ವೃತ್ತಿ ತರಬೇತಿಗೆ ನೆರವು ನೀಡುವುದು. ೬. ಸಾಗಾಣಿಕೆದಾರರನ್ನು ಕಾನೂನು ಶಿಕ್ಷೆಗೆ ಒಳಪಡಿಸುವುದು, ಸಾಗಾಣಿಕೆಗೊಳಗಾದ ನಿರ್ಗತಿಕ ಮಕ್ಕಳಿಗೆ, ಜಿಲ್ಲಾಮಟ್ಟದಲ್ಲಿ ಅನುಪಾಲನಾ ಗೃಹಗಳಲ್ಲಿ ಅವಕಾಶ ಕಲ್ಪಿಸಿಕೊಡುವುದು. ೭. ತಾಲೂಕು ಮತ್ತು ಗ್ರಾಮ ಮಟ್ಟದ ಸಮಿತಿಗಳಿಗೆ ಸಲಹೆಗಳನ್ನು ನೀಡುವುದು ಜಿಲ್ಲಾಮಟ್ಟದ ಕಾವಲು ಸಮಿತಿಯ ಕರ್ತವ್ಯಗಳಾಗಿವೆ.

ತಾಲೂಕು ಮಟ್ಟದ ಕಾವಲು ಸಮಿತಿಗೆ ತಾಲೂಕು ಪಂಚಾಯಿತಿ ಕಾರ್ಯನಿರ್ವನಾಧಿಕಾರಿ ಅಧ್ಯಕ್ಷರಾಗಿ ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸದಸ್ಯ ಕಾರ್ಯದರ್ಶಿಯಾಗುತ್ತಾರೆ. ಸಮಿತಿಯಲ್ಲಿ ಒಟ್ಟು ೧೧ ಜನ ಸದಸ್ಯರಿರುತ್ತಾರೆ. ಇವರ ಮುಖ್ಯ ಕರ್ತವ್ಯಗಳೆಂದರೆ, ೧. ಗ್ರಾಮ ಮತ್ತು ಹೋಬಳಿ ಮಟ್ಟಗಳಲ್ಲಿ ಮಕ್ಕಳ ಮಾಹಿತಿಯನ್ನು ಇಟ್ಟುಕೊಳ್ಳುವುದು. ೨. ಗ್ರಾಮ ಮಟ್ಟದ ಸಮಿತಿ ಸದಸ್ಯರನ್ನು ತಾಲೂಕು ಮಟ್ಟದಲ್ಲಿ ನಡೆಯುವ ಪ್ರಚಾರಾಂದೋಲನದಲ್ಲಿ ತೊಡಗಿಸಿಕೊಳ್ಳುವುದು. ೩. ತಾಲೂಕು ಮಟ್ಟದಲ್ಲಿ ಮಹಿಳೆಯರು ಮತ್ತು ಮಕ್ಕಳ ಸಾಗಣೆ ವಿರುದ್ಧ ಪ್ರಕರಣಗಳು ದಾಖಲಾದ ಕುರಿತು ಮತ್ತು ಆ ಸಂಬಂಧಿಸಿ ಕ್ರಮಕೈಗೊಂಡಿರುವ ಕುರಿತು ಪರಿಶೀಲಿಸುವುದು. ೪. ಸಾರಿಗೆ ಸಂಪರ್ಕ ಕೇಂದ್ರಗಳಾದ ಬಸ್ ನಿಲ್ದಾಣ ಮತ್ತು ರೈಲು ನಿಲ್ದಾಣಗಳಲ್ಲಿ ನಡೆಯುವ ಸಾಗಣೆ ಕುರಿತು ಗಮನ ಹರಿಸುವುದು. ೫. ಸಾಗಣೆಗೊಳಪಟ್ಟ ಮಕ್ಕಳ ನೆರವಿಗಾಗಿ ಪೊಲೀಸ್ ನೆರವಿನೊಂದಿಗೆ ತಾಲೂಕು ವ್ಯಾಪ್ತಿಯಲ್ಲಿ ಸಹಾಯವಾಣಿ ಪ್ರಾರಂಭಿಸಿ, ಶೋಷಣೆಗೊಳಗಾದ ಮಕ್ಕಳಿಗೆ ಸಹಾಯ ಕಲ್ಪಿಸುವುದು. ೬. ಸಾಗಣೆ ವಿರುದ್ಧ ಕಾರ್ಯನಿರ್ವಹಿಸಲು ಕಾವಲು ಪಡೆ ರಚಿಸಬೇಕು. ೭. ಪಂಚಾಯಿತಿ ಹಂತಗಳಲ್ಲಿ ಸಾಗಣೆ ವಿರುದ್ಧ ಕ್ರಮಕ್ಕಾಗಿ ಕ್ರಿಯಾ ಯೋಜನೆ ರೂಪಿಸುವುದು. ೮. ಸ್ಥಳೀಯ ಸ್ವಯಂಸೇವಾ ಸಂಸ್ಥೆಗಳ ಸಹಾಯದಿಂದ ಸಾಗಣೆಗೊಳಪಟ್ಟಿರುವ, ಕಾಣೆಯಾದ ಮಕ್ಕಳ ಬಗ್ಗೆ ಕ್ರಮಬದ್ಧವಾದ ಮಾಹಿತಿ ಇರಿಸುವುದು.

ಗ್ರಾಮ ಮಟ್ಟದ ಕಾವಲು ಸಮಿತಿಗೆ ಗ್ರಾಮ ಪಂಚಾಯಿತಿ ಅಧ್ಯಕ್ಷರು ಅಧ್ಯಕ್ಷರಾಗಿ ಮತ್ತು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಮೇಲ್ವಿಚಾರಕಿಯರು ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಸಮಿತಿಯಲ್ಲಿ ಒಟ್ಟು ಏಳು ಜನ ಸದಸ್ಯರಿರುತ್ತಾರೆ. ಇವರ ಮುಖ್ಯ ಕರ್ತವ್ಯಗಳೆಂದರೆ,

೧. ಗ್ರಾಮ ಪಂಚಾಯಿತಿ ಮಟ್ಟದಲ್ಲಿಯ ೧೮ ವರ್ಷದೊಳಗಿನ ಮಕ್ಕಳ ಎಲ್ಲಾ ಮಾಹಿತಿಯನ್ನು ಲಭ್ಯವಿರಿಸಬೇಕು. ೨. ಶಾಲೆಗೂ ಪಂಚಾಯಿತಿಗೂ ಮಾಹಿತಿ ಹಂಚಿಕೆ ವ್ಯವಸ್ಥೆ ಕಲ್ಪಿಸುವಲ್ಲಿ ಸಹಕರಿಸಬೇಕು. ಕಚೇರಿ, ಶಾಲೆ, ಪೊಲೀಸು, ಅಂಗನವಾಡಿ, ಮಹಿಳಾ ಸ್ವ-ಸಹಾಯ ಸಂಘಗಳ ಗ್ರಾಮದ ಮಕ್ಕಳ ಆಗು ಹೋಗುಗಳ ಕುರಿತು ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಬೇಕು.

೩. ಮಾರಾಟ ಮತ್ತು ಸಾಗಣೆಗೊಳಾದ ಮಹಿಳೆಯರ ಮತ್ತು ಮಕ್ಕಳ ರಕ್ಷಣೆ ಮತ್ತು ಇವರಿಗೆ ಹಾಗೂ ಅವರ ಕುಟುಂಬಗಳಿಗೆ ಆರ್ಥಿಕ, ನೈತಿಕ, ಸಾಮಾಜಿಕ, ವೈದ್ಯಕೀಯ ಹಾಗೂ ಶೈಕ್ಷಣಿಕ ಸಹಾಯವನ್ನು ನೀಡಬಲ್ಲವರನ್ನು ಗುರುತಿಸುವುದು. ೪. ಸಮುದಾಯದ ಎಲ್ಲರ ಭಾಗವಹಿಸುವುಕೆಯೊಂದಿಗೆ ಸಾಗಣೆಯನ್ನು ನಿಷೇಧಿಸುವಲ್ಲಿ ಉಸ್ತುವಾರಿ ಮಾಡುವುದು. ೫. ಮಕ್ಕಳ ಸಾಗಾಣೆ ವಿರುದ್ಧ ಶಾಲೆಗಳಲ್ಲಿ ಮಕ್ಕಳಿಗೆ ಅರಿವು ಮೂಡಿಸಬೇಕು. ಅಂಗನವಾಡಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುವ ಕಾರ್ಯಕರ್ತೆಯರಿಗೂ ಮತ್ತು ಸಹಾಯಕಿಯರಿಗೂ ಸಹ ಮಕ್ಕಳ ಸಾಗಣೆ ವಿರುದ್ಧ ಕೈಗೊಳ್ಳಬಹುದಾದ ಎಚ್ಚರಗಳ ಬಗ್ಗೆ ಅರಿವು ಮೂಡಿಸಬೇಕು. ೬. 'ಹೊಸ' ವ್ಯಕ್ತಿಗಳು ಗ್ರಾಮಕ್ಕೆ ಆಗಮಿಸಿದ ಬಗ್ಗೆ ದಾಖಲೆ ಇಡಬೇಕು. ೭. ಗ್ರಾಮದಿಂದ ಕಾಣೆಯಾದ ಮಹಿಳೆಯರ ಮತ್ತು ಮಕ್ಕಳ ದಾಖಲೆ ಇಡಬೇಕು.

ಜಿಲ್ಲಾ, ತಾಲೂಕು ಮತ್ತು ಗ್ರಾಮ ಮಟ್ಟದ ಸಮಿತಿಯು ಪತ್ತದೇ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ತಾಲೂಕು ಮಟ್ಟದ ಸಮಿತಿಯು ಮಹಿಳೆಯರ ಮತ್ತು ಮಕ್ಕಳ ಸಾಗಣೆ ತಡೆಗಟ್ಟಲು ಕೈಗೊಂಡಿರುವ ಕ್ರಮಗಳ ಬಗ್ಗೆ ವಿಮರ್ಶಿಸತಕ್ಕದ್ದು. ಸದರಿ ಸಮಿತಿಯು ತ್ರೈಮಾಸಿಕ ಸಭೆಯನ್ನು ಕಾಲಕಾಲಕ್ಕೆ ನಡೆಸುವುದು ಸದಸ್ಯ ಕಾರ್ಯದರ್ಶಿಗಳ ಜವಾಬ್ದಾರಿಯಾಗಿರುತ್ತದೆ.

ಜಿಲ್ಲಾಮಟ್ಟದ ಸಮಿತಿಯು ಎಲ್ಲಾ ತಾಲೂಕುಗಳಲ್ಲೂ ಮಕ್ಕಳ ಸಹಾಯವಾಣಿ ಕೇಂದ್ರಗಳನ್ನು ಪ್ರಾರಂಭಿಸುವಂತೆ, ಪ್ರೇರೇಪಿಸುವುದಲ್ಲದೇ ಆರು ತಿಂಗಳಿಗೊಮ್ಮೆ ಮಕ್ಕಳ ಸಾಗಾಣಿಕೆಗೆ ಸಂಬಂಧಿಸಿದ ಅಂಕಿ-ಅಂಶಗಳನ್ನು ರಾಜ್ಯಮಟ್ಟದ ಸಮಿತಿಗೆ ವರದಿ ಮಾಡತಕ್ಕದ್ದು ಎಂದು ಆದೇಶಿಸಲಾಗಿದೆ. ರಾಜ್ಯಮಟ್ಟದ ಸಲಹಾ ಸಮಿತಿಯು ಆರು ತಿಂಗಳಿಗೊಮ್ಮೆ ಸಭೆ ಸೇರಿ ಈ ಬಗ್ಗೆ ತೆಗೆದುಕೊಂಡಿರುವ ಕ್ರಮಗಳ ಬಗ್ಗೆ ವಿಮರ್ಶೆ ಮಾಡು ಸೂಕ್ತ ಸಲಹೆ ನೀಡಬೇಕೆಂದು ತಿಳಿಸಲಾಗಿದೆ. (ನಮ್ಮೆಲ್ಲರ ಹೊಣೆ, ೨೦೧೫)

**೫.೧೦ ಸರ್ಕಾರೇತರ ಸಂಸ್ಥೆಗಳು : (ಎನ್.ಜಿ.ಓ.)**

ಸರ್ಕಾರೇತರ ಸಂಸ್ಥೆಗಳು ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿಯೂ ಬೆಳೆದು ಬಂದ ಸ್ವತಂತ್ರ ಮಕ್ಕಳ ಕಾನೂನುಬದ್ಧ ವ್ಯವಸ್ಥೆಯಾಗಿದೆ. ಇವುಗಳನ್ನು ಎನ್.ಜಿ.ಓ. ನಾನ್ ಗವರ್ನಮೆಂಟ್ ಆರ್ಗನೈಜೇಶನ್ ಎಂತಲೂ ಕರೆಯಲಾಗುತ್ತದೆ. ಸಮಾಜ ಸೇವೆಯ ಉದ್ದೇಶವನ್ನು ಹೊಂದಿರುವ ಈ ಸಂಸ್ಥೆಗಳು ಯಾವುದೇ ಲಾಭ, ಗಳಿಕೆಯ ಉದ್ದೇಶವಿರುವುದಿಲ್ಲ. ಹಾಗಾಗಿ ಕೆಲವು ದೇಶಗಳಲ್ಲಿ ಎನ್.ಪಿ.ಓ. ನಾನ್ ಪ್ರಾಫಿಟ್ ಅರ್ಗನೈಜೇಶನ್ ಅಂತಲೂ ಕರೆಯುತ್ತಾರೆ. ಇವು ಸಂಪೂರ್ಣ ಖಾಸಗಿ ಸಂಸ್ಥೆಗಳಾಗಿ ಸಮಾಜದ ಸಮಗ್ರ ಅಭಿವೃದ್ಧಿಗಾಗಿ ಕೆಲಸ ಮಾಡುತ್ತವೆ. ಹಣಕಾಸಿನ ವ್ಯವಹಾರವಿರುವುದರಿಂದ ಇವುಗಳ ಕೆಲಸ ಪಾರದರ್ಶಕವಾಗಿ, ನ್ಯಾಯಯುತವಾಗಿರಲೆಂದು ಎನ್.ಜಿ.ಓ. ಕಾನೂನು ಬದ್ಧಗೊಳಿಸಲಾಗಿದೆ. ಇದಕ್ಕಾಗಿ ಆಯಾ ರಾಜ್ಯಗಳಲ್ಲಿ ನೋಂದಣಿ ಕಾಯಿದೆಯು

ಜಾರಿಯಲ್ಲಿದೆ. ೧೯೬೦ರಲ್ಲಿ ಕರ್ನಾಟಕ ಸಂಘ ಸಂಸ್ಥೆಗಳ ನೋಂದಣಿ ಕಾಯಿದೆಯನ್ನು ಜಾರಿಗೊಳಿಸಲಾಗಿದೆ. ಈ ಕೆಲಸಕ್ಕಾಗಿ ಅವಶ್ಯವಿರುವ ಹಣಕಾಸನ್ನು ದಾನಿಗಳಿಂದ ಸಂಗ್ರಹಿಸಲಾಗುತ್ತದೆ. ಸರ್ಕಾರಗಳೂ ಸಹ ತಮ್ಮ ಕೆಲವು ಯೋಜನೆಗಳನ್ನು ಅನುಷ್ಠಾನ ಮಾಡಲು ಸರ್ಕಾರೇತರ ಸಂಸ್ಥೆಗಳಿಗೆ ಅನುದಾನ ಒದಗಿಸುತ್ತವೆ. ಉತ್ತಮ ಕಾರ್ಯನಿರ್ವಹಿಸುತ್ತಿರುವ ಸಂಸ್ಥೆಗಳು ವಿದೇಶಗಳಿಂದಲೂ ನಿಧಯನ್ನು ಪಡೆಯುತ್ತವೆ. ಅದಕ್ಕಾಗಿ ಫಾರೆನ್ ಕಾಂಟ್ರಿಬ್ಯೂಶನ್ ರೆಗ್ಯೂಲೇಶನ್ ಆ್ಯಕ್ಟ್ (ಎಫ್.ಸಿ.ಆರ್.ಎ.) ಜಾರಿಯಲ್ಲಿದ್ದು, ವಿದೇಶದಿಂದ ನಿಧಿಯನ್ನು ಪಡೆಯುವ ಸಂಸ್ಥೆಗಳಿಗೆ ಅವಶ್ಯವಿರುವ ವೃತ್ತಿಪರ ಸಮಾಜ ಕಾರ್ಯಕರ್ತರನ್ನು ವಿಶ್ವವಿದ್ಯಾಲಯಗಳು 'ಸಮಾಜ ಕಾರ್ಯ' ವಿಷಯದ ಅಡಿಯಲ್ಲಿ ವೈಜ್ಞಾನಿಕವಾಗಿ ತರಬೇತಿ ನೀಡುತ್ತಿವೆ.

ದೇಶದಾದ್ಯಂತ ಮಕ್ಕಳ ರಕ್ಷಣೆಗಾಗಿ ಹಲವಾರು ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಅವುಗಳಲ್ಲಿ ಹೈದ್ರಾಬಾದ್‌ನ ಪ್ರಜ್ವಲಾ, ಮುಂಬಯಿಯ ಪ್ರೇರಣಾ ಮತ್ತು ರೆಸ್ಕ್ಯೂ ಫೌಂಡೇಶನ್, ಕನಾಟಕದ ವಿಮೋಚನಾ ಸಂಘ, ಅಥಣಿ ಮತ್ತು ಒಡನಾಡಿ ಸೇವಾ ಸಂಸ್ಥೆ, ಮೈಸೂರು ಇವುಗಳನ್ನು ಹೆಸರಿಸಬಹುದು.

ಸಂವಿಧಾನದ ಆಶಯದಂತೆ ಸರ್ಕಾರ, ನಾಗರೀಕ ಸಮಾನ ಕಾಯಿದೆಗಳು, ನೀತಿಗಳು, ನಿಯಮಗಳು, ಕಾರ್ಯಕ್ರಮಗಳು, ಯೋಜನೆಗಳು ರೂಪುಗೊಂಡಿದ್ದರೂ, ಇಂದು ಸಾವಿರಾರು ಮಕ್ಕಳು ಅಸುರಕ್ಷಿತರಾಗಿ ಬದುಕುತ್ತಿರುವುದು ಹಲವು ಅಧ್ಯಯನಗಳಿಂದ ಕಂಡುಬರುತ್ತದೆ. ಬಹಳಷ್ಟು ಜನರಿಗೆ ತಮ್ಮ ರಕ್ಷಣೆಯ ಬಗ್ಗೆ ಇರುವ ಸೌಲಭ್ಯಗಳ ಅರಿವೂ ಇಲ್ಲ, ಎಷ್ಟೋ ಜನ ಬಡವರು ಪಂಚಾಯಿತಿಯ ಮೆಟ್ಟಿಲನ್ನೂ ಸಹ ಹತ್ತಿಲ್ಲ. ಮನೆಗಳಿಲ್ಲದ ಶೇ.೫೦%ರಷ್ಟು ಜನರು ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ. ಎಷ್ಟೋ ಜನರಿಗೆ ಗುಡಿಸಲುಗಳೂ ಸಹ ಇಲ್ಲ. ಭಾರತದಲ್ಲಿ ಶೇ.೭೦%ರಷ್ಟು ಮನೆಗಳಲ್ಲಿ ಶೌಚಾಲಯಗಳಿಲ್ಲ, ಸ್ನಾನ ಗೃಹಗಳಿಲ್ಲದ ಮನೆಗಳಲ್ಲಿ ಬಹಳಷ್ಟು ಸಂಖ್ಯೆಯ ಜನರು, ನಾಲ್ಕು ಕೋಲುಗಳನ್ನು ಇಟ್ಟು ಅದಕ್ಕೆ ಹರಿದ ಸೀರೆ ಸಿಕ್ಕಿಸಿ, ಮರೆ ಮಾಡಿಕೊಂಡು ಸ್ನಾನ ಮಾಡುತ್ತಾರೆ. ಪುಂಡ–ಪೋಕರು ೧೦–೧೧ ವರ್ಷದ ಬಾಲೆಯನ್ನು ಹೇರ್‌ಪಿನ್, ಹೇರ್‌ಬ್ಯಾಂಡ್, ರಬ್ಬರು, ಮೊಬೈಲುಗಳ ಆಸೆ ತೋರಿಸಿ ಸಾಗಿಸಿಕೊಂಡು ಹೋಗಿ ಲೈಂಗಿಕ ದಂಧೆಯ ಮನೆಗಳಿಗೆ ಮಾರಿ ಬಂದು ಊರಲ್ಲಿ ಗೂಳಿಯಂತೆ ತಿರುಗುವುದನ್ನು ನಾವು ಎಲ್ಲರೂ ನೋಡುತ್ತಿದ್ದೇವೆ.

ಭಾರತದಲ್ಲಿ ಮಾನವ ಕಳ್ಳಸಾಗಣೆಯಂತ ಪಿಡುಗನ್ನು ನಿರ್ಮೂಲನೆ ಮಾಡಬೇಕೆಂಬ ಗುರಿಯನ್ನು ವಾಸ್ತವವಾಗಿ ಸಾಧಿಸುವುದಕ್ಕೂ ಮುಂಚೆ ಆಗಬೇಕಾದ ವ್ಯವಸ್ಥೆ/ಕೆಲಸಕಾರ್ಯಗಳು ಸಾಕಷ್ಟಿವೆ. ಈ ಪಿಡುಗನ್ನು ನಿರ್ವಹಿಸುವ ವಿಷಯದಲ್ಲಿ ಭಾರತಕ್ಕೆ ಎರಡನೇ ಶ್ರೇಣಿಯ ದೇಶಗಳಲ್ಲಿ ಸ್ಥಾನವಿದೆ. ಅಂದರೆ ಈ ಸಮಸ್ಯೆ ನಿವಾರಣೆಗೆ ಭಾರತ ಕಟಿಬದ್ಧವಾಗಿದ್ದರು ಅದನ್ನು ನಿರ್ವಹಿಸುವ ಸಾಮರ್ಥ್ಯವಿನ್ನೂ ದಕ್ಕಿಲ್ಲ ಎಂದರ್ಥ. ಅರ್ಧ ಶತಮಾನದಷ್ಟು ಹಳೆಯದಾದ ಮಾನವ ಕಳ್ಳಸಾಗಣೆ

ತಡೆ ಕಾಯ್ದೆಯಲ್ಲಿರುವ ಲೈಂಗಿಕ ಶೋಷಣೆ ವ್ಯಾಖ್ಯಾನ ಬದಲಾಗಬೇಕಿದೆ. ಸುಪ್ರೀಂ ಕೋರ್ಟನ ನಿರ್ದೇಶನದ ಮೇರೆಗೆ ವ್ಯಾಪಕ ಅಧ್ಯಯನ ನಡೆಸಿರುವ ಸಂಸ್ಥೆಗಳು ಈ ವ್ಯಾಖ್ಯಾನವನ್ನು ಬದಲಾಯಿಸಬೇಕೆಂದು ಶಿಫಾರಸ್ಸು ಮಾಡಿವೆ. ಮಹಿಳೆಯರ ಮೇಲಿನ ಸೋಷಣೆ ರೀತಿಯೂ ಬದಲಾಗುತ್ತಿರುವ ಹಿನ್ನೆಲೆಯಲ್ಲಿ ಹೊಸದಾಗಿ ವ್ಯಾಖ್ಯಾನ ಮಾಡುವ ಜರೂರು ಇದೆ. ಅಲ್ಲದೆ ಮಹಿಳೆಯರ ಮೇಲಿನ ಶೋಷಣೆ ತಪ್ಪಿಸುವ ಉದ್ದೇಶದಿಂದ ಕೇಂದ್ರ ಸರಕಾರ ೧೯೫೦ ರಲ್ಲಿ ಅಂತರಾಷ್ಟ್ರೀಯ ಒಡಂಬಡಿಕೆ ಮಾಡಿಕೊಂಡ ಹಿನ್ನೆಲೆಯಲ್ಲಿ ೧೯೫೬ ರಲ್ಲಿ ಮಾನವಕಳ್ಳ ಸಾಗಣೆ ತಡೆ ಕಾಯಿದೆ ತರಲಾಗಿತ್ತು. ಆದರೆ ಈ ಉದ್ದೇಶ ಸಾಧನೆಯಲ್ಲಿ ಕಾಯಿದೆ ಸಂಪೂರ್ಣವಾಗಿ ಯಶಸ್ವಿಯಾಗಿಲ್ಲ. ಮಾನವ ಕಳ್ಳಸಾಗಣೆ ತಡೆ ಕಾಯಿದೆಯಲ್ಲಿ ಸಾಕಷ್ಟು ನ್ಯೂನ್ಯತೆಗಳಿರುವ ಹಿನ್ನೆಲೆಯಲ್ಲಿ ಕಾಯಿದೆ ತಿದ್ದುಪಡಿ ತರುವ ಅಗತ್ಯವಿದೆ. ವಿಶೇಷವಾಗಿ ಕಾಯಿದೆಯಲ್ಲಿರುವ ಲೈಂಗಿಕ ಶೋಷಣೆ ವ್ಯಾಖ್ಯಾನ ಬದಲಾಗಬೇಕು. ಅದರಲ್ಲಿ ಮಹಿಲೇಯ ಇಚ್ಛೆ ಇಲ್ಲದೆ ಸಸೋಷಿಸಿದ ಅಥವಾ ಅಶ್ಲೀಲವಾಗಿ ಪ್ರದರ್ಶಿಸಿದ, ಮಹಿಳೆಯನ್ನು ಇನ್ನೊಬ್ಬ ವ್ಯಕ್ತಿಯ ಅನುಕೂಲಕ್ಕೆ ಬಳಸಿದ, ಮಹಿಳೆಯನ್ನು ಬಳಸಿಕೊಂಡು ಲಾಭ ಮಾಡಿಕೊಳ್ಳುಲು ಯತ್ನಿಸಿದ, ಮಹಿಳೆಯರನ್ನು ಬಳಸಿಕೊಂಡು ಮದ್ಯಸ್ತಿಕೆ ಮಾಡಿದ ವ್ಯಕ್ತಿಯನ್ನು ಆರೋಪಿಯನ್ನಾಗಿ ಪರಿಗಣಿಸುವ ಅಂಶವನ್ನು ಕಾಯಿದೆಯಲ್ಲಿ ಸೇರ್ಪಡೆ ಮಾಡಬೇಕು.

ದಿನನಿತ್ಯವು ಮಹಿಳೆಯರು ಒಂದಲ್ಲ ಒಂದು ರೀತಿಯ ಶೋಷಣೆಯನ್ನು ಅನುಭವಿಸುತ್ತಾರೆ. ಅದು ಅತ್ಯಾಚಾರ, ಆಸಿಡ ದಾಳಿ, ಲೈಂಗಿಕ ಕಿರುಕುಳ ಮತ್ತು ಸಾಗಾಣಿಕೆಯಂತಹ ಅನೇಕ ದೃಶಕೃತ್ಯಗಳಿಗೆ ಬಲಿಯಾಗುತ್ತಿದ್ದಾರೆ. ನಮ್ಮ ಸಂವಿಧಾನವು ಅನೇಕ ಮಹಿಳಾ ಪರವಾದ ಕಾನೂನುಗಳನ್ನು ರೂಪಿಸಿದರು ಮಹಿಳೆ ಇಂದಿಗೂ ಅನೇಕ ಸಂಕಷ್ಟಗಳಿಗೆ ಸಿಲುಕುತ್ತಿದ್ದಾಳೆ. ಇದಕ್ಕಿರುವ ಕಾರಣಗಳೇನು ಎಂಬುದನ್ನು ಅವಲೋಕಿಸಿದಾಗ ಕಂಡುಬರುವ ಅಂಶಗಳಲ್ಲಿ ಕಾನೂನುಗಳನ್ನು ರೂಪಿಸುವ ಮತ್ತು ಅವುಗಳನ್ನು ಅನುಷ್ಠಾನಕ್ಕೆ ತರುವ ಸಂದರ್ಭದಲ್ಲಿ ವ್ಯವಸ್ಥೆ ಮತ್ತು ಕಾನೂನಿನ ನಡುವೆ ಕಂದಕಗಳಿರುವುದು ಕಂಡುಬರುತ್ತದೆ. ಕಾನೂನುಗಳು ರೂಪುಗೊಳ್ಳುವ ಸಂದರ್ಭದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ಪ್ರಭಾವಕ್ಕೊಳಗಾಗಿ ಮಹಿಳೆಯರ ವಿರುದ್ಧದ ಅಪರಾಧಗಳಿಗಳಿಗೆ ಪೂರಕವಾಗಿ ಕಾರ್ಯ ನಿರ್ವಸಿಸುತ್ತಿರುವುದು ಕಂಡುಬರುತ್ತದೆ. ಮಹಿಳೆಯರ ಸಾಗಾಣಿಕೆ ಮತ್ತು ವೇಶ್ಯಾವಾಟಿಕೆಯನ್ನು ತಡೆಯಲು ಅನೈತಿಕ ವ್ಯವಹಾರ ನಿಗ್ರಹಣಾ ಕಾಯ್ದೆಯನ್ನು ತರಲಾಗಿದೆ ಹಾಗೂ ಕರ್ನಾಟಕ ಸರಕಾರ ಉಜ್ವಲಾ ಎಂಬ ಯೋಜನೆಯನ್ನು ಹಮ್ಮಿಕೊಂಡಿದೆ. ಉಜ್ವಲಾ ಯೋಜನೆಯು ಮುಖ್ಯವಾಗಿ ಮಕ್ಕಳ ಮತ್ತು ಮಹಿಳೆಯರ ಸಾಗಾಣಿಕೆಯನ್ನು ತಡೆಗಟ್ಟುವ ಉದ್ದೇಶವನ್ನು ಹೊಂದಿದೆ. ಆದರೆ ಸಾಮಾಜಿಕ ವ್ಯವಸ್ಥೆ ಮತ್ತು ಕಾನೂನಿನ ನಡುವೆ ಒಂದು ಪೂರಕವಾದ ವ್ಯವಸ್ಥೆಯ ಕೊರತೆ ಕಾಣುತ್ತದೆ. ಲೈಂಗಿಕ ಕಾರ್ಯಕರ್ತೆಯರು ಮತ್ತು ಬಲವಂತದ ವೇಶ್ಯಾವೃತ್ತಿಯಲ್ಲಿ ತೊಡಗಿರುವ ಅನೇಕ ಲೈಂಗಿಕ ಶೋಷಿತರನ್ನು ಯಾವುದೋ ಗೃಹ ಅಥವಾ ಸ್ಥಳದಿಂದ ಪೋಲಿಸರು ಅವರನ್ನು

ಹಿಡಿದುಕೊಂಡು, ತಾತ್ಕಾಲಿಕ ಪುನರವಸತಿ ಗೃಹಗಳಲ್ಲಿ ಇರಿಸುತ್ತಾರೆ. ಅಲ್ಲಿಯ ಆಪ್ತ ಸಮಾಲೋಚಕರು ಅವರೊಂದಿಗೆ ಸಮಾಲೋಚನೆಯನ್ನು ನಡೆಸಿ, ಅವರು ಈ ವೃತ್ತಿಗೆ ಬರಲು ಕಾರಣ ಮತ್ತು ಅವರ ಸ್ವ ವಿವರಗಳನ್ನು, ವಿಳಾಸವನ್ನು ತಿಳಿದುಕೊಳ್ಳುತ್ತಾರೆ. ಅವರ ಮನೆಯವರೊಂದಿಗೆ ಸಂಪರ್ಕ ಹೊಂದಿ ಅವರನ್ನು ಪುನರವಸತಿ ಗೃಹಗಳಿಂದ ಕರೆದುಕೊಂಡು ಹೋಗಲು ಮತ್ತು ಅವರು ಪುನಃ ಆ ವೃತ್ತಿಗೆ ಪ್ರವೇಶಿಸದೇ ಹಾಗೇ ಅವರಿಗೆ ತಿಳುವಳಿಕೆಯನ್ನು ನೀಡಿ, ಶೋಷಿತರನ್ನು ಅವರ ಪಾಲಕರು/ ಪೋಷಕರು/ ಗಂಡ/ ಸಂಬಂಧಿಕರ ಜೊತೆಗೆ ಕಳುಹಿಸಿಕೊಡುತ್ತಾರೆ. ಆದರೆ ವಿಪರ್ಯಾಸ ಎಂದರೆ ಎಷ್ಟೋ ಲೈಂಗಿಕ ಶೋಷಿತರು ಮತ್ತೆ ಅದೇ ವೃತ್ತಿಗೆ ಹಿಂದುರುಗಿರುತ್ತಾರೆ. ಅನೇಕ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು, ಪೋಲಿಸ ಇಲಾಖೆ ಮುಂತಾದವುಗಳು ಇಂತಹ ಅಪರಾಧವನ್ನು ತಡೆಗಟ್ಟಲು ಪ್ರಯತ್ನಿಸಿದರು ಅದು ಸಾಧ್ಯವಾಗುತ್ತಿಲ್ಲ.

**ಕೊನೆ ಟಿಪ್ಪಣಿಗಳು**


1. The CIA, World Fact Book Solo, Skyhorse Publishing Inc. (2009), p. 320
2. The Indian Express, June 28, 2011
3. Roma Debabrata, Analysing the Dimensions: Trafficking and HIV/AIDS in South Asia, STOP (NGO) Publication, New Delhi, (2002), p. 3.
4. National Crime Records Bureau, Ministry of Home Affairs. Govt, of India, for details see: http://ncrb.nic.in/, (Accessed on 03.07.2014)
5. 22 The Criminal law (Amendment) Act, 2013 came into effect from February 3rd, 2013.
6. The Indian Penal Code 1860, Section 370 (1).
7. Id. Section 370 (2).
8. 25 Id. Section 370 (3).
9. 26 Id. Section 370 (4).
10. 27 Id. Section 370 (5).
11. 28 Id. Section 370 (6).
12. Id. Section 370 (7).
13. 30 Id. Section 370 A (1).
14. Id. Section 370A (2).

15. The Chid Labour (Prohibition and Regulation) Act, 1986, Section 3.

16. The Information Technology Act, 2000, Section 67.

17. The Child Marriages Restraint Act, 1929, Section 12.

18. Sankar Sen, Trafficking in Women and Children in India , Orient Longman (2005), p. 196

19. The T ransplantation of Human Organ Act, 1994, Section 19(a)

20. P.M Nair, Trafficking in Women and Children for Sexual Exploitation, UNODC, New Delhi,(2007), p. 9

21. The Immoral Traffic (Prevention) Act, Section 7, substituted by the Immoral Traffic (Prevention) Amendment Act, 1978

ಅಧ್ಯಾಯ : ಆರು

# ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯ ವಸ್ತು ಸ್ಥಿತಿ ಮತ್ತು ವಿಶ್ಲೇಷಣೆ

ಅಧ್ಯಾಯ : ಆರು

# ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯ ವಸ್ತು ಸ್ಥಿತಿ ಮತ್ತು ವಿಶ್ಲೇಷಣೆ

## ಪ್ರಸ್ತಾವನೆ

ಹೆಣ್ಣಿನ ಲೈಂಗಿಕ ಶೋಷಣೆ ಎಂಬ ಸಂದರ್ಭವು ವಿಭಿನ್ನ ರೀತಿಯ ಆಯಾಮಗಳನ್ನು ಹೊಂದಿದ್ದು ಅದರಲ್ಲಿ ಅನೈತಿಕ ಸಾಗಾಣಿಕೆಯು ಒಂದಾಗಿದೆ. ಪುರಾತನ ಕಾಲದಿಂದಲೂ ಪರಂಪರಾಗತವಾಗಿ ಪುರುಷ ಕೇಂದ್ರಿತ ಸಮಾಜದ ಸಂಪ್ರದಾಯ, ಧಾರ್ಮಿಕ ಆಚರಣೆಗಳು, ಲಿಂಗ ಅಸಮಾನತೆ, ಹೆಣ್ಣಾದ ಕಾರಣಕ್ಕೆ ಸೃಷ್ಟಿಯಾದ ನಿರ್ಬಂಧಗಳನ್ನು, ಚೌಕಟ್ಟುಗಳನ್ನು ಪ್ರಶ್ನಿಸುವ, ಸಾಮಾಜಿಕ ಸಂಸ್ಥೆಗಳಲ್ಲಿನ ಅಸಮಾನತೆಗಳನ್ನು, ನಿಯಂತ್ರಣಗಳನ್ನು ಧಿಕ್ಕರಿಸಿ ಹೊರಗೆ ಹೋಗಲು ಪ್ರಯತ್ನಿಸುವ ಹೆಣ್ಣನ್ನು ಮತ್ತೆ ಅದೇ ಆವರಣದೊಳಗೆ ಉಳಿಯುವಂತೆ ಮಾಡುವಾಗ ಉಂಟಾಗುವ ಘರ್ಷಣೆ ಅವಳ ಮೇಲೆ ಮತ್ತಷ್ಟು ದೌರ್ಜನ್ಯ ಮತ್ತು ಹಿಂಸೆಗೆ ತಳ್ಳುತ್ತದೆ. ಮನುಷ್ಯ ನಾಗರೀಕನಾದಷ್ಟೂ, ಎಷ್ಟೇ ಆಧುನಿಕ ಮನೋಭಾವವನ್ನು ಬೆಳೆಸಿಕೊಂಡರೂ ಸಹ ಜೀವಿಯಾದ ಹೆಣ್ಣಿನ ಕುರಿತು ಯಾವುದೇ ರೀತಿಯ ಸೂಕ್ಷ್ಮತೆಯನ್ನು, ಅಂತಃಕರಣವನ್ನು ಸಮಾನತೆಯ ಪರಿಕಲ್ಪನೆಯನ್ನು ರೂಢಿಸಿಕೊಳ್ಳದಿರುವುದು ವಿಪರ್ಯಾಸ. ಹೆಣ್ಣನ್ನು ತನ್ನ ಪ್ರತಿಸ್ಪರ್ಧಿಯ ನೆಲೆಯಲ್ಲಿ ನೋಡುತ್ತಾ, ಅತ್ಯಂತ ಅನಾಗರೀಕವಾಗಿ ಅವಳೊಂದಿಗೆ ವ್ಯವಹಾರಿಸುತ್ತಿರುವುದು ಒಂದು ರೀತಿಯ ಆತಂಕಕಾರಿ ವಿಚಾರವಾಗಿವೆ. ಮನುಷ್ಯನಲ್ಲಿರುವ ಪ್ರಾಣಿ ಜನ್ಯ ಸ್ವಭಾವವನ್ನು ಉದ್ದೇಶ ಪೂರ್ವಕವಾಗಿ ಪಳಗಿಸಿ, ಸಮಾಜದ ಹಿತಕ್ಕಾಗಿ, ಉದಾರವೂ, ವಿನಯವೂ ಆದ ಮಾದರಿಗಳನ್ನು ಇಂದು ನಾವು ಅಳವಡಿಸಿಕೊಳ್ಳಬೇಕಿದೆ. ಇಲ್ಲವಾದಲ್ಲಿ ಮುಂದಿನ ದಿನಗಳು ಹೆಣ್ಣಿನ ವಿಚಾರದಲ್ಲಿ ಬಹಳ ಕ್ರೂರವಾಗಲಿದೆ. ಪುರುಷನ ಮನಸ್ಸಿನಲ್ಲಿ ಆಳವಾಗಿ ಬೇರೂರಿರುವ ಯಜಮಾನ್ಯ ಸ್ವಭಾವ ಹೆಣ್ಣನ್ನು ದೌರ್ಜನ್ಯಕ್ಕೀಡು ಮಾಡುತ್ತಿದೆ. ಈ ಧೋರಣೆ ಬದಲಾಗಿ ಹೆಣ್ಣಿನ ಬಗೆಗೆ ಸಹೃದಯತೆಯ ಭಾವನೆಯನ್ನು ಮೂಡುವಂತೆ ಮಾಡಬೇಕಿರುವುದು ಇಂದಿನ ಅವಶ್ಯಕತೆಯಾಗಿದೆ.

ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆ ಕುರಿತ ಸ್ಥಿತಿಗತಿಗಳನ್ನು ಮತ್ತು ಆ ಸಾಗಾಣಿಕೆಗೆ ಒಳಗಾದ ಹೆಣ್ಣು ಮಕ್ಕಳ ಸ್ಥಿತಿಗತಿಗಳನ್ನು ಅರ್ಥಮಾಡಿಕ್ಕೊಳ್ಳುವ ಉದ್ದೇಶದಿಂದ ಪ್ರಸ್ತುತ ಅಧ್ಯಾಯವನ್ನು ರೂಪಿಸಲಾಗಿದೆ. ಹೆಣ್ಣಿನ ಮೇಲೆ ನಡೆಯುವ ಲೈಂಗಿಕ ಶೋಷಣೆಯು ಕೇವಲ ಶೋಷಣೆಯಾಗಿರದೆ

ಅದು ಒಂದು ದೌರ್ಜನ್ಯವೆನಿಸಿದೆ. ಮೇಲು ನೋಟಕ್ಕೆ ಎರಡಕ್ಕೂ ವ್ಯತ್ಯಾಸವಿಲ್ಲವೆನಿಸಿದರೂ ಸಹ, ಒಂದು ಬಹು ಸೂಕ್ಷ್ಮವೆನಿಸುವ ಎಳೆಯನ್ನು ಗುರುತಿಸಬಹುದಾಗಿದೆ. ಲೈಂಗಿಕವಾಗಿ ಶೋಷಿತರಾಗುವ ೯೦% ಜನ ಹೆಣ್ಣು ಮಕ್ಕಳು ತಳಸಮುದಾಯದವರೇ ಆಗಿದ್ದಾರೆಂಬುದನ್ನು ಹಲವಾರು ವರದಿಗಳಿಂದ ಕಂಡುಕೊಳ್ಳಲಾಗಿದೆ. ಜಾತಿಯ ತಂತ್ರವನ್ನು ಹುಟ್ಟುಹಾಕಿದ ಪುರುಷ ಪ್ರಧಾನತೆಯು ತನ್ನ ಬಳಕೆಗೆ ಅಸಹಾಯಕರಾದ ಒಂದು ವರ್ಗವನ್ನು ಕನಿಷ್ಠ ಎಂದು ಗುರುತಿಸಿದ್ದೇ ಶೋಷಣೆಯ ಹುಟ್ಟು. ಧರ್ಮ, ಹುಟ್ಟು, ಸಾವು, ಪಾಪ, ಕರ್ಮ ಮೋಕ್ಷಗಳ ಕಲ್ಪನೆಯನ್ನು ಹುಟ್ಟುಹಾಕಿ ಅತ್ಯಂತ ಕೀಳುಮಟ್ಟದ ಗುಲಾಮಗಿರಿಯನ್ನು ಹುಟ್ಟುಹಾಕಿದ್ದು ಸಹ ಶೋಷಣೆಯ ಮುಂದುವರಿದ ಪ್ರವೃತ್ತಿಯಾಗಿದೆ.

ಮುಕ್ತವಾಗಿ ಕಾಡುಮೇಡುಗಳಲ್ಲಿ ಓಡಾಡಿಕೊಂಡಿದ್ದ ಮಾನವ ಜೀವಿಗೆ ಆಹಾರವನ್ನು ಹುಡುಕಿ ತಿನ್ನುವುದೊಂದೇ ಗೊತ್ತಿದ್ದ ಸಂದರ್ಭದಲ್ಲಿ ಲೈಂಗಿಕತೆ ಒಂದು ಸಹಜ ಕ್ರಿಯೆ ಅಷ್ಟೇ ಆಗಿತ್ತು. ಮುಂದೆ ಜೀವ ರಕ್ಷಣೆಗಾಗಿ ಒಂದೆಡೆ ಗುಂಪಾಗಿದ್ದು ಆಹಾರ ಸಂಗ್ರಹಣೆಯಿಂದ ಆಹಾರ ಉತ್ಪಾದನೆಯ ಹಂತಕ್ಕೆ ಏರಿದ್ದು ಕುಲ ಸಮುದಾಯದ ಜೀವನಕ್ಕೆ ನಾಂದಿ ಆಯಿತು. ಕೂಡಿ ದುಡಿಯುವ ಮತ್ತು ಹಂಚಿ ತಿನ್ನುವ ಪರಿಸರದಲ್ಲಿ ತಾಯಿ ಸತ್ಯವಾಗಿತ್ತು. ಲೈಂಗಿಕವಾಗಿ ಹಿಂಸೆಗೆ ಒಳಪಡಿಸಿದ್ದನ್ನು ಬಲಾತ್ಕರಿಸಿದ್ದನ್ನು ಅಧೀನಗೊಳಿಸಿದ್ದನ್ನು ನಾವು ಕಾಣುವುದಿಲ್ಲ. ಆಗ ಲೈಂಗಿಕತೆ ಒಂದು ಸಹಜ ಪ್ರಕ್ರಿಯೆಯೇ ಆಗಿತ್ತು. ಇಂಥ ಸಹಜ ಪ್ರಕ್ರಿಯೆಯೊಂದು ಹೆಣ್ಣನ್ನು ಜೀವಂತವಾಗಿ ಸುಡುವ ಸತಿ ಪದ್ಧತಿಯನ್ನು ಹುಟ್ಟುಹಾಕುತ್ತದೆ. ಹೆಣ್ಣಿನ ಲೈಂಗಿಕತೆ ಪವಿತ್ರವಾಗಬೇಕು ಎಂದು ಅವಳ ಲೈಂಗಿಕ ಸ್ವಾತಂತ್ರ್ಯಕ್ಕೆ ನಿರ್ಬಂಧ ಹೇರಲಾಯಿತು. ಅವಳ ಕನ್ಯತ್ವ ತನಗೇ ಮೀಸಲಾಗಿರಬೇಕೆಂಬ ಉದ್ದೇಶದಿಂದ ಪುರುಷ ಸಮಾಜ ಬಾಲ್ಯ ವಿವಾಹವನ್ನು ಹುಟ್ಟು ಹಾಕುತ್ತದೆ. ಇದರ ಜೊತೆಗೆ ಧಾರ್ಮಿಕ ನಂಬಿಕೆಗಳನ್ನು ಹುಟ್ಟುಹಾಕಿ ಹೆಣ್ಣನ್ನು ನಾಲ್ಕು ಗೋಡೆಗಳ ಒಳಕೆ ಲೈಂಗಿಕ ನಿರ್ಬಂಧದೊಂದಿಗೆ ಕೂಡಿಹಾಕಲಾಯಿತು. ಒಂದು ಕಡೆ ನಿರ್ಬಂಧವೇರಿದರೂ, ಪುರುಷ ತಾನು ಲೈಂಗಿಕವಾಗಿ ಮುಕ್ತವಾಗಿರಲು ಬಯಸುವ ಪ್ರಯತ್ನಗಳು, ಮುಕ್ತವಾಗಿರುವಂತಹ ಸಂದರ್ಭಗಳು ನಮ್ಮ ಕಣ್ಣ ಮುಂದೆ ಕಾಣುತ್ತಿದೆ. ಅವಳನ್ನು ಒಂದು ಕಡೆ ನಿರ್ಬಂಧಗಳಲ್ಲಿಟ್ಟು ಮತ್ತೊಂದು ಕಡೆ ಪುರುಷ ತಾನು ಮುಕ್ತವಾಗಿರಲು ಅದೇ ಹೆಣ್ಣನ್ನು ಶೋಷಿಸುವ ಪ್ರಕ್ರಿಯೆ ನಡೆಯುತ್ತಿದೆ. ಅವಳನ್ನೊಂದು ಬೋಗದ ವಸ್ತುವೆಂಬಂತೆ ರೂಪಿಸುತ್ತಾ, ಹೆಣ್ಣನ್ನು ಜಾಗತೀಕರಣದ ಮುಕ್ತ ಆರ್ಥಿಕ ನೀತಿಗಳು ಮಾರಾಟದ ಸರಕನ್ನಾಗಿಸುತ್ತಿರುವುದು ಹೆಣ್ಣಿನ ಶೋಷಣೆಯ ಇನ್ನೊಂದು ಮುಖ್ಯ ಕಾರಣವಾಗಿದೆ. ಹೀಗೆ ಮಾರಾಟವಾದ ಹೆಣ್ಣುಮಕ್ಕಳು, ಹೆಚ್ಚಿನದಾಗಿ ಅನೈತಿಕ ವ್ಯವಹಾರಗಳಿಗೆ ಒಳಗಾಗುವುದರಿಂದ ನನ್ನ ಅಧ್ಯಯನದ ಸಂದರ್ಭದಲ್ಲಿ ಹೇಗೆ ಹೆಣ್ಣುಮಕ್ಕಳು ಸಾಗಾಣಿಕೆಗೆ ಒಳಗಾದರು ಮತ್ತು ಯಾವ ಒತ್ತಡಗಳು ಆ ಹೆಣ್ಣುಮಕ್ಕಳನ್ನು ಅನೈತಿಕ ವ್ಯವಹಾರಗಳಲ್ಲಿ ಇರುವಂತೆ ಮಾಡುತ್ತಿದೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

ಕರ್ನಾಟಕದ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಮೈಸೂರು ಜಿಲ್ಲೆಗಳ ವ್ಯಾಪ್ತಿಯಿಂದ ಅನೈತಿಕ ಸಾಗಾಣಿಕೆಗೊಂಡು ಇಂದಿಗೂ ದೌರ್ಜನ್ಯದಲ್ಲಿ ಬದುಕುತ್ತಿರುವ ಆ ಹೆಣ್ಣುಮಕ್ಕಳ ಲೈಂಗಿಕ ಜೀತಕ್ಕೆ ಇರುವ ಸಾಮಾಜಿಕ, ಆರ್ಥಿಕ ಕಾರಣಗಳೇನು ಮತ್ತು ಆರೋಗ್ಯದ ಸ್ಥಿತಿಗತಿಗಳೇನು ಎಂಬುದನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಹೆಣ್ಣಿನ ಸಾಮಾಜಿಕ ಬದುಕನ್ನು ಕೇಂದ್ರವಾಗಿಸಿಕೊಂಡ ಸ್ತ್ರೀವಾದಿ ಅಧ್ಯಯನದ ಕ್ರಮದ ಹಲವು ಮಾದರಿಗಳು ಒಂದು ಸಾಮಾನ್ಯ ಗುರಿಯನ್ನು ಹೊಂದಿದೆ. ಹೆಣ್ಣಾಗಿ ಹುಟ್ಟಿದವರೆಂಬ ಒಂದೇ ಕಾರಣಕ್ಕೆ ಈ ಸಮಾಜದಲ್ಲಿ ನೋವು ಸಂಕಟಗಳಿಗೆ ಗುರಿಯಾಗಬೇಕಾಗಿ ಬರುವ ಸಂದರ್ಭವನ್ನು ನಾವು ಅರ್ಥಮಾಡಿಕೊಳ್ಳಬೇಕಿದೆ. ಹೆಣ್ಣಿನ ಸಾಮಾಜಿಕ ಬದುಕಿನ ಸ್ವರೂಪವನ್ನು ಅರ್ಥಮಾಡಿಕೊಳ್ಳುವ ಬಗೆಗಳನ್ನು ಶೋಧಿಸಿ ಅಧ್ಯಯನ ಮಾಡುವ ಕ್ರಮಗಳನ್ನು ಸ್ತ್ರೀವಾದಿ ಸಂಶೋಧನೆಯು ರೂಪಿಸುತ್ತದೆ. ಪುರುಷ ಕೇಂದ್ರಿತ ಚಿಂತನೆಗಳು ಈ ಸಮಾಜದಲ್ಲಿ ಭದ್ರವಾಗಿ ನೆಲೆಯೂರಿ ಯಶಸ್ವಿಯಾಗುವಲ್ಲಿ ಪಿತೃಪ್ರಧಾನತೆಯ ಪರಿಕಲ್ಪನೆಯು ಒಂದು ಸಮರ್ಥವಾದ ಹುನ್ನಾರವನ್ನು ಜಾರಿಗೊಳಿಸಿದೆ. ಈ ಹುನ್ನಾರವನ್ನು ಅರ್ಥ ಮಾಡಿಕೊಂಡಿರುವುದರಿಂದ ಸ್ತ್ರೀವಾದಿ ಸಂಶೋಧನೆಯು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿದೆ.

ಸಾಮಾಜಿಕ ಸಂಶೋಧನಾ ವಿಧಾನ ಮತ್ತು ಸ್ತ್ರೀವಾದಿ ಸಂಶೋಧನಾ ವಿಧಾನದಲ್ಲಿ ಪರಿಮಾಣಾತ್ಮಕ ಮಾಹಿತಿಗಳಿಗಿಂತಲೂ ಹೆಚ್ಚು ಮಹತ್ವವಿರುವುದು ಗುಣಾತ್ಮಕ ಮಾಹಿತಿಗೆ. ಅನೈತಿಕ ಸಾಗಾಣಿಕೆಗೆ ಒಳಗಾದ ಪೂರ್ವ ಸ್ಥಿತಿಯನ್ನು ಪ್ರಕರಣ ಅಧ್ಯಯನ ವಿಧಾನದ ಮೂಲಕ ವಿವರಿಸುವ ಮತ್ತು ಅವರ ಪರಿಸ್ಥಿತಿಯನ್ನು ಕಟ್ಟಿಕೊಡಲು ಇಲ್ಲಿ ಪ್ರಯತ್ನ ಮಾಡಲಾಗಿದೆ. ಹೀಗೆ ಮಾಡುವಾಗ ಅವರ ಈ ಸ್ಥಿತಿಗೆ ಕಾರಣಗಳು ಒತ್ತಡಗಳು ಮತ್ತು ಅನೈತಿಕ ಸಾಗಾಣಿಕೆಯಲ್ಲಿ ಅವರು ಎದುರಿಸಿದ ಸಾಮಾಜಿಕ, ಆರ್ಥಿಕ, ಆರೋಗ್ಯ ಮತ್ತು ಅದರ ರಕ್ಷಣೆಯ ವಿಷಯಗಳನ್ನು ಸೇರಿದಂತೆ ಇನ್ನು ಹಲವು ವಿಷಯಗಳನ್ನು ವಿಶ್ಲೇಷಣೆ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ. ಈ ಅಧ್ಯಯನವನ್ನು ಕೈಗೊಂಡಾಗ ಅಧ್ಯಯನದ ವಿಸ್ತಾರವನ್ನು ಕಂಡುಕೊಳ್ಳಲು ಸಂಖ್ಯಾತ್ಮಕ ಮಾಹಿತಿ ಸಂಗ್ರಹಣಾ ವಿಧಾನವನ್ನು ಬಳಸಿಕೊಳ್ಳಲಾಗಿದೆ. ಮೊದಲನೆಯದಾಗಿ ಸಂದರ್ಶನ ನಮೂನೆಯ ಮೂಲಕ ಕ್ಷೇತ್ರಕಾರ್ಯ ಕೈಗೊಳ್ಳಲಾಯಿತು. ರಕ್ಷಣಾತ್ಮಕ ಅಂಶಗಳ ವಿಚಾರದಲ್ಲಿ ಕೆಲವು ಭಾಗಗಳಲ್ಲಿ ಕೆಲವು ಸೂಕ್ಷ್ಮ ಪ್ರಶ್ನೆಗಳನ್ನು ಅವರ ವಿವೇಚನೆಗೆ ಬಿಟ್ಟು ಅವರು ನೀಡಿದ ಉತ್ತರಗಳನ್ನು ದಾಖಲಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇದರ ಜೊತೆಗೆ, ಈ ವಿಷಯಕ್ಕೆ ಸಂಬಂಧಿಸಿದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನಾನೇ ಗಮನಿಸಿದ ಮತ್ತು ಅವಲೋಕಿಸಿದ ವಿಷಯಗಳನ್ನು, ಮಾಡಿಕೊಂಡ ಟಿಪ್ಪಣೆಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇದರ ಜೊತೆಗೆ ಈಗಾಗಲೇ ಅನೈತಿಕ ಸಾಗಾಣಿಕೆಗೆ ಒಳಗಾಗಿ ಅಲ್ಲಿಂದ ರಕ್ಷಣೆಗೊಂಡಿರುವಂತಹ ಹೆಣ್ಣು ಮಕ್ಕಳ ಜೊತೆ ಸಂವಾದ ಅಲ್ಲಿ ಗಮನಿಸಿದ ಸೂಕ್ಷ್ಮವಾದ ಮಾಹಿತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅನೈತಿಕ ಸಾಗಾಣಿಕೆಗೆ ಒಳಗಾದ

ಹೆಣ್ಣು ಮಕ್ಕಳ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಭವಿಷ್ಯದ ನಿಲುವುಗಳೇನು ಎಂಬುದನ್ನು ಅರಿಯಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಯನದ ವಿಷಯವು ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯ ಕುರಿತಾಗಿದ್ದು ಅತ್ಯಂತ ಸೂಕ್ಷ್ಮ ಮತ್ತು ಸವಾಲಿನದ್ದಾಗಿದ್ದರಿಂದ ಕರ್ನಾಟಕದ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಮೈಸೂರು ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಆದರೆ ಪ್ರಕರಣ ಅಧ್ಯಯನವನ್ನು ಒಂದು ಕಾಲ ಮಿತಿಯಲ್ಲಿ ಪೂರ್ಣಗೊಳಿಸಬೇಕಾಗಿರುವುದರ ಸವಾಲೂ ಇದ್ದುದರಿಂದ ೨೩ ಪ್ರಕರಣಗಳಿಗೆ ಮಾತ್ರ ಅಧ್ಯಯನವನ್ನು ಸೀಮಿತಗೊಳಿಸಲಾಯಿತು. ಯಾವುದೇ ಅಧ್ಯಯನಕ್ಕೂ ಅದರ ಅಧ್ಯಯನದ ವಸ್ತುವಿಗೆ ಪೂರಕವಾಗಿ ಎಲ್ಲವನ್ನೂ ಅಧ್ಯಯನಕ್ಕೆ ಒಳಪಡಿಸಲು ಅಸಾಧ್ಯದ ವಿಷಯ. ಹೀಗಾಗಿ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗುರುತಿಸಿದ ಹೆಣ್ಣುಮಕ್ಕಳ ವಿವರಗಳನ್ನಷ್ಟೇ ಇಲ್ಲಿ ನೀಡಲಾಗಿದೆ. ಅನೈತಿಕ ಸಾಗಾಣಿಕೆಗೆ ಒಳಗಾದ ಹೆಣ್ಣುಮಕ್ಕಳ ಮೂಲ ಸ್ಥಳ ಅವರ ಊರು ಅಥವಾ ಗ್ರಾಮ, ಸಾಗಾಣಿಕೆಗೆ ಒಳಗಾದ ಸಂದರ್ಭದಲ್ಲಿನ ವಯಸ್ಸು, ಇಂದು ಅವರ ವಯಸ್ಸು, ಅವರ ಶೈಕ್ಷಣಿಕ ಮಟ್ಟ, ಜಾತಿ, ಧರ್ಮ, ಮತ್ತು ಅವರ ಪ್ರಸ್ತುತ ಉದ್ಯೋಗ ಮತ್ತು ಆದಾಯದ ಕುರಿತ ಮಾಹಿತಿ ಹಾಗೂ ಸಾಗಾಣಿಕೆಗೆ ಒಳಗಾಗಲು ಕಾರಣವಾದ ಸಂಗತಿಗಳ ಕುರಿತು ಮಾಹಿತಿಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಕೋಷ್ಟಕಗಳನ್ನು ಬಳಸಿಕೊಂಡಿದ್ದು ಅವಶ್ಯಕವೆನಿಸಿದಲ್ಲಿ ಪ್ರಕರಣಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

**೬.೧ ಕೋಷ್ಟಕ ೧: ಜಿಲ್ಲಾವಾರು ವಕ್ತೃಗಳು ದೊರೆತ ಪಟ್ಟಿ**

| ಕ್ರಸಂ. | ಜಿಲ್ಲೆ | ವಕ್ತೃಗಳ ಸಂಖ್ಯೆ | ಶೇಕಡ |
|---|---|---|---|
| ೧. | ಬೆಂಗಳೂರು ನಗರ ಜಿಲ್ಲೆ | ೯ | ೩೯.೧೩ |
| ೨. | ಬೆಂಗಳೂರು ಗ್ರಾಮಾಂತರ ಜಿಲ್ಲೆ | ೮ | ೩೪.೭೮ |
| ೩. | ಮೈಸೂರು ಜಿಲ್ಲೆ | ೬ | ೨೬.೦೮ |
| | ಒಟ್ಟು | ೨೩ | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ:** ಪ್ರಸ್ತುತ ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಗೆ ಸಂಬಂಧಿಸಿದ ಅಧ್ಯಯನಕ್ಕೆ ಒಳಪಟ್ಟ ೨೦ ಹೆಣ್ಣುಮಕ್ಕಳಲ್ಲಿ ಬೆಂಗಳೂರು ನಗರ ಜಿಲ್ಲೆಯಿಂದ ೯ ಹೆಣ್ಣುಮಕ್ಕಳು, ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ ೮ ಹೆಣ್ಣು ಮಕ್ಕಳು ಮತ್ತು ಮೈಸೂರು ಜಿಲ್ಲೆಯಿಂದ ೬ ಹೆಣ್ಣು ಮಕ್ಕಳು ಇದ್ದು ಇವರು ಸಾಗಾಣಿಕೆಗೆ ಒಳಗಾಗಿ ಅನೈತಿಕ ವ್ಯವಹಾರಗಳಿಗೆ ಮಾರಾಟವಾದ ಹೆಣ್ಣು

ಮಕ್ಕಳಾಗಿದ್ದಾರೆ. ಅಧ್ಯಯನದ ಅವಧಿಯಲ್ಲಿ ದೊರೆತ ಪ್ರಕರಣಗಳಾಗಿದ್ದು ಕ್ಷೇತ್ರಕಾರ್ಯದ ಮೂಲಕ ಗುರುತಿಸಿದವರಾಗಿದ್ದಾರೆ.

ಬೆಂಗಳೂರು ನಗರ ಜಿಲ್ಲೆ ಮತ್ತು ಗ್ರಾಮಾಂತರ ಜಿಲ್ಲೆಗಳು ಕೈಗಾರಿಕಾ ಪ್ರದೇಶಗಳನ್ನು ಹೊಂದಿದ್ದು ಮತ್ತು ಆಧುನೀಕರಣದಲ್ಲಿ ಮಿಂದೆದ್ದಿರುವಂತಹ ಜಿಲ್ಲೆಗಳಾಗಿವೆ. ಹಲವಾರು ಜೀವನೋಪಾಯಗಳನ್ನು ಒದಗಿಸುವ ಮತ್ತು ಅವಕಾಶಗಳನ್ನು ನೀಡುವ ಜಿಲ್ಲೆಗಳಾಗಿವೆ. ಮೈಸೂರು ಜಿಲ್ಲೆಯು ಪ್ರವಾಸೋದ್ಯಮದ ಜೊತೆಗೆ ಕೈಗಾರಿಕಾ ಪ್ರದೇಶವನ್ನು ಸಹ ಹೊಂದಿದ್ದು ಯುವ ಜನತೆಯನ್ನು ತನ್ನತ್ತ ಸೆಳೆಯುತ್ತಿರುತ್ತದೆ. ಈ ಮೂರು ಜಿಲ್ಲೆಗಳು ವೇಗವಾಗಿ ಬೆಳೆಯುತ್ತಿರುವ ಜಿಲ್ಲೆಗಳಾಗಿದ್ದು, ಅಪರಾಧಗಳ ಸಂಖ್ಯೆಯು ಅಷ್ಟೇ ವೇಗವಾಗಿ ಬೆಳೆಯುತ್ತಿದೆ.

**೬.೨ ಕೋಷ್ಟಕ ೨: ವಕ್ತೃಗಳ ಪ್ರಸ್ತುತ ವಯಸ್ಸು**

| ಕ್ರಸಂ. | ವಯೋಮಾನ | ಸಂಖ್ಯೆ | ಶೇಕಡ |
|---|---|---|---|
| ೧. | ೧೫-೨೦ | ೧ | ೪.೩೪ |
| ೨. | ೨೧-೨೫ | ೧೦ | ೪೩.೪೭ |
| ೩. | ೨೬-೩೦ | ೮ | ೩೪.೭೮ |
| ೪. | ೩೧-೩೫ | ೪ | ೧೭.೩೯ |
| | ಒಟ್ಟು | ೨೩ | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ:** ಪ್ರಸ್ತುತವಾಗಿ ವಕ್ತೃಗಳು ಯಾವ ವಯಸ್ಸಿನವರಾಗಿದ್ದಾರೆ ಎಂಬುದನ್ನು ಮೇಲಿನ ಕೋಷ್ಟಕದಿಂದ ತಿಳಿಯಬಹುದಾಗಿದೆ. ಕೋಷ್ಟಕದಲ್ಲಿ ನೀಡಿರುವ ಅಂಕಿ ಅಂಶಗಳ ಪ್ರಕಾರ ಒಟ್ಟು ಹೆಣ್ಣುಮಕ್ಕಳಲ್ಲಿ ಶೇಕಡಾ ೪.೩೪ ಹೆಣ್ಣುಮಕ್ಕಳು ೧೫-೨೦ ವರ್ಷದ ವಯಸ್ಸಿನವರಾಗಿದ್ದು ಅತಿ ಕಡಿಮೆ ಸಂಖ್ಯೆಯಲ್ಲಿರುವುದು ತಿಳಿದು ಬರುತ್ತದೆ. ಶೇಕಡಾ ೪೩.೪೭ ಹೆಣ್ಣು ಮಕ್ಕಳು ೨೧ ರಿಂದ ೨೫ ವಯೋಮಾನದವರಾಗಿದ್ದು ಅತಿ ಹೆಚ್ಚು ಸಂಖ್ಯೆಯಲ್ಲಿ ಇರುವುದು ತಿಳಿದುಬರುತ್ತದೆ. ಶೇಕಡಾ ೩೪.೭೮ ಹೆಣ್ಣುಮಕ್ಕಳು ೨೬ರಿಂದ ೩೦ ವಯೋಮಾನದವರು. ಶೇಕಡಾ ೧೭.೩೯ ಹೆಣ್ಣುಮಕ್ಕಳು ೩೧-೩೫ ವಯೋಮಾನದವರಾಗಿರುವುದು ತಿಳಿಯುತ್ತದೆ. ಇಲ್ಲಿ ೨೧-೨೫ ವಯೋಮಾನದ ಹೆಣ್ಣು ಮಕ್ಕಳೇ ಹೆಚ್ಚಾಗಿದ್ದು ಇವರು ಬಹಳ ಚಿಕ್ಕ ವಯಸ್ಸಿನಲ್ಲಿಯೇ ಅನೈತಿಕ ಸಾಗಾಣಿಕೆಗೆ ಒಳಪಟ್ಟಿರುವುದು ದೃಢಪಟ್ಟಿದೆ. ಶೇಕಡಾ ೪.೩೪ ಹೆಣ್ಣುಮಕ್ಕಳು ಅಂದರೆ ೧೯ ವರ್ಷದ

ವಯೋಮಾನವರಾಗಿದ್ದು, ಚಿಕ್ಕ ವಯಸ್ಸಿಗೆ ಅನೈತಿಕ ವ್ಯವಹಾರಕ್ಕೆ ಸಾಗಾಣಿಕೆಯಾಗಿರುತ್ತಾರೆ. ವಕ್ತೃಗಳು ಸಾಗಾಣಿಕೆಯಾದ ವಯೋಮಾನವನ್ನು ಮುಂದಿನ ಕೋಷ್ಟಕದಲ್ಲಿ ತಿಳಿಸಲಾಗಿದೆ.

**೬.೩ ಕೋಷ್ಟಕ ೩: ಅನೈತಿಕ ಸಾಗಾಣಿಕೆಯಾದ ಸಮಯದ ವಯಸ್ಸು**

| ಕ್ರಸಂ. | ವಯೋಮಾನ | ಸಂಖ್ಯೆ | ಶೇಕಡ |
|---|---|---|---|
| ೧. | ೧೧ ರಿಂದ ೧೫ | ೭ | ೩೦.೪೩ |
| ೨. | ೧೬ ರಿಂದ ೨೦ | ೧೦ | ೪೩.೪೭ |
| ೩. | ೨೧ ರಿಂದ ೨೫ | ೬ | ೨೬.೦೮ |
| ಒಟ್ಟು | | ೨೩ | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಅಧ್ಯಯನಕ್ಕೊಳಪಡಿಸಿದ ಎಲ್ಲಾ ಹೆಣ್ಣು ಮಕ್ಕಳು ಸಾಗಾಣಿಕೆಗೆ ಒಳಪಟ್ಟಾಗಿನ ವಯಸ್ಸನ್ನು ಗಮನಿಸಿದರೆ ಶೇ. ೪೩.೪೭ರಷ್ಟು ಹೆಣ್ಣು ಮಕ್ಕಳು ೧೬ರಿಂದ ೨೦ ವಯಸ್ಸಿನೊಳಗೆ ಸಾಗಾಣಿಕೆಗೆ ಒಳಪಟ್ಟಿದ್ದಾರೆ. ಇದನ್ನು ಇನ್ನೂ ಆಳವಾಗಿ ವಿಶ್ಲೇಷಿಸುವುದಾದರೆ, ೧೬ ವಯಸ್ಸಿನಲ್ಲಿ ೨ ಹೆಣ್ಣುಮಕ್ಕಳು, ೧೭ ವಯಸ್ಸಿನವರು ಒಬ್ಬರು. ೧೮ ವಯಸ್ಸಿನವರು ೫ ಹೆಣ್ಣು ಮಕ್ಕಳು, ೧೯ ವಯಸ್ಸಿನವರು ಒಬ್ಬರು ಮತ್ತು ೨೦ ವಯೋಮಾನದವರು ಒಬ್ಬರು ಹೆಣ್ಣುಮಕ್ಕಳು ತಮ್ಮ ಅತಿ ಚಿಕ್ಕವಯಸ್ಸಿಗೆ ಸಾಗಾಣಿಕೆಗೆ ಒಳಗಾಗಿ ಅನೈತಿಕ ವ್ಯವಹಾರಗಳಿಗೆ ಮಾರಾಟವಾಗಿದ್ದಾರೆ. ಇನ್ನೂ ೧೧ ರಿಂದ ೧೫ ವಯೋಮಾನದಲ್ಲಿ ಶೇ. ೩೦.೪೩ ಹೆಣ್ಣುಮಕ್ಕಳು ಸಾಗಾಣಿಕೆಗೆ ಒಳಪಟ್ಟಿದ್ದಾರೆ. ಅಂದರೆ ೧೩ನೇ ವಯಸ್ಸಿನಲ್ಲಿ ೩ ಜನ ಹೆಣ್ಣು ಮಕ್ಕಳು, ೧೪ ನೇ ವಯಸ್ಸಿನಲ್ಲಿ ೨ಜನ ಹೆಣ್ಣುಮಕ್ಕಳು, ೧೫ನೇ ವಯಸ್ಸಿನಲ್ಲಿ ೨ ಜನ ಹೆಣ್ಣುಮಕ್ಕಳು ಸಾಗಾಣಿಕೆಯಾಗಿದ್ದಾರೆ. ೨೧ರಿಂದ ೨೫ ವಯೋಮಾನದವರಲ್ಲಿ ೬ ಜನ ಹೆಣ್ಣು ಮಕ್ಕಳು ಕ್ರಮವಾಗಿ ೨೧, ೨೩, ೨೪, ೨೫,ನೇ ವಯಸ್ಸಿನಲ್ಲಿ ಸಾಗಾಣಿಕೆಗೆ ಒಳಗಾಗಿದ್ದಾರೆ.

ಅಧ್ಯಯನಕ್ಕೆ ಒಳಪಡಿಸಿದ ೨೩ ಪ್ರಕರಣಗಳಲ್ಲಿ ೧೩ನೇ ವಯಸ್ಸಿನಿಂದ ೨೫ನೇ ವಯಸ್ಸಿನವರೆಗೂ ಸಾಗಾಣಿಕೆ ನಿರಂತರವಾಗಿ ನಡೆದಿದೆ. ಇದನ್ನು ಗಮನಿಸಿದರೆ ೧೩ ರಿಂದ ೨೦ ವಯಸ್ಸಿನವರೆ ಹೆಚ್ಚು ಮಾರಾಟವಾಗಿದ್ದಾರೆ. ಅವರೆಲ್ಲಾ ಎಳೆಯ ವಯಸ್ಸಿನ ಹೆಣ್ಣು ಮಕ್ಕಳು ಆಗಿದ್ದಾರೆ. ಅಂದರೆ ಅನೈತಿಕ ವ್ಯವಹಾರಗಳಿಗೆ ಹೆಚ್ಚು ಬಳಕೆಯಾಗುತ್ತಿರುವುದು ಮತ್ತು ವೇಶ್ಯಾವಾಟಿಕೆಗೆ ಹೆಚ್ಚು

ಸಾಗಾಣಿಕೆಯಾಗುತ್ತಿರುವುದು ಅಪ್ರಾಪ್ತ, ವಯಸ್ಕ ಹೆಣ್ಣುಮಕ್ಕಳೇ ಎಂಬುದನ್ನು ಈ ಕೋಷ್ಟಕ ವಿವರಿಸುತ್ತದೆ. ಅಪ್ರಾಪ್ತ, ವಯಸ್ಕ ಹೆಣ್ಣುಮಕ್ಕಳಿಗೆ ಬೇಡಿಕೆ ಹೆಚ್ಚಿನದಾಗಿರುವುದು ಇದಕ್ಕೆ ಕಾರಣವೆನಿಸುತ್ತದೆ. ಮತ್ತು ಅಪ್ರಾಪ್ತರು ಮತ್ತು ವಯಸ್ಕರನ್ನು ಸುಲಭವಾಗಿ ಅಪಹರಿಸಲು ಅಥವಾ ಮೋಸ ಮಾಡಲು ಸಾಧ್ಯತೆಗಳಿರುವುದು ಈ ಕೃತ್ಯವೆಸಗಲು ಮತ್ತಷ್ಟು ಪುಷ್ಟಿ ನೀಡುತ್ತವೆ ಎನಿಸುತ್ತದೆ.

**೬.೪ ಕೋಷ್ಟಕ ೪: ವಕ್ತೃಗಳ ಧರ್ಮ**

| ಕ್ರಸಂ. | ಧರ್ಮ | ವಕ್ತೃಗಳ ಸಂಖ್ಯೆ | ಶೇಕಡ |
|---|---|---|---|
| ೧. | ಬೌದ್ಧ | ೧ | ೪.೩೪ |
| ೨. | ಹಿಂದೂ | ೧೯ | ೮೨.೬೦ |
| ೩. | ಮುಸ್ಲಿಂ | ೨ | ೮.೬೯ |
| ೪. | ಕ್ರಿಶ್ಚಿಯನ್ | ೧ | ೪.೩೪ |
| | ಒಟ್ಟು | ೨೦ | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ:**ಈ ಮೇಲಿನ ಕೋಷ್ಟಕವನ್ನು ಗಮನಿಸಿದರೆ ಶೇ.೫ ಬೌದ್ಧಧರ್ಮದವರು, ಶೇ. ೮೨.೬೦ ಹಿಂದೂ ಧರ್ಮದವರು ಶೇ. ೮.೬೯ ಮುಸ್ಲಿಂ, ಶೇ.೪.೩೪ ಕ್ರಿಶ್ಚಿಯನ್ ಧರ್ಮದ ಹೆಣ್ಣುಮಕ್ಕಳಾಗಿದ್ದಾರೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ದೊರೆತ ಮಾಹಿತಿಯಾಗಿದ್ದು, ಸಾಗಾಣಿಕೆಗೆ ಒಳಗಾದ ಹೆಣ್ಣು ಮಕ್ಕಳಲ್ಲಿ ಹೆಚ್ಚಿನವರು ಹಿಂದೂ ಧರ್ಮದವರಾಗಿದ್ದಾರೆ. ಹಿಂದೂ ಧರ್ಮದವರಾದ ಈ ಹೆಣ್ಣು ಮಕ್ಕಳನ್ನು ಅವರ ಜಾತಿ ಆಧಾರದ ಮೇಲೆ ವಿಂಗಡಿಸಿದಾಗ, ಪರಿಶಿಷ್ಟ ಪಂಗಡಕ್ಕೆ ಸೇರಿದವರು ಒಬ್ಬರು ಹೆಣ್ಣು ಮಕ್ಕಳಾಗಿದ್ದಾರೆ. ಪರಿಶಿಷ್ಟ ಜಾತಿಗೆ ಸೇರಿದ ಹೆಣ್ಣುಮಕ್ಕಳು ೧೦ ಜನರಿದ್ದು, ಅವರನ್ನು ಒಳ ಜಾತಿಗಳ ಆಧಾರದಲ್ಲಿ ವಿಂಗಡಿಸಿದಾಗ ಮಾದಿಗ-೨ ಹೊಲೆಯರು-೭ ಮತ್ತು ಲಂಬಾಣಿ ಸಮುದಾಯದವರು-೧ ಎಂಬುದು ವಿಶ್ಲೇಷಣೆಯಿಂದ ತಿಳಿದು ಬಂದಿದೆ. ಲಿಂಗಾಯತ -೧, ಒಕ್ಕಲಿಗ-೧, ಬೆಸ್ತರು-೧ ಮತ್ತು ಬಣಜಿಗ ಸಮುದಾಯಕ್ಕೆ ಸೇರಿದವರು-೧ ಎಂಬ ಮಾಹಿತಿಯು ಕ್ಷೇತ್ರಕಾರ್ಯದಿಂದ ದೊರೆತಿದೆ. ಈ ಮೇಲಿನ ವಿಶ್ಲೇಷಣೆಯನ್ನು ಗಮನಿಸಿದರೆ. ಹಿಂದೂ ಧರ್ಮದ ಹೆಣ್ಣು ಮಕ್ಕಳೇ ಹೆಚ್ಚು ಅನೈತಿಕ ಸಾಗಾಣಿಕೆಗೆ ಒಳಗಾಗಿದ್ದಾರೆ ಮತ್ತು ತಳಸಮುದಾಯದ ಅದರಲ್ಲೂ ಪರಿಶಿಷ್ಟ ಜಾತಿ ಮತ್ತು ವರ್ಗದ ಹೆಣ್ಣು ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ಅನ್ಯಾಯಕ್ಕೆ ಒಳಗಾಗಿದ್ದಾರೆ. ಈ ಅಂಶವನ್ನು ಗಮನಿಸಿದರೆ ಹೆಣ್ಣು ತಾನು ಹೆಣ್ಣಾಗಿ

ಎರಡನೇ ದರ್ಜೆಯಲ್ಲಿ ಗುರುತಿಸಿಕೊಂಡು ಎದುರಿಸುತ್ತಿರುವ ಅಸಮಾನತೆ ಮತ್ತು ವರ್ಗ ರಚನೆಯಲ್ಲಿಯು ಕೆಳವರ್ಗದ ಹೆಣ್ಣಾದ ಕಾರಣಕ್ಕೆ ಅನ್ಯಾಯಕ್ಕೆ ಒಳಗಾಗಿದ್ದಾಳೆ ಎಂಬುದನ್ನು ಈ ವಿಶ್ಲೇಷಣೆಯಿಂದ ತಿಳಿಯುತ್ತಾರೆ.

**೬.೫ ಕೋಷ್ಟಕ ೫: ವಕ್ತೃಗಳ ಶೈಕ್ಷಣಿಕ ಸ್ಥಿತಿಗತಿ**

| ಕ್ರಸಂ. | ಶಿಕ್ಷಣದ ಮಟ್ಟ | ಸಂಖ್ಯೆ | ಶೇಕಡ |
|---|---|---|---|
| ೧. | ಪ್ರಾಥಮಿಕ ಮತ್ತು ಪ್ರೌಢ | ೧೦ | ೪೩.೪೭ |
| ೨. | ಪದವಿ ಪೂರ್ವ | ೨ | ೮.೬೯ |
| ೩. | ಪದವಿ | ೩ | ೧೩.೦೪ |
| ೪. | ಅನಕ್ಷರಸ್ಥರು | ೮ | ೩೪.೭೮ |
| | **ಒಟ್ಟು** | **೨೩** | **೧೦೦%** |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಹೆಣ್ಣು ಇಂದು ಎದುರಿಸುತ್ತಿರುವ ಎಲ್ಲಾ ರೀತಿಯ ತಾರತಮ್ಯ ಮತ್ತು ಸಾಮಾಜಿಕ ಸಮಸ್ಯೆಗಳಲ್ಲಿ ಅನಕ್ಷರತೆಯ ಪಾತ್ರವೂ ಸಹ ಇದೆ ಎಂಬುದನ್ನು ಸಾಬೀತು ಪಡಿಸಲು ಈ ಮೇಲಿನ ವಕ್ತೃಗಳ ಶೈಕ್ಷಣಿಕ ಸ್ಥಿತಿಗತಿಯ ಕೋಷ್ಟಕ ಸಾಕ್ಷಿಯಾಗಿದೆ. ಅಧ್ಯಯನಕ್ಕೆ ಒಳಪಡಿಸಿದ ಶೇ ೩೪.೭೮ ಹೆಣ್ಣು ಮಕ್ಕಳು ಅನಕ್ಷರಸ್ಥರಾಗಿದ್ದಾರೆ. ಇವರಲ್ಲಿ ಹಲವು ಹೆಣ್ಣುಮಕ್ಕಳು ಬಡತನ ಮತ್ತು ಕೆಳವರ್ಗದ ಜಾತಿಯ ಕಾರಣಕ್ಕಾಗಿ ಶಾಲೆಗೆ ಸೇರಲಾಗದೆ ಅನಕ್ಷರಸ್ಥರಾಗಿದ್ದಾರೆ. ಶಾಲೆಗೆ ಸೇರಿದರೂ ಬಡತನ ಮತ್ತು ಮನೆಯಲ್ಲಿ ತನಗಿಂತ ಚಿಕ್ಕ ಮಕ್ಕಳನ್ನು ನೋಡಿಕೊಳ್ಳುವ ಅನಿವಾರ್ಯತೆ, ಹೊಲದಲ್ಲಿ ದುಡಿತದ ಕಾರಣಕ್ಕೆ ಶಾಲೆಯಿಂದ ದೂರ ಉಳಿದವರಾಗಿದ್ದಾರೆ. ಶೇ.೪೦ ಹೆಣ್ಣುಮಕ್ಕಳಲ್ಲಿ ಮುಸ್ಲಿಂ ಸಮುದಾಯದ ಒಬ್ಬಳು ಹೆಣ್ಣುಮಗಳು ಸಹ ಅನಕ್ಷರಸ್ಥೆಯಾಗಿದ್ದಾಳೆ. ಹೆಚ್ಚಿನವರು ಪರಿಶಿಷ್ಟ ಜಾತಿಗೆ ಸೇರಿದ ಹೆಣ್ಣುಮಕ್ಕಳಾಗಿದ್ದಾರೆ. ಪ್ರಾಥಮಿಕ ಮತ್ತು ಫ್ರೌಡ ಶಾಲೆಯವರೆಗೂ ಶೇ. ೪೩.೪೭ರಷ್ಟು ಹೆಣ್ಣುಮಕ್ಕಳು ಶಿಕ್ಷಣ ಪಡೆದವರಾಗಿದ್ದಾರೆ.

ಇವರಲ್ಲಿ ಮುಸ್ಲಿಂ–೧ ಇದ್ದು ಉಳಿದವರೆಲ್ಲಾ ಹಿಂದೂ ಧರ್ಮದವರಾಗಿದ್ದಾರೆ. ಬಹಳಷ್ಟು ಹೆಣ್ಣು ಮಕ್ಕಳು ೬ನೇ ತರಗತಿ, ೭ನೇ ತರಗತಿ, ೮ನೇ ತರಗತಿಗೆ ಶಾಲೆ ಬಿಟ್ಟಿದ್ದಾರೆ. ಕೆಲವರು ಮದುವೆಯ ಕಾರಣಕ್ಕೆ ಶಾಲೆ ಬಿಟ್ಟವರಾಗಿದ್ದಾರೆ. ಶೇ.೨೫ರಷ್ಟು ಹೆಣ್ಣುಮಕ್ಕಳು ೧೦ನೇ ತರಗತಿವರೆಗೆ ಶಿಕ್ಷಣವನ್ನು ಪಡೆಯಲು ಸಾಧ್ಯವಾಗಿದೆ. ಅನಕ್ಷರಸ್ಥ ಮತ್ತು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಪಡೆದವರಲ್ಲಿ ಬಹಳಷ್ಟು ಹೆಣ್ಣು ಮಕ್ಕಳು ಗ್ರಾಮೀಣ ಹಿನ್ನೆಲೆಯವರಾಗಿದ್ದಾರೆ. ಶೇ.೮.೬೯ ರಷ್ಟು

ಪದವಿ ಪೂರ್ವ ಶಿಕ್ಷಣವನ್ನು ಹೊಂದಿದ್ದು, ಶೇ.೧೩.೦೪ ರಷ್ಟು ಪದವಿ ಪಡೆದವರಾಗಿದ್ದಾರೆ. ಈ ಮೇಲಿನ ಕೋಷ್ಟಕವನ್ನು ವಿಶ್ಲೇಷಿಸಿದಾಗ ತಿಳಿದು ಬಂದ ಅಂಶವೆಂದರೆ ಅನೈತಿಕ ಸಾಗಾಣಿಕೆಗೆ ಹೆಣ್ಣು ಮಕ್ಕಳನ್ನು ಒಳಗು ಮಾಡುವಲ್ಲಿ ಅನಕ್ಷರತೆಯು ಪ್ರಮುಖ ಪಾತ್ರ ವಹಿಸಿದೆ ಮತ್ತು ಬಡತನ ಹಾಗೂ ವರ್ಗ ತಾರತಮ್ಯಗಳು ಅನಕ್ಷರತೆಗೆ ಕಾರಣಗಳು ಎಂಬುದನ್ನು ತಿಳಿಯಬಹುದಾಗಿದೆ.

**೬.೬ ಕೋಷ್ಟಕ ೬: ವಕ್ತೃಗಳ ವೈವಾಹಿಕ ಸ್ಥಿತಿ**

| ಕ್ರಸಂ. | ವೈವಾಹಿಕ ಸ್ಥಿತಿ | ಸಂಖ್ಯೆ | ಶೇಕಡ |
|---|---|---|---|
| ೧. | ಅವಿವಾಹಿತೆ | ೯ | ೩೯.೧೩ |
| ೨. | ವಿವಾಹಿತೆ | ೭ | ೩.೪೩ |
| ೩. | ಬಾಲ್ಯವಿವಾಹ | ೪ | ೧೭.೩೯ |
| ೪. | ಬಾಲ್ಯ ವಿವಾಹ + ವಿಧವೆ | ೨ | ೮.೬೯ |
| ೫. | ದೇವದಾಸಿ | ೧ | ೪.೩೪ |
| | ಒಟ್ಟು | ೨೩ | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಈ ಮೇಲಿನ ಕೋಷ್ಟಕವು ಅಧ್ಯಯನಕ್ಕೆ ಒಳಪಟ್ಟ ಅನೈತಿಕ ಸಾಗಾಣಿಕೆಗೊಂಡಿದ್ದ ಹೆಣ್ಣುಮಕ್ಕಳ ವೈವಾಹಿಕ ಸ್ಥಿತಿಯನ್ನು ಸೂಚಿಸುತ್ತದೆ. ಅಧ್ಯಯನಕ್ಕೆ ಒಳಪಟ್ಟ ಹೆಣ್ಣುಮಕ್ಕಳಲ್ಲಿ ಶೇ ೩೯.೧೩ ಹೆಣ್ಣುಮಕ್ಕಳು ಅವಿವಾಹಿತೆಯರಾಗಿದ್ದಾರೆ. ಮತ್ತು ಇವರಲ್ಲಿ ಹಲವರು ಅನಕ್ಷರಸ್ಥರೂ ಆಗಿದ್ದು ತಮ್ಮ ಅಪ್ರಾಪ್ತ ವಯಸ್ಸಿನಲ್ಲಿಯೇ ಸಾಗಾಣಿಕೆಗೆ ಒಳಪಟ್ಟವರಾಗಿದ್ದಾರೆ. ಈ ಅವಿವಾಹಿತ ಹೆಣ್ಣುಮಕ್ಕಳಲ್ಲಿ ಎಲ್ಲಾ ಧರ್ಮದ ಜಾತಿಯ ಹೆಣ್ಣುಮಕ್ಕಳೂ ಇರುವರು. ಶೇ. ೩೦.೪೩ರಷ್ಟು ಹೆಣ್ಣು ಮಕ್ಕಳು ವಿವಾಹಿತರಾಗಿದ್ದು ಶೇ. ೪.೩೪ರಷ್ಟು ಹೆಣ್ಣುಮಕ್ಕಳು 'ಗುಜ್ಜಾರ್' ಮದುವೆಗೆ ಒಳಪಟ್ಟವರಾಗಿದ್ದು, ತಮ್ಮ ವೈವಾಹಿಕ ಸ್ಥಿತಿಗೆ ಬೇಸತ್ತು, ತಪ್ಪಿಸಿಕೊಂಡು ಬಂದವರಾಗಿದ್ದಾರೆ. ಶೇ.೮.೬೯ರಷ್ಟು ಹೆಣ್ಣು ಮಕ್ಕಳು ತಾವು ಪ್ರೇಮಿಸಿ ಓಡಿ ಹೋಗಿ ವಿವಾಹವಾಗಿ ನಂತರ ಪ್ರೀತಿಸಿದವರಿಂದಲೇ ಮಾರಾಟ ಆದವರಾಗಿದ್ದಾರೆ. ಶೇ. ೪.೩೪ರಷ್ಟು ಹೆಣ್ಣು ಮಕ್ಕಳು ಮುಸ್ಲಿಂ ಸಮುದಾಯದವರಾಗಿದ್ದು ಸಾಂಪ್ರದಾಯಿಕ ವಿವಾಹದ ನಂತರ ಸ್ವತಃ ತಮ್ಮ ಪತಿಯ ಮತ್ತು ಪತಿಯ ಮನೆಯವರಿಂದಲೇ ಅನೈತಿಕ ವ್ಯವಹಾರಗಳಿಗೆ ಒಳಪಟ್ಟವರಾಗಿದ್ದಾರೆ. ಶೇ.೪.೩೪ ಹೆಣ್ಣು ಮಕ್ಕಳು ಬಡತನ ಅಸಹಾಯಕತೆಯಿಂದಾಗಿ ಅನೈತಿಕ ವ್ಯವಹಾರದಲ್ಲಿ ಸಿಲುಕಿದವರಾಗಿದ್ದಾರೆ. ಉಳಿದಂತೆ ಶೇ.೧೩.೦೪ ಹೆಣ್ಣು ಮಕ್ಕಳು ಅನೈತಿಕ ಸಾಗಾಣಿಕೆಗೆ ಬಲಿಯಾಗುವ ಮೊದಲೇ ಬಾಲ್ಯ ವಿವಾಹ ಪದ್ಧತಿಗೆ ಬಲಿಯಾದವರಾಗಿದ್ದಾರೆ. ಇದರಿಂದಾಗಿ ತಮ್ಮ ಶಿಕ್ಷಣದ ಅವಕಾಶವನ್ನು ಕಳೆದುಕೊಂಡವರಾಗಿದ್ದಾರೆ. ಶೇ. ೪.೩೪ ಹೆಣ್ಣು

ಮಕ್ಕಳು ಮುಸ್ಲಿಂ ಸಮುದಾಯದವರು, ಶೇ.೮.೬೯ ಹಿಂದು ಸಮುದಾಯದವರಾಗಿದ್ದು, ಬಡತನದ ಕಾರಣಕ್ಕೆ ಸಂಬಂಧಿಕರಲ್ಲೇ ಹುಡುಕಿ ವಿವಾಹ ಮಾಡಿದ್ದಾರೆ. ಮದುವೆ ಮಾಡಿದರೆ ಮಗಳು ತನ್ನ ಮನೆಯಲ್ಲಿ ತಾನು ಸುಖವಾಗಿ ಇರುತ್ತಾಳೆ ಎಂದು ಚಿಕ್ಕ ವಯಸ್ಸಿಗೆ ವಿವಾಹ ಮಾಡಿದ ಕಾರಣ ಶೇ. ೮.೬೯ ಹೆಣ್ಣುಮಕ್ಕಳು ಚಿಕ್ಕವಯಸ್ಸಿಗೆ ವಿಧವೆಯೂ ಆಗಿದ್ದಾರೆ. ಚಿಕ್ಕ ಚಿಕ್ಕ ಮಕ್ಕಳೊಂದಿಗೆ ಬಡತನ ಮತ್ತು ಗಂಡನ ಮನೆಯವರಿಂದ ತಿರಸ್ಕಾರಕ್ಕೆ ಒಳಗಾಗಬೇಕಾಗಿದ್ದು ಸಹ ಇಂದು ಅವರ ದುರಂತ ಸ್ಥಿತಿಗೆ ಕಾರಣವಾಗಿದೆ. ಶೇ. ೪.೩೪ ಹೆಣ್ಣು ಮಕ್ಕಳನ್ನು ಹೆತ್ತ ತಂದೆಯೇ ತಮ್ಮ ಸಮುದಾಯದ ಸಂಪ್ರದಾಯವಲ್ಲದಿದ್ದರೂ ಸಹ ಪಾಪ ಪ್ರಜ್ಞೆಯಿಂದ ತಪ್ಪಿಸಿಕೊಳ್ಳಲು ತಮ್ಮ ಮಗಳನ್ನು ಹಣದಾಸೆಗೆ ಬಲವಂತದಿಂದ ದೇವದಾಸಿ ಮಾಡಿ ನಂತರ ಮಾರಾಟಮಾಡಿದ್ದಾರೆ. ಪುರುಷ ಪ್ರಧಾನತೆಯು ಸಮಾಜದಲ್ಲಿ ಹೆಣ್ಣನ್ನು ನಿರ್ಬಂಧಿಸಲು ಸೃಷ್ಟಿಸಿರುವ ನಿಯಮ ಕಟ್ಟುಪಾಡುಗಳು ಅವುಗಳನ್ನು ದೌರ್ಜನ್ಯಕ್ಕೀಡು ಮಾಡುತ್ತವೆ. ಬಾಲ್ಯ ವಿವಾಹ ಮತ್ತು ದೇವದಾಸಿ ಪದ್ಧತಿಗಳು ಇಂದಿಗೂ ಜೀವಂತವಿದ್ದು ಚಾಲ್ತಿಯಲ್ಲಿವೆ ಎಂಬುದನ್ನು ವಕ್ತೃಗಳ ವೈವಾಹಿಕ ಸ್ಥಿತಿಯ ಕೋಷ್ಟಕದಿಂದ ತಿಳಿದುಬರುತ್ತದೆ. ವಿವಾಹಿತರಲ್ಲಿ ದುಡುಕಿನ, ಮೋಸದ ಪ್ರೇಮವಿವಾಹ, ಸುಳ್ಳುವಿವಾಹಗಳನ್ನು, ಗುಜ್ಜರ್ ವಿವಾಹಗಳನ್ನು ಒಳಗೊಂಡಿದೆ. ಇದು ಸಮಾಜದ ನಿಯಮದಂತೆ ನಡೆದುಕೊಳ್ಳುವ ಮೂಲಕ ಹೆಣ್ಣನ್ನು ಮೋಸ ಮಾಡಲು ವಿವಾಹವನ್ನೇ ದಾಳವಾಗಿ ಬಳಸಿರುವ ಪುರುಷ ಪ್ರಧಾನತೆಯ ಕ್ರೌರ್ಯವನ್ನು ನಿರ್ವಚಿಸುತ್ತದೆ.

**೬.೭ ಕೋಷ್ಟಕ ೭: ವಕ್ತೃಗಳನ್ನು ಅನೈತಿಕ ಸಾಗಾಣಿಕೆಗೆ ಮಾರಾಟ ಮಾಡಿದವರು**

| **ಕ್ರ.ಸಂ.** | **ಅನೈತಿಕ ಸಾಗಾಣಿಕೆಗೆ ಮಾರಾಟ ಮಾಡಿದವರು** | **ಸಂಖ್ಯೆ** | **ಶೇಕಡ** |
|---|---|---|---|
| ೧. | ಅಪರಿಚಿತರು | ೪ | ೧೭.೩೯ |
| ೨. | ಪರಿಚಿತರು | ೭ | ೩೦.೪೩ |
| ೩. | ಪ್ರಿಯತಮ | ೬ | ೨೬.೦೮ |
| ೪. | ಗಂಡ | ೪ | ೧೭.೩೯ |
| ೫. | ತಂದೆ | ೨ | ೮.೬೯ |
| **ಒಟ್ಟು** | | **೨೩** | ೧೦೦% |

ಮೂಲ: ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಪ್ರಸ್ತುತ ಅಧ್ಯಯನದ ಮೂಲಕ ಕಂಡು ಬರುತ್ತಿರುವ ಆತಂಕಕಾರಿ ವಿಷಯವೆಂದರೆ, ಅಧ್ಯಯನಕ್ಕೆ ಒಳಪಡಿಸಿದ ಶೇ.೮೨ರಷ್ಟು ಹೆಣ್ಣು ಮಕ್ಕಳು ಪರಿಚಿತರು, ಪ್ರೀತಿಸಿದ ವ್ಯಕ್ತಿ, ಗಂಡ ಮತ್ತು ತಂದೆಯಿಂದಲೇ ಸಾಗಾಣಿಕೆಗೆ ಒಳಗಾಗಿರುವುದು. ಶೇ. ೩೦.೪೩ ಹೆಣ್ಣು ಮಕ್ಕಳು ತಮ್ಮ ಪರಿಚಯದವರೇ ಆದ ಸಂಬಂಧಿಕರು, ಅಕ್ಕಪಕ್ಕದ ಮನೆಯವರು ಸಹೋದ್ಯೋಗಿ ಪರಿಚಿತರು, ಮತ್ತು ಕೆಲಸ ಕೊಡಿಸುವೆ ಎಂದು ಭರವಸೆ ನೀಡಿದ ಪರಿಚಯಸ್ಥರಿಂದಲೇ ಮೋಸಕ್ಕೆ ಒಳಗಾಗಿದ್ದಾರೆ. ಶೇ. ೨೬.೦೮ರಷ್ಟು ಹೆಣ್ಣು ಮಕ್ಕಳು ತಾವು ಪ್ರೀತಿಸಿದ ನಂಬಿದ ಹುಡುಗರಿಂದಲೇ ಮೋಸ ಹೋಗಿ ಅವರಿಂದಲೇ ಮಾರಾಟವಾದವರು. ಮದುವೆಯಾಗುವ ಆಸೆ ತೋರಿಸುವ ಮೂಲಕ ಆ ಹೆಣ್ಣು ಮಕ್ಕಳನ್ನು ಮನೆ ಬಿಡುವಂತೆ ಮಾಡಿ, ಅವರೊಂದಿಗೆ ಚೆನ್ನಾಗಿ ಸುತ್ತಾಡಿ ನೂರಾರು ಆಸೆ ಕನಸುಗಳನ್ನು ಅವರಲ್ಲಿ ತುಂಬಿ ಕೊನೆಗೆ ಅವರಿಗೆ ಭವಿಷ್ಯವೇ ಇಲ್ಲದ ಕರಾಳ ಕತ್ತಲೆಯ ಕೂಪಕ್ಕೆ ತಳ್ಳಿದ್ದಾರೆ. ಪ್ರಸ್ತುತ ಸಮಾಜದಲ್ಲಿ ಆಧುನಿಕತೆಯ ಹೆಸರಿನಲ್ಲಿ ಬೆಳವಣಿಗೆಗೆ ಬಂದಿರುವ ಪ್ರೇಮ ವಿವಾಹ, ಲಿವಿಂಗ್ ಟುಗೇದರ್‌ಗಳು ಸಹ ಈ ಕೃತ್ಯಕ್ಕೆ ಸಹಾಯಕವೇ ಆಗಿದೆ.

ವಿವಾಹಿತ ಹೆಣ್ಣು ಮಕ್ಕಳಲ್ಲಿ ಶೇ.೧೭.೩೯ ರಷ್ಟು ಹೆಣ್ಣು ಮಕ್ಕಳು ತಾವು ಸಾಂಪ್ರದಾಯಿಕವಾಗಿ ಕುಟುಂಬದವರ ಇಚ್ಛೆಯಂತೆ ವಿವಾಹವಾಗಿದ್ದರೂ ಸಹ ತಮ್ಮ ಗಂಡಂದಿರ ದನದಾಹಕ್ಕೆ ಮಾರಾಟಕ್ಕೆ ಒಳಪಟ್ಟಿದ್ದಾರೆ. ಶೇ.೪.೩೪ರಷ್ಟು ಹೆಣ್ಣು ಮಕ್ಕಳು ಸಾಂಪ್ರದಾಯಿಕ ವಿವಾಹದ ಮೂಲಕ ಗಂಡನ ಮನೆಗೆ ಹೋದ ಮೇಲೆ ಸ್ವಲ್ಪ ದಿನಗಳ ನಂತರ ಮಾರಾಟವಾಗಿದ್ದಾರೆ. ಸ್ವತಃ ಗಂಡ ಮತ್ತು ಅವನ ಮನೆಯವರು ದುಡ್ಡಿಗಾಗಿ ಅವಳನ್ನು ವೇಶ್ಯೆಯಾಗಿ ಬಳಸಿದ್ದಾರೆ. ಶೇ.೮.೬೯ರಷ್ಟು ಹೆಣ್ಣು ಮಕ್ಕಳಿಗೆ ದೇವದಾಸಿ ಪದ್ಧತಿಯನ್ನು ಒತ್ತಾಯ ಪೂರ್ವಕವಾಗಿ ಹೊರಿಸಿ ಅನಂತರ ಹಣಕ್ಕಾಗಿ ಮಾರಾಟ ಮಾಡಿದ್ದಾರೆ. ತಂದೆಯು ತನ್ನ ಮಗಳನ್ನೇ ಮಾರಾಟ ಮಾಡಿ ಅದಕ್ಕೆ ದೈವವನ್ನು ನೆಪವಾಗಿಸಿದ್ದು ವಿಪರ್ಯಾಸ. ಶೇ.೪.೩೪ರಷ್ಟು ಹೆಣ್ಣು ಮಕ್ಕಳು ತಂದೆಯು ಸಾಕಲು ಸಾಧ್ಯವಿಲ್ಲದೆ ಮತ್ತೊಂದು ಮದುವೆಯಾಗಿ ಹೆಣ್ಣು ಮಕ್ಕಳ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಲು ವೇಶ್ಯಾವಾಟಿಕೆಗೆ ಅಪ್ರಾಪ್ತ ಮಕ್ಕಳನ್ನು ಮಾರಾಟ ಮಾಡಿದ್ದಾರೆ.

ಹೆಣ್ಣಿನ ಸಂಪೂರ್ಣ ಜವಾಬ್ದಾರಿ ತಂದೆ, ಗಂಡ, ಮಗನೆಂದು ಧರ್ಮಶಾಸ್ತ್ರಗಳು ಹೇಳುತ್ತವೆ. ಸಾಮಾಜಿಕವಾಗಿ ಹಾಗೆಯೇ ನಡೆದುಕೊಂಡು ಬರಲಾಗಿದೆ. ಆದರೆ ಗುರುತರ ಜವಾಬ್ದಾರಿಯಲ್ಲಿರುವ ತಂದೆ, ಮತ್ತು ಗಂಡನೇ ಹೆಣ್ಣನ್ನು ಲೈಂಗಿಕ ಜೀತಕ್ಕೆ ತಮ್ಮ ಮಕ್ಕಳನ್ನು ಹೆಂಡತಿಯರನ್ನು ಸಾಗಿಸುವುದು ಸಮಾಜದ ನೈತಿಕ ಅಧಃಪತನಕ್ಕೆ ಸಾಕ್ಷಿಯಾಗಿದೆ.

## ೬.೮ ಕೋಷ್ಟಕ ೮: ಮಕ್ಕಳಲು ಅನೈತಿಕ ಸಾಗಾಣಿಕೆ ಸಂದರ್ಭದಲ್ಲಿ ತಪ್ಪಿಸಿಕೊಳ್ಳಲಾರದ್ದಕ್ಕೆ ಕಾರಣಗಳು

| ಕ್ರಸಂ. | ತಪ್ಪಿಸಿಕೊಳ್ಳಲಾರದಕ್ಕೆ ಕಾರಣಗಳು | ಸಂಖ್ಯೆ | ಶೇಕಡ |
|---|---|---|---|
| ೧. | ನಾನು ತುಂಬಾ ಚಿಕ್ಕವಳಿದ್ದೆ | ೨ | ೮.೬೯ |
| ೨. | ರೂಮಿನಲ್ಲಿ ಕೂಡಿ ಹಾಕಿದ್ದರು | ೧೦ | ೪೩.೪೭ |
| ೩. | ಹೆದರಿಕೆ | ೩ | ೧೩.೦೪ |
| ೪. | ನನ್ನ ಮನೆಯವರೆ ಇಲ್ಲಿಗೆ ತಂದು ಬಿಟ್ಟು ಹೋಗಿದ್ದರು | ೪ | ೧೭.೩೯ |
| ೫. | ಇಲ್ಲಿಯೇ ಇರುವುದು ಇಷ್ಟವಿತ್ತು. | ೨ | ೮.೬೯ |
| ೬. | ಇತರೆ | ೨ | ೮.೬೯ |
| | ಒಟ್ಟು | ೨೩ | ೧೦೦% |

ಮೂಲ: ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಅಧ್ಯಯನಕ್ಕೆ ಒಳಗಾದ ಹೆಣ್ಣು ಮಕ್ಕಳಲ್ಲಿ ಅನೈತಿಕ ಸಾಗಾಣಿಕೆ ಸಂದರ್ಭದಲ್ಲಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಆದರೆ ಹೆಚ್ಚಿನ ಹೆಣ್ಣು ಮಕ್ಕಳು ಸಾಗಾಣಿಕೆಯಾದ ಸಮಯದಲ್ಲಿ ಅಪ್ರಾಪ್ತರಾಗಿದ್ದ ಕಾರಣ ತಪ್ಪಿಸಿಕೊಳ್ಳಲು ಧೈರ್ಯ ಸಾಲದೆ ಅಲ್ಲಿಯೇ ಉಳಿದವರಾಗಿದ್ದಾರೆ. ಶೇ.೮.೬೯ರಷ್ಟು ಹೆಣ್ಣು ಮಕ್ಕಳು ತಾವು ತುಂಬಾ ಚಿಕ್ಕವರಿದ್ದರಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ ಎಂದು ಉತ್ತರಿಸಿದ್ದಾರೆ. ಶೇ. ೪೩.೪೭ರಷ್ಟು ಹೆಣ್ಣು ಮಕ್ಕಳು ಅವರನ್ನು ರೂಮುಗಳಲ್ಲಿ ಕೂಡಿ ಹಾಕಿದ್ದರಿಂದ ಮತ್ತು ಅವರು ತಪ್ಪಿಸಿಕೊಳ್ಳದಂತೆ ಸಾಗಾಣಿಕೆದಾರರು ಕಾವಲು ಕಾಯುತ್ತಿದ್ದರಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ಶೇ. ೮.೬೯ರಷ್ಟು ಹೆಣ್ಣು ಮಕ್ಕಳು ತಮ್ಮನ್ನು ಸಾಯಿಸುತ್ತಾರೆ ಅಥವಾ ಹಿಂಸೆ ಮಾಡುತ್ತಾರೆ ಎಂಬ ಹೆದರಿಕೆಗೆ ತಪ್ಪಿಸಿಕೊಳ್ಳುವ ಸಾಹಸಕ್ಕೆ ಕೈ ಹಾಕಿಲ್ಲ. ಶೇ.೧೭.೩೯ರಷ್ಟು ಹೆಣ್ಣು ಮಕ್ಕಳನ್ನು ತಮ್ಮ ಕುಟುಂಬದವರೇ ಅಂದರೆ ಗಂಡ, ತಂದೆ ಮುಂತಾದವರೆ ಆ ಕೂಪಕ್ಕೆ ತಂದು ಮಾರಿದ್ದರಿಂದ, ತಪ್ಪಿಸಿಕೊಂಡರೂ ಮುಂದಿನ ಭವಿಷ್ಯದ ಚಿಂತೆ ಮತ್ತು ತಮ್ಮನ್ನು ಕಾಪಾಡುವವರು ಯಾರು ಇಲ್ಲದ ಕಾರಣ ತಪ್ಪಿಸಿಕೊಳ್ಳುವ ಮನುಸ್ಸು ಮಾಡಿಲ್ಲ. ಇನ್ನು ಶೇ. ೮.೬೯ರಷ್ಟು ಹೆಣ್ಣು ಮಕ್ಕಳು ಬೇರೆ ಅವಕಾಶಗಳಿಲ್ಲದೆ ಅನಿವಾರ್ಯ ಕಾರಣಗಳಿಂದ ಹಣ ಸಂಪಾದನೆಯ ಆಸೆಯಿಂದ ಅಲ್ಲಿಯೇ ಉಳಿಯುವುದಾಗಿ ನಿರ್ಧರಿಸಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿಲ್ಲ. ಶೇ. ೪.೩೪ರಷ್ಟು ಹೆಣ್ಣು ಮಕ್ಕಳು ಹೆದರಿಕೆ ಮತ್ತು ಅನಿವಾರ್ಯದ ಕಾರಣ ಅಂದರೆ ತಾವು ಈ ಕೃತ್ಯಕ್ಕೆ ಸಿಲುಕಿರುವುದು ಅವರ ಕುಟುಂಬಕ್ಕೆ ಮಾಹಿತಿ ಇಲ್ಲದ ಕಾರಣ ಗೊತ್ತಾದಲ್ಲಿ ಅವಮಾನ ಮತ್ತು ಕುಟುಂಬದಿಂದ ಹೊರಗೆ ಹಾಕುವ ಭಯವಿರುವ ಕಾರಣ ಅದರಿಂದ ತಪ್ಪಿಸಿಕೊಳ್ಳುವ

ಯೋಚನೆ ಮಾಡಿಲ್ಲ. ಶೇ.೪.೩೪ ಹೆಣ್ಣು ಮಕ್ಕಳು ತಾವು ಆ ಕೃತ್ಯಕ್ಕೆ ಒಳಗಾದ ಅರಿವಿಲ್ಲದೆ ಸುಮ್ಮನಾಗಿದ್ದಾರೆ. ನಂತರ ಕುಟುಂಬದವರಿಂದ ಸುರಕ್ಷಿತವಾಗಿ ಪಾರಾಗಿದ್ದಾರೆ.

ಹೆಣ್ಣು ಮಕ್ಕಳನ್ನು ಖರೀದಿ ಮಾಡಿದವರು ಮತ್ತು ಮಾರುವವರು ಹಣದ ದಾಹದಿಂದಾಗಿ ಆ ಹೆಣ್ಣು ಮಕ್ಕಳನ್ನು ಬಂಡವಾಳವಾಗಿ ನೋಡುತ್ತಾರೆ ಮತ್ತು ಅವರನ್ನು ಪ್ರತಿ ನಿಮಿಷವೂ ಕಾಯುತ್ತಿರುತ್ತಾರೆ. ಹೆಣ್ಣು ಮಕ್ಕಳ ಕುಟುಂಬದವರಿಗೆ ಗೊತ್ತಾಗದಂತೆ ಮತ್ತು ಪೋಲಿಸರಿಗೆ ಸುಳಿವು ಸಿಗದಂತೆ ಅಡಗು ತಾಣಗಳನ್ನು ಬದಲಾಯಿಸುತ್ತಿರುತ್ತಾರೆ. ಒಂದು ವೇಳೆ ಇವರು ತಪ್ಪಿಸಿಕೊಂಡು ಹೋದರೆ, ಪೋಲೀಸರು ಹಿಡಿದುಕೊಂಡು ಹೋದರೆ ತಾವು ಹಾಕಿದ್ದ ಹಣ ಮರಳಿ ಬರುವುದಿಲ್ಲ ಎಂಬುದಕ್ಕಾಗಿ ಮತ್ತು ದಂದೆ ಮಾಡಲು ತಕರಾರು ಮಾಡುವ ಹೆಣ್ಣು ಮಕ್ಕಳನ್ನು ಅವರು ಆ ದಂದೆಯಲ್ಲಿ ಪಳಗುವವರೆಗೂ ಬಂಧನದಲ್ಲೇ ಇಟ್ಟಿರುತ್ತಾರೆ. ಚಿಕ್ಕ ವಯಸ್ಸಿನ ಹೆಣ್ಣು ಮಕ್ಕಳಿಗೆ ಅವರು ಯಾಕೆ ತಪ್ಪಿಸಿಕೊಳ್ಳಬೇಕು ಎಂಬುದೇ ಗೊತ್ತಿರುವುದಿಲ್ಲ. ಕೆಲವು ಹೆಣ್ಣು ಮಕ್ಕಳು ತಮ್ಮ ಮನೆಗಳಲ್ಲಿನ ಹಸಿವು ಬಡತನ ಬಾಲ್ಯ ವಿವಾಹಕ್ಕೊಳಗಾಗಿ, ಆ ಜೀವನಕ್ಕೆ ಹೊಂದಿಕೊಳ್ಳಲಾಗದೇ ತವರು ಮನೆ ಗಂಡ ಸತ್ತವಳು ಎಂಬ ಅವಹೇಳನಗಳು ಹೀಗೆ ಸಾಮಾಜಿಕ, ಆರ್ಥಿಕ ಮತ್ತು ಮಾನಸಿಕ ಹಿನ್ನೆಲೆಯು ಅವರನ್ನು ತಪ್ಪಿಸಿಕೊಳ್ಳಲು ಆಗದಂತೆ ತಡೆದಿವೆ.

**೬.೯ ಕೋಷ್ಟಕ ೯: ವಕ್ತೃಗಳನ್ನು ಪೋಲೀಸರು ಹಿಡಿದಿದ್ದರ ಮಾಹಿತಿ**

| **ಕ್ರಸಂ.** | **ಮಾಹಿತಿ** | **ಸಂಖ್ಯೆ** | **ಶೇಕಡ** |
|---|---|---|---|
| ೧. | ಪೋಲೀಸರು ಹಿಡಿದಿದ್ದರು | ೮ | ೩೭.೭೮ |
| ೨. | ಪೋಲೀಸರು ಹಿಡಿದಿರಲಿಲ್ಲ | ೧೫ | ೬೫.೨೧ |
| | **ಒಟ್ಟು** | **೨೩** | **೧೦೦%** |

ಮೂಲ: ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಪೋಲೀಸರಿಂದ ಬಂಧಿಸಲ್ಪಟ್ಟ ಶೇ. ೩೪.೭೮ರಷ್ಟು ಹೆಣ್ಣು ಮಕ್ಕಳು ಹಲವರು ಅನ್ಯೈತಿಕ ಸಾಗಾಣಿಕೆಗೆ ಒಳಗಾಗಿ ಎರಡು ಅಥವಾ ಮೂರು ವರ್ಷಗಳಲ್ಲಿ ಪೋಲೀಸ್ ರೈಡ್‌ಗೆ ಸಿಲುಕಿದ್ದಾರೆ. ಇವರಲ್ಲಿ ಹಲವರು ಒಂದು ಸಲವಾದರೂ ಮತ್ತು ಮೂರಕ್ಕಿಂತ ಹೆಚ್ಚು ಸಲವಾದರೂ ಬಂಧನಕ್ಕೆ ಒಳಪಟ್ಟಿದ್ದಾರೆ. ಇವರನ್ನು ಸಾಗಾಣಿಕೆ ದಾರರಿಂದ ಕೊಂಡು ಕೊಂಡಿದ್ದ ಮಾಲೀಕರು ಪ್ರತಿ ತಿಂಗಳು ಪೋಲೀಸರಿಗೆ ಹಣ ಕೊಡುತ್ತಿದ್ದು ಇದು ಇವರುಗಳನ್ನು ಬಂಧಿಸಿದಂತೆ ತಡೆಯುವಲ್ಲಿ ಮತ್ತು ಪೋಲೀಸರಿಗೆ ಸಿಕ್ಕಿದರೂ ಸಹ ಫೈಲ್ ಮಾಡದೆ ದಂಡ ಕಟ್ಟಿಸಿಕೊಂಡು ಬಿಟ್ಟು ಬಿಡುತ್ತಿದ್ದರು ಎಂದು ಹೇಳುತ್ತಾರೆ. ಎಷ್ಟೋ ಬಾರಿ ಹೆಣ್ಣುಮಕ್ಕಳು ತಪ್ಪಿಸಿಕೊಂಡರೂ ಸಹ ಪೋಲೀಸರೇ ಹಿಡಿದು ಅದೇ ಮಾಲೀಕರಿಗೆ ಒಪ್ಪಿಸಿದ ನಿದರ್ಶನಗಳಿವೆ. ಹೀಗೆ ತಪ್ಪಿಸಿಕೊಂಡು ಸಿಕ್ಕಿ ಹಾಕಿಕೊಂಡಾಗ ಮತ್ತು

ತಪ್ಪಿಸಿಕೊಳ್ಳಲು ಪ್ರಯತ್ನಿಸಿದಾಗ ಬಹಳವಾಗಿ ದೈಹಿಕವಾದ ಹಲ್ಲೆಗಳನ್ನು ಮಾಡಿ ಶಿಕ್ಷೆ ನೀಡಲಾಗುತ್ತದೆ. ಶೇ. ೪.೩೪ರಷ್ಟು ಹೆಣ್ಣು ಮಕ್ಕಳು ಅಪ್ರಾಪ್ತರಾಗಿದ್ದು ಅವರು ವೇಶ್ಯಾವಾಟಿಕೆಗೆ ಮಾರಲ್ಪಟ್ಟಿದ್ದರೂ ಸಹ ಮಾರಾಟವಾದ ಕೆಲವೇ ದಿನಗಳಲ್ಲಿ ಪೋಲೀಸ್ ರೈಡ್ ಆಗಿ ಕಾನೂನಿನ ರಕ್ಷಣೆಯಿಂದಾಗಿ ಅನಾಹುತವಾಗುವ ಮೊದಲೇ ತಂದೆ ತಾಯಿಯನ್ನು ಸೇರಿದ್ದಾರೆ. ಶೇ.೪.೩೪ ಹೆಣ್ಣು ಮಕ್ಕಳು ನಾಪತ್ತೆಯಾದ ೪೦ ಗಂಟೆಗಳಲ್ಲಿಯೇ ಕುಟುಂಬ ಮತ್ತು ಪೋಲೀಸ್ ಸಹಾಯದಿಂದ ಮಾರಾಟವಾಗುವ ಮೊದಲೇ ಕುಟುಂಬಕ್ಕೆ ಮರಳಲು ಸಾಧ್ಯವಾಗಿದೆ. ಇಲ್ಲಿ ಕುಟುಂಬವು ರಾಜಕೀಯ ಹಿನ್ನೆಲೆ ಹೊಂದಿದ್ದು ಮತ್ತು ಹಣ ಬಲವನ್ನು ಹೊಂದಿದ್ದರಿಂದ ಇದು ಸಾಧ್ಯವಾಗಿದೆ. ಶೇ.೬೫.೨೧ರಷ್ಟು ಹೆಣ್ಣು ಮಕ್ಕಳು ಅಧ್ಯಯನಕ್ಕೊಳಪಟ್ಟು ಉತ್ತರಿಸಿದಂತೆ ಅವರು ಯಾವುದೇ ಪೋಲೀಸ್ ರೈಡ್ ಅಥವಾ ಪೋಲೀಸರಿಗೆ ಸಿಕ್ಕಿಲ್ಲ. ಏಕೆಂದರೆ ಇವರನ್ನು ಕೊಂಡು ಕೊಂಡ ಘರವಾಲಿಗಳು ಅಥವಾ ಇತರ ಮಾಲೀಕರು ಇವರನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸ್ಥಳ ಬದಲಾವಣೆ ಮಾಡುತ್ತಾ ಪೋಲೀಸರಿಗೆ ಹಣ ಅಥವಾ ಲಂಚಾ ನೀಡುತ್ತಾ ಆ ಹೆಣ್ಣು ಮಕ್ಕಳನ್ನು ಗುಪ್ತ ಸ್ಥಳಗಳಲ್ಲಿ ಬಚ್ಚಿಡುತ್ತಾ ತಮ್ಮ ದಂದೆ ನಡೆಸುತ್ತಿರುತ್ತಾರೆ. ಎಷ್ಟೋ ಬಾರಿ ಲೋಕಲ್ ಪೋಲೀಸ್ ರೈಡ್ ಆಗುವ ಸಂದರ್ಭಗಳಲ್ಲಿ ಲಂಚಾ ತೆಗೆದುಕೊಳ್ಳುವ ಪೋಲೀಸರೇ ಇವರಿಗೆ ಪೋನ್ ಮೂಲಕ ಮಾಹಿತಿ ನೀಡುತ್ತಾರೆ. ಆಗ ಇವರು ಸಿಕ್ಕಿಬೀಳುವ ಅವಕಾಶವೇ ಸಿಗುವುದಿಲ್ಲ.

ಹೆಣ್ಣುಮಕ್ಕಳನ್ನು ರಕ್ಷಿಸುವ ಹೊಣೆಯು ಭಾರತದ ಸಂವಿಧಾನದ ಆಶಯದಂತೆ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರಗಳ ಕರ್ತವ್ಯವಾಗಿದೆ. ೧೯೨೯ರಲ್ಲಿ ಜಾರಿಯಾಗಿ ಕಾಲಕಾಲಕ್ಕೆ ಅಧಿನಿಯಮಗೊಳ್ಳುತ್ತಾ ಬಂದಿರುವ ಬಾಲ್ಯ ವಿವಾಹ ನಿಷೇಧಕಾಯ್ದೆ, ೧೯೫೬ರಲ್ಲಿ ಜಾರಿಗೊಂಡ ಮಹಿಳೆ ಮತ್ತು ಮಕ್ಕಳ ಅನೈತಿಕ ಸಾಗಾಣಿಕೆ ತಡೆಕಾಯ್ದೆ, ೧೯೮೨ರಲ್ಲಿ ಜಾರಿಗೊಂಡ ಕರ್ನಾಟಕ ದೇವದಾಸಿ ಸಮರ್ಪಣಾ ನಿಷೇಧ ಕಾಯ್ದೆ, ೧೯೮೬ರಲ್ಲಿ ಜಾರಿಯಾದ ಬಾಲ ಕಾರ್ಮಿಕ ನಿಷೇಧ ಕಾಯಿದೆ ಮತ್ತು ೧೯೮೬ರಲ್ಲಿ ಜಾರಿಯಾದ ಬಾಲ ನ್ಯಾಯ ಕಾಯಿದೆಗಳು ಏನು ಕಾರ್ಯನಿರ್ವಹಿಸಿದವು ಎಂಬುದು ಇಲ್ಲಿ ಮುಖ್ಯವಾಗುತ್ತದೆ. ಪ್ರಕರಣಗಳನ್ನು ಅಧ್ಯಯಿಸಿದಾಗ ಒಂದು ಅನುಮಾನ ಹುಟ್ಟುತ್ತದೆ. ಅದೇನೆಂದರೆ ಯಾವ ಇಲಾಖೆಗಳೂ ಜವಾಬ್ದಾರಿಯಿಂದ ತಮ್ಮ ಕರ್ತವ್ಯ ನಿರ್ವಹಿಸಿಲ್ಲ ಎಂಬುದು. ಪ್ರತಿಯೊಂದು ಮಗುವಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕು ಎಂದು ಇರುವ ಸಂವಿಧಾನದ ಆಶಯದಂತೆ ಶಾಲೆಗಳೂ ಅದಕ್ಕೆ ಬದ್ಧವಾಗಿದ್ದರೆ ಬಾಲ್ಯದಲ್ಲಿ ಶಿಕ್ಷಣ ಪಡೆಯಬೇಕಿದ್ದು ಮಗು ಬಾಲ್ಯ ವಿವಾಹಕ್ಕೆ ಒಳಗಾಗುತ್ತಿರಲಿಲ್ಲ. ಶಾಲೆಯಲ್ಲಿ ಇರಬೇಕಾದ್ದ ಮಗು ಹೀಗೆ ಎಲ್ಲೋ ಕಳೆದು ಹೋಗುವ ಸಂದರ್ಭ ಬರುತ್ತಿರಲಿಲ್ಲ. ಹುಟ್ಟಿದೂರಿನಲ್ಲಿ ಹೆತ್ತವರಿಂದ ರಕ್ಷಣೆಯಾಗದಿದ್ದ ಮಗುವನ್ನು ಸಾಗಾಣಿಕೆಯಾದ ನಂತರವಾದರೂ ರಕ್ಷಿಸಬಹುದಿತ್ತು. ಯಾವ ಕಾನೂನುಗಳು ಯಾವ ಕಾನೂನು ಪರಿಪಾಲಕರು ಶೋಷಿತರನ್ನು ರಕ್ಷಿಸಬೇಕಾಗಿತ್ತೋ ಅವರೆ ಶೋಷಕರೊಂದಿಗೆ ಕೈ ಜೋಡಿಸಿದಾಗ ಅಮಾಯಕರು ಉಳಿಯುವುದಾದರೂ ಹೇಗೆ.

## ೬.೧೦ ಕೋಷ್ಟಕ ೧೦: ವಕ್ತೃಗಳ ಪ್ರಸ್ತುತ ಉದ್ಯೋಗ

| ಕ್ರಸಂ. | ಉದ್ಯೋಗ | ಸಂಖ್ಯೆ | ಶೇಕಡ |
|---|---|---|---|
| ೧. | ವೇಶ್ಯಾವಾಟಿಕೆ | ೧೨ | ೫೨.೧೭ |
| ೨. | ಉದ್ಯೋಗ | ೫ | ೨೧.೭೩ |
| ೩. | ಸ್ವಂತ ವ್ಯವಹಾರ | ೩ | ೧೩.೦೪ |
| ೪. | ಏನೂ ಇಲ್ಲ | ೩ | ೧೩.೦೪ |
| | **ಒಟ್ಟು** | **೨೩** | **೧೦೦%** |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಪ್ರಸ್ತುತ ಅಧ್ಯಯನಕ್ಕೊಳಡಿಸಿದ ೨೩ ಹೆಣ್ಣು ಮಕ್ಕಳಲ್ಲಿ ಶೇ. ೫೨.೧೭ರಷ್ಟು ಹೆಣ್ಣು ಮಕ್ಕಳು ವೇಶ್ಯಾವಾಟಿಕೆಯಲ್ಲಿಯೇ ಉಳಿದಿದ್ದಾರೆ. ಇವರಲ್ಲಿ ಹಲವರು ಚಿಕ್ಕವಯಸ್ಸಿಗೆ ಸಾಗಾಣಿಕಗೆ ಒಳಗಾದವರು. ತಪ್ಪಿಸಿಕೊಳ್ಳಲು ವಿಫಲರಾಗಿ ಕುಟುಂಬದಿಂದ ದೂರಾಗಿ ಹೊಟ್ಟೆ ಪಾಡಿಗಾಗಿ, ಶಿಕ್ಷಣ, ಭಾಷೆಯ ಕೊರತೆಯಿಂದ ಅನೈತಿಕತೆಯ ಚೌಕಟ್ಟಿನಿಂದ ಹೊರಬರಲು ಸಾಧ್ಯವಾಗದೆ ಅನಿವಾರ್ಯವಾಗಿ ಲೈಂಗಿಕ ದಂದೆಯನ್ನು ಒಪ್ಪಿಕೊಂಡು ಅಲ್ಲಿಯೇ ಉಳಿದಿದ್ದಾರೆ. ಮಡಿ ಮೈಲಿಗೆ ಎನ್ನುವ ಪುರುಷಪ್ರಧಾನತೆಯ ಕಟ್ಟುಪಾಡುಗಳೂ ಸಹ ಇದಕ್ಕೆ ಪೂರಕವಾಗಿಯೇ ಕೆಲಸ ಮಾಡಿವೆ. ಅಂದರೆ ಒಂದು ಸಲ ಮೈಲಿಗೆಯಾದ ಹೆಣ್ಣು ಕುಟುಂಬದ ಗೌರವಕ್ಕೆ ಕಳಂಕ, ನಾಯಿ ಮುಟ್ಟಿದ ಮಡಕೆ ಎನ್ನುವ ಗಾದೆ ಮಾತಿನಂತೆ ಕುಟುಂಬದ ಗೌರವಕ್ಕಾಗಿ ವೇಶ್ಯಾವಾಟಿಕೆಯಿಂದ ಹೊರಬರಲು ನಿರಾಕರಿಸಿದ್ದಾರೆ. ಕೆಲವು ಹೆಣ್ಣು ಮಕ್ಕಳನ್ನು ರಕ್ಷಿಸಬೇಕಿದ್ದ ಗಂಡಂದಿರೇ ಈ ಕೂಪಕ್ಕೆ ತಳ್ಳಿರುವುದರಿಂದ ಅಸಹಾಯಕತೆಯಿಂದ ಶಿಕ್ಷೆ ನೋವು ಅನುಭಸುತ್ತಿದ್ದಾರೆ. ಶೇ.೨೧.೭೩ರಷ್ಟು ಹೆಣ್ಣುಮಕ್ಕಳು ಈ ಸಾಗಾಣಿಕೆಯ ಕೂಪದಿಂದ ಹೊರಬಂದು ವೇಶ್ಯಾವಾಟಿಕೆಯಿಂದ ದೂರ ಉಳಿದು ತಮ್ಮ ಜೀವನವನ್ನು ಪುನಃ ನಿರ್ಮಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಆದರೆ ಕುಟುಂಬದಿಂದ ದೂರವೇ ಉಳಿದಿದ್ದಾರೆ. ಸಾಮಾಜಿಕ ಭಹಿಷ್ಕಾರವನ್ನು ಅನುಭವಿಸುತ್ತಿದ್ದಾರೆ.

ಹಾಗೆಯೇ ೧೩.೦೪ ಹೆಣ್ಣು ಮಕ್ಕಳು ಸ್ವಂತ ವ್ಯವಹಾರ ಮಾಡುತ್ತಿದ್ದು ದಿನಸಿ ಅಂಗಡಿ, ಬ್ಯೂಟಿಪಾರ್ಲರ್, ಪ್ಲಾಸ್ಟಿಕ್ ವಸ್ತುಗಳ ಮಾರಾಟದಂತಹ ಸ್ವ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಆದರೆ ಇವರು ಸಹ ಕುಟುಂಬ, ಸಂಬಂಧಿಕರಿಂದ ದೂರವೇ ಉಳಿದಿದ್ದಾರೆ. ಶೇ. ೧೩.೦೪ ಹೆಣ್ಣು ಮಕ್ಕಳು ಯಾವುದೇ ಉದ್ಯೋಗವನ್ನು ಕೈಗೊಂಡಿಲ್ಲ ಇವರು ಕುಟುಂಬದ ಜೊತೆಯೇ ಇರುವವರು. ಶೇ. ೪.೩೪ ಹೆಣ್ಣು ಮಕ್ಕಳು ವಿವಾಹಿತರಾಗಿದ್ದು ಪತಿಯೊಂದಿಗೆ ಸಂತೋಷದಿಂದ ಇದ್ದಾರೆ. ಒಬ್ಬರು ವಕ್ತೃಗಳು ಸಂದರ್ಶನ ನೀಡಿದ ಒಂದು ವರ್ಷಗಳ ನಂತರ ಅನಾರೋಗ್ಯದ ಕಾರಣ ಮರಣಿಸಿದ್ದಾರೆ.

ವೇಶ್ಯಾವಾಟಿಕೆಯಲ್ಲಿ ಉಳಿದಿರುವ ಆ ಹೆಣ್ಣುಮಕ್ಕಳನ್ನು ಅಷ್ಟು ಸುಲಭವಾಗಿ ಹೊರಗೆ ತಿರುಗಾಡಲು ಬಿಡುವುದಿಲ್ಲ. ರೌಡಿಗಳ ದಂಡೆ ಅವರ ಹಿಂದೆ ಇರುತ್ತದೆ. ಸಾಮಾನ್ಯವಾಗಿ ಅನೈತಿಕ ವ್ಯವಹಾರಗಳಲ್ಲಿ ಮಾಫಿಯಾದ ಕೈವಾಡವೂ ಇರುತ್ತದೆ ಮತ್ತು ಬಂಡವಾಳವಾದ ಹೆಣ್ಣನ್ನು ಸುಲಭವಾಗಿ ತಪ್ಪಿಸಿಕೊಳ್ಳಲು ಸಾಧ್ಯವಾಗದಂತ ಸರ್ಪಗಾವಲು ಇರುತ್ತದೆ. ಕ್ಷೇತ್ರಕಾರ್ಯದ ಸಮಯದಲ್ಲಿ ಪ್ರಾಣದ ಹಂಗೂ ತೊರೆಯಬೇಕಾದ ಸಂದರ್ಭಗಳೂ ಎದುರಾಗಿದ್ದವು. ಎಷ್ಟೋ ಬಾರಿ ನಮ್ಮನ್ನು ಹಿಂಬಾಲಿಸಿದ್ದು ಇದೆ.

**೬.೧೧ ಕೋಷ್ಟಕ ೧೧: ವಕ್ತೃಗಳ ಪ್ರಸ್ತುತ ಆದಾಯ**

| ಕ್ರಸಂ. | ವಿವರ | ಸಂಖ್ಯೆ | ಶೇಕಡ |
|---|---|---|---|
| ೧. | ೧೦೦೦ ರಿಂದ ೫೦೦೦ | ೪ | ೧೭.೩೯ |
| ೨. | ೬೦೦೦ ರಿಂದ ೧೦.೦೦೦ | ೬ | ೨೬.೦೮ |
| ೩. | ೧೧.೦೦೦ ರಿಂದ ೧೫.೦೦೦ | ೬ | ೨೬.೦೮ |
| ೪. | ೧೬.೦೦೦ ರಿಂದ ೨೦.೦೦೦ | ೩ | ೧೩.೦೪ |
| ೫. | ಅನ್ವಯಿಸುವುದಿಲ್ಲ | ೪ | ೧೭.೩೯ |
| | **ಒಟ್ಟು** | **೨೩** | **೧೦೦%** |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ:** ಪ್ರಸ್ತುತ ಅಧ್ಯಯನಕ್ಕೆ ಒಳಪಟ್ಟ ೨೩ ಹೆಣ್ಣು ಮಕ್ಕಳಲ್ಲಿ ಪ್ರಸ್ತುತ ಅವರು ಜೀವನೋಪಾಯಕ್ಕೆ ನಿರ್ವಹಿಸುತ್ತಿರುವ ಉದ್ಯೋಗವನ್ನು ಹಿಂದಿನ ಕೋಷ್ಟಕದಲ್ಲಿ ತೋರಿಸಲಾಗಿದೆ. ಅದಕ್ಕೆ ಅನುಗುಣವಾಗಿ ವಕ್ತೃಗಳ ಪ್ರಸ್ತುತ ಆದಾಯ ಪ್ರಮಾಣವನ್ನು ಗುರುತಿಸಲು ಪ್ರಯತ್ನಿಸಿದಾಗ ದೊರೆತ ಮಾಹಿತಿಯ ಪ್ರಕಾರ ಶೇ.೧೭.೩೯ರಷ್ಟು ಹೆಣ್ಣು ಮಕ್ಕಳು ೧೦೦೦ದಿಂದ ೫೦೦೦ರ ಒಳಗೆ ತಮ್ಮ ಆದಾಯವನ್ನು ಹೊಂದಿದ್ದು ಇವರು ವೇಶ್ಯಾವಾಟಿಕೆಯನ್ನೆ ಅವಲಂಬಿಸಿದವರಾಗಿದ್ದಾರೆ. ದೈಹಿಕವಾಗಿ ಹಲವಾರು ರೋಗ ರುಜಿನಗಳಿಗೆ ತುತ್ತಾಗಿ ಹಣದ ಅವಶ್ಯಕತೆ ಅನಿವಾರ್ಯತೆಯಿಂದ ವೇಶ್ಯಾವಾಟಿಕೆಯಲ್ಲಿದ್ದಾರೆ. ಶೇ. ೨೬.೦೮ರಷ್ಟು ಹೆಣ್ಣು ಮಕ್ಕಳು ೬೦೦೦ರಿಂದ ೧೦.೦೦೦ರವರೆಗೆ ದುಡಿಯುತ್ತಿದ್ದು ಇವರಲ್ಲಿ ಹಲವರು ಲೈಂಗಿಕ ದಂದೆಯನ್ನೇ ಅವಲಂಬಿಸಿದ್ದಾರೆ. ಮತ್ತು ಕೆಲವರು ಗಾರ್ಮೆಂಟ್ಸ್ ಮುಂತಾದ ಕಡೆ ಉದ್ಯೋಗ ಮಾಡುತ್ತಿದ್ದಾರೆ. ಇವರ ಆರ್ಥಿಕ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಪ್ರಾಥಮಿಕ ಅವಶ್ಯಕತೆಗಳನ್ನು ಪೂರೈಸಲು ಸಹಾಯಕವಾಗಿದೆ. ಶೇ.೨೬.೦೮ರಷ್ಟು ಹೆಣ್ಣು ಮಕ್ಕಳು ೧೧.೦೦೦ರಿಂದ ೧೫.೦೦೦ವರೆಗೆ ದುಡಿಯುತ್ತಿದ್ದು ಕೆಲವರು ಸ್ವ ಉದ್ಯೋಗವನ್ನು ಹೊಂದಿದವರು.

ಮತ್ತು ನರ್ಸ್ ಕೆಲಸ ಇತರೆ ದುಡಿಮೆಯಲ್ಲಿ ತೊಡಗಿದವರಾಗಿದ್ದಾರೆ. ಶೇ. ೧೩.೦೪ ಹೆಣ್ಣು ಮಕ್ಕಳು ೧೬.೦೦೦ರಿಂದ ೨೦.೦೦೦ರವರೆಗೆ ದುಡಿಯುತ್ತಿದ್ದು ಇವರಲ್ಲಿ ಒಬ್ಬರು ಟ್ರಾವಲ್ ಏಜೆನ್ಸಿಯಲ್ಲಿ ದುಡಿಯುವವರು, ಒಬ್ಬರು ಬ್ಯೂಟಿಪಾರ್ಲರ್ ನಡೆಸುವವರು ಮತ್ತು ಸ್ವ ಉದ್ಯೋಗ ಮಾಡುವವರಾಗಿದ್ದಾರೆ. ಶೇ.೧೭.೩೯ರಷ್ಟು ಹೆಣ್ಣು ಮಕ್ಕಳು ಯಾವುದೇ ದುಡಿಮೆಯಲ್ಲಿ ಇಲ್ಲ, ಇವರಲ್ಲಿ ಇಬ್ಬರು ಕುಟುಂಬ ನಿರ್ವಹಣೆಯಲ್ಲಿರುವರು. ಒಬ್ಬರು ಗಂಡನಿಂದಲೇ ವೇಶ್ಯೆಯಾಗಿದ್ದರೂ ಆ ಕೆಲಸವನ್ನು ಮಾಡುತ್ತಿದ್ದರೂ ಸಹ ಯಾವುದೇ ಆದಾಯಗಳಿಂದ ವಂಚಿತರಾಗಿದ್ದಾರೆ. ಮತ್ತೊಬ್ಬರು ಜೀವಂತವಾಗಿ ಇಲ್ಲದ ಕಾರಣ ಅನ್ವಯಿಸುವುದಿಲ್ಲ ಪಟ್ಟಿಗೆ ಸೇರಿಸಲಾಗಿದೆ.

ಲೈಂಗಿಕ ಜೀತದಲ್ಲಿರುವ ಹೆಣ್ಣುಮಕ್ಕಳು ಆರೋಗ್ಯ ದೇಹ ಚೆನ್ನಾಗಿರುವವರೆಗೆ ಮಾತ್ರ ಆದಾಯ. ಅವು ತಮ್ಮ ಮೌಲ್ಯ ಕಳೆದುಕೊಳ್ಳುವುದಕ್ಕೆ ಶುರುಮಾಡಿದ ಮೇಲೆ ಇವರ ಆದಾಯವೂ ಕಡಿಮೆಯಾಗುತ್ತದೆ. ಅವಿಲ್ಲದೆ ಮರುದಿನವೇ ಇವರು ನೇರವಾಗಿ ಬೀದಿಗೆ ಬೀಳುವ ಇವರನ್ನು ಯಾರೂ ಮಾತನಾಡಿಸುವುದಿಲ್ಲ. ಇವರು ಎಷ್ಟೇ ದುಡಿದರೂ ಸಹ ಪೋಲೀಸ್‌ಗೆ, ಬ್ರಾಥಲ್‌ಗೆ, ಪಿಂಪ್‌ಗಳಿಗೆ ಸ್ವಂತ ಖರ್ಚು ಅಂತ ಎಲ್ಲವೂ ಖಾಲಿಯಾಗುತ್ತದೆ. ಕೆಲವರು ತಾವು ದುಡಿದಿದ್ದರಲ್ಲಿ ತಮ್ಮ ಕುಟುಂಬಗಳಿಗೂ ಕಳುಹಿಸುತ್ತಾರೆ. ಆದರೆ ಇಲ್ಲಿಯೂ ತಲೆಹಿಡುಕರು ಇವರನ್ನು ಮೋಸ ಮಾಡಿ ಅವರಿಂದ ಹಣ ದೋಚುತ್ತಾರೆ. ಒಂದು ಕಡೆ ಹೆಣ್ಣನ್ನೇ ಬಂಡವಾಳವಾಗಿಸಿ ಮಾರಾಟಮಾಡಿ ಅದೇ ಹೆಣ್ಣನ್ನು ಮೈಮಾರಿ ದುಡಿಯುವಂತೆ ಮಾಡಿ ಮತ್ತೆ ಅದೇ ದುಡಿಮೆಯ ಹಣವನ್ನು ದೋಚುವ ಈ ವ್ಯವಸ್ಥೆ ಎಷ್ಟು ಕ್ರೂರ.

**೬.೧೨ ಕೋಷ್ಟಕ ೧೨: ವಕ್ತೃಗಳ ಮಾರಾಟಕ್ಕೆ ಒಳಗಾದ ಅರಿವು**

| ಕ್ರಸಂ. | ಮಾರಾಟಕ್ಕೆ ಒಳಗಾದ ಅರಿವು | ಸಂಖ್ಯೆ | ಶೇಕಡ |
|---|---|---|---|
| ೧. | ಹೌದು | ೩ | ೧೩.೦೪ |
| ೨. | ಇಲ್ಲ | ೨೦ | ೮೬.೯೫ |
| | **ಒಟ್ಟು** | **೨೩** | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ.

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕವು ವಕ್ತೃಗಳು ತಾವು ಅನೈತಿಕ ವ್ಯವಹಾರಗಳಿಗೆ ಮಾರಾಟವಾಗುವಾಗಿನ ಸಂದರ್ಭದಲ್ಲಿ ಅವರಿಗೆ ಅದರ ಕುರಿತು ಅರಿವು ಅಥವಾ ಮಾಹಿತಿ ಇತ್ತೆ ಅಥವಾ ಇರಲಿಲ್ಲವೆ ಎಂಬುದನ್ನು ತಿಳಿಸುತ್ತದೆ. ನನ್ನ ಕ್ಷೇತ್ರಕಾರ್ಯದ ವರದಿಯ ಪ್ರಕಾರ ಶೇ. ೧೩.೦೪ರಷ್ಟು ಹೆಣ್ಣು ಮಕ್ಕಳಿಗಷ್ಟೇ ಮಾರಾಟಕ್ಕೆ ಒಳಗಾಗುವ ಕುರಿತು ಮಾಹಿತಿ ಇದೆ. ಶೇ.

೮೬.೫೮ರಷ್ಟು ಹೆಣ್ಣು ಮಕ್ಕಳು ಯಾವುದೇ ಮಾಹಿತಿಯನ್ನು ತಿಳಿದಿರಲಿಲ್ಲ. ತಾವು ಮಾರಾಟವಾಗುತ್ತಿರುವ ಕುರಿತು ಗೊತ್ತಿಲ್ಲ ಎಂದು ಉತ್ತರಿಸಿದ್ದಾರೆ. ಇವರಲ್ಲಿ ಬಹಳಷ್ಟು ಹೆಣ್ಣುಮಕ್ಕಳು ಮಾರಾಟವಾಗುವ ಸಂದರ್ಭದಲ್ಲಿ ಅಪ್ರಾಪ್ತರಾಗಿದ್ದವರು, ಹತ್ತಿರ ಸಂಬಂಧಿಕರ ನಯ ವಂಚನೆಯಿಂದ, ಪತಿ ಮತ್ತು ತಂದೆಯಿಂದ, ಹಾಗೂ ಪ್ರೀತಿಸಿದ ಯುವಕರಿಂದಲೇ ಈ ಕೃತ್ಯಕ್ಕೆ ಒಳಗಾಗಿರುವುದರಿಂದ ತಾವು ಮಾರಾಟವಾಗುತ್ತಿರುವ ವಿಷಯ ಮತ್ತು ಅದರ ಕುರಿತ ಅನುಮಾನವೂ ಉಂಟಾಗಿರುವುದಿಲ್ಲ. ಪ್ರತಿ ಜಿಲ್ಲೆಯಲ್ಲಿಯಲ್ಲೂ ಶೇ.೨೦ ಮಹಿಳೆಯರು ಮಾರಾಟಕ್ಕೆ ಒಳಗಾಗಿ ವೇಶ್ಯಾವಾಟಿಕೆಗೆ ದೂಡಲ್ಪಟ್ಟಿರುವುದನ್ನು ಲೈಂಗಿಕ ಕಾರ್ಯಕರ್ತರ ಸ್ಥಿತಿಗತಿಗಳ ಅಧ್ಯಾಯನ ಡಾ.ಜಯಮಾಲ ಸಮಿತಿ ವರದಿಯು ದೃಢಪಡಿಸುತ್ತದೆ.

ವಕ್ತೃಗಳನ್ನು ಮಾರಾಟ ಮಾಡಿದ ಮೊತ್ತವನ್ನು ಗಮನಿಸುವುದಾದರೆ. ೩೦ ಸಾವಿರದಿಂದ ೩ ಲಕ್ಷದವರೆಗೂ ಮಾರಾಟಕ್ಕೆ ಒಳಗಾಗಿದ್ದಾರೆ. ಮತ್ತು ಹಲವಾರು ಹೆಣ್ಣು ಮಕ್ಕಳಿಗೆ ತಾವು ಎಷ್ಟಕ್ಕೆ ಮಾರಾಟವಾಗಿರುವುದು ಇರಲಿ ತಾವು ಮಾರಾಟವಾಗಿರುವ ಸಂಗತಿಯೇ ತಿಳಿದಿಲ್ಲ. ಮಾರಾಟವಾದ ಪ್ರತಿಯೊಂದು ಹೆಣ್ಣನ್ನು ಶೋಷಿಸುವ ಮೂಲಕ ಲಕ್ಷಾಂತರ ರೂಪಾಯಿಗಳನ್ನು ಸಂಪಾದನೆ ಮಾಡುತ್ತಿರುವುದನ್ನು ಜಾಗತಿಕ ವರದಿಗಳು ಬಯಲು ಮಾಡಿವೆ. ಸರಕಿನಂತೆ ಹೆಣ್ಣನ್ನು ಮಾರಾಟ ಮಾಡುತ್ತಿರುವುದು ಮಾನವ ಘನತೆಯ ಅಧಃಪತನದ ಸಂಗತಿಯಾಗಿದ್ದು ನಾಗರೀಕರೆಂದು ಹೇಳಿಕೊಳ್ಳುವ ಪ್ರಜ್ಞಾವಂತ ಸಮಾಜ ತಲೆತಗ್ಗಿಸುವಂತಿದೆ.

**೬.೧೩ ಕೋಷ್ಟಕ ೧೩: ಮಾರಾಟಕ್ಕೆ ಒಳಗಾದ ಮೇಲೆ ದೂರು ದಾಖಲೆ**

| ಕ್ರಸಂ. | ಮಾರಾಟಕ್ಕೆ ಒಳಗಾದ ಮೇಲೆ ದೂರು ದಾಖಲೆ | ಸಂಖ್ಯೆ | ಶೇಕಡ |
|---|---|---|---|
| ೧. | ಹೌದು | ೬ | ೨೬.೦೮ |
| ೨. | ಇಲ್ಲ | ೧೭ | ೭೩.೯೧ |
| | **ಒಟ್ಟು** | **೨೩** | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಈ ಅಧ್ಯಯನದ ಮೂಲಕ ಶೇ. ೨೬.೦೮ ಹೆಣ್ಣುಮಕ್ಕಳು ಮಾರಾಟಕ್ಕೆ ಒಳಗಾದ ಮೇಲೆ ಕುಟುಂಬದವರಿಂದ ದೂರು ದಾಖಲು ಆಗಿದೆ. ದೂರು ದಾಖಲು ಮಾಡಿದ ಕುಟುಂಬದವರು ವಿದ್ಯಾವಂತರು ಮತ್ತು ಆರ್ಥಿಕವಾಗಿ ಸುಧಾರಿತವಾಗಿರುವುದು ಕಂಡುಬಂದಿದೆ. ತಿಳುವಳಿಕೆಯ ಕಾರಣಕ್ಕೆ ಕಾನೂನು ಬಳಕೆಗೆ ಮುಂದಾಗಲು ಸಾಧ್ಯವಾಗಿದೆ. ಮಾರಾಟಕ್ಕೆ ಒಳಗಾದ ಮೇಲೆ ಅದರ ಕುಟುಂಬದವರಾಗಲಿ ಆ ಹೆಣ್ಣುಮಕ್ಕಳೇ ಆಗಲಿ ದೂರು ದಾಖಲು ಮಾಡದೇ ಇರುವುದು ಈ ಅಧ್ಯಯನದ ಮೂಲಕ ತಿಳಿದುಬಂದಿದೆ. ಒತ್ತಡ, ಭಯ ಮತ್ತು ತಿಳುವಳಿಕೆ ಕೊರತೆಯು ಇದಕ್ಕೆ

ಪ್ರಮುಖ ಕಾರಣಗಳು. ಆದರೆ ಮಾರಾಟಕ್ಕೆ ಒಳಗಾದ ಹೆಣ್ಣುಮಕ್ಕಳಲ್ಲಿ ಶೇ.೪೭.೮೨ರಷ್ಟು ಹೆಣ್ಣು ಮಕ್ಕಳು ತಮ್ಮ ತಂದೆ ಗಂಡ ಮತ್ತು ಪ್ರಿಯಕರನಿಂದಲೇ ಮಾರಾಟವಾಗಿರುವುದು ದೂರು ದಾಖಲು ಮಾಡಲು ಸಾಧ್ಯವಾಗಿಲ್ಲ. ಅಸಹಾಯಕ ಸ್ಥಿತಿಯಿಂದಾಗಿ ಈ ಹೆಣ್ಣು ಮಕ್ಕಳು ಈ ಕಾರಣದಿಂದಾಗಿ ಪೋಲೀಸರಿಗೆ ಮಾಹಿತಿ ನೀಡುವಲ್ಲಿಯು ವಿಫಲರಾಗಿದ್ದಾರೆ.

### ೬.೧೪ ಕೋಷ್ಟಕ ೧೪: ಅನೈತಿಕ ಸಾಗಾಣಿಕೆಗೆ ಒಳಗಾದ ರೀತಿ

| ಕ್ರಸಂ. | ಅನೈತಿಕ ಸಾಗಾಣಿಕೆಗೆ ಒಳಗಾದ ರೀತಿ | ಸಂಖ್ಯೆ | ಶೇಕಡ |
|---|---|---|---|
| ೧. | ಮೋಸ | ೧೧ | ೪೭.೮೨ |
| ೨. | ಹೆದರಿಸಿ | ೬ | ೨೬.೦೮ |
| ೩. | ಅಪಹರಣ | ೬ | ೨೬.೦೮ |
| | ಒಟ್ಟು | ೨೩ | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಈ ಮೇಲಿನ ಕೋಷ್ಟಕ ವಿವರಿಸುವಂತೆ ಹೆಣ್ಣುಮಕ್ಕಳನ್ನು ಕದ್ದೊಯ್ದು ಅನೈತಿಕ ವ್ಯವಹಾರಗಳಿಗೆ ದೂಡಿರುವ ಪ್ರಮಾಣ ಶೇ.೨೬.೦೮ರಷ್ಟಿದೆ. ಅವರನ್ನು ಹೆದರಿಸಿ ಈ ಕೃತ್ಯಕ್ಕೆ ತಳ್ಳಿರುವ ಪ್ರಮಾಣವೂ ಸಹ ಅಷ್ಟೇ ಇದೆ. ಆದರೆ ಮೋಸ ಮಾಡುವ ಮೂಲಕ ಶೇ.೪೭.೮೨ರಷ್ಟು ಹೆಣ್ಣು ಮಕ್ಕಳನ್ನು ಅನೈತಿಕ ಸಾಗಾಣಿಕೆಗೆ ಒಳಗು ಮಾಡಲಾಗಿದೆ. ಪ್ರೀತಿಸಿ ಮದುವೆಯಾಗುವುದಾಗಿ ಸುಳ್ಳು ಹೇಳಿ ಕರೆದೊಯ್ಯುವುದು. ಬಡತನದ ಕಾರಣಕ್ಕೆ ಕೆಲಸ ಕೊಡಿಸುವುದಾಗಿ ನಂಬಿಸುವುದರ ಮೂಲಕ 'ಗುಜ್ಜರ್' ವಿವಾಹಗಳ ಮೂಲಕ, ಹೆಣ್ಣು ಮಕ್ಕಳನ್ನು ಸಾಗಾಣಿಕೆ ಮಾಡಲಾಗುತ್ತಿರುವುದು ತಿಳಿದುಬಂದಿದೆ. ಇವೆಲ್ಲಾ ಅಂಶಗಳು ಇಂದು ನಿಜಕ್ಕೂ ಕಳವಳಕಾರಿಯಾದ ವಿಷಯವಾಗಿದ್ದು ಈ ಬಗ್ಗೆ ಗಂಭೀರ ಕಾರ್ಯಾಚರಣೆ ಅಗತ್ಯವಾಗಿದೆ.

### ೬.೧೫ ಕೋಷ್ಟಕ ೧೫: ಅನೈತಿಕ ಸಾಗಾಣಿಕೆಗೊಂಡ ಸ್ಥಳ

| ಕ್ರಸಂ. | ಸಾಗಾಣಿಕೆಗೊಂಡ ಸ್ಥಳ | ಸಂಖ್ಯೆ | ಶೇಕಡ |
|---|---|---|---|
| ೧. | ಲಾಡ್ಜ್ | ೨ | ೮.೬೯ |
| ೨. | ಗೊತ್ತಿಲ್ಲದ ಜಾಘ | ೩ | ೧೩.೦೪ |
| ೩. | ಘರ್‌ವಾಲಿ ಮನೆ | ೧೦ | ೪೩.೪೭ |
| ೪. | ಬೇರೆ ರಾಜ್ಯ | ೪ | ೧೭.೩೯ |
| ೫. | ಅಪರಿಚಿತರ ಮನೆ | ೨ | ೮.೬೯ |
| ೬. | ಬೇರೆ ದೇಶ | ೨ | ೮.೬೯ |
| | ಒಟ್ಟು | ೨೩ | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕವನ್ನು ಗಮನಿಸಿದರೆ ಶೇ.೮.೬೯ರಷ್ಟು ಹೆಣ್ಣುಮಕ್ಕಳು ಸಾಗಾಣಿಕೆಗೊಂಡಿರುವುದು ನೇರವಾಗಿ ಲಾಡ್ಜ್‌ಗಳಿಗೆ ಶೇ.೪೩.೪೭ರಷ್ಟು ಫರ್‌ವಾಲಿ ಮನೆ ಅಂದರೆ ಬ್ರಾಥಲ್‌ಗಳಿಗೆ. ಅಪರಿಚಿತರ ಮನೆ ಶೇ.೮.೬೯ ಇದ್ದರೆ, ಗೊತ್ತಿಲ್ಲದ ಜಾಗಕ್ಕೆ ಶೇ.೧೩.೦೪ರಷ್ಟು ಹೆಣ್ಣುಮಕ್ಕಳು ಸಾಗಾಣಿಕೆಯಾಗಿದ್ದಾರೆ. ಶೇ.೮.೬೯ರಷ್ಟು ಹೆಣ್ಣು ಮಕ್ಕಳು ಬೇರೆ ದೇಶಕ್ಕೆ ಸಾಗಾಣಿಕೆಯಾಗಿದ್ದಾರೆ. ಇವರಲ್ಲಿ ಒಬ್ಬರನ್ನು ಅಪಹರಣದ ಮೂಲಕ ಸಾಗಿಸಿದ್ದಾರೆ. ಮತ್ತೊಬ್ಬರನ್ನು ಸುಳ್ಳು ಉದ್ಯೋಗದ ಆಮಿಷದಿಂದ ಸಾಗಾಣಿಕೆ ಮಾಡಲಾಗಿದೆ. ಇಬ್ಬರನ್ನು ದುಬೈಗೆ ಸಾಗಾಣಿಕೆ ಮಾಡಲಾಗಿದೆ. ಶೇ. ೧೭.೩೯ರಷ್ಟು ಹೆಣ್ಣುಮಕ್ಕಳು ಬೇರೆ ರಾಜ್ಯಗಳಿಗೆ ಸಾಗಾಣಿಕೆಯಾಗಿದ್ದರೆ ನೇರವಾಗಿ ಬ್ರಾಥಲ್‌ಗಳಿಗೆ ಮಾರಾಟ ಮಾಡಲಾಗಿದೆ. ಒಬ್ಬರು ಮಾತ್ರ ಗುಜ್ಜಾರ್ ಮದುವೆಯ ಮೂಲಕ ಬೇರೆ ರಾಜ್ಯಕ್ಕೆ ಹೋಗಿ ನಂತರ ಅಲ್ಲಿಂದ ತಪ್ಪಿಸಿಕೊಂಡು ಬಂದಿದ್ದಾರೆ. ಇನ್ನುಳಿದಂತೆ ವೇಶ್ಯಾವಾಟಿಕೆಯಲ್ಲಿಯೇ ಉಳಿದಿದ್ದಾರೆ. ಸಾಗಾಣಿಕೆಗೊಂಡ ಹೆಣ್ಣುಮಕ್ಕಳು ಗರಿಷ್ಠ ಪ್ರಮಾಣದಲ್ಲಿ ಬ್ರಾಥೆಲ್‌ಗಳ ಮತ್ತು ಬೇರೆ ರಾಜ್ಯಗಳಲ್ಲಿ ಲಾಡ್ಜ್‌ಗಳಲ್ಲಿ ಸಿಕ್ಕಿಕೊಂಡಿರುವುದು ಕಂಡುಬರುತ್ತದೆ. ಸಾಕಷ್ಟು ಸಂಖ್ಯೆಯಲ್ಲಿ ದಮನಿತ ಹೆಣ್ಣುಮಕ್ಕಳನ್ನು ಅಪರಿಚಿತ ಮನೆ ಮತ್ತು ಅಪರಿಚಿತ ಸ್ಥಳಗಳಿಗೆ ದೂಡಿರುವುದು ಇದೆ. ತೆರೆಮರೆಯಲ್ಲಿ ಅವ್ಯಾಹತವಾಗಿ ಜರುಗುತ್ತಿರುವ ಕಳ್ಳಸಾಗಾಣಿಕೆಯಲ್ಲಿ ನಾಗರೀಕ ವ್ಯವಸ್ಥೆಯ ಅನೇಕ ಪಾಲುದಾರರು ಇರುವುದು ಕಂಡುಬಂದಿದೆ.

ಹೆಣ್ಣು ಮಕ್ಕಳನ್ನು ಅನೈತಿಕ ಸಾಗಾಣಿಕೆಯ ಮೂಲಕ ಹೆಚ್ಚಾಗಿ ನೆರೆ ರಾಜ್ಯಗಳಾದ ಮಹಾರಾಷ್ಟ್ರ ಮತ್ತು ಗೋವವರೆಗೆ ದಂದೆಗಾಗಿ ಕದ್ದೊಯ್ದಿರುವುದು ಈ ಅಧ್ಯಯನದಿಂದ ತಿಳಿದು ಬಂದಿದೆ. ಅದರ ಜೊತೆಗೆ ಸಾಗಾಣಿಕೆಯು ದುಬೈ ನಂತಹ ಶ್ರೀಮಂತ ಮುಸ್ಲಿಂ ರಾಷ್ಟ್ರಗಳಿಗೂ ಹಬ್ಬಿರುವುದನ್ನು ಸಾಬೀತು ಪಡಿಸಿದೆ. ಇದರಿಂದಾಗಿ ದೇಶ ವ್ಯಾಪ್ತಿಯಿಂದ ಅಂತರಾಷ್ಟ್ರೀಯ ವ್ಯಾಪ್ತಿಗೆ ಹಬ್ಬಿಕೊಂಡಿರುವ ಈ ಜಾಲ ಜಾಗತಿಕ ಮಟ್ಟದಲ್ಲಿ ವಿಸ್ತರಣೆಯಾಗಿರುವುದು ಆತಂಕದ ಬೆಳವಣಿಗೆಯಾಗಿದೆ.

**೬.೧೬ ಕೋಷ್ಟಕ ೧೬: ಅನೈತಿಕ ಸಾಗಾಣಿಕೆಗೆ ಒಳಗಾದಾಗ ಲೈಂಗಿಕ ಹಿಂಸೆ ದೌರ್ಜನ್ಯ, ಅತ್ಯಾಚಾರ ಅನುಭವಿಸಿದ್ದೀರಾ?**

| ಕ್ರಸಂ. | ಲೈಂಗಿಕ ಹಿಂಸೆ ದೌರ್ಜನ್ಯ ಅತ್ಯಾಚಾರ ಅನುಭವಿಸಿದ್ದೀರಾ? | ಸಂಖ್ಯೆ | ಶೇಕಡ |
|---|---|---|---|
| ೧. | ಹೌದು | ೧೩ | ೫೬.೫೨ |
| ೨. | ಇಲ್ಲ | ೧೦ | ೪೩.೪೭ |
| | **ಒಟ್ಟು** | ೨೩ | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಕ್ತೃಗಳು ನೀಡಿದ ಮಾಹಿತಿಯಂತೆ ಅನೈತಿಕ ಸಾಗಾಣಿಕೆಗೆ ಒಳಗಾದ ಸಂದರ್ಭದಲ್ಲಿ ಶೇ.೫೬.೫೨ ರಷ್ಟು ಹೆಣ್ಣು ಮಕ್ಕಳು ಲೈಂಗಿಕ ಹಿಂಸೆ, ದೌರ್ಜನ್ಯ ಮತ್ತು ಅತ್ಯಾಚಾರವನ್ನು ಅನುಭವಿಸಿದ್ದಾರೆ. ಶೇ.೪೩.೪೭ರಷ್ಟು ಹೆಣ್ಣುಮಕ್ಕಳು ಯಾವುದೇ ರೀತಿಯ ಹಿಂಸೆಯನ್ನು ಅನುಭವಿಸಿಲ್ಲ ಎಂದಿದ್ದಾರೆ. ಇಲ್ಲಿ ಲೈಂಗಿಕ ಹಿಂಸೆ ದೌರ್ಜನ್ಯ ಮತ್ತು ಅತ್ಯಾಚಾರಗಳನ್ನು ಎದುರಿಸಿದವರೇ ಅಧಿಕವಾಗಿದ್ದಾರೆ. ಸುಳ್ಳು ಪ್ರೀತಿಯಿಂದ ಮೋಸ ಹೋದವರು ಮತ್ತು ಬ್ರಾಥಲ್‌ಗಳಿಗೆ ಮಾರಾಟವಾದವರು ಈ ರೀತಿಯ ಹಿಂಸೆ ಅನುಭವಿಸಿರುವ ಸಾಧ್ಯತೆಗಳೇ ಹೆಚ್ಚಿವೆ. ಕಳಂಕದ ಭಯದಿಂದ ವಾಸ್ತವವನ್ನು ಬಚ್ಚಿಡುವ ಪ್ರವೃತ್ತಿಯಿಂದಲೂ ಹಲವರು ಇಲ್ಲ ಎಂದೇ ಉತ್ತರಿಸಿರುವ ಸಾಧ್ಯತೆಗಳೂ ಇವೆ. ಅತ್ಯಾಚಾರ ಅಥವಾ ದೌರ್ಜನ್ಯದ ವಿರುದ್ಧ ದೂರು ದಾಖಲಿಸಲು ಹೋಗಲು ಇವರಿಗೆ ಸಾಧ್ಯವಾಗಿಲ್ಲ. ಕಾರಣ ರೌಡಿಗಳು ಮತ್ತು ಸಾಗಾಣಿಕೆದಾರರ ಕಟ್ಟುನಿಟ್ಟಿನ ಕಣ್ಗಾವಲು ಮತ್ತು ಇವರಿಂದ ತಪ್ಪಿಸಿಕೊಂಡಿದ್ದರೂ ಸಹ ಅತ್ಯಾಚಾರ, ದೌರ್ಜನ್ಯದ ವಿರುದ್ಧ ದೂರು ದಾಖಲಿಸಲು ಹೋದರೆ ಪೋಲೀಸ್ ಠಾಣೆಗಳಲ್ಲಿ ತಿರಸ್ಕಾರ, ಅಸಡ್ಡೆಗಳಿಂದ ನಡೆಸಿಕೊಳ್ಳುವುದೇ ಹೆಚ್ಚು. ಎಲ್ಲೆಡೆ ಇವರನ್ನು ಅಗೌರವದಿಂದಲೇ ನಡೆಸಿಕೊಳ್ಳಲಾಗುತ್ತದೆ. ಪತಿಯಿಂದ, ಪಾರ್ಟನರ್‌ಗಳಿಂದ, ಘರ್‌ವಾಲಿಗಳಿಂದ ಅಪಾರವಾದ ದೈಹಿಕ, ಮಾನಸಿಕ ಹಿಂಸೆಯನ್ನು ಈ ಹೆಣ್ಣುಮಕ್ಕಳು ಅನುಭವಿಸುತ್ತಾರೆ.

### ೬.೧೭ ಕೋಷ್ಟಕ ೧೭: ಅನೈತಿಕ ಸಾಗಾಣಿಕೆಗೆ ಒಳಗಾದ ಹೆಣ್ಣುಮಕ್ಕಳು ಅನುಭವಿಸುತ್ತಿರುವ ದೈಹಿಕ ಅನಾರೋಗ್ಯದ ಸಮಸ್ಯೆಗಳು

| ಕ್ರಸಂ. | ದೈಹಿಕ ಅನಾರೋಗ್ಯದ ಸಮಸ್ಯೆಗಳು | ಸಂಖ್ಯೆ | ಶೇಕಡ |
|---|---|---|---|
| ೧. | ಹೆಚ್.ಐ.ವಿ | ೪ | ೧೭.೩೯ |
| ೨. | ಎಸ್.ಟಿ.ಡಿ | ೮ | ೩೪.೭೮ |
| ೩. | ಕ್ಯಾನ್ಸರ್ | ೧ | ೪.೩೪ |
| ೪. | ಲೈಂಗಿಕ ಸೋಂಕು | ೪ | ೧೭.೩೯ |
| ೫. | ಯಾವುದೂ ಇಲ್ಲ | ೬ | ೨೬.೦೮ |
| | **ಒಟ್ಟು** | ೨೩ | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ**: ಯಾವುದೇ ವ್ಯಕ್ತಿಗೆ ದೈಹಿಕ ಅನಾರೋಗ್ಯವು ಕಳಂಕಕ್ಕೆ ಕಾರಣವಾಗಿ ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗೆ ದಾರಿಯಾಗುತ್ತದೆ. ಅನೈತಿಕ ಸಾಗಾಣಿಕೆಗೆ ಒಳಗಾದ ಹೆಣ್ಣುಮಕ್ಕಳಲ್ಲಿ

ಪ್ರಸ್ತುತ ಅಧ್ಯಯನದಿಂದ ದೊರೆತ ಮಾಹಿತಿಯ ಪ್ರಕಾರ ಶೇ.೧೭.೫೯ರಷ್ಟು ಹೆಣ್ಣು ಮಕ್ಕಳು ಹೆಚ್.ಐ.ವಿ ಸೋಂಕಿನಿಂದ ಹೆಚ್ಚಿನ ಹಿಂಸೆಯನ್ನು ಅನುಭವಿಸುತ್ತಿದ್ದಾರೆ. ಶೇ.೩೪.೭೮ರಷ್ಟು ಹೆಣ್ಣು ಮಕ್ಕಳು ಎಸ್.ಟಿ.ಡಿ ಸೋಂಕಿಗೆ ತುತ್ತಾಗಿ ನರಳುತ್ತಿದ್ದಾರೆ. ಶೇ.೧೭.೫೯ರಷ್ಟು ಹೆಣ್ಣು ಮಕ್ಕಳು ಲೈಂಗಿಕ ಸೋಂಕಿನಿಂದ ನರಕ ಅನುಭವಿಸುತ್ತಿದ್ದಾರೆ. ಸಾಗಾಣಿಕೆ ಒಳಪಟ್ಟು ಬಹಳಷ್ಟು ಹೆಣ್ಣು ಮಕ್ಕಳನ್ನು ಅವರ ಚಿಕ್ಕವಯಸ್ಸಿನಿಂದಲೇ ಲೈಂಗಿಕ ವ್ಯಾಪಾರದಲ್ಲಿ ತೊಡಗಿಸಿರುವುದರಿಂದ ಅಂದರೆ ಅವರು ೧೩ರಿಂದ ೧೭ ವರ್ಷದೊಳಗೆ ಈ ಕೂಪದಲ್ಲಿ ಸಿಲುಕಿರುವುದರಿಂದ ಬಹಳ ಬೇಗ ಹೆಚ್.ಐ.ವಿ., ಎಸ್.ಟಿ.ಡಿ ಮತ್ತು ಲೈಂಗಿಕ ರೋಗಗಳಿಗೆ ತುತ್ತಾಗುತ್ತಾರೆ. ಅಲ್ಲದೆ ಇವರು ಗುಂಪು ಅತ್ಯಾಚಾರಕ್ಕೆ ಒಳಗಾಗುವ ಅಪಾಯವನ್ನು ಸಹ ಎದುರಿಸುತ್ತಾರೆ. ಅಂಥಹ ಸಂದರ್ಭದಲ್ಲಿ ಗಂಡಸರು ಕಾಂಡೋಮ್ ಬಳಸುವುದಿಲ್ಲ ಆದ್ದರಿಂದ ಸೋಂಕನ್ನು ಪಡೆದುಕೊಳ್ಳುವ ಅಪಾಯ ಹೆಚ್ಚು ಮತ್ತು ಇದರಿಂದಲೇ ಹೆಚ್ಚು ಜನ ಸೋಂಕಿತರಾಗಿದ್ದಾರೆ. ಇವರಲ್ಲಿ ಕಾಂಡೋಮ್ ಬಳಕೆಯ ಬಗ್ಗೆ ತಿಳಿದವರು ಇದ್ದಾರೆ. ಅಲ್ಲದೆ ಅದರ ಬಳಕೆಯನ್ನು ಮಾಡುತ್ತಾರೆ. ಅದು ಇಲ್ಲದೆ ಎಷ್ಟೇ ಹಣ ಕೊಟ್ಟರೂ ಬರುವುದಿಲ್ಲ ಅವರ ಆರೋಗ್ಯ ಮುಖ್ಯ ಎಂಬ ಜಾಗೃತಿ ಬಂದಿದೆ. ಆದರೆ ಮೋಸದಿಂದ ಕರೆದುಕೊಂಡು ಹೋಗಿ ಗುಂಪು ಅತ್ಯಾಚಾರ ನಡೆಸುವುದು, ಕಾಂಡೋಮ್ ಬಳಕೆಗೆ ನಿರಾಕರಣೆ, ಬೆದರಿಸಿ ಬಲವಂತದ ಸಂಭೋಗ, ಕೆಲವೊಮ್ಮೆ ಇವರೇ ಹೆಚ್ಚಿನ ಹಣಕ್ಕಾಗಿ ಇವರೇ ಒಪ್ಪಿಕೊಳ್ಳುವುದು, ಮತ್ತು ಗಂಡಂದಿರು ಅಥವಾ ರೌಡಿಗಳು ಅವರಿಗೆ ಸೋಂಕು ಇದ್ದರೂ ಸಹ ಇವರಿಗೆ ತಿಳಿಸದೆ ಇವರಿಗೂ ಅಂಟಿಸುವುದರಿಂದ ಹೆಚ್.ಐ.ವಿ.ಅಪಾಯಕ್ಕೆ ಈಡಾಗುತ್ತಾರೆ. ಹಲವು ಬಾರಿ ಕುಟುಂಬದವರೇ ಸೋಂಕಿದ್ದರೂ ಸಹ ಹಣ ಸಂಪಾದನೆಗಾಗಿ ಒತ್ತಾಯ ಮಾಡುತ್ತಾರೆ. ಲೈಂಗಿಕ ಸೋಂಕು ಹೆಚ್.ಐ.ವಿ., ಎಸ್.ಟಿ.ಡಿಯಂತಹ ಸೋಂಕುಗಳಿಂದಾಗಿ ತಮ್ಮಲ್ಲಿಯೇ ಇರುವ ಸ್ವಕಳಂಕದಿಂದ ಇವರು ನೆಮ್ಮದಿಯಾಗಿ ಬದುಕುವುದು ಸಾಧ್ಯವೇ ಇಲ್ಲದ ಪರಿಸ್ಥಿತಿ ಇದೆ. ತಾವು ಮಾಡುತ್ತಿರುವ ಕೆಲಸ ಮತ್ತು ಕಾಯಿಲೆಯನ್ನು ಮುಚ್ಚಿಟ್ಟುಕೊಳ್ಳು ಪರದಾಡುವುದು ಇವರಿಗೆ ಅಪಾರವಾದ ಒತ್ತಡವನ್ನು ಉಂಟುಮಾಡುತ್ತದೆ. ಔಷಧಿಗಳನ್ನು ತೆಗೆದುಕೊಳ್ಳಲು ಎಆರ್‌ಟಿ ಸೆಂಟರಿಗೆ ಹೋದರೆ ಯಾರಿಗಾದರೂ ತಿಳಿದು ಬಿಡುವುದೆಂಬ ಭೀತಿಗೆ ಚಿಕಿತ್ಸೆಯನ್ನೇ ನಿರಾಕರಿಸುತ್ತಾರೆ. ಘರ್‌ವಾಲಿಗಳ ರೌಡಿಗಳ ಕಪಿ ಮುಷ್ಟಿಯಲ್ಲಿರುವವರಿಗೂ ಈ ಸೌಲಭ್ಯವೂ ಇರುವುದಿಲ್ಲ. ಹಲವಾರು ಹೆಣ್ಣು ಮಕ್ಕಳು, ಸರ್ಕಾರಿ ಆಸ್ಪತ್ರೆಗಳಲ್ಲಿ ಸೂಕ್ತವಾದ ಔಷಧಿ ಚಿಕಿತ್ಸೆ ದೊರೆಯದಿದ್ದರೆ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯುವಷ್ಟು ಹಣ ಇರದೆ ಹಾಗೆಯೇ ಇರುತ್ತಾರೆ. ಸೋಂಕಿನಿಂದ ಬಾಧಿತರಾದ ಮೇಲೆ ಲೈಂಗಿಕ ಜೀತದಿಂದ ಸಾಗಾಣಿಕೆದಾರರಿಂದ ಮುಕ್ತಿಯನ್ನು ಪಡೆದವರಿದ್ದಾರೆ. ಕುಟುಂಬದಿಂದ ದೂರವಾಗಿ ಮೈತುಂಬಾ ಕಾಯಿಲೆಗಳನ್ನು ಹೊದ್ದು ಜೀವನಕ್ಕೆ ಹಣವಿಲ್ಲದೆ ಅಕ್ಷರಶಃ ನರಕದ ಜೀವನ ಸಾಗಿಸುತ್ತಾರೆ.

ಕೋಷ್ಟಕ ೧೭ರಲ್ಲಿರುವಂತೆ ಶೇ.೪.೩೪ರಷ್ಟು ಹೆಣ್ಣು ಮಕ್ಕಳು ಕ್ಯಾನ್ಸರ್ ಖಾಯಿಲೆಗೆ ತುತ್ತಾಗಿದ್ದಾರೆ. ಲೈಂಗಿಕ ಸೋಂಕಿಗೆ ತುತ್ತಾಗಿ ನಂತರ ಅದು ಉಲ್ಬಣಗೊಂಡು ಸ್ತನ ಕ್ಯಾನ್ಸರ್ ಆಗಿ ತಮ್ಮ

ಪ್ರಾಣವನ್ನೇ ಕಳೆದುಕೊಂಡಿದ್ದಾರೆ. ಶೇ.೨೬.೦೮ರಷ್ಟು ಹೆಣ್ಣು ಮಕ್ಕಳು ಯಾವುದೇ ಸೋಂಕಿಗೆ ತುತ್ತಾಗಿಲ್ಲ ಕಾರಣ. ಅವರನ್ನು ಬಹಳ ಬೇಗ ಅನೈತಿಕ ವ್ಯವಹಾರಕ್ಕೆ ಬಲಿಯಾಗುವ ಮೊದಲು ಮತ್ತು ಬಲಿಯಾದ ನಂತರ ಕಡಿಮೆ ಅವಧಿಯಲ್ಲಿಯೇ ಅದರಿಂದ ಮುಕ್ತಿಗೊಳಿಸಿರುವುದರಿಂದ ಅವರ ಆರೋಗ್ಯಕ್ಕೆ ಸಮಸ್ಯೆಯಾಗಿಲ್ಲದಿರುವುದು ಕಂಡುಬಂದಿದೆ.

**೬.೧೮ ಕೋಷ್ಟಕ ೧೮: ಅನೈತಿಕ ಸಾಗಾಣಿಕೆಯ ವಿಷವರ್ತುಲದಿಂದ ತಪ್ಪಿಸಿಕೊಂಡು ಹಿಂದಿರುಗಿದ ದಮನಿತ ಹೆಣ್ಣು ಮಕ್ಕಳಿಗೆ ಕಾನೂನಿನ ಅಡಿಯಲ್ಲಿ ದೊರೆತಿರುವ ಪರಿಹಾರ**

| ಕ್ರ.ಸಂ. | ಪರಿಹಾರ | ಸಂಖ್ಯೆ | ಶೇಕಡ |
|---|---|---|---|
| ೧. | ಹೌದು | ೪ | ೧೭.೩೯ |
| ೨. | ಇಲ್ಲ | ೧೯ | ೮೨.೬೦ |
| | ಒಟ್ಟು | ೨೩ | ೧೦೦% |

ಮೂಲ: ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

**ವಿಶ್ಲೇಷಣೆ:** ಅನೈತಿಕ ಸಾಗಾಣಿಕೆಯ ವಿಷವರ್ತುಲದಿಂದ ತಪ್ಪಿಸಿಕೊಂಡು ಹಿಂದಿರುಗಿದ ದಮನಿತ ಹೆಣ್ಣುಮಕ್ಕಳು ದೌರ್ಜನ್ಯ ಎಸಗಿದವರ ಮೇಲೆ ಕಾನೂನಿನ ಕ್ರಮ ಜರುಗಿಸುವ ಪ್ರಯತ್ನಗಳನ್ನು ಮಾಡಿರುವುದು ಮತ್ತು ಪರಿಹಾರಗಳನ್ನು ಪಡೆದುಕೊಂಡಿರುವುದು ಬಹಳ ಕಡಿಮೆ. ಶೇ.೧೭.೩೯ರಷ್ಟು ಹೆಣ್ಣುಮಕ್ಕಳು ಅವರಿಗೆ ಮಾಹಿತಿ ಇಲ್ಲದ ಕಾರಣ, ಆ ಬಗ್ಗೆ ಯಾರನ್ನು ಸಂಪರ್ಕಿಸಬೇಕು ಎಂದು ತಿಳಿದಿಲ್ಲದಿರುವುದು. ಮತ್ತು ತಮಗಾದ ನೋವು ಅನ್ಯಾಯದ ಎದುರು ಏನೂ ಬೇಡವೆನಿಸುವುದರ ಕಾರಣದಿಂದ ಪರಿಹಾರ ಪಡೆಯಲು ಸಾಧ್ಯವಾಗಿಲ್ಲ. ಬಹಳಷ್ಟು ಹೆಣ್ಣು ಮಕ್ಕಳು ಇನ್ನೂ ವೇಶ್ಯಾವಾಟಿಕೆಯಲ್ಲೇ ಉಳಿದಿರುವುದು ಮತ್ತು ತಂದೆ ಗಂಡನಿಂದಲೇ ಮಾರಾಟವಾಗಿರುವುದರಿಂದ ಹೊರ ಬಂದರೂ ಭವಿಷ್ಯದ ಯೋಚನೆಯಿಂದ ಸುಮ್ಮನಾಗಿದ್ದಾರೆ. ಈ ಹೆಣ್ಣುಮಕ್ಕಳಿಗಾಗಿಯೆ ಕೆಲಸ ಮಾಡುತ್ತಿರುವ ಸರ್ಕಾರೇತರ ಸಂಸ್ಥೆಗಳು ಇರುವ ಕಡೆ ಕಾನೂನಿನ ಮಾಹಿತಿ ಇದೆ. ಆದರೆ ಕಾನೂನು ತಿಳಿದು ಪ್ರಶ್ನಿಸಿದರೆ ಹಿಂಸೆ ಮತ್ತು ಸುಳ್ಳು ಕೇಸ್ ಬುಕ್ ಮಾಡುವ ಸಾಧ್ಯತೆಗಳೇ ಹೆಚ್ಚು. ಮನೆಯವರಿಂದಲೇ ಹಿಂಸೆ, ತಿರಸ್ಕಾರಕ್ಕೆ ಒಳಪಟ್ಟಾಗ ನೈತಿಕ ಮತ್ತು ಸಾಮಾಜಿಕ ಬೆಂಬಲವೇ ಇಲ್ಲವಾಗಿ ಹತಾಶರಾಗುವವರೇ ಹೆಚ್ಚು ಯಾವುದೇ ರೀತಿಯ ಕಾನೂನಾತ್ಮಕ ಪರಿಹಾರ ದೊರಕಿಸುವಲ್ಲಿ ಪ್ರಭುತ್ವ ಮತ್ತು ಆಡಳಿತಗಳು ಸಂಪೂರ್ಣವಾಗಿ ವಿಫಲವಾಗಿರುವುದು ಅಧ್ಯಯನದಲ್ಲಿ ಗೋಚರವಾಗುತ್ತದೆ. ಕನಿಷ್ಟ ಪ್ರಮಾಣದ ಪ್ರಕರಣಗಳಲ್ಲಿ ಮಾತ್ರ ಕಾನೂನು ದಮನಿತರ ಸಹಾಯಕ್ಕೆ ಬಂದಿರುವುದು ದಾಖಲಾಗಿದೆ.

ದಮನಿತ ಹೆಣ್ಣುಮಕ್ಕಳು ಅನುಭವಿಸುವ ಶೋಷಣೆ, ದೌರ್ಜನ್ಯ, ಹಿಂಸೆ, ಹಾಗೂ ಆರೋಗ್ಯದ ಅಪಾಯಗಳನ್ನು ಸಶಕ್ತೀಕರಣ ಮತ್ತು ಮಹಿಳಾ ನೆಲೆಯಿಂದ ನೋಡಬೇಕು. ಮನುಷ್ಯ ಘನತೆಯಿಂದ

ಬದುಕಲು ಅಗತ್ಯವಾದ ಎಲ್ಲಾ ಹಕ್ಕುಗಳು ಉಲ್ಲಂಘನೆಯಾಗಿವೆ ಎಂಬುದು ಈ ಹೆಣ್ಣುಮಕ್ಕಳ ಮೇಲೆ ನಡೆದಿರುವ ಹಿಂಸೆಯನ್ನು ಗಮನಿಸಿದಾಗ ವೇದ್ಯವಾಗುತ್ತದೆ. ಅವರ ಹಕ್ಕುಗಳ ಉಲ್ಲಂಘನೆಯಲ್ಲಿ ಕುಟುಂಬದವರ, ಕಾನೂನು ಪಾಲಕರ ವೈಫಲ್ಯವನ್ನು, ಭ್ರಷ್ಟಾಚಾರವನ್ನು ಸ್ಪಷ್ಟವಾಗಿ ಗುರುತಿಸಬಹುದು. ಹೆಣ್ಣುಮಕ್ಕಳನ್ನು ಬಂಡವಾಳವಾಗಿ ಬಳಸುವ, ಕೇವಲ ದುಡಿಸಿಕೊಳ್ಳುವ ಮತ್ತು ಭೋಗಿಸುವ ವಸ್ತುವಂತೆ ಪರಿಗಣಿಸುವ ಪುರುಷ ಪ್ರಧಾನ ಸಂಸ್ಕೃತಿಯೇ ನಮ್ಮ ಸಮಾಜದಲ್ಲಿ ಪ್ರಧಾನವಾಗಿರುವಾಗ ಅದೇ ಸಮಾಜದ ಭಾಗವಾಗಿರುವ ಕುಟುಂಬ ಮತ್ತು ಸರ್ಕಾರ, ಅದರ ಇತರೆ ಅಂಗಗಳು ಹೆಣ್ಣನ್ನು ಭಿನ್ನವಾಗಿ ನೋಡಲು ಸಾಧ್ಯವಾದರೂ ಹೇಗೆ?. ಹೆಣ್ಣನ್ನು ಸಹ ಪಯಣಿಗಳಂತೆ, ತನ್ನಂತೆ ದೇಹ–ಮನಸ್ಸಿರುವ ಸಹಜೀವಿಯಂತೆ ನೋಡಿದಾಗ ಮಾತ್ರ ಸಾಧ್ಯವಾಗುತ್ತದೆ.

ಈ ಅಧ್ಯಾಯದಲ್ಲಿ ಅನೈತಿಕ ಸಾಗಾಣಿಕೆಗೆ ಒಳಗಾದ ಹೆಣ್ಣುಮಮಕ್ಕಳ ಸ್ವ ವಿವರ, ಅವರು ಅನುಭವಿಸಿದ ಶೋಷಣೆ ಅವರ ಮೇಲಾಗುವ ದೌರ್ಜನ್ಯ, ಹಿಂಸೆಯ ಸ್ವರೂಪ, ಆರೋಗ್ಯದ ಮೇಲೆ ಉಂಟಾಗುವ ಪರಿಣಾಮಗಳು ಬಗ್ಗೆ ಕೂಲಂಕುಷವಾಗಿ ಚರ್ಚಿಸಲಾಗಿದೆ. ಈ ಮೇಲ್ಕಂಡ ವಿಷಯಗಳಿಗೆ ಸಂಬಂಧಿಸಿದಂತೆ ಈ ಅಧ್ಯಾಯದಲ್ಲಿ ದಾಖಲಿಸಿರುವ ದತ್ತಾಂಶಗಳ ವಿಶ್ಲೇಷಣೆಯ ಮೂಲಕ ದಮನಿತರ ಜೀವನ ಮಟ್ಟದ ಸುಧಾರಣೆಗೆ ಅವರ ಮಾನವ ಹಕ್ಕುಗಳ ಸಂರಕ್ಷಣೆಯು ಅವರ ಕಳಂಕ ರಹಿತವಾದ ಘನತೆಯ ಜೀವನ ಹಾಗೂ ಅದಕ್ಕೆ ಪೂರಕವಾದ ಸಮಾಜೋ ಆರ್ಥಿಕ ವಿಕಾಸ ಮುಖ್ಯ ಪಾತ್ರವನ್ನು ವಹಿಸಬಲ್ಲದು ಎಂಬುದನ್ನು ಈ ಪ್ರಕರಣಗಳ ಅಧ್ಯಯನದಿಂದ ತಿಳಿಯುತ್ತದೆ. ಹಾಗೆಯೇ ದಮನಿತ ಹೆಣ್ಣುಮಕ್ಕಳ ಸಶಕ್ತೀಕರಣ, ಪುನರ್ವಸತಿ ಮತ್ತು ಸಂರಕ್ಷಣೆಯ ಆಯಾಮಗಳ ಪೂರ್ಣ ಸಮತೋಲನ ಮತ್ತು ಸಮನ್ವಯ ಸಾಧಿಸಬೇಕಿರುವ ಅಗತ್ಯತೆಯನ್ನು ಹೇಳಲಾಗಿದೆ. ಅಪವಾದದ ಹಿಂಸೆಗೆ ಒಳಗಾಗಿರುವ ಅನ್ಯಾಯಕ್ಕೊಳಗಾದ ಹೆಣ್ಣುಮಕ್ಕಳಿಗೆ ಅದರಿಂದ ಹೊರಬರಲು ಹಕ್ಕುಗಳಷ್ಟೇ ಅಲ್ಲದೆ ಸೂಕ್ತವಾದ ಆಪ್ತ ಸಮಾಲೋಚನೆಯ ಮತ್ತು ಕುಟುಂಬದ ಬೆಂಬಲದ ಅಗತ್ಯವಿದೆ. ಹಾಗೆಯೇ ಅವರ ಜೀವನವನ್ನು ಉತ್ತಮಪಡಿಸುವ ಜವಾಬ್ದಾರಿ ಇರುವ ಸರ್ಕಾರ ಮತ್ತು ನಾಗರಿಕ ಸಮಾಜವನ್ನು ಸೂಕ್ಷ್ಮಗೊಳಿಸುವ ಕಾರ್ಯಕ್ರಮಗಳ ಅವಶ್ಯಕತೆಯಿದೆ.

ಒಟ್ಟಾರೆ ಹೆಣ್ಣನ್ನು ನಮ್ಮ ಸಾಮಾಜಿಕ ವ್ಯವಸ್ಥೆಯು ಸರಕಾಗಿ ನೋಡುವ ದೃಷ್ಟಿಕೋನ ಬದಲಾಗದ ಹೊರತು ಹೆಣ್ಣು ಗಂಡಿನ ನಡುವಿನ ತಾರತಮ್ಯ ನಿಲ್ಲದು. ಪ್ರತಿಯೊಂದು ಹಂತದಲ್ಲಿ ಹೆಣ್ಣಿನ ಭಾವನೆ ಮತ್ತು ಅವಳ ಹಕ್ಕುಗಳನ್ನು ಗೌರವಿಸುವ ಸಾಮಾಜಿಕ ವ್ಯವಸ್ಥೆಯು ನಿರ್ಮಾಣವಾಗಬೇಕಾಗಿದೆ. ಬಂಡವಾಳ ಹಿತ್ತಾಸಕ್ತಿಯು ಪರಂರಯ ಹೆಸರಲ್ಲಿ, ಸಂಸ್ಕೃತಿಯ ಹೆಸರಲ್ಲಿ, ಮಾರುಕಟ್ಟೆಯ ಹೆಸರಲ್ಲಿ ಅವಳನ್ನು ಶೋಷಿಸುವ ಮನೋಭಾವ ನಿಲ್ಲಬೇಕು. ಜೊತೆಗೆ ಕಾನೂನು ವಿರೋಧಿ ಚಟುವಟಿಕೆಗಳು ನಿಲ್ಲದೆ ಹೊರತು ಹೆಣ್ಣಿನ ಅನೈತಿಕ ಸಾಗಾಣಿಕೆಗೆ ತಡೆ ಇರಲಾರದು. ಕೆಲವರಿಗೆ ಇದು ಲಾಭದಾಯಕ ಉದ್ಯಮ ಆದರಿಂದ ಇಂತಹ ಕೃತ್ಯವನ್ನು ಮಾಡುತ್ತಿರುತ್ತಾರೆ. ಇಂತಹ ಬಲಿಷ್ಠ ಶಕ್ತಿಗಳಿಗೆ ಸರ್ಕಾರಗಳು ಮಣಿಯುತ್ತಿರುವುದರಿಂದ ಇದನ್ನು ತಡೆಗಟ್ಟುವುದು ತುಂಬಾ

ಕಷ್ಟಕರವಾಗಿದೆ. ಮೇಲಿನ ಘಟನೆಗಳನ್ನು ಗಂಭೀರವಾಗಿ ತನಿಖೆಗೆ ಒಳಪಡಿಸಿದರೆ ಇದರ ಹಿಂದಿರು ಕಾಣದ ಕೈಗಳು ಸಿಗುತ್ತವೆ. ಆದರೆ ಇಂತಹ ದಂಧೆಗೆ ಸಹಾಯ ಮಾಡುವರು ಸಹ ಪ್ರಭುತ್ವದ ಭಾಗವಾಗಿರುವುದನ್ನು ಕಾಣುತ್ತೇವೆ. ಇದಕ್ಕೆ ಜಾತಿ, ಧರ್ಮ, ಕೋಮು ಬಣ್ಣ, ಪ್ರದೇಶ ಎನ್ನುವ ಯಾವುದೆ ಸೀಮಿತ ವ್ಯಾಪ್ತಿಯು ಇಲ್ಲ. ಈ ಅನೈತಿಕಯ ಚಟುವಟಿಕೆ ಎಲ್ಲಾ ಸಮಯದಲ್ಲಿಯು ನಡಿಯುತ್ತದೆ. ಇದಕ್ಕೆ ಬಲಿಯಾಗುವುದು ಮಾತ್ರ ಹೆಚ್ಚಿನವರು ಕೆಳವರ್ಗದ ಮಹಿಳಾ ಸಮುದಾಯವಾಗಿದೆ. ಇದು ಈ ಕಾಲದ ಸ್ಥಿತಿಗತಿಯಾಗಿದೆ.

ಅಧ್ಯಾಯ : ಏಳು

# ಆಯ್ದ ಪ್ರಕರಣಗಳ ಅಧ್ಯಯನ

೭.೧ ಮೈಸೂರು ಜಿಲ್ಲೆಯ ಪ್ರಕರಣಗಳು

೭.೨ ಬೆಂಗಳೂರು ನಗರ ಜಿಲ್ಲೆಯ ಪ್ರಕರಣಗಳು

೭.೩ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಕರಣಗಳು

ಅಧ್ಯಾಯ : ಏಳು

# ಆಯ್ದ ಪ್ರಕರಣಗಳ ಅಧ್ಯಯನ

ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯು ವಿಶ್ವವ್ಯಾಪಿಯಾಗಿದೆ. ಪ್ರಸ್ತುತ ಅಧ್ಯಯನವನ್ನು ಕರ್ನಾಟಕ ರಾಜ್ಯದ ಮೂರು ಜಿಲ್ಲೆಗಳಲ್ಲಿ ಕೈಗೊಳ್ಳಲು ಉದ್ದೇಶಿಸಲಾಗಿತ್ತು ಮತ್ತು ವ್ಯಾಪ್ತಿಯನ್ನು ಗುರುತಿಸಿಕೊಳ್ಳಲಾಗಿತ್ತು. ಅದರಂತೆ ಅಧ್ಯಯನದ ಕ್ಷೇತ್ರಕಾರ್ಯಕ್ಕಾಗಿ ಮೈಸೂರು, ಬೆಂಗಳೂರು ನಗರ/ಗ್ರಾಮಾಂತರ ಜಿಲ್ಲೆಗಳ ವ್ಯಾಪ್ತಿಯನ್ನು ಬಳಸಿಕೊಳ್ಳಲಾಗಿದೆ. ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಗೆ ಸಂಬಂಧಿಸಿದಂತೆ ೨೩ ವಿಶೇಷ ಪ್ರಕರಣಗಳನ್ನು ಗುರುತಿಸಿ ಅಧ್ಯಯನ ಮಾಡಲಾಗಿದೆ. ಇದಕ್ಕೆ ಸಂಬಂಧಿಸಿದ ವಿಶ್ಲೇಷಣೆಯನ್ನು 'ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆಯ ವಸ್ತು ಸ್ಥಿತಿಯ ವಿಶ್ಲೇಷಣೆ' ಎಂಬ ಅಧ್ಯಾಯದಲ್ಲಿ ನೀಡಲಾಗಿದೆ. ಪ್ರಕರಣ ಅಧ್ಯಯನದ ವಕ್ತೃಗಳ ನಿಜವಾದ ಹೆಸರುಗಳನ್ನು ಅವರ ಸುರಕ್ಷತೆಯ ದೃಷ್ಟಿಯಿಂದ ಬದಲಿಸಲಾಗಿದೆ.

## ೭.೧ ಮೈಸೂರು ಜಿಲ್ಲೆಯ ಪ್ರಕರಣಗಳು

**ಪ್ರಕರಣ–೧**

ಹೆಸರು : ಆರತಿ

ವಯಸ್ಸು : ೨೨

ಜಾತಿ : ಹೊಲೆಯರು

ಶಿಕ್ಷಣ : ಅನಕ್ಷರಸ್ಥೆ

ಸ್ಥಳ : ಚುಂಚನ ಕಟ್ಟೆ, ಮೈಸೂರು ಜಿಲ್ಲೆ

**ನಿರೂಪಣೆ:** "ನಮ್ಮ ಊರು ಮೈಸೂರು ಹತ್ರ ಚುಂಚನಕಟ್ಟೆ. ನಾವು ಹೊಲೆಯರು, ನಾನು ಡತನದ ಕುಟುಂಬದಲ್ಲಿ ಹುಟ್ಟಿದವಳು. ತಂದೆ ತಾಯಿಗೆ ಇಬ್ಬರು ಹೆಣ್ಣು ಮಕ್ಕಳು ಒಬ್ಬ ಮಗ. ನಾನು ಹಿರಿಯ ಮಗಳು. ಜಮೀನು ಇಲ್ಲದಿದ್ದರೂ ಅಪ್ಪ ಅಮ್ಮ ಬೇರೆಯವರ ಹೊಲ ಪಾಲಿಗೆ ತಗೊಂಡು ಬಿತ್ತನೆ ಮಾಡುತ್ತಿದ್ದರು. ಹೇಗೋ ಸಂಸಾರ ನಡಿತಿತ್ತು. ಆದರೆ ನಮ್ಮಪ್ಪ ಅಷ್ಟು ಚೆನ್ನಾಗಿದ್ದ ನಮ್ಮನ್ನು ಬಿಟ್ಟು ಎಲ್ಲಿಂದಲೋ ಬಂದಿದ್ದ ದೇವದಾಸಿ ಹೆಂಗಸಿನ ಜೊತೆ ಸಂಬಂಧ ಇಟ್ಟುಕೊಂಡಿದ್ದ. ದಿನಾಲೂ ಮನೇಲಿ ಇದೇ ವಿಚಾರಕ್ಕೆ ಜಗಳ ನಡೆಯೋದು. ಇದು ನಮ್ಮನ್ನೆಲ್ಲಾ ದೂರ ಹಾಗೋ

ಹಾಗೆ ಮಾಡಿತು. ಯಾವಾಗಲೂ ಅವಳಿಗೆ ಎಲ್ಲಾ ಹಣ ಸುರಿತಿದ್ದ. ನಮ್ಮ ಕಡೆ ಗಮನ ಬಿಟ್ಟು ಅಮ್ಮ ಏನೂ ಮಾಡೋಕೆ ಆಗದೆ ಸುಮ್ಮನೆ ಅಳ್ತಾ ಇರೋಳು. ನನ್ನ ತಮ್ಮ ಇದನ್ನೆಲ್ಲಾ ನೋಡಿ ಸಾಕಾಗಿ ಪಟ್ನಕ್ಕೆ ಹೋಗಿ ಕೆಲಸ ಮಾಡ್ತೀನಿ ಅಂದ ನಾವು ಒಪ್ಪಿಕೊಂಡು ಕಳಿಸಿದ್ವಿ ಆದರೆ ಅವನು ಆ ಮೇಲೆ ಆ ಮೇಲೆ ನಮ್ಮನ್ನು ಕಡೆಗಣಿಸೋಕೆ ಶುರುಮಾಡಿದ. ಈ ಕಡೆ ಊರಲ್ಲಿ ಅಪ್ಪ ದೇವದಾಸಿ ಜೊತೆ ಇರೋದನ್ನು ನೋಡಿ ಬೇರೆ ಜಾತಿಯವರು ಏನು ಕಲ್ಲಪ್ಪ ನಿನ್ನ ಮಗಳೂ ದೊಡ್ಡವಳಿದ್ದಾಳೆ ಅವಳಿಂದ ಕಾಸು ಬರೋಹಾಗೆ ಮಾಡ್ಕೊಂತಿಯಾ ಅಂತ ಕೇಳೋರು ಮೊದಲಿಗೆ ಅಪ್ಪ ಸಿಟ್ಟಾಗ್ತಾ ಇತ್ತು ಆ ಮೇಲೆ ದಿನಾ ಕಳಿತು ಕುಡಿಯೋಕೆ ಆ ಸೂಳೆಗೆ ಸುರಿಯೋಗೆ ದುಡ್ಡು ಸಾಲದಾದಾಗ ಕೆಟ್ಟ ಕೆಲಸ ಮಾಡೋಕು ಮನಸು ಮಾಡಿದ. ಅಮ್ಮ ಇದನ್ನೆಲ್ಲಾ ತಇಳ್ಕಂಡು ನನ್ನ ಒಂದಿನ ಮಧ್ಯಾಹ್ನ ಅವಳತ್ರ ಇದ್ದ ದುಡ್ಡುಕೊಟ್ಟು ತಮ್ಮನ ಹತ್ರ ಹೋಗು ಅಂತ ಕಳಿಸಿದ್ಲು ನಾನು ಹೊರಟೆ ಆಧರೆ ದಾರಿ ಮಧ್ಯ ನನ್ನ ಮೇಲೆ ಆಸೆ ಇಟ್ಟಿದ ಆ ಕೆಟ್ಟ ಮನುಷ್ಯ ತಂದೆ ಹಿಡಿದ ಅಪ್ಪನಿಗೆ ನನ್ನ ಒಪ್ಪಿಸಿದ ಅಪ್ಪನ ಜೊತೆ ದೇವದಾಸಿನೂ ಇದ್ಲು. ಅವರೆಲ್ಲಾ ಸೇರಿ ನನ್ನ ಯಾರದೋ ಕಾರಲ್ಲಿ ಹಾಕ್ಕೊಂಡು ಸವದತ್ತಿ ಎಲ್ಲಮನ ಗುಡ್ಡಕ್ಕೆ ಕರೆದುಕೊಂಡುಬಂದರು. ಅಲ್ಲಿ ಎಷ್ಟೇ ಪ್ರಯತ್ನ ಪಟ್ಟರು ತಪ್ಪಿಸಿಕೊಳ್ಳೋಕೆ ಆಗಲಿಲ್ಲ. ಏನೋ... ಮಾಡಿ ನನ್ನ ಕುತ್ತಿಗೆಗೆ ಮಣಿ ಮುತ್ತು ಏನೋ ಕಟ್ಟಿದರು ಆ ಮೇಲೆ ನನ್ನ ಒಂದು ರೂಂನಲ್ಲಿ ಕೂಡಿಹಾಕಿದರು. ತುಂಬಾ ಹೊತ್ತು ಆದ ಮೇಲೆ ನಮ್ಮೂರಿನ ಆವಪ್ಪ ಒಳಗೆ ಬಂದ ನಿನ್ನ ನಾನು ರೇಪ್ ಮಾಡ್ತಿಲ್ಲಾ ನಿಮ್ಮಪ್ಪಂಗೆ ನೀನು ಬೇಕು ಅಂತ ದುಡ್ಡು ಕೊಟ್ಟಿವ್ತಿ ಆದ್ರೂ ಶಾಸ್ತ್ರದ ಪ್ರಕಾರ ನಿನ್ನ ದೇವರಿಗೆ ಅರ್ಪಿಸಿ ನಾನು ಮುಟ್ಟುತಿರೋದು ಇದರಿಂದ ನಿನಗೂ ಪಾಪ ಇಲ್ಲ, ನನಗೂ ಪಾಪ ಇಲ್ಲ ಅಂದ. ನನ್ನ ಅನುಭವಿಸಿಬಿಟ್ಟ. ನಮ್ಮಪ್ಪ ದುಡ್ಡಿಗಾಗಿ ಹೆತ್ತ ಮಗಳನ್ನೇ ಮಾರಿಬಿಟ್ಟ. ಈಗ ನೋಡಿ ನಾನು ದೇವದಾಸಿತರ ಆಗಿ ಯಾರ್‍ಯಾರಿಗೋ ಸೆರಗು ಹಾಸ್ತೀನಿ ನಮ್ಮಪ್ಪನ ಜೊತೆ ಇದ್ದಲ್ಲ ಅವಳ ಜೊತೆ ನನ್ನ ಬೆಂಗಳೂರಿಗೆ ಕಳುಹಿಸಿದ್ರು ಅಲ್ಲಿ ಚಿಕ್ಕಪೇಟೆಯಲ್ಲಿ ಸ್ವಲ್ಪ ವರ್ಷ ಬ್ರಾಥಲ್‌ನಲ್ಲಿ ಇಟ್ಕೊಂಡು ನನ್ನ ಹಿಂಡಿ ಇಪ್ಪೆ ಮಾಡಿದ್ರು. ಈಗ ಮತ್ತೆ ಮೈಸೂರಿಗೆ ಬಂದಿದೀನಿ, ಅಮ್ಮ ತಮ್ಮನ ಜೊತೆ ಇದ್ದಾಳೆ. ಆ ರಾಕ್ಷಸ ಅಪ್ಪ ಎಲ್ಲಿ ಇದ್ದಾನೋ ಗೊತ್ತಿಲ್ಲ. ದುಡಿಮೆ ಸಧ್ಯಕ್ಕೆ ಇದೆ. ೧೨ ಸಾವಿರ ಸಿಗುತ್ತೆ. ಅದರಲ್ಲೂ ಏನಾದರೂ ನೆಪ ಮಾಡಿ ನಮ್ಮ ಯಜಮಾನತಿ ಕಿತ್ಕೊಳ್ತಾಳೆ. ಪೋಲಿಸ್ ಅದು ಇದು ಅಂತ ಖರ್ಚು ಆಗ್ತಾನೆ ಇರುತ್ತೆ. ಉಳಿತಾಯ ಏನಿಲ್ಲಾ ಇದನ್ನು ಬಿಡಬೇಕು ಅನ್ಸುತ್ತೆ ಆದರೆ ಆ ಮೇಲೆ ಯಾವ ಕೆಲ್ಸಕ್ಕೆ ಎಲ್ಲಿ ಮಾಡ್ಲಿ ಹೇಳಿ?"

**ಪ್ರಕರಣ–೨**

ಹೆಸರು : ಸುಮಿತ್ರ

ವಯಸ್ಸು : ೨೫

ಜಾತಿ : ಲಿಂಗಾಯತ

ಶಿಕ್ಷಣ : ೬ನೇ ತರಗತಿ

ಸ್ಥಳ : ನಂಜನಗೂಡು, ಮೈಸೂರು ಜಿಲ್ಲೆ.

**ನಿರೂಪಣೆ:** "ಚಿಕ್ಕವಳಿದ್ದಾಗ ಸ್ಕೂಲ್‌ಗೆ ಹೋಗಲ್ಲ ಅಂತ ಹಠಮಾಡಿದೆ. ಅಂತ ನಮ್ಮಮ್ಮ ಸ್ಕೂಲ್ ಬಿಡಿಸಿದ್ರು. ನಮಗೆ ಅಂತ ೨ ಎಕರೆ ಜಮೀನು ಇತ್ತು. ನಮ್ಮಪ್ಪ ಅದರಲ್ಲಿ ಬೇಸಾಯ ಮಾಡೋರು ನಾವು ಚಿಕ್ಕಪ್ಪ ಎಲ್ಲರೂ ಜೊತೇಲಿ ಇರ್ತಿದ್ವಿ. ನನಗೆ ೧೫ವರ್ಷ ಅನ್ಸುತ್ತೆ ಚಿಕ್ಕಪ್ಪ ಬೇರೆ ಆದ್ರು ಇದ್ದ ಎರಡು ಎಕರೆ ಹೊಲ ಒಂದು ಎಕರೆ ಆಯ್ತು. ಅಮ್ಮ ಹೂ ಕಟ್ಟಿ ಮಾರ್‍ತಾ ಇದ್ರು, ದೇವಸ್ಥಾನದ ಮುಂದೆ. ನಾನು ಅವರ ಜೊತೆ ಹೋಗ್ತಿದ್ದೆ. ಅಮ್ಮ ಒಂದಿನ ಎದೆ ನೋವು ಅಂತ ಮಲಗಿದವರು ಏಳಲೇ ಇಲ್ಲ. ನಮ್ಮಪ್ಪ ಇನ್ನೊಂದು ಮದುವೆ ಮಾಡ್ಕೊಂಡ್ರು, ಚಿಕ್ಕಮ್ಮನಿಗೂ ಒಂದು ಮಗು ಆಗೋ ಸಂದರ್ಭ ಆಗ ಅವಳ ಜೊತೆ ನನ್ನೂ ಅವರ ಮನೆಗೆ ಕಳಿಸಿದ್ರು, ನಾನು ಅಲ್ಲಿನೂ ಹೂ ಕಟ್ಟಿ ಮಾರ್‍ತಾ ಇದ್ದೆ. ಒಂದಿನ ಒಬ್ಬ ಲಂಬಾಣಿ ಹುಡುಗ ಹೂ ತಂಗೊಂಡ ನನ್ನ ನೋಡಿ ನಕ್ಕ. ದಿನಾ ಹೂ ತಗೋಳೊಕೆ ಬರ್ತಿದ್ದ ಇದು ನಮ್ಮನ್ನ ಪ್ರೀತಿ ಮಾಡೋ ಹಾಗೆ ಮಾಡಿತು. ಇಬ್ಬರೂ ಬೇರೆ ಜಾತಿ ಅಲ್ವಾ ಮನೇಲಿ ಒಪ್ಪಲ್ಲ ಅಂತ ಓಡಿ ಹೋಗೋಣ ಅಂತ ನಿರ್ಧಾರ ಮಾಡಿದ್ವಿ, ಮೈಸೂರಿಗೆ ಬಂದ್ವಿ ರೈಲು ಇಳಿದು ಎಲ್ಲಿ ಹೋಗೋದು ಅಂತ ಗೊತ್ತಾಗದೆ ಒದ್ದಾಡಿದ್ವಿ ಆ ಮೇಲೆ ಅವನೆ ಹೇಳಿದ ನನ್ನ ಸ್ನೇಹಿತ ಇದ್ದಾನೆ ಅಲ್ಲೇ ಇರೋಣ ಇವತ್ತು ಆ ಮೇಲೆ ಮುಂದಿನದ್ದು ನೋಡ್ಕೋಣ ಅಂತ. ಅಷ್ಟರಲ್ಲಿ ಅಲ್ಲಿ ಒಬ್ಬ ಪೋಲಿಸ್ ಬಂದು ನಮ್ಮನ್ನ ಯಾರು ಏನು ಅಂತ ವಿಚಾರಿಸಿದ ನಂಗಂತು ಅವರನ್ನು ನೋಡಿನೆ ಜೀವ ಬಾಯಿಗೆ ಬಂದಾಗೆ ಹಾಗಿತ್ತು. ಇವನು ಏನೋ ಹೇಳಿ ಅವರ ಕೈಗೆ ೧೦೦ ರೂಪಾಯಿ ಕೊಟ್ಟು ಕಳುಹಿಸಿದ ಆ ಮೇಲೆ ಸಮಾಧಾನ ಆಯ್ತು ನಂಗೆ ಸರಿ ಅವನ ಫ್ರೆಂಡ್ ಮನೆಗೆ ಕರಕ್ಕೊಂಡು ಹೋದ. ನಾನು ತಾಳಿ ಕಟ್ಟು ಅಂತ ಕೇಳಿದೆ. ಇರು ಸವಲ್ಪ ದಿನ ಆದ ಮೇಲೆ ಮದ್ವೆ ಮಾಡಿಕೊಂಡ್ರೆ ಆಗುತ್ತೆ ಇವಾಗೇನು ಅರ್ಜೆಂಟ್ ಇಲ್ಲ ಅಂದ. ಸರಿ ಅಂತ ಸುಮ್ನೆ ಆದೆ ಆ ಮೇಲೆ ಊಟ ತಂದುಕೊಟ್ಟ, ಜ್ಯೂಸ್ ತಂದು ಕೊಟ್ಟ ಜ್ಯೂಸ್ ಕುಡಿದೆ ತಲೆ ಸುತ್ತೋಕೆ ಶುರು ಆಯಿತು ಆ ಮೇಲೆ ಮಲಗಿಬಿಟ್ಟೆ. ಎಚ್ಚರ ಆದಾಗ ತುಂಬಾ ಮೈ ಕೈ ನೋವು ಕಣ್ಣು ಬಿಟ್ಟು ನೋಡ್ತೀನಿ ಮೈ ಮೇಲೆ ಬಟ್ಟೇನೆ ಇಲ್ಲ ನನ್ನ ಮುಂದೆ ನನ್ನ ಹುಡುಗ ಇದ್ದ. ಎದ್ದು ನೋಡಿದ್ರೆ ನನ್ನ ಹಿಂದೆ ಅವನ ಸ್ನೇಹಿತಾನೂ ಇದ್ದ ನಂಗೆ ನಾಚಿಕೆ, ಅವಮಾನ ನೋವು ಎಲ್ಲಾ ಆಯಿತು. ನೀನೆ ಊಹಿಸ್ಕೊ ನೀನು ಆ ಜಾಗದಾಗೆ ಇದ್ದಿದ್‌ರೆ ಅಂತ! ಅಯ್ಯೋ ನಿಮ್ಮಂತೋರಿಗೆ ಅವೆಲ್ಲ ಆಗಾದೂ ಬೇಡಮ್ಮ. ಏನೋ ಪಾಪ ಮಾಡಿದ್ದಕ್ಕೆ ನಂಗೆ ಈ ತರಾ ಆಯಿತು ನೋಡು. ಅವನು ಯಾಕೆ ಇಂಥಾ ಕೆಲಸ ಮಾಡಿದೆ ಅಂದ್ರೆ, ಏನು ಮಾತಾಡ್ಲೆ ಇಲ್ಲ. ನಾನು ಅತ್ತು ಅತ್ತು ಸಾಕಾಗಿ ಬಟ್ಟೆ ಹುಟ್ಕೊಂಡು ಹೋಗ್ತೀನಿ ಅಂತ ಎದ್ದು ಬಾಗಿಲು ತಗಿಯೋಕೆ ಬಂದ್ರೆ ಅವನು ಅವನ ಸ್ನೇಹಿತ ಇಬ್ರೂ ನನ್ನ ಎಳೆದುಕೊಂಡು ಮತ್ತೆ ಮತ್ತೆ ಅತ್ಯಾಚಾರ ಮಾಡಿದ್ರು, ನರಕದಲ್ಲಿ ಸಿಕ್ಕಾಕ್ಕೊಂಡಿದ್ದಿನಿ ಅಂತ ನನಗೆ ಅರ್ಥ ಆಗೋಯ್ತು. ದಿನಾ ನಾಲ್ಕು ಐದು

ಜನ ಬರೋರು ನಾನು ಮುಟ್ಟಾದ್ರೂ ಬಿಡ್ತಾ ಇರಲಿಲ್ಲ. ಜೀವನಾನೆ ಸಾಕಾಯ್ತು ನಂಗೆ ಎರಡು ಮೂರು ತಿಂಗಳಾದ ಮೇಲೆ ನಾನು ತುಂಬಾ ಬೆದರಿದೆ ಅವರು ಹೇಳಿದಂತೆ ಕೇಳಿದೆ. ಆಗ ಶಿಕ್ಷೆ ಸ್ವಲ್ಪ ಕಡಿಮೆ ಮಾಡೋರು. ಬಂದೋರೆಲ್ಲಾ ದುಡ್ಡುಕೊಡೋರು ಆದರೆ ಅವೆಲ್ಲಾ ನಂಗೆ ಗೊತ್ತೇ ಆಗ್ತಾ ಇರಲಿಲ್ಲ. ಆ ಲಂಬಾಣಿಯೇನು ಯಾವುದೋ ಬಳ್ಳಾರಿ ಕಡೇನು ಮೊನ್ನೆ ಸತ್ತ ನೋಡು ಎಷ್ಟು ಹೆಣ್ಣು ಮಕ್ಕಳನ್ನ ಈ ರೀತಿ ಮಾಡಿದ್ದಾನೋ ಗೊತ್ತಿಲ್ಲ. ನನ್ನ ಆ ಮೇಲೆ ಬಾಂಬೆಗೆ ಕಳಿಸಿದ್ರು ನಂಗೆ ಕನ್ನಡ ಬಿಟ್ರೆ ಬೇರೆ ಭಾಷೆನೆ ಗೊತ್ತಿಲ್ಲ. ಆ ಮೇಲೆ ಹಿಂದಿ ಕಲಿತೆ ೭ ವರ್ಷ ಅಲ್ಲೇ ಇದ್ದೆ. ಆ ಮೇಲೆ ನಂಗೆ ಏನೋ ರೋಗ ಆಯ್ತು ಅದಕೆಕ ನನ್ನ ವಾಪಸ್ಸು ಕಳಿಸಿದ್ರು. ಈಗ ಇಲ್ಲೇ ಇದೀನಿ ಸರ್ಕಾರಿ ಆಸ್ಪತ್ರೇಲಿ ಮಾತ್ರ ಔಷಧಿ ತಗಳ್ತೀನಿ. ಗಿರಾಕಿ ಸಿಗ್ತಾರೆ ಆದ್ರೆ ಒಂದು ಭಯ ಎಲ್ಲಿ ನಮ್ಮಪ್ಪ ನನ್ನ ನೋಡ್ತಾನೋ ಅಂತ ಎಲ್ಲೋ ಮದುವೆ ಆಗಿ ಸುಖವಾಗಿ ಇದ್ದಾಳೆ ಅನ್ಕಂಡವ್ರೆ ಅಷ್ಟೇ ಸಾಕು ನಂಗೆ ಇದ್ರಿಂದ ಆಚೆ ಬಂದ್ರು ಬೇರೆ ಕೆಲಸ ಮಾಡೊಕೆ ನಂಗೆ ಶಕ್ತಿ ಇಲ್ಲ. ಇನ್ನು ಎಷ್ಟು ದಿನ ಬದುಕ್ತೀನಿ ಗೊತ್ತಿಲ್ಲ".

**ಪ್ರಕರಣ–೩**

ಹೆಸರು : ಶಬಾನಾ

ವಯಸ್ಸು: ೩೦

ಜಾತಿ : ಮುಸ್ಲಿಂ

ಶಿಕ್ಷಣ : ೧೦ನೇ ತರಗತಿ

ಸ್ಥಳ : ಹುಣಸೂರು, ಮೈಸೂರು ಜಿಲ್ಲೆ.

**ನಿರೂಪಣೆ:** "ನನಗೆ ಕನ್ನಡ ಮಾತಾಡೋಕೆ ಬರುತ್ತೆ ದೀದಿ ನಾನು ಒಳ್ಳೆ ಕುಟುಂಬದಿಂದಾನೆ ಬಂದಿರೋದು. ನನ್ನ ನಸೀಬು ನೋಡಿ ಎಲ್ಲಿದ್ದೋಳು ಎಲ್ಲಿಗೆ ಬಂದಿದ್ದೀನಿ ಅಂತ. ನಾವು ೪ ಜನ ಮಕ್ಕಳು ಅಕ್ಕ ನಾನು ತಮ್ಮಂದಿರು. ಆ ಅಲ್ಲಾ ನಾನು ಏನು ಪಾಪ ಮಾಡಿದ್ದೆ ಂತ ಈತರ ಮಾಡಿದ ಗೊತ್ತಿಲ್ಲ. ಯಾವುದೇ ಜನ್ಮದ ಪಾಪ ಇರಬೇಕು ನಾನು ಹತ್ತನೆ ಕ್ಲಾಸ್‌ವರೆಗೂ ಕಲಿತಿದ್ದೀನಿ ಕನ್ನಡ ಸ್ಕೂಲ್‌ಗೆ ಹೋಗ್ತಿದ್ದೆ. ಫೇಲ್ ಆದ ಮೇಲೆ ಮನೇಲಿ ಇರ್ತಿದ್ದೆ. ಅಕ್ಕನ ಮದುವೆ ಆಯ್ತು. ಅವಳು ಚೆನ್ನಾಗಿ ಇದ್ದಾಳೆ ನಾನು ಹುಣಸೂರಿನಲ್ಲೇ ಬೆಳೆದಿದ್ದು ಅಪ್ಪ ಕಬ್ಬಿಣದ ಅಂಗಡಿ ಇಟ್ಟಿದ್ದಾರೆ. ತಮ್ಮಂದಿರು ಓದು ಮುಗಿದಿರಬೇಕು. ನಾನು ೨೧ ವರ್ಷ ಇದ್ದಾಗ ರಿಲೇಷನ್ ಮದುವೆಗೆ ಅಂತ ಮೈಸೂರಿನಲ್ಲಿ ಹೋಗಿದ್ದೆ. ಅಲ್ಲಿ ಒಬ್ಬ ಹುಡುಗ ಪರಿಚಯ ಆದ ನಂಗೂ ಇಷ್ಟ ಆದ. ಮನೇಲಿ ಬಂದು ಕೇಳ್ತೀನಿ ಅಂದ ನಾನು ಅದೇ ಸರಿ ಅಂತ ಸುಮ್ಮನಾದೆ. ತುಂಬಾ ಖುಷಿ ಇತ್ತು ನಂಗೆ. ಅವನು ಬೆಂಗಳೂರಿನಲ್ಲಿ ಇರ್ತಿದ್ದ. ಶ್ರೀಮಂತರು ಇದ್ರು ಅವರು ಮನೆಗೆ ಬಂದು ನನ್ನ ಕೇಳಿದ್ರು

ಅಬ್ಬಾನು ಒಪ್ಪಿದರು. ಅವರೆ ಎಲ್ಲಾ ಖರ್ಚು ಹಾಕಿ ಮದುವೇನು ಮಾಡಿಕೊಂಡ್ರು, ನಾನು ಸ್ವರ್ಗದಲ್ಲೇಇದ್ದಷ್ಟು ಖುಷಿ ಆಗಿತ್ತು. ಆದರೆ ಬೆಂಗಳೂರಿಗೆ ಹೋದೆ. ಅಮ್ಮಿನ ಮನೆಗೆ ಎರಡು ಮೂರು ಸರ್ತಿ ರಿವಾಜ್ ಪ್ರಕಾರ ಬಂದು ಹೋದೆ. ಆಮೇಲೆ ಹೋಗೋಕೆ ಆಗಲಿಲ್ಲ. ಎರಡು ತಿಂಗಳು ನಮ್ಮ ಜೀವನ ಚೆನ್ನಾಗಿತ್ತು. ಒಂದು ದಿನ ಗಂಡ ಯಾರನ್ನೊ ಮನೆಗೆ ಕರೆದು ನಾನು ಊಟ ಎಲ್ಲಾ ರೆಡಿಮಾಡಿದ್ದೆ. ಅವರೆಲ್ಲಾ ಊಟ ಮಾಡಿದ್ರು ನಾನು ಅಡುಗೆ ಮನೇಲಿ ಇದ್ದೆ. ಮನೆಗೆ ಬಂದ ಆ ಗಂಡಸು ಅಲ್ಲಿಗೆ ಬಂದ ಭಯ ಆಗಿ ಆಚೆ ಬಂದೆ. ಅವನು ಹಿಂದೇನೆ ಬಂದ ನನ್ನ ಗಟ್ಟಿಯಾಗಿ ಹಿಡಿದುಬಿಟ್ಟ. ಅವನು ಶರಾಬ್ ಕುಡಿದಿದ್ದ. ಜೋರಾಗಿ ಕಿರುಚಿಕೊಂಡು ಒಳಗೆ ಓಡಿದೆ ಗಂಡನ ಹತ್ರ. ಅವನು ನಗುತ್ತಾ ನಿಂತಿದ್ದ. ನಾನು ಅಳುತ್ತಾ ಇದೇನು ಅಂದ್ರೆ. ನಿನ್ನ ಅಪ್ಪು ದುಡ್ಡು ಸುರಿದು ನಿಖಾ ಮಾಡಿಕೊಂಡಿದ್ದು ಇದಕ್ಕೇನೆ ಅಂದ. ನಂಗೆ ನಾನು ನಿಂತ ಜಮೀನ್ ಕುಸಿದಂತೆ ಆಯ್ತು. ನಾನು ಎಷ್ಟು ಬೇಡಿಕೊಂಡ್ರು ನನ್ನ ಎತ್ತುಕೊಂಡು ಹೋಗಿ ಆ ಗಂಡಸು ಬಳಸಿಬಿಟ್ಟ ದೀದಿ. ಗಂಡಸರಿಗೆ ಹೆಣ್ಣುಮಕ್ಕಳ ನೋವು ಅರ್ಥಾನೆ ಆಗಲ್ಲ ನೋಡು. ಅವನು ಹೋದ ಮೇಲೆ ಗಂಡ ಬಂದು ನನ್ನ ಪಕ್ಕ ಮಲಗಿದ. ಗಂಡ ಒಬ್ಬನೇ ಸರಿ ಇಲ್ಲ ಅಂತ ಅನ್ಕೊಂಡಿದ್ದೆ ಆದರೆ ಅತ್ತೆ ಮಾವಾನೂ ಹಾಗೆ ಇದ್ರು. ಇದಕ್ಕೆಲ್ಲಾ ಅವರು ಶಾಮಿಲ್ ಆಗಿದ್ರು, ಅವರು ದುಡ್ಡು ಬೇಕು ಅಂತ ಇಂಥ ಕೆಲಸಾ ಮಾಡೋರು. ಸ್ವಲ್ಪ ದಿನ ಆದ ಮೇಲೆ ಗಂಡ ಮತ್ತೊಬ್ಬಳನ್ನು ಕರಕೊಂಡು ಬಂದ. ನನ್ನ ಮನೆ ಕೆಲಸದಳಾಗಿ ಮಾಡಿಕೊಂಡ್ರು. ಅವಳನ್ನು ಎರಡು ವಾರ ಮೆರೆಸಿದ್ರು. ಆ ಮೇಲೆ ಅವಳು ನನಾಂಗೆ ಅದ್ಲು ಪ್ರತಿ ದಿನ ಯಾರಾದರೂ ಬರ್ತಿದ್ರು. ಹಿಂಸೆ ಆಗೋದು ತಪ್ಪಿಸಿಕೊಂಡು ಅಬ್ಬಾ ಹತ್ರ ಹೋಗೋಣ ಅಂದ್ರೆ ಯಾವಾಗಲೂ ಎಲ್ಲಾ ಬಾಗಿಲು ಕಿಟಕಿಗೆ ಬೀಗ ಹಾಕ್ತಿದ್ರು. ಪೋನ್ ಸಹ ಇರಲಿಲ್ಲ. ಅಬ್ಬಾ ಇವರಿಗೆ ಪೋನ್ ಮಾಡಿದಾಗ ನಮಗೆ ಚಾಕು ತೋರಿಸಿ ಚೆನ್ನಾಗೆ ಇದ್ದೀನಿ ಅಂತ ಹೇಳೋಕಷ್ಟೆ ಹೇಳು ಅಂತಿದ್ರು, ಅಬ್ಬಾ ನನ್ನ ಕಳಿಸಿ ಮನೆಗೆ ಅಂದ್ರೆ, ವರದಕ್ಷಿಣೆ ದುಡ್ಡು ಕೊಟ್ಟು ಕರಕೊಂಡು ಹೋಗು ಅಂತಿದ್ರು. ಇಲ್ಲಂದ್ರೆ ಮಗಳನ್ನ ನಿಮ್ಮನೇಲಿನೆ ಇಟ್ಕೊಳ್ಳಿ ಅನ್ನೋರು ಇದಕ್ಕೆ ಅಪ್ಪ ಹೆದರಿ ಪೋನ್ ಮಾಡೋದೆ ಬಿಟ್ರು.ಇಷ್ಟು ವರ್ಷ ನಾನು ನರಕದ ಜೀವವಾಸಿ ಮಾಡ್ತಾ ಇದೀನಿ ಇವತ್ತು ನನ್ನ ಆರೋಗ್ಯ ಕೆಟ್ಟಿತ್ತು ಅಂತ ಇಲ್ಲಿಗೆ ಕಳಿಸಿದ್ದಾರೆ ನೋಡಿ ಆಸ್ಪತ್ರೆಗೆ ಮಾತ್ರ ಹೊರಗಡೆ ಬರೋದು ನಾನು ಇಲ್ಲಿ ಈ ನರ್ಸ್ ದೀದಿ ನನ್ನಕಷ್ಟ ಕೇಳಿ ಸಾಮಾಧಾನ ಮಾಡ್ತಾರೆ. ತಪ್ಪಿಸಿಕೊ ನಾನು ದುಡ್ಡು ಕೊಡ್ತೀನಿ ಅಂತಾರೆ. ನೋಡು ದೀದಿ ಅಲ್ಲಿ ಗೇಟ್ ಹತ್ರ ಇಬ್ಬರು ಇದ್ದಾರೆ. ಅದರಲ್ಲಿ ಒಬ್ಬ ನನ್ನ ಗಂಡ. ವಾಪಸ್ಸು ಹೋಗಿ ಅಬ್ಬಾನಿಗೆ ಬಾರ ಆಗೋಕೆ ಇಷ್ಟ ಇಲ್ಲ. ಒಬ್ಬ ಮಗ ಇದ್ದಾನೆ ನನ್ನ ನಸೀಬ್ ಚೆನ್ನಾಗಿದೆ. ಆ ಮಗುನ ನನ್ನ ಗಂಡ ನಂದೇ ಅಂತ ಸಾಕ್ತಿದಾನೆ. ಸರಿ ದೀದಿ ಹೋಗ್ತಿನಿ ನನ್ನಿಂದ ನೀವು ತೊಂದರೆಗೆ ಸಿಕ್ಕಾಕ್ಕೊಬೇಡಿ".

**ಪ್ರಕರಣ–೪**

ಹೆಸರು : ಶಶಿಕಲಾ

ವಯಸ್ಸು : ೧೯

ಜಾತಿ : ಬೆಸ್ತರು

ಶಿಕ್ಷಣ : ೧೦ನೇ ತರಗತಿ

ಸ್ಥಳ : ಹೆಚ್.ಡಿ ಕೋಟೆ, ಮೈಸೂರು ಜಿಲ್ಲೆ.

**ನಿರೂಪಣೆ:** "ನಾನು ಶಶಿ ಅಂತ ನಾನು ಹತ್ತನೇ ಕ್ಲಾಸ್‌ವರೆಗೂ ಓದಿದೆ ಅಷ್ಟೆ. ಫೇಲ್ ಆದೆ ಮುಂದೆ ಓದು ಅಲ್ಲಿಗೆ ಸ್ಟಾಪ್ ಆಯಿತು. ನನ್ನ ಊರು ಹೆಚ್.ಡಿ ಕೋಟೆ ಅಲ್ಲಿ ಸಣ್ಣ ಊರು. ನಮ್ಮಪ್ಪ ಅಮ್ಮ ನಾನು ಅಣ್ಣ, ತಂಗಿ ಮೂರು ಜನ ಮಕ್ಕಳು ನಾವು ಅವರೆಲ್ಲ ಇವಾಗ ಏನು ಮಾಡ್ತಾರೆ ಅಂತ ಗೊತ್ತಿಲ್ಲ. ನಾನು ಅವ್ರರಿಗೆ ಸಹಾಯ ಆಗಲಿ ಅಂತ ದೊಡ್ಡಮ್ಮನ ಜೊತೆ ಮೈಸೂರಿಗೆ ಬಂದೆ. ಇಲ್ಲಿ ದೊಡ್ಡಮ್ಮನ ಮನೇಲಿ ಇದ್ದು ಕೆಲಸಕ್ಕೆ ಹೋಗೋಕೆ ಶುರುಮಾಡಿದೆ. ಯಾಕೋ ಸ್ವಲ್ಪ ದಿನಕ್ಕೆ ದೊಡ್ಡಮ್ಮ ನಂಜೊತೆ ಜಗಳ ಮಾಡೋಕೆ ಶುರುಮಾಡಿದರು. ದುಡ್ಡೆಲ್ಲ ಅವರಿಗೆ ಬೇಕು ಅಂದ್ರು. ಅದಕ್ಕೆ ಅಪ್ಪ ಅಮ್ಮನ ಕೇಳಿ ನನ್ನ ಜೊತೆಗೆ ಕೆಲಸ ಮಾಡ್ತಿದ್ದ ಒಬ್ಬಳು ಫ್ರೆಂಡ್ ಜೊತೆ ಸೇರಿ ಇಲ್ಲೇ ಫೌಂಟೇನ್ ಸರ್ಕಲ್ ಹತ್ರ ಮನೆ ಮಾಡಿದೆ. ನಾನು ಅವಳು ಚನ್ನಾಗೆ ಇದ್ವಿ, ನಾವು ಕೆಲಸ ಮಾಡ್ತಾ ಇದ್ದಿದ್ದು ಟೂ ವೀಲರ್‌ಗೆ ಹಾಕೋ ಬಾಡಿ ಕವರ್‌ಗಳನ್ನು ಹೊಲಿಯೋ ಫ್ಯಾಕ್ಟರಿಯಲ್ಲಿ ಅಲ್ಲಿ ಹುಡುಗಸರೂ ಸಹ ಕೆಲಸ ಮಾಡ್ತಾ ಇದ್ದರು. ನಮ್ಮ ಏರಿಯಾದಿಂದ ಹೋಗುವಾಗ ಅದೇ ಏರಿಯಾದಿಂದ ಒಬ್ಬ ಹುಡುಗಾನು ನಮ್ಮ ಫ್ಯಾಕ್ಟರಿಗೆ ಕೆಲಸಕ್ಕೆ ಬರುತ್ತಿದ್ದ. ಒಂದೇ ಏರಿಯಾ ಅಲ್ವಾ ಅದಕ್ಕೆ ಇಬ್ಬರೂ ಪರಿಚಯ ಆದ್ವಿ. ಅವನು ನನ್ನ ಫ್ರೆಂಡ್‌ನ ಪ್ರೀತಿಸ್ತೀನಿ ಅಂತ ಹೇಳಿದ ನಾನು ಖುಷಿ ಪಟ್ಟೆ ಆ ಮೇಲೆ ಅವರಿಬರಬರು ಜೊತೇಲಿ ಸುತ್ತೋದಕ್ಕೆ ಶುರುಮಾಡಿದರು. ಮನೆಗೂ ಬರ್ತಿದ್ದ ನನ್ನ ಜೊತೆನೂ ಚೆನ್ನಾಗಿ ಇರ್ತಿದ್ದ ಆಮೇಲೆ ನನ್ನ ಸ್ನೇಹಿತೆಗೆ ಹುಷಾರಿಲ್ಲ ಅಂತ ಊರಿಗೆ ಹೋದ್ಲು. ಆದರೆ ಹೋದ ಮೇಲೆ ಅವಳ ಪೋನ್ ಆಫ್ ಆಯಿತು. ಎಷ್ಟು ದಿನ ಆದ್ರೂ ವಾಪಸ್ ಬರಲೇಇಲ್ಲ. ಒಂದು ತಿಂಗಳು ಆಗಿತ್ತು ಅನ್ಸುತ್ತೆ ಹೋಗಿ ಆ ಹುಡುಗ ದಿನಾ ಕೇಳ್ತಿದ್ದ ಬಂದ್ಲಾ ಅಂತ ಇಲ್ಲ ಅಂದ್ರೆ ಬೇಜಾರಾಗಿ ಹೋಯ್ತಿದ್ದ. ದಿನಾ ಅವನಿಗೆ ಸಮಾಧಾನ ಮಾಡ್ತಾ ಮಾಡ್ತ ನಾನು ಅವನನ್ನು ಪ್ರೀತಿಸೋಕೆ ಶುರುಮಾಡಿದೆ. ಒಂದಿನ ಮನೆಗೆ ಬರ್ತೀನಿ ಅಂದ. ಹೂ ಬಾ ಅಂದೆ ಒಂದು ದಿನ ಭಾನುವಾರ ಬಂದ. ತುಂಬಾ ಸಲುಗೆಯಿಂದ ಮಾತಾಡ್ತಿದ್ದ ನಂಗೆ ಭಯ ಆದರೂ ಖುಷಿ ಆಗ್ತಿತ್ತು. ಮೈ ಕೈ ಮುಟ್ಟೋಕೆ ಶುರುಮಾಡಿದ ಹಾಗೆಲ್ಲ ಮಾಡಬೇಡ ಅಂದೆ. ಸುಮ್ನೆ ಆದ ಆಮೇಲೆ ಹಬ್ಬಕ್ಕೆ ಫ್ಯಾಕ್ಟರಿ ರಜೆ ಇದೆ. ಅಂತ ಎಲ್ಲಾದರೂ ಸುತ್ತಾಡೋಕೆ ಹೋಗೋಣ ಅಂದ ಸರಿ ಅಂತ ಹೋದೆ. ಫ್ರೆಂಡ್ ಮನೆ ಇಲ್ಲೆ ಇದೆ ಅಲ್ಲಿಗೆ ಹೋಗೋಣ ಬಾ ಅಂದ ಯಾಕೋ ಭಯ ಆದ್ರು ಮನೆ ಅಂದ್ರೆ ಯಾರಾದರೂ ಇರ್ತಾರೆ ಅಲ್ವಾ ಅಂತ ಹೋದೆ. ನಾನು ಅಂದ್ಕೊಂಡಂತೆ

ಮನೇಲಿ ಒಬ್ಬರು ಆಂಟಿ ಇದ್ರು. ಖುಷಿಯಿಂದ ಕರೆದು ಜ್ಯೂಸ್ ಕೊಟ್ರು ಮಾತಾಡ್ತಾ ಇದ್ದಾಗ ನಂಗೆ ಏನಾಯಿತೋ ಗೊತ್ತಿಲ್ಲ. ಎಚ್ಚರ ಆದಾಗ ಯಾವುದೋ ರೂಂನಲ್ಲಿ ಇದ್ದೆ. ಕತ್ತಲೆ ಇತ್ತು. ಬಾಗಿಲು ತೆಗಿರಿ ಅಂತ ಕೂಗಿದೆ ಬಾಗಿಲು ತೆಗೆದು ನನ್ನ ಸ್ನೇಹಿತ ಒಳಗೆ ಬಂದ ನಗುತಾ ಇದ್ದ ಜೊತೆಗೆ ಆಂಟಿನೂ ಬಂದ್ರು. ನಾನು ಹೋಗಬೇಕು ಬಾ ಹೋಗೋಣ ಅಂದೆ ಅದಕೆ ಅವನು ಯಾಕೆ ಹೋಗೋದು ಇಲ್ಲೆ ಇರೋಣ ಅಂದ. ಯಾಕೆ ಅಂದೆ. ಆವಾಗ ಆ ಆಂಟಿ. ಎಲ್ಲಿ ಹೋಗೋ ಹಾಗಿಲ್ಲ ನೀನು ಇನ್ನೂ ಯಾರು ಮುಟ್ಟದ ಹೂ ಇದಿಯಾ ಲಕ್ಷ ಲಕ್ಷ ದುಡ್ಡು ಸಿಗೋವಾಗ ಚಿಲ್ಲರೆ ಕೆಲಸ ಯಾಕೆ ನಿಂಗೆ ಅಂದ್ಲು. ಕೋಪ ಬಂದು ಹೋಗೋಕೆಲ ಓಡಿದೆ ಇಬ್ಬರೂ ಬಿಡಲೇ ಇಲ್ಲ. ನನ್ನ ಬಟ್ಟೆ ಎಲ್ಲಾ ಹರಿದು ಹಾಕಿ ನನ್ನ ಅರೆಬೆತ್ತಲೆ ಮಾಡಿ ಮೊಬೈಲ್ ರೆಕಾಡ್ ಪೋಟೊ ತೆಗೆದರು. ಯಾರಿಗೋ ಪೋನ್ ಮಾಡಿದ್ರು. ಅವರು ಬಂದ ಮೇಲೆ ನನ್ನ ಅವರಿಗೆ ಮೂರು ಲಕ್ಷಕ್ಕೆ ಮಾರಿದರು ಆ ಮೇಲೆ ನಾನು ಎಷ್ಟು ಬೇಡಿಕೊಂಡ್ರು ಬಿಡಲಿಲ್ಲ. ನಾನು ಸುಂದರವಾಗಿ ಇದ್ದಿದ್ದೆ ತಪ್ಪಾಯ್ತು ನೋಡಿ. ಇವತ್ತು ವೇಶ್ಯೆ ಆಗಿದ್ದೀನಿ ಆ ಅಕ್ಕ ಅವತ್ತು ನನ್ನ ಫ್ರೆಂಡ್ ಊರಿಗೆ ಹೋಗಿ ಬಂದಿಲ್ಲಾ ಅಂದೆ ಅಲ್ವಾ ಅವಳೂ ಇವರ ಕೈಗೆ ಸಿಕ್ಕಿ ಹಾಕಿಕೊಂಡಿದ್ಲು. ಈಗ ಎರಡು ತಿಂಗಳು ಹಿಂದೆ ಆತ್ಮಹತ್ಯೆ ಮಾಡಿಕಂಡಳು. ಈ ಕೆಲಸ ಮಡೋವಾಗ ಅವರ ಅಪ್ಪನ ನೋಡಿ ಅವಮಾನ ಆಗಿ ನೋವು ಸಹಿಸೋಕೆ ಆಗದೆ ಸತ್ತಳು ನೋಡು. ಏನೋ ಸ್ವಲ್ಪ ದುಡಿತೀನಿ ಮನೆಗೂ ಕಳುಸ್ತೀನಿ ನಮ್ಮನೇಲಿ ಈ ಕೆಲಸ ಅಂತ ಗೊತ್ತಿಲ್ಲ. ತಂಗಿ ಮದುವೆ ಆದಮೇಲೆ ಗೊತ್ತಾದರೆ ನಂಗೇನು ಪ್ರಾಬ್ಲಂ ಇಲ್ಲ ನೋಡು. ದಿನಕ್ಕೆ ಎಷ್ಟೇ ದುಡಿದರೂ ಇವರು ಕೊಡೋದೆ ತಿಂಗಳಿಗೆ ೧೪ ಅಥವಾ ೧೫ ಸಾವಿರ ಅಷ್ಟೇ ಈ ಕೆಲಸ ಬಿಡಬೇಕು ಅನ್ನುತ್ತೆ ಆದ್ರೆ ಇವರು ಬಿಡಲ್ಲ".

**ಪ್ರಕರಣ-೫**

ಹೆಸರು : ಹೇಮ

ವಯಸ್ಸು : ೨೧

ಜಾತಿ : ಮಾದಿಗ

ಶಿಕ್ಷಣ : ೧೦ನೇ ತರಗತಿ

ಸ್ಥಳ : ಕೆ.ಆರ್.ನಗರ, ಮೈಸೂರು ಜಿಲ್ಲೆ.

**ನಿರೂಪಣೆ:** "ನಾವು ಕೆ.ಆರ್.ನಗರ ಕಡೆಯವರು. ಆದರೆ ಯಾವುದೋ ಕೆಟ್ಟ ಟೈಮ್ ನೋಡಕ್ಕ ಇಲ್ಲಿಗೆ ಬಂದಿದ್ದೀನಿ. ನಾನು ಎಸ್.ಎಸ್.ಎಲ್.ಸಿ ವರೆಗೆ ಓದಿದ್ದೀನಿ. ಅಮ್ಮ ಮನೆಕೆಲಸ ಮಾಡ್ತಾ ಇದ್ದರು. ನಾನು ಸ್ಕೂಲ್ ಓದು ಮುಗಿದ್ಮೇಲೆ ಅವರ ಜೊತೆ ಕೆಲಸಕ್ಕೆ ಹೋಗೋಕೆ ಶುರು ಮಾಡಿದೆ. ಈಗ ಒಂದು ವರ್ಷದ ಹಿಂದೆ. ೧೫ನೇ ಕ್ರಾಸ್‌ನಲ್ಲಿ ಒಬ್ಬರು ಒಡವೆ ಅಂಗಡಿ ಮಾಲೀಕರ ಮನೇಲಿ ಕೆಲಸಕ್ಕೆ ಹೋಗ್ತಾ ಇದ್ದೆ. ಅವರ ಮನೆ ಎದುರಿಗೆ ಶ್ರೀಮಂತರ ಮನೆ ಇತ್ತು ಆ ಮನೆಯ

ಗೇಟ್ ಕಾಯಾಕೆ ಒಬ್ಬ ಹುಡುಗ ಬರ್ತಿದ್ದ. ಅವನ ಹೆಸರು ವೆಂಕಟೇಶ ಅವನತ್ರ ದಿನಾ ಹೋಗ್ತ ಬರ್ತಾ ಮಾತಾಡ್ತಾ ಇದ್ದೆ. ನಾನು ಕೆಲಸ ಮಾಡೋ ಜಾಗದಲ್ಲಿ ನಾವು ಒಕ್ಕಲಿಗರು ಅಂತ ಹೇಳಿದ್ವಿ ಮಾದಿಗಳು ಅಂತ ಹೇಳಕ್ಕೆ ಆಯ್ತುದಾ ಹೇಳು. ವೆಂಕಟೇಶ ನಾನು ಗೌಢ ಜಾತಿಯವನು ನನಗೆ ಮದುವೆ ಆಗಿಲ್ಲ ಅಂದ ನಾನು ನೋಡೋಕೆ ಚಿಕ್ಕ ವಯಸ್ಸದೆ ಮದ್ವೆ ಆಗಿರಲ್ಲ ಅನ್ಕಂಡೆ ಅವನ ಪ್ರೀತಿಗೆ ಒಪ್ಪಿಗೆ ಕೊಟ್ಟೆ. ಅವನೆ ಒಂದು ಮೊಬೈಲ್ ಸಹ ಕೊಡಿಸಿದ್ದ. ಒಂದು ದಿನ ನಿನ್ನನ್ನು ನಾನು ತುಂಬಾ ಪ್ರೀತಿ ಮಾಡ್ತೀನಿ. ನಿನ್ನನ್ನು ಮದುವೆಯಾಗಲೇಬೇಕು. ನೀನು ನನ್ನ ಜೊತೆ ಬಾ ಇಲ್ಲಂದ್ರೆ ನಿನ್ನ ಹೆಸರನ್ನು ಬರೆದಿಟ್ಟು ಆತ್ಮಹತ್ಯೆ ಮಾಡ್ಕೊಳ್ತೀನೀ ಅಂದ. ಇದನ್ನು ಕೇಳಿ ಭಯ ಆಯಿತು ಆದರೂ ಧೈರ್ಯ ಮಾಡಿ ಅಮ್ಮ ಮಾಡಿಸಿದ್ದ ಒಡವೆ ದುಡಿದ ದುಡ್ಡು ತಗಂಡು ಅವನ ಜೊತೆ ಹೋದೆ. ಅವತ್ತೆ ಮೈಸೂರಿಗೆ ಬಂದ್ವಿ ಒಂದು ಸಣ್ಣ ಬಾಡಿಗೆ ಮನೆನು ಮಾಡಿದ್ವಿ, ಆದರೆ ಎರಡುಮೂರು ದಿನ ಮದುವೆ ಮಾತೇ ತೆಗೆಯದೆ ಇದ್ದ. ಇಬ್ಬರೂ ಮದುವೆಯಾಗೊರೆ ಅಲ್ವಾ ಅಂತ ಪ್ರೀತಿಯಿಂದ ಮಾತಾಡ್ತಾ ನಂಬಿಸಿ ನನ್ನ ಮುಟ್ಟಿಬಿಟ್ಟ. ಒಂದು ವಾರದ ಮೇಲೆ ಮದುವೇನ ಮನೆನಲ್ಲೇ ದೇವರ ಫೋಟೋ ಮುಂದೆ ಆದ. ಒಂದು ವಾರ ಆದ ಮೇಲೆ ದುಡ್ಡು ಖಾಲಿ ಆಗುತ್ತಾ ಬಂತು. ಒಡವೆ ಅಷ್ಟೇ ಉಳಿತು. ಆಮೇಲೆ ಒಂದು ದಿನ ರಾತ್ರಿ ತಡವಾಗಿ ಬಂದ ಕುಡಿದು ಬಂದಿದ್ದ ಜೊತೆಗೆ ಸ್ನೇಹಿತ ಅಂತ ಒಬ್ಬ ದಾಂಡಿಗನನ್ನು ಕರ್ಕೊಂಡು ಬಂದಿದ್ದ. ಊಟ ಹಾಕಿದೆ ಇಬ್ಬರೂ ತಿಂದು ಮಲಗಿದರು. ನಾನು ಮಲಗಿದೆ. ಯಾರೋ ಮೈ ಮೇಲೆ ಕೈ ಆಡಿಸಿದಂಗೆ ಆಯ್ತು ಆಧರೆ ಅದು ವೆಂಕಟೇಶನ ಕೈ ಅನ್ನಿಸಲೇ ಇಲ್ಲ. ಗಾಬರಿಯಿಂದ ಎದ್ದು ನೋಡಿದೆ ಆ ದಾಂಡಿಗ ಇದ್ದ ಕಿರುಚೋಕೆ ನೋಡಿದೆ ಆದ್ರೆ ಗಂಡ ವೆಂಕಟೇಶನು ಎದ್ದು ದಾಂಡಿಗನು ಸೇರಿ ನನ್ನ ಕೈಕಾಲು ಕಟ್ಟಿಹಾಕಿದ್ರು ಬಾಯಿಗೆ ಬಟ್ಟೆ ಕಟ್ಟಿದ್ರು. ಗಂಡನ ಮುಂದೇನೆ ಆ ದಾಂಡಿಗ ನನ್ನ ಅನುಭವಿಸಿದ ಎಂತ ಸಂದರ್ಭ ಅಂದ್ರೆ ಆಗಲೇ ಭೂಮಿ ಬಾಯಿಬಿಡಬಾರದ ಅನ್ನಿಸಿತ್ತು. ಅವನ ಮನಸ್ಸಿಗೆ ಬಂದಾಗೆ ಬಳಸಿದ ನನ್ನ ನಂಗೆ ಪ್ರಜ್ಞೆ ತಪ್ತು. ಎಚ್ಚರ ಆದಾಗ ಬೆಳಕಾಗಿತು ದಾಂಡಿಗ ಇರಲಿಲ್ಲ ಇವನು ಮಾತ್ರ ಇದ್ದ. ಅವನನ್ನು ಬೈಯ್ದೆ ಅತ್ತೆ ರಂಪಮಾಡಿದೆ ಸುಮ್ನೆ ನೋಡ್ತ ಕುತ್ತಿದ್ದ ಎಷ್ಟೋ ಹೊತ್ತು ಹಾಗೆ ಇದ್ದೆ. ಸಂಜೆ ಮನೆ ಮುಂದೆ ಒಂದು ಟಾಟಾಸುಮೋ ಬಂತು ಇಬ್ಬರು ದಾಂಡಿಗರು ಇಳಿದ ಮನೆಗೆ ಬಂದ್ರು, ಅವನತ್ರ ಏನೋ ಮಾತಾಡಿದ್ರು ನಂಗೆ ಭಯ ಆಗ್ತಿತ್ತು ಮತ್ತೆ ನನ್ನ ಬಳಸುತ್ತಾರೆನೋ ಅಂತ. ಆದರೆ ಅವರು ವಾಪಸ್ಸು ಹೋದ್ರು ಆದರೆ ಮತ್ತೆ ರಾತ್ರಿ ಬಂದ್ರು ನನ್ನ ಏನು ಕೇಳದೆ ನನ್ನ ಮತ್ತೆ ಕಟ್ಟಿಹಾಕಿ ಬಾಯಿಗೆ ಬಟ್ಟೆ ತುರುಕಿ ಕಾರಲ್ಲೇ ಎತ್ತಿಹಾಕ್ಕೊಂಡು ಬಂದು ಬ್ರಾತಲ್‌ನಲ್ಲಿ ಇಟ್ರು, ಮೊದಲು ನಮ್ಗೆ ಎಲ್ಲಿಗೂ ಹೊರಗೆ ಬಿಡ್ತಾ ಇರಲಿಲ್ಲ. ಇತ್ತೀಚೆಗೆ ಎಲ್ಲಿ ಹೋಗಲ್ಲ ಅಂತ ನಂಬಿಕೆ ಬಂದ ಮೇಲೆ ಬಿಡ್ತಾರೆ. ನಿನ್ನತ್ರ ಮಾತಾಡಿದ್ದೆಲ್ಲ ಅವರತ್ರ ಹೇಳ್ಬೇಡ ಹೇಳಕ್ಕೆ ಚೆನ್ನಾಗೆ ದುಡಿತೀನಿ ೧೦ ರಿಂದ ೧೫ ಸಾವಿರ ಸಿಗುತ್ತೆ ಆದರೆ ಮನಸ್ಸಿಗೆ ನೆಮ್ಮದಿನೆ ಇಲ್ಲ ನೋಡು. ಇಲ್ಲಿ ಬರೊರಲ್ಲಿ ಪಾಪ ನನ್ನಂಗೆ ಮೋಸ ಹೋಗಿರೊರೆ ಜಾಸ್ತಿ. ಕೆಲವರು ಇಷ್ಟಪಟ್ಟು ದುಡ್ಡಿಗಾಗಿ ಬರ್ತಾರೆ. ಮುಂದೆ ಎಷ್ಟು ದಿನ ಇಲ್ಲಿ ಈ ಕೆಲಸ ಗೊತ್ತಿಲ್ಲ ನೋಡೋಣ ಏನಾಗುತ್ತೋ?".

ಪ್ರಕರಣ–೬

ಹೆಸರು : ಜಲಜ

ವಯಸ್ಸು : ೨೪

ಜಾತಿ : ಬಣಜಿಗ

ಶಿಕ್ಷಣ : ಅನಕ್ಷರಸ್ಥೆ

ಸ್ಥಳ : ಕಗ್ಗೆರೆ, ಮೈಸೂರು ಜಿಲ್ಲೆ

**ನಿರೂಪಣೆ:** "ನಾವು ನಾಲ್ಕು ಜನ ಮಕ್ಕಳು ನಾನು ಮೂರನೆ ಮಗಳು ನಮ್ಮ ಊರು ಇಲ್ಲೇ ೨೦ ಕಿ.ಮಿ. ದೂರ ಇದೆ. ಕಗ್ಗೆರೆ ಅಂತ ನನಗೆ ಮದುವೆ ಆದಾಗ ನಂಗೆ ಹನ್ನೊಂದೊ, ಹನ್ನೆರಡೋ ವರ್ಷ ಇರಬೇಕು. ನಮ್ಮ ಅಕ್ಕಂದಿರು ಕೂಡ ಚಿಕ್ಕವರಿದ್ದಾಗಲೇ ಮದುವೆ ಆಗಿ ಹೋಗಿದ್ದರು. ನಾನು ಮೈನೆರೆದು ಆರು ತಿಂಗಳಿಗೆ ನನ್ನ ಪಕ್ಕದೂರಿಗೆ ನಮ್ಮ ಸಂಬಂಧಿಕರಿಗೆ ಕೊಟ್ಟು ಮದುವೆ ಮಾಡಿಬಿಟ್ಟರು. ನಾನು ಚಿಕ್ಕೋಳು ಏನು ಗೊತ್ತಾಗ್ತಾ ಇರಲಿಲ್ಲ. ಮನೆ ಕೆಲಸ ಹೊಲದ ಕೆಲಸ ಅಂಲತ ದಿನಾ ಕಳಿತಿದ್ದೆ. ಆದರೆ ಗಂಡ ಅವನ ಹೆಸರು ಮನೋಜ ಅಂತ ಅವನು ಮಾತ್ರ ನನ್ನ ಪಕ್ಕ ಮಲಿಗಿದ್ರು ಸಮೇತ ಮುಟ್ಟುತಾನೆ ಇರಲಿಲ್ಲ. ಮದ್ವೆ ಆಗಿ ನಾಲ್ಕು ವರ್ಷ ಆದರೂ ಇಬ್ಬರೂ ಗಂಡ ಹೆಂಡಿರ ತರ ಇರಲೇ ಇಲ್ಲ. ಆದರೆ ಎಲ್ಲಾ ತಂದುಕೋಡೊದು ಚೆನ್ನಾಗಿ ನೋಡ್ಕೊಳೋದು ಮಾಡ್ತಾ ಇದ್ದ. ಆ ಮೇಲೆ ಗೊತ್ತಾಗಿದ್ದು ನಮಗೆ ಅವನು ಬೇರೆ ತರ ಅಂತ. ಅಂದ್ರೆ ಈವಾಗ ಅದೇನೋ ಹೇಳ್ತಿರಲ್ಲ ಮೂರನೇ ಲಿಂಗ ಅಂತ. (ತೃತೀಯ ಲಿಂಗಿ) ಆದರೆ ಇದು ನನಗೆ ಗೊತ್ತಾಗೋಕೆ ಅಷ್ಟು ಟೈಮ್ ಬೇಕಾಯ್ತು. ಮನೇಲಿ ಎಲ್ಲರಿಗೂ ಗೊತ್ತಿತ್ತಂತೆ. ಅದು ಆಚೆ ಗೊತ್ತಾದ್ರೆ, ಮನೆತನದ ಮಾನ ಮರ್ಯಾದೆ ಹೋಯ್ತುದೆ ಅಂತ ನನ್ನ ಅವನಿಗೆ ಕಟ್ಟಿದ್ದರು. ನನ್ನ ಆಸೆಗಳಿಗೆ ಕನ್ಸಗಳಿಗೆ ಬೆಲೆನೆ ಇಲ್ಲ ಅಲ್ವಾ, ನನಿಗೆ ಯಾವುದೇ ಸಮಸ್ಯೆ ಬರದ ಹಾಗೆ ನೋಡ್ಕೋತೀನಿ ಬಿಟ್ಟೋಗಿ ಅಂದ್ರು ಆದರೆ ನಮ್ಮನೇರು ಅದ್ಕೆ ಒಪ್ಪಿಲ್ಲ. ನಮ್ಮ ದೊಡ್ಡಕ್ಕ ಬೇರೆ ಗಂಡ ತೀರೋದ ಅಂತ ಮನೆಗೆ ಬಂದ್ಲು ಮತ್ತೆ ನಾನು ಬೇರೆ ಇಂಗೆ, ಯಾಕೋ ಬೇಜಾರಾಗಿ ನಾನೆ ವಾಪಸ್ಸು ಬಂದೆ ಗಂಡನ ಮನೆಗೆ ಆ ಮೇಮೆ ಗಂಡ ಆದವನು ಚೆನ್ನಾಗೆ ನೋಡ್ಕಂಡ, ಸುತ್ತ ಮುತ್ತ ಜನ ಕೇಳೋರು ಮಗು ಯಾಕೆ ಆಗ್ಲಿಲ್ಲಾ ಅಂತ ಆಗ ಗಂಲಡನ ಅಣ್ಣ ಒಂದು ದಿನ ಮನೇಲಿ ಯಾರು ಇಲ್ಲದಾಗ ನನ್ನ ಬಲವಂತ ಮಾಡಿದ್ರು, ಆ ವಿಷ್ಯ ಗಂಡನತ್ರ ಹೇಳಿದೆ ಅದ್ಕೆ ಅವನು ಏನು ಆಗಲ್ಲ ಅವನಿಂದ ನಿನಗೆ ಮಗು ಆದ್ರೆ, ಅದು ನನ್ನದೆ ಅದಾಂಗೆ ಸಹಿಸಿಕೊ ಅಂದ ನಂಗೆ ಇದು ಯಾಕೋ ಸರಿ ಬರಲಿಲ್ಲ ಮನೆ ಬಿಟ್ಟು ಹೋಗೋಣ ಅನ್ಕಂಡು ತಯಾರಾದೆ ನಾನು ಮನೆಯಿಂದ ಆಚೆ ಹೋದ್ರೆ ಎಲ್ಲಾ ವಃಷಯ ಬಾಯಿ ಬಿಡ್ತೀನಿ ಅಂತ ನನ್ನ ಗಂಡ ಅವರಣ್ಣ ಸೇರಿ ಪ್ರಜ್ಞೆ ತಪ್ಪಿಸಿ ನನ್ನ ಅದು ಹೇಗೋ ಈ ಊರಿಗೆ ತಂದಿದ್ದಾರೆ. ನಾನು ಕಣ್ಣು ಬಿಟ್ಟಾಗ ರೂಂನಲ್ಲಿದ್ದೆ. ಅದು ಯಾವುದೋ ಮನೆ

ಅಲ್ಲಿ ಗಂಡ ಅವರಣ್ಣ ಇದ್ರು. ನಾವು ಹೇಳಿದಂಗೆ ಕೇಳಲ್ಲ ಅಂದ್ರೆ ಇಲ್ಲೇ ಸಾಯಿ ಅಂತ ಬಿಟ್ಟು ಹೋದ್ರು. ಅವರು ಅಷ್ಟು ಕೆಟ್ಟವರು ಅಂತ ಆವಾಗಲೇ ಗೊತ್ತಾಗಿದ್ದು, ನನ್ನ ಗಂಡ ವೇಶ್ಯೆಯರ ಜೊತೆ ಸಂಪರ್ಕ ಇಟ್ಟುಕೊಂಡಿದ್ದ ಅಂದ್ರೆ ಅವ್ನಂತವೆ ಇಲ್ಲಿ ಸಿಕ್ತವೆ ಅಲ್ವಾ ಅದ್ಕೆ. ಈಗ ನನ್ನ ಇವರಿಗೆ ಮಾರಿದ್ದಾರೆ. ಅವರ ಸಾಲ ತೀರೋವರೆಗೂ ನಾನು ದುಡಿಬೇಕಂತೆ ನೋಡು ಇದು ಯಾವ ಕರ್ಮ ಅಂತೀನಿ. ನಾನು ಅವರು ಮಾಡಿದ್ದೆಲ್ಲ ಸರಿ ಅಂತ ಸುಮ್ನೆ ಇದ್ದಿದ್ರೆ, ಇಲ್ಲಿಗೆ ಬರ್ತಾನೆ ಇರಲಿಲ್ಲ. ಈಗ ನಾನು ಹೇಗಾಗಿದ್ದಿನಿ ನೋಡು. ಮನೆ ನೆನಪಾಗುತ್ತೆ ಆದ್ರೆ ಹೋದ್ರೆ ಮರ್ಯಾದೆ ಇರ್ತದಾ. ನಾನೋ ವಿದ್ಯೆ ಕಲಿಲೇ ಇಲ್ಲ. ಇಂಗ್ಲೀಷ್ ಗೊತ್ತಾಗದೆ ಇಲ್ಲ. ಇನ್ನು ಇಲ್ಲಿಂದ ತಪ್ಪಿಸಿಕೊಳ್ಳೊದಾದರೂ ಹೆಂಗೆ ನನಗೆ ದುಡ್ಡು ಕೊಡ್ತಾರೆ ಅದು ತಿಂಗಳ ಖರ್ಚಿಗೆ ಮಾತ್ರ ಸಾಲುತ್ತೆ. ನಾನು ಇಲ್ಲಿಗೆ ಬಂದು ಬಿದ್ದಾಗ ನನ್ನ ಹೊಟ್ಟೇಲಿ ಒಂದು ಮಗು ಇತ್ತು ಆ ಮೇಲೆ ಗೊತ್ತಾಯ್ತು ಅವರೆ ಇವರೆಲ್ಲ ಅದೇನೋ ಕೊಟ್ಟು ಅದನ್ನು ಹೇಗೋ ಹಾಗೆ ಮಾಡೇಬಿಟ್ರು. ನಾನು ಎಷ್ಟಾದ್ರೂ ನಾಯಿ ಮುಟ್ಟಿದ ಮಡಿಕೆ ಆ ಮಗು ಆವಾಗಲೆ ಹೋಗಿದ್ದು ಒಳ್ಳೇದೇ ಆಯ್ತು. ಇಲ್ಲಂದ್ರೆ ನನಂತಾದ್ದೇ ಹುಟ್ಟಿದ್ರೆ ಅದರ ಜೀವನ ನರಕ ಆಗಿರೋದು ಅಲ್ವಾ?... ಇದನ್ನ ಬಿಟ್ಟು ಬೇರೆ ಏನು ಮಾಡೋದು ಗೊತ್ತಾಗ್ತಿಲ್ಲ. ಇದನ್ನೆಲ್ಲ ಬಿಟ್ಟು ಬರೋಕೆ ಇವರು ಬಿಡಲ್ಲ. ಬಿಟ್ಟು ಬಂದ್ರು ನಮ್ಮನ್ನ ಯಾರು ಮರ್ಯಾದೆಕ್ಕೊಟ್ಟು ಮಾತಾಡಿಸಲ್ಲ. ಇನ್ನು ಏನಾರ ಹೇಳ್ಬೇಕಾ? ಬೇಡ ಬಿಡು ಇಷ್ಟು ಸಾಕು".

**೭.೨ ಬೆಂಗಳೂರು ನಗರ ಜಿಲ್ಲೆಯ ಪ್ರಕರಣಗಳು**

**ಪ್ರಕರಣ–೧**

ಹೆಸರು : ಆಶಾ

ವಯಸ್ಸು : ೨೮

ಜಾತಿ : ಪರಿಶಿಷ್ಟ ಪಂಗಡ,

ಶಿಕ್ಷಣ : ೧೦ನೇ ತರಗತಿ

ಸ್ಥಳ : ವಿದ್ಯಾರಣ್ಯಪುರ, ಬೆಂಗಳೂರು.

ಸಿ.ಬಿ.ಓ ಒಂದರ ನಿರ್ದೇಶಕಳಾಗಿ ಕೆಲಸ ಮಾಡುತ್ತಿರುವ ಆಶಾ ೧೦ನೇ ತರಗತಿ ಓದು ಮುಗಿಸಿರುವ ಆಶಾ ಕುಟುಂಬದ ಬಡತನದಿಂದಾಗಿ ಓದನ್ನು ನಿಲ್ಲಿಸುತ್ತಾಳೆ. ಇಂತಹ ಸಂದರ್ಭದಲ್ಲ ಉದ್ಯೋಗ ಮಾಡಬೇಕೆಂದು ಬೆಂಗಳೂರಿಗೆ ಬಂದಳು. ಆದರೆ ಮುಂದೆ ನಡೆದದ್ದೆ ಬೇರೆ ಅವಳ ಮಾತಿನಲ್ಲಿಯೇ ನಿರೂಪಿಸುತ್ತೇನೆ.

**ನಿರೂಪಣೆ:** "ಮ್ಯಾಡಂ ನೋಡಿ, ನಾನು ಇಲ್ಲಿಗೆ ಬರುವಾಗ ಒಳ್ಳೇ ಉದ್ಯೋಗ ಮಾಡಬೇಕೆಂದೇ ಬಂದೆ, ಆದರೆ ಜನ ನನ್ನನ್ನು ಹಾಗೆ ಬಿಡಲಿಲ್ಲ. ಬೆಳಗಿನಿಂದ ಸಂಜೆಯವರೆಗೆ, ಜನ ಕೊಡುವ ಲೈಂಗಿಕ ಹಿಂಸೆಗಳನ್ನು ಅನುಭವಿಸಿಕೊಂಡು ಪ್ಯಾಕ್ಟರಿಯಲ್ಲಿ ಉದ್ಯೋಗ ಮಾಡುತ್ತಿದ್ದಾಗ, ನನಗೆ

ಸಿಗುತ್ತಿದ್ದು ಸಂಬಳ ೩ ಸಾವಿರ ಮಾತ್ರ. ಒಂದು ಒಳ್ಳೇ ಉದ್ಯೋಗ ಕೊಡಿಸುತ್ತೀನಿ ಅಂತ ಒಬ್ಬರು ಹೇಳಿದರು. ಸರಿ ಅಂತ ಹೇಳಿದೆ ಯಾವುದೋ ಬ್ಯೂಟಿ ಪಾರ್ಲರ್‌ನಲ್ಲಿ ಕೆಲಸ ಕೊಡಿಸಿದರು ಒಂದು ವಾರ ಆದ ಮೇಲೆ ನನ್ನ ಮೇಕಪ್ ಬಟ್ಟೆ ನೀಟಾಗಿ ಇರಬೇಕು ಅಂತ ಹೇಳಿ ಅದನ್ನೆಲ್ಲಾ ಅವರೇ ಕೊಡಿಸಿದರು. ಒಂದು ದಿನ ಯಾವುದೋ ಫಂಕ್ಷನ್‌ಗೆ ಮೇಕಪ್‌ಗೆ ಹೋಗಬೇಕು ಅಂತ ಹೇಳಿ ಕರ್ಕೊಂಡು ಹೋದರು. ಆದರೆ ಅವರು ಕರ್ಕೊಂಡು ಹೋಗಿದ್ದು ಒಂದು ಹೋಟೆಲ್ ತರದ ಬಿಲ್ಡಿಂಗ್‌ಗೆ ಅಲ್ಲಿ ನನ್ನ ಜೀವನದ ತಿರುವು ಇತ್ತ ಉ. ಅಲ್ಲಿ ನನ್ನ ಒಂದು ರೂಂಗೆ ಹೋಗು ಅಂತ ಹೇಳಿದರು ಹೋದೆ ಅಷ್ಟೇ ನಾನು ಬಲತ್ಕಾರಕ್ಕೆ ಒಳಗಾದೆ ಅಲ್ಲಿ ಕೈ ತುಂಬಾ ದುಡ್ಡು ಕೊಟ್ಟು ಏನು ಆಗೆ ಇಲ್ಲ ಅಂತ ಹೋಗು ಅಂದರು ಎದ್ದು ಬಂದೆ. ಮೂರು ದಿನ ಕೆಲಸಕ್ಕೆ ಹೋಗಲಿಲ್ಲ. ನನ್ನ ಕೆಲಸಕ್ಕೆ ಸೇರಿಸಿದ ಆ ವ್ಯಕ್ತಿ ಬಂದು ಬಲವಂತ ಮಾಡಿದ ಬರಲಿಲ್ಲ ಅಂದ್ರೆ ನಿನಗೆ ಏನಾಗಿದೆ ಅಂತ ನಿಮ್ಮ ಮನೆಯವರಿಗೆ ಹೇಳ್ಬಿಡ್ತೀನಿ ಅಂದ. ಅವನು ಈಗ ಇಲ್ಲೇ ಇದ್ದಾನೆ. ಆದರೆ ಹೆಸರು ಮಾತ್ರ ಹೇಳೋದಿಲ್ಲ ನೀವು ಅಷ್ಟೇ ರೇಕಾರ್ಡ್ ಮಾಡ್ಕೊಳ್ಳೋದು ಬೇಡ ಅದು ಆಫ್ ಮಾಡಿ. ಅವನು ಹೆದರಿಸಿದ ಮೇಲೆ ಮತ್ತೆ ಪಾರ್ಲರ್ ಕೆಲಸಕ್ಕೆ ಹೋದೆ ಆಗ ಪಾರ್ಲರ್ ಆಂಟಿ ಹೇಳಿದ್ರು ನನ್ನನ್ನು ಆ ವ್ಯಕ್ತಿ ದುಡ್ಡಿಗೆ ಅವರಿಗೆ ಮಾರಿದ್ದಾನೆ ಅಂತಃ ತುಂಬ ಮನಸ್ಸಿಗೆ ನೋವಾಯ್ತು. ಆದರೆ ಕುಟುಂಬಕ್ಕೆ ಆಧಾರ ನಾನೇ ಆಗಿದ್ದೇ ದುಡ್ಡಿನ ಅವಶ್ಯಕತೆ ಇಂದಾಗಿ ಅದೇ ಕೆಲಸದಲ್ಲಿ ಮುಂದುವರೆದೆ ನಾನು ಒಂದು ಮನೆ ಮಾಡಿ ಅದೇ ಕೆಲಸಕ್ಕೆ ಹುಡುಗಿಯರನ್ನು ಇಟ್ಟುಕೊಂಡೆ. ಈಗ ಈ ಸಿ.ಬಿ.ಓ ನಡೆಸುತ್ತಿದ್ದೇನೆ. ಆದರೆ ಆ ದಂದೆಯಿಂದ ಹೊರಗೆ ಬರೋಕೆ ಸಾಧ್ಯ ಆಗ್ತಿಲ್ಲ. ಈ ದಂದೆ ನನ್ನ ಬಾಚಿ ತಬ್ಬಿಕೊಂಡಿದೆ. ನಾನು ಒಪ್ಪಿಕೊಳ್ಳುತ್ತೇನೆ. ಇದು ತಪ್ಪು ಅಂತ ಆದರೆ ಮೋಸದಿಂದ ನನ್ನ ಇಲ್ಲಿಗೆ ತಂದು ಹಾಕ್ಬಿಟ್ರು ಮತ್ತೆ ವಾಪಸ್ ಹೋಗೋಕ್ಕೆ ಆಗದಹಾಗೆ ಮಾಡಿಬಿಟ್ರು." (ಹಾಗೆ ಅಂದವಳ ಕಣ್ಣಲ್ಲಿ ನೀರಾಡುತ್ತಿತ್ತು)

**ಪ್ರಕರಣ–೨**

ಹೆಸರು : ವಿಜಯ ಕುಮಾರಿ

ವಯಸ್ಸು : ೩೫

ಜಾತಿ : ಮಾದಿಗ

ಶಿಕ್ಷಣ : ೮ನೇ ತರಗತಿ

ಸ್ಥಳ : ಬೆಂಗಳೂರು

ವಿಜಯ ಕುಮಾರಿ ಅಕ್ಷರಸ್ಥ ಮಹಿಳೆ. ಇವರು ಮುಂಬಯಿಯ ಕಮಾಟಿಪುರಕ್ಕೆ ಸಾಗಾಣಿಕೆಗೊಂಡು ಬಹಳಷ್ಟು ವರ್ಷ ಅಲ್ಲೇ ಇದ್ದು ನಂತರ ಊರಿಗೆ ವಾಪಾಸ್ಸಗಿದ್ದರು. ಇವರ ಬಳಿ ಮಾತನಾಡಬೇಕು ಅಂಥ ಕೇಳಿದ್ದಕ್ಕೆ ಒಂದು ದಿನ ನಿಗದಿ ಮಾಡಿ ಒಂದು ಪಾರ್ಕಿಗೆ ಬರಲು ಹೇಳಿದರು. ನನಗಿಂಲೂ

ಮೊದಲೇ ಅವರು ಹಾಜರಿದ್ದರು. ತುಂಬಾ ಪ್ರೀತಿಯಿಂದಲೇ ನನ್ನ ಸ್ವಾಗತಿಸಿ ಮಾತನಾಡಿಸಿ ತನ್ನ ಜೀವನ ವೃತ್ತಾಂತವನ್ನೆಲ್ಲಾ ಹಂಚಿಕೊಂಡರು.

**ನಿರೂಪಣೆ:** "ನನಗೆ ಚಿಕ್ಕವಳಿರುವಾಗ ಶಾಲೆಗೆ ಹೋಗಬೇಕು. ಅಕ್ಷರ ಕಲೀಬೇಕು ಅಂತ ತುಂಬಾ ಆಸೆ. ಆದರೆ ಕೆಳಜಾತಿ ಹೆಣ್ಣು ಮಕ್ಕಳಿಗೆ ಅವಾಗೆಲ್ಲ ಶಾಲೆ ಎಲ್ಲಿ ಇರ್ತಿತ್ತು. ಆದರೂ ನಮ್ಮ ಊರಿನ ಮಾಸ್ತರು ನನ್ನ ಆಸಕ್ತಿ ನೋಡಿ ಬಾ ಶಾಲೆಗೆ ಅಂದ್ರು ಹೋದೆ. ೮ನೇ ತರಗತಿವರೆಗೆ ಕಲಿತೆ ಅಷ್ಟೆ. ಅಪ್ಪ ಕಟ್ಟಿಗೆ ಮಾರಿ ದುಡ್ಡು ಸಂಪಾದಿಸುತ್ತಿದ್ದ ಅದರಲ್ಲಿ ನಮ್ಮ ಜೀವನ ನಡೀಬೇಕಿತ್ತು. ದೊಡ್ಡಕ್ಕನ್ನ ಮದುವೆ ಮಾಡಿಕೊಟ್ಟಿದ್ದರು. ಎರಡನೇ ಅಕ್ಕ ಕೈ ಮುರಿದು ಅಂಗವಿಕಲೆ ಆಗಿದ್ದಳು. ಅಮ್ಮ ತೀರಿಹೋಗಿದ್ದಳು. ಅಪ್ಪ ಮತ್ತೆ ಮದುವೆ ಮಾಡಿಕೊಂಡಿದ್ದ. ನಾನು ೧೩ ವರ್ಷ ಇದ್ದಾಗ ಹೆಣ್ಣಾದೆ. ಆಗ ನನ್ನ ಮಲತಾಯಿ ಗರ್ಭಿಣಿಯಾಗಿದ್ದಳು. ಹೆರಿಗೆಗಾಗಿ ತನ್ನ ತವರು ಮನೆಗೆ ಹೋಗೋವಾಗ ನನ್ನನ್ನು ಜೊತೆಗೆ ಕರೆದುಕೊಂಡು ಹೋದಳು. ಆ ಊರಲ್ಲಿ ಒಬ್ಬ ಬ್ಯಾಡರ ವ್ಯಕ್ತಿ ಪರಿಚಯವಾದ ಒಂದಷ್ಟು ದಿನ ಕಾಣೆಯಾಗುತ್ತಿದ್ದ ಮತ್ತೆ ಪ್ರತ್ಯಕ್ಷ ಆಗ್ತಿದ್ದ. ಯಾಕೆ ಹೀಗೆ ಅಂತ ಕೇಳಿದೆ. ದುಡಿಯೋಕೆ ಹೋಗಿದ್ದೆ ಅಂದ ನಾನು ತುಂಬಾ ಹಚ್ಚಿಕೊಂಡಿದ್ದೆ. ಆ ಮೇಲೆ ನನ್ನ ಮದುವೆ ಆಗ್ತೀಯ ಅಂದ ಅದ್ಕೆ ಒಪ್ಪಿಕೊಂಡೆ. ಮನೇಲಿ ಯಾರು ಹೇಳದೆ ಅವನ ಜೊತೆ ಒಂದಿನ ಮುಂಜಾನೆ ಬಂದೆ. ಮೈಸೂರಿಗೆ ಹೋದ್ವಿ ಒಂದೆರಡು ದಿನ ಸುತ್ತಾಡಿದ್ವಿ ತಾಳಿಕಟ್ಟು ಅಂದೆ ಆದರೆ ಈಗ ಬೇಡ ಬೇರೆ ಊರಿಗೆ ಹೋಗಿ ಮದುವೆ ಆಗೋಣ ಅಂದ ಸರಿ ಅಂತ ಸುಮ್ಮನಾದೆ. ಮತ್ತೆ ಬೆಂಗಳೂರಿಗೆ ಬಂದ್ವಿ ಮುಂಬೈ ರೈಲು ಹತ್ತಿದ್ವಿ, ಅಲ್ಲಿ ಸ್ನೇಹಿತರಿಗೆ ಹೇಳಿ ಮನೆ ಮಾಡಿ ಆಗಿದೆ. ಇನ್ನು ಹೋದ ತಕ್ಷಣ ಮದುವೆ ಆಗಿ ಸಂಸರಾ ಮಾಡೋದೆ ಅಂದ. ನಾನು ಹುಚ್ಚಿಯ ಹಾಗೆ ಕನಸು ಕಾಣುತ್ತಾ ಅವನನ್ನು ನಂಬಿದೆ. ಒಂದು ದೊಡ್ಡ ಬಿಲ್ಡಿಂಗ್‌ಗೆ ಕರೆದುಕೊಂಡು ಹೋದ ಅಲ್ಲಿ ಎಷ್ಟೋಂದು ಸಣ್ಣ ಸಣ್ಣ ಮನೆಗಳು ಇದ್ದವು. ಒಂದು ರೂಂನಲ್ಲಿ ನನ್ನ ಕೂರಿಸಿ ಬರ್ತೀನಿ ಅಂತ ಹೇಳಿ ಹೋದವ ಒಂದು ಹೆಂಗಸಿನ ಜೊತೆ ಬಂದು ಸ್ವಲ್ಪ ದಿನ ಇವರ ಜೊತೆ ಇರು ಬರ್ತೀನಿ ಅಂತ ಹೇಳಿ ಹೋದ. ಆ ಮೇಲೆ ನನಗೆ ಆ ಹೆಂಗಸು ಹೇಳಿದ್ಲು ನೀನು ನನಗೆ ಮಾರಾಟ ಆಗಿದಿಯ ಈಗ ನಾನು ಹೇಳಿದ ಹಾಗೆ ಕೇಳಬೇಕು ಅಂದ್ಲು. ಅದು ಕಮಾಟಿಪುರದ ಒಂದು ಗಲ್ಲಿಯಾಗಿತ್ತು. ಒಂದು ದಂದೆ ಮನೆಗೆ ಮಾರಾಟ ಮಾಡಿ ಹೋರಟು ಹೋಗಿದ್ದ. ಆಗ ನನಗೆ ದಿಕ್ಕೇ ತೋಚದಾಗಿತ್ತು. ನನ್ನ ಸುದ್ದಿ ಮನೆಯವರಿಗೂ ಗೊತ್ತಿಲ್ಲ. ನನ್ನ ವಯಸ್ಸು ಚಿಕ್ಕದಿತ್ತು. ಘರವಾಲಿ ನನ್ನನ್ನು ದುಡ್ಡು ಕೊಟ್ಟು ಖರೀದಿಸಿದ್ದರಿಂದ ನನ್ನನ್ನು ಕೂಡಿ ಹಾಕಿದ್ದಳು. ಎಲ್ಲಿಯೂ ನನ್ನನ್ನು ಹೊರಗೆ ಬಿಡುತ್ತಿರಲಿಲ್ಲ. ಗಿರಾಕಿಗೆ ಸೆರಗು ಹಾಸಲೇಬೇಕಾಯ್ತು. ಒಂದು ವರ್ಷ ಇದೇ ರೀತಿ ಕಳೀತು. ನನ್ನ ಅಪ್ಪ ಹೇಗೋ ನನ್ನ ಹುಡುಕಿಕೊಂಡು ಮುಂಬೈವರೆಗೂ ಬಂದಿದ್ದ ಆಗ ಘರವಾಲಿ ನನ್ನನ್ನು ಇವರೊಂದಿಗೆ ಕಳಿಸಲು ಒಪ್ಪಲೇ ಇಲ್ಲ. ಕಳುಹಿಸಲ್ಲ ಅಂದ್ರೆ ಪೋಲಿಸ್ ಕಂಪ್ಲೇಂಟ್ ಕೊಡ್ತೀನಿ ಅಂತ ಹೇಳಿ ಹೆದರಿಸಿ ನನ್ನನ್ನು ಅಲ್ಲಿಂದ ವಾಪಸ್ಸು ಊರಿಗೆ ಕರೆತರಲು ತಯಾರಾದ.

ಆದರೆ ನಾನೆ ನನ್ನ ತಂದೆಗೆ ಹೇಳಿದೆ. ಹೇಗಿದ್ದರೂ ನಾನು ಕೆಟ್ಟು ಹೋಗಿದ್ದೀನಿ. ಊರಿಗೆ ಬಂದು ಮಾಡುವುದಾದರೂ ಏನು. ಇಲ್ಲಿದ್ದರೂ ಅಲ್ಲಿದ್ದರೂ ಇನ್ನು ಮೇಲೆ ನನ್ನ ಬದುಕು ಹೀಗೆ ನಡೆಯುವುದು ಎಂದು ಹೇಳಿದಾಗ ನನ್ನ ತಂದೆ ಮನಸ್ಸು ನೋಯಿಸಿಕೊಂಡು. ಕಣ್ಣೀರು ಸುರಿಸಿದ್ದ ಆಗಲೇ ನನಗೂ ನನ್ನ ತಂದೆ ನನ್ನ ಮೇಲೆ ಇಟ್ಟಿರುವ ಪ್ರೀತಿ ಅರ್ಥವಾಗಿದ್ದು. ನನ್ನ ಅಷ್ಟು ದೂರ ಬಂದು ಹುಡುಕಿದ್ದೆ ಒಂದು ಸಾರ್ಥಕ ಅನಿಸಿತ್ತು. ನಾನೇ ನನ್ನ ಬದುಕು ಹಾಳು ಮಾಡಿಕೊಂಡಿದ್ದೆ. ನಂತರ ನನ್ನ ಮಾತೆ ಸರಿ ಅಂದುಕೊಂಡು. ನನ್ನ ಅಲ್ಲೇ ಬಿಟ್ಟು ಊರಿಗೆ ವಾಪಸ್ಸು ಬಂದರು. ಆಗಾಗ ನಾನೇ ಊರಿಗೆ ಬಂದು ಹೋಗೋದು ಮಾಡುತ್ತಾ ಇದ್ದೆ. ಆಗ ಪೋಲಿಸರ ಪಹರೆ ಬಹಳ ಇರ್ತಿತ್ತು. ಹಗಲು ರಾತ್ರಿ ಇರುತ್ತಿದ್ದರು. ಕುರಿ ತುಂಬಿದಂತೆ ಪೋಲಿಸ್ ಗಾಡಿಯಲ್ಲಿ ಹುಡುಗಿಯರನ್ನು ತುಂಬಿಕೊಂಡು ಹೋಗುತ್ತಿದ್ದರು. ಸಣ್ಣ ವಯಸ್ಸಿನ ಹುಡುಗಿಯರು ಇದ್ರೆ ಅವರ ಅಧಿಕಾರ ಜೋರು ಇರ್ತಿತ್ತು. ಸಣ್ಣ ಹುಡುಗಿಯರ ಅಪ್ಪ ಅಮ್ಮನನ್ನು ಕರೆಯಿಸಿ ತಾಕೀತು ಮಾಡಿ ಅವರ ಜೊತೆ ಕಳಿಸುತ್ತಿದ್ದರು. ಆದರೆ ಬಹಳ ಸಾರಿ ಘರವಾಲಿಯು ಪೋಲೀಸರಿಗೆ ಹಣ ಕೊಟ್ಟು ಬಿಡಿಸಿಕೊಳ್ಳುತ್ತಿದ್ದಳು. ನನ್ನನ್ನು ೪-೫ಸಾರಿ ಜೈಲಿಗೆ ಹಾಕಿದ್ದರು. ಕೋರ್ಟಿಗೂ ಹೋಗಿದ್ದೆ. ಗಲ್ಲಿಯೊಳಗಿನ ಸ್ಟೇಶನ್‌ಗೆ ಹೋದಾಗ ೨೦೦೦ರೂಪಾಯಿ ದಂಡ ಕಟ್ಟಿ ಬರುತ್ತಿದ್ದೆವು.

ಈ ಕೆಲಸಲ ಮಾಡಿ ಬಂದ ಹಣದಿಂದ ಬಂಗಾರ, ಬೆಳ್ಳಿಕೊಂಡುಕೊಂಡಿದ್ದೆ. ಅಪ್ಪನ ಆರೋಗ್ಯ ಸರಿ ಇಲ್ಲದಾಗ ಎಲ್ಲಾ ಮಾರಿಬಿಟ್ಟೆ. ಈಗ ನಾನು ಇಲ್ಲೇ ಇದ್ದೇನೆ. ಹೊಟ್ಟೆ ಪಾಡಿಗೆ ಹೇಗೋ ನಡೀತಿದೆ. ಸಿ.ಬಿ.ಓನಲ್ಲಿ ಖಜಾಂಚಿ ಆಗಿರೋದು ಸಹಾಯ ಮಾಡ್ತಿದೆ. ಒಬ್ಬಳೇ ಇರುವುದರಿಂದ ಏನು ಸಮಸ್ಯೆ ಇಲ್ಲ" ಎಂದರು.

**ಪ್ರಕರಣ-೩**

ಹೆಸರು : ಲಿಜಿತಾ

ವಯಸ್ಸು : ೨೫

ಜಾತಿ : ಕ್ರಿಶ್ಚಿಯನ್

ಶಿಕ್ಷಣ : ಬಿ.ಬಿ.ಎಂ

ಸ್ಥಳ : ಸದಾಶಿವನಗರ, ಬೆಂಗಳೂರು ನಗರ ಜಿಲ್ಲೆ.

**ನಿರೂಪಣೆ:** "ಹಾಯ್ ಅಕ್ಕ. ನಾನು ನಿಂಗೆ ಗೊತ್ತಲ್ವ ಸೊ ನನ್ನ ಲೈಫ್‌ನಲ್ಲಿ ಏನಾಯ್ತು ಅಂತ ಹೇಳ್ತೀನಿ ನೋಡಿ. ನಾವು ಮೂರು ಜನ ಮಕ್ಕಳು ಅಪ್ಪ ಅಮ್ಮ ಎಲ್ಲರೂ ಒಟ್ಟಿಗೆ ಇರ್ತಿದ್ವಿ ನಾನು ಓದಿದೆಲ್ಲಾ ಒಳ್ಳೆ ಸ್ಕೂಲ್ ಕಾಲೇಜ್ನಲ್ಲೆ ನಮಗೆ ಹಣ ಆಸ್ತಿಗೆ ಯಾವ ಕೊರತೆ ಇಲ್ಲ. ನಾವು ಕ್ರಿಶ್ಚಿಯನ್ ಆಗಿರೋದರಿಂದ ನಮಗೆ ಡ್ರೆಸ್ಸಿಂಗ್ ಮತ್ತೆ ಫ್ರೆಂಡ್ಸ್ ಜೊತೆ ಇರೋ ವಿಷಯಕ್ಕೆ ಅಷ್ಟೇನು ರಿಸ್ಟ್ರಿಕ್ಷನ್ಸ್ ಇರಲಿಲ್ಲ. ನಾನು ಬಿ.ಬಿ.ಎಂ ಓದಿದ್ದು ಇಲ್ಲೆ ಬೆಂಗಳೂರಲ್ಲೇ ಜಯನಗರದಲ್ಲಿ ನಾನು

ಕಾಲೇಜಿಗೆ ಹೋಗಿ ಬರೋವಾಗ ತುಂಬಾ ಹುಡುಗರು ನನ್ನ ಹಿಂದೆ ಬರ್ತಾ ಇದ್ರು. ಅದರಲ್ಲಿ ಒಬ್ಬ ನಂಗೂ ಇಷ್ಟ ಆಗಿದ್ದ. ಒಂದು ದಿನ ಪ್ರಪೋಸ್ ಮಾಡಿದ ಗೋಲ್ಡ್ ರಿಂಗ್ ಕೊಟ್ಟ. ನಾನು ಒಪ್ಪಿಕೊಂಡೆ ಅವನು ಇಮಾನ್ಯುಯಲ್ ಅಂತ ಹೆಸರು ಹೇಳಿದ್ದ ಸೊ ನಾನು ತುಂಬಾ ಖುಷಿ ಆಗಿದ್ದೆ. ನಮ್ಮ ಮನೇಲಿ ಪರಿಚಯ ಮಾಡಿಸೋಕೆ ತುಂಬಾ ಸಲ ಟ್ರೈ ಮಾಡಿದೆ ಬಟ್ ಅವನು ಬರಲೇ ಇಲ್ಲ ನನ್ನ ಬಿ.ಬಿ.ಎಂ ಲಾಸ್ಟ್ ಸೆಮ್‌ನಲ್ಲಿ ಇದು ಆಗಿದ್ದು ಪರೀಕ್ಷೆ ಇದೆ ಅಂತ ನಾನು ಸವಲ್ಪ ಅವನಿಂದ ದೂರ ಇದ್ದೆ. ಅದಕ್ಕೆ ಅವನು ಕೋಪ ಮಾಡಿಕೊಂಡಿದ್ದ. ಆದ್ರೂ ಪೋನ್‌ನಲ್ಲಿ ಮಾತಾಡ್ತಾ ಇದ್ದ. ಪರೀಕ್ಷೆ ಮುಗಿದ ಮೇಲೆ ನಮ್ಮ ಅಮ್ಮನ ಊರು ಗೋವಾಗೆ ಹೋಗೋದು ಅಂತ ಅಪ್ಪ ಹೇಳಿದ್ರು, ನಾನು ಅವನಿಗೂ ಅಲ್ಲಿಗೆ ಬರೋಕೆ ಹೇಳಿದೆ ಅಲ್ಲಿ ಎಲ್ಲರಿಗೂ ಪರಿಚಯ ಮಾಡಿದ ಹಾಗೆ ಆಗುತ್ತೆ ಅಂತ ನಾನು ಪ್ಯಾಮಿಲಿ ಜೊತೆ ಹೋದೆ. ಅವನು ಅವನ ಪ್ರೆಂಡ್ಸ್ ಜೊತೆ ಬಂದಿದ್ದ. ನನಗೆ ಕಾಲ್ ಮಾಡಿ ಬೀಚ್ ಹತ್ರ ಬಾ ಅಂದ ನಾನು ಹೋದೆ ಸಂಜೆ ಳಕ್ಕೆ ಮಾತಾಡ್ತಾ ಟೈಮ್ ಹೋಗಿದ್ದೆ ಗೊತ್ತಾಗ್ಲಿಲ್ಲ ಸ್ವಲ್ಪ ಕತ್ತಲೆ ಇತ್ತು. ನಾನು ಜನ ಇರೋಕಡೆ ಹೋಗೋಣ ಅಂದೆ ಅವನು ಸರಿ ಅಂತ ರೋಡಿಗೆ ಕರೆದುಕೊಂಡು ಬಂದ. ಒಂದು ಕಾರ್ ಹತ್ರ ಬಂದ್ವಿ ನಾನು ಅದಕ್ಕೆ ಒರಗಿಕೊಂಡು ನಿಂತಿದ್ದೆ. ಸಡನ್ ಆಗಿ ಡೋರ್ ಒಪನ್ ಆಗಿ ನನ್ನ ಅದರೊಳಗೆ ಎಳ್ಕಂಡ್ರು, ನಂಗೆ ಗಾಬರಿ ಆಗಿ ನನ್ನ ಬಾಯ್ ಫ್ರೆಂಡ್‌ಗೆ ಕೂಗಿದೆ. ಅವನು ಹತ್ರ ಬಂದು ನನ್ನ ಪಕ್ಕಾನೆ ಕೂತ. ನಂಗೆ ಏನಾಗ್ತಿದೆ ಅಂತ ತಕ್ಷಣಕ್ಕೆ ಗೊತ್ತಾಗ್ಲೆ ಇಲ್ಲ. ಅಯ್ಯೋ ಅಂತ ಕೂಗಾಡೋಕೆ ನೋಡಿದೆ ನನ್ನ ಬಾಯಿನ ಅವನು ಮುಚ್ಚಿದ ಆ ಮೇಲೆ ನಂಗೆ ಏನೋ ಇಂಜೆಕ್ಷನ್ ಕೊಟ್ರು, ನಂಗೆ ಪ್ರಜ್ಞೆ ಹೋಯ್ತು ಎಚ್ಚರ ಆದಾಗ ನಾನು ಯಾವುದೋ ಕಾಟೇಜ್‌ನಲ್ಲಿ ಇದ್ದೆ. ನನ್ನ ಹುಡುಗ ಅಲ್ಲೇ ಇದ್ದ ಅವನ ಜೊತೆ ಯಾರು ಯಾರೋ ಇದ್ರು ನನ್ನ ಮತ್ತೆ ಅಲ್ಲಿಂದ ಕಾರಲ್ಲಿ ಕರ್ಕೊಂಡು ಹೋದ್ರು ದೊಡ್ಡ ಹಡಗು ನಿಂತಿತ್ತು. ಅದರಲ್ಲಿ ಕರಕೊಂಡು ಹೋದ್ರು ನಂಗೆ ಪ್ರಜ್ಞೆ ಸರಿಯಾಗಿ ಇರಲಿಲ್ಲ. ಆದ್ರೆ ಆಗಾಗ ಕಣ್ಣು ಬಿಟ್ಟು ನೋಡ್ತಾ ಇದ್ದೆ. ನನ್ನ ಒಂದು ರೂಂನಲ್ಲಿ ಕೂಡಿಹಾಕಿದ್ರು, ನನ್ನ ಪ್ಯಾಂಟ್‌ಲ್ಲಿ ಇದ್ದ ಮೊಬೈಲ್ ಅವರಿಗೆ ಕಾಣಿಸಿರಲಿಲ್ಲ. ಆದರೆ ಅಲ್ಲಿ ಮತ್ತೆ ಒಂದು ಮೈಯೆಲ್ಲಾ ಹುಡುಕಾಡಿ ಅದನ್ನು ತಗೊಂಡ್ರು, ನನ್ನ ಬಾಯ್ ಪ್ರೆಂಡ್ ನನ್ನತ್ರ ಬಂದು ನನ್ನ ಕೈಯಲ್ಲಿ ಅವನು ಕೊಟ್ಟ ರಿಂಗ್ ಇತ್ತು ಅದನ್ನು ಕಿತ್ತುಕೊಂಡ ಅಲ್ಲಿಂದ ನನ್ನ ದುಬೈಗೆ ಸಾಗಿಸಿದ್ರು ಅದು ಎಷ್ಟು ದಿನ ಸಮುದ್ರದಲ್ಲಿ ಇದ್ದೆ ಅಂತಾನೆ ಗೊತ್ತಿಲ್ಲ. ಯಾವಾಗಲೋ ತಿನ್ನೋಕೆ ಕೊಡ್ತಿದ್ರು. ಎಚ್ಚರ ಆದಾಗ ನಂಗೆ ಇಂಜೆಕ್ಷನ್ ಕೊಟ್ಟು ಮಲಗಿಸಿಬಿಡ್ತಿದ್ರು. ಮಸ್ಕರ್ ಅನ್ಸುತ್ತೆ ನಾನು ಇಳಿದಿದ್ದು, ಹಡಗಲ್ಲಿ ನನ್ನ ಜೊತೆ ಇನ್ನೂ ಐದು ಜನ ಹುಡುಗಿರು ಇದ್ರು ಅವರನ್ನು ನನ್ನನ್ನು ಒಂದು ಕಾರಲ್ಲಿ ಕರ್ಕೊಂಡು ಹೋದ್ರು ಅವರನ್ನು ನನ್ನನ್ನು ಒಂದು ಕಾರಲ್ಲಿ ಕರ್ಕೊಂಡು ಹೋದ್ರು ಯಾವುದೋ ಹೋಟೆಲ್ ಅದು ಅಲ್ಲಿ ನಮ್ಮನ್ನ ಕೆಳಗಿನ ರೂಂನಲ್ಲಿ ಕೂಡಿ ಹಾಕಿದ್ರು. ನಾನು ವರ್ಜಿನ್ ಇದ್ದೆ. ನನ್ನ ಜೊತೆ ಇದ್ದ ಇಬ್ಬರು ಹುಡುಗಿರು

ವರ್ಜಿನ್ ಇದ್ರು. ಅದನ್ನು ಅವರೇ ಚೆಕ್ ಮಾಡಿದ್ರು ತುಂಬಾ ಹಿಂಸೆ ಆಯಿತು. ನಾನು ವಾಪಸ್ ಹೋಗಲ್ಲ ಇಲ್ಲೆ ಸಾಯ್ತೀನಿ ಅನ್ಸಿತ್ತು. ನಮ್ಮನ್ನ ಒಂದು ರೂಂನಲ್ಲಿ ಸ್ನಾನ ಮಾಡೋಕೆ ಹೇಳಿದ್ರು ಅವರು ತುಂಬಾ ಚಿಕ್ಕ ಬಟ್ಟೆ ಕೊಟ್ರು ಹಾಕ್ಕೊಳ್ಳಿ ಅಂದ್ರು ನಾವು ಆಗಲ್ಲ ಅಂದಿದ್ದಕ್ಕೆ ಮತ್ತೆ ಇಂಜೆಕ್ಷನ್ ಕೊಟ್ರು ಆ ಮೇಲೆ ನಮ್ಮ ರೂಂಗೆ ಯಾರು ಯಾರೋ ಬೇರೆ ದೇಶದವರ ತರಿದ್ರು ಅವರು ಬಂದು ನಮ್ಮನ್ನ ನೋಡಿ ನಮ್ಮ ಮೂವರಿಗೂ ರೇಟ್ ಅಂತ ಮಾತಾಡಿ ಹೋದ್ರು. ನಮ್ಮನ್ನ ಚಿಕ್ಕ ಬಟ್ಟೆ ಹಾಕ್ಸಿ ಕರಕೊಂಡೋಗಿ ಅವರ ರೂಂಗೆ ಬಿಟ್ರು ಅಷ್ಟೆ. ನಮ್ಮನ್ನ ಮೂರು ಜನ ಹುಡುಗೇರನ್ನು ಒಬ್ಬನೇ ವ್ಯಕ್ತಿ ಬಳಸಿದ ಅವನಿಗೆ ಸಹಾಯ ಮಾಡೋಕೆ ೪ ಜನ ಗಂಡಸರು ಇದ್ರು ಅವನು ಮುಗಿಸಿದ ಮೇಲೆ ಇವರು ನಮ್ಮನ್ನ ಮತ್ತೆ ಮತ್ತೆ ಬಳಸ್ಕೊಂಡ್ರು. ಪ್ರಾಣ ಹೋಗಬಾರದಾ ಅನ್ಸಿತ್ತು ಆಗ ಇದಾದ ಮೇಲೆ ಸುಮಾರು ಒಂದು ವರ್ಷ ಅಲ್ಲೇ ಇದ್ದೆ. ಮೊದಲೇ ಪಾಸ್ ಪೋರ್ಟ್, ವೀಸಾ ಇಲ್ಲದೆ ಹೋಗಿದ್ದು ಅಲ್ಲಿ ದೊಡ್ಡ ಅಪರಾಧ ಇನ್ನು ತಪ್ಪಿಸಿಕೊಳ್ಳೋಕೆ ಹೋಗಿ ಸಿಕ್ಕಿಕೊಂಡ್ರೆ ಅಷ್ಟೇ ಜೀವನ ಪೂರ್ತಿ ಜೈಲೇ ಅಂತ ತಪ್ಪಿಸಿಕೊಳ್ಳಕೆ ಹೋಗಲಿಲ್ಲ. ಆದರೆ ಒಬ್ಬ ಶ್ರೀಮಂತನ ಜೊತೆ ನಾನು ೪ ರಾತ್ರಿ ಇರಬೇಕಾಯ್ತು ನಾವು ಇದ್ದ ಹೋಟೆಲ್‌ನಲ್ಲೇ ನಮ್ಮ ಇಂಡಿಯನ್ ಒಬ್ರು ಕೆಲಸ ಮಾಡ್ತಾ ಇದ್ರು. ನಾನು ನನ್ನ ಎಲ್ಲಾ ಡೀಟೇಲ್ಸ್‌ನ ಒಂದು ಪೇಪರ್‌ನಲ್ಲಿ ಬರೆದು ಅವರ ಮುಂದೆ ಇಟ್ಟು ಹೋದೆ. ನನ್ನ ಪುಣ್ಯ ಅವರು ನನಗೆ ಸಹಾಯ ಮಾಡಿದ್ರು. ನಂಗೆ ಇಂಗ್ಲೀಷ್ ಬರ್ತಿತ್ತು ಅದಕ್ಕೆ ಬಚಾವಾದೆ. ನನ್ನತ್ರ ಹಣ ಇರಲಿಲ್ಲ. ಆದ್ರೆ ಆ ಶ್ರೀಮಂತ ನನಗೆ ಅವನ ಜೊತೆ ಹೋದಾಗ ಚಿನ್ನದ ಒಡವೆ ಕೊಟ್ಟಿದ್ದ ನಾನು ಹೋಟಲ್‌ನವರಿಗೆ ಅದನ್ನೇ ಕೊಟ್ಟು ಡುಪ್ಲಿಕೇಟ್ ಪಾಸ್‌ಪೋರ್ಟ್ ಮಾಡ್ಸಿಕೊಡಿ ಅಂದೆ ಪಾಪ ನನಗೋಸ್ಕರ ತುಂಬಾ ರಿಸ್ಕ್ ಆದ ಕೆಲಸ ಮಾಡಿದ್ರು. ನಾನು ವಾಪಸ್ ಬ್ಯಾಂಗಲೋರ್‌ಗೆ ಬಂದೆ ಅಪ್ಪ ಅಮ್ಮ ನನ್ನ ಹುಡುಕಿ ಸಾಕಾಗಿ ನಾನು ಸಿಗಲ್ಲ ಅಂತ ನನ್ನ ಕೊರಗಲ್ಲೇ ಇದ್ರು. ನಾನು ಬಂದ ತಕ್ಷಣ ಮನೆಗೆ ಹೋಗಿ ನಡೆದ್ದೆಲ್ಲ ಹೇಳಿದೆ ಇಮಾನ್ಯೂಯಲ್‌ನ ಹುಡುಕಿದೆ. ಆದ್ರೆ ಅವನು ಜಾಗ ಬದಲಿಸಿದ್ದ. ಆ ಮೇಲೆ ಗೊತ್ತಾಗಿದ್ದು ಇಷ್ಟು ಇವನು ಕ್ರಿಶ್ಚಿಯನ್ ಅಲ್ಲ. ಅವನು ಇಂತದ್ದೆ ಕೆಲಸ ಮಾಡಿ ಪೋಲೀಸ್ ಕೇಸ್ ಆಗಿವೆ. ಅಂತ ನಾನು ಕಂಪ್ಲೇಂಟ್ ಕೊಟ್ಟೆ. ಆದರೆ ಅವನು ಇಲ್ಲಿವರೆಗೂ ಸಿಕ್ಕಿಲ್ಲ. ಈಗ ಅಪ್ಪ ಅಮ್ಮ ಜೊತೆ ಇದ್ದೀನಿ. ಎಲ್ಲೂ ಹೊರಗೆ ಹೋಗಲ್ಲ. ನಾನು ಮಿಸ್ ಆಗಿದ್ದೆ ಅಂತ ನಮ್ಮ ರಿಲೇಷನ್ಸ್‌ಗೆ ಗೊತ್ತಾಗಿದೆ. ಅದಕ್ಕೆ ಎಲ್ಲೂ ಹೋಗಲ್ಲ. ಆ ನರಕದಿಂದ ಹೊರಗೆ ಬಂದಿದ್ದೆ ಒಂದು ಪವಾಡ ಅಂತ ಅನ್ಸುತ್ತೆ. ಈಗ ಚೆನ್ನಾಗಿದ್ದೀನಿ ಮುಂದೆ ನೋಡೋಣ ಯಾವುದಾದರೂ ಕಂಪನಿಲಿ ಕೆಲಸ ಸಿಕ್ರೆ ಹೋಗ್ತೀನಿ ಥ್ಯಾಂಕ್ಯೂ ಅಕ್ಕ ಇಷ್ಟೊತ್ತು ನನ್ನ ಕಥೆ ಕೇಳಿದ್ದಕ್ಕೆ".

ಪ್ರಕರಣ–೪

ಹೆಸರು : ಮಾಯಾ

ವಯಸ್ಸು : ೨೮

ಜಾತಿ : ಲಂಬಾಣಿ

ಶಿಕ್ಷಣ : ಪಿ.ಯು.ಸಿ

ಸ್ಥಳ : ಯಶವಂತಪುರ, ಬೆಂಗಳೂರು ನಗರ ಜಿಲ್ಲೆ.

**ನಿರೂಪಣೆ:** "ನಾನು ಇರೋದು ಯಶವಂತಪುರ ಅಕ್ಕ. ನಮ್ಮ ಸ್ವಂತ ಊರು ದಾವಣಗೆರೆ ಕಡೆ. ನಾನು ಹುಟ್ಟಿ ಬೆಳೆದಿದ್ದು ಇಲ್ಲೆ. ನಮ್ಮಪ್ಪ ಮದುವೆ ಆದ ಮೇಲೆ ಇಲ್ಲಿಗೆ ಬಂದ್ರಂತೆ ನಾನು ಮದುವೆ ಆದ ಮೇಲೆ ಊರಲ್ಲೆಇದ್ದೆ. ನಾನು ಪಿಯುಸಿ ಓದುವಾಗಲೇ ಮದುವೆ ಆಯ್ತು. ನಂಗೆ ಮೂರು ಮಕ್ಕಳು ಒಂದು ಗಂಡು ಎರಡು ಹೆಣ್ಣು ನಾವು ಮೊದಲಿಂದಾನು ಕೂಲಿ ಮಾಡೋರೆ ಆಸ್ತಿ ಇಲ್ಲ. ನನ್ನ ಗಂಡನ ಮನೇನೂ ಅಷ್ಟೇ ಎಲ್ಲರೂ ಕೂಲಿ ಮಾಡಿನೇ ಕೂಲಿಯಾಗೇ ದುಡಿಬೇಕಿತ್ತು. ನಂಗೆ ಇದು ಸಾಕಾಗಿತ್ತು ಬಿಸಿಲಲ್ಲಿ ದುಡಿಯೋದು ಊಟಕ್ಕೆ ಕಷ್ಟ ಪಡೋದು. ಈ ಮೂರು ಮಕ್ಕಳನ್ನು ಸಾಕೋದು ಹೇಗಪ್ಪ ಅನ್ಸಿತ್ತು. ನಾನು ಗಂಡನ್ನ ಒಪ್ಸಿ ಬೆಂಗಳೂರಿಗೆ ಕರಕ್ಕೊಂಡು ಬಂದೆ. ಅವನು ಅಪ್ಪ ಜೊತೆ ಕೆಲಸಕ್ಕೆ ಹೋಗ್ತಿದ್ದ ನಾವು ಮಕ್ಕಳನ್ನ ಊರಲ್ಲೇ ಅತ್ತೆ ಮಾವ ಹತ್ರ ಬಿಟ್ಟಿದ್ವಿ ಇಲ್ಲಿ ನೋಡಿಕೊಳ್ಳಕೆ ಆಗಲ್ಲ ಅಂತ ತಿಂಗಳಿಗೆ ಒಂದು ಸಲ ಹೋಗಿ ಬರ್ತಿದ್ದೆ. ನಾನು ಗಾರ್ಮೆಂಟ್ಸ್‌ಗೆ ಸೇರಿದ್ದೆ. ಒಂದು ವರ್ಷ ಎಲ್ಲಾ ಚೆನ್ನಾಗೆ ಇತ್ತು. ಒಂದಿನ ಒಬ್ಬಳು ಹೊಸಬಳು ಕೆಲಸಕ್ಕೆ ಬಂದ್ಲು. ಅವಳು ಅವಳ ಮೇಕಪ್ಪನ್ನ ನೋಡೋಕೆ ಸಾಕಾಗ್ತಿರಲಿಲ್ಲ. ಆದ್ರೆ ಎಲ್ಲಾರನ್ನೂ ಚೆನ್ನಾಗೆ ಮಾತಾಡಿಸ್ತಾ ಇದ್ಲು. ನಂಗೂ ಆ ಮೇಲೆ ಪರಿಚಯ ಆದ್ಲು. ನನ್ನ ಕಷ್ಟ ಕೇಳಿ ಮರುಗುತ್ತಿದ್ಲು. ಆಗಾಗ ದುಡ್ಡಿನ ಸಹಾಯ ಮಾಡೋಳು. ನನ್ನ ಕಷ್ಟ ನೋಡಿ ಒಂದು ಐಡಿಯಾ ಕೊಡ್ತೀನಿ. ನಿನಗೆ ಸಹಾಯ ಆಗುತ್ತೆ. ಮಾಡ್ತೀಯಾ ಅಂದ್ಲು. ನಾನು ಒಪ್ಪದೆ. ನಂಜೊತೆ ಎರಡು ದಿನ ಬಾ ಸಾಕು ದುಡ್ಡು ಸಿಗುತ್ತೆ ಅಂದ್ಲು. ಸರಿ ಅಂದೆ. ಅವತ್ತು ಭಾನುವಾರ ರಜಾ ದಿನ ಅಂತ ಅವಳ ಜೊತೆ ಹೋದೆ. ಮೆಜೆಸ್ಟಿಕ್‌ನಲ್ಲಿ ಬಸ್ ಇಳಿದೆ. ಯಾರೋ ಒಬ್ಬ ಹೆಂಗ್ಸು ಮತ್ತೆ ಒಬ್ಬ ಗಂಡ್ಸು ಬಂದ್ರು ಇವಳತ್ರ ಮಾತಾಡಿದ್ರು ಆ ಮೇಲೆ ನಮ್ಮನ್ನ ಯಾವುದೋ ಹೋಟೆಲ್‌ಗೆ ಕರ್ಕಂಡು ಹೋದ್ರು, ತಿಂಡಿ ಕೊಡ್ಸಿದ್ರು, ಆ ಮೇಲೆ ಚಿಕ್ಕಪೇಟೆ ಒಳಗೆ ಗಲ್ಲಿಗಲ್ಲಿ ತಿರುಗಿ ಒಂದು ಸಂದಿನಲ್ಲಿದ್ದ ಮನೆಗೆ ಹೋದ್ವಿ, ಅಲ್ಲಿ ಇವಳಂಗೆ ಮೇಕಪ್ ಹುಡುಗೀರು ಆಂಟೀರು ಇದ್ರು ಯಾಕೋ ಜಾಗ ಸರಿ ಇಲ್ಲ ಅನ್ಸುತು. ವಾಪಸ್ ಹೋಗೋಣ ಅಂದೆ ಆದ್ರೆ ಅವಳು ನನ್ನ ಕೈ ಹಿಡಿದು ಎಳಕಂಡು ಹೋಗಿ ರೂಂನಲ್ಲಿ ತಳ್ಳಿ ಬಾಗಿಲು ಹಾಕಿದ್ಲು. ನನ್ನ ಕೈ ಹಿಡಿದುಕೊಂಡು ನನಗೆ ಸಮಾಧಾನ ಮಾಡ್ತ ಅದು ಮೈ ಮಾರಿ ದುಡ್ಡು ಸಂಪಾದನೆ ಮಾಡೋ ಜಾಗ ಅಂದ್ಲು. ನಂಗೆ ಬೆಂಕೀಲಿ ಬಿದ್ದಂಗೆ ಆಯ್ತು.

ಆಮೇಲೆ ಅವಳು ನಿಂಗೆ ಮಕ್ಕಳು ಆಗಿದ್ದಾವೆ ಅಲ್ವಾ ನೀನು ಯಾರ ಜೊತೆ ಮಲಗಿದ್ರು ಏನು ಆಗಲ್ಲ. ಮಕ್ಕಳು ಆಗಲ್ಲ ನಿಂಗೆ ಭಯ ಬೇಡ ದುಡ್ಡು ಸಿಕ್ಕಿ ನೀನು ಜೀವನ ಚೆನ್ನಾಗಿ ಮಾಡ್ತೀಯಾ ಅಂತ ಹೇಳಿದ್ಲು ನಂಗೆ ವಾಂತಿ ಬರೋಹಾಗೆ ಆಗ್ತಿತ್ತು.ಕಣ್ಣು ಮುಚ್ಚಿ ಸುಮ್ನೆ ಕೂತಿದ್ದೆ. ಅವಳು ಎದ್ದು ಹೋಗಿ ಟಿ ತಂದ್ಲು ಬೇಡ ಅಂದೆ. ಆ ಮೇಲೆ ನಿಧಾನಕ್ಕೆ ನನ್ನ ಒಪ್ಪಿಸೋ ಪ್ರಯತ್ನ ಮಾಡಿದ್ಲು ನಾನು ಒಪ್ಪಲೇಇಲ್ಲ. ಸರಿ ಅಂತ ನನ್ನ ನಮ್ಮನೆಗೆ ವಾಪಸ್ಸು ತಂದು ಬಿಟ್ಟು ಹೋದ್ಲು. ಆದರೆ ಅಲ್ಲಿಂದ ನನ್ನ ಗ್ರಹಚಾರಾನೆ ಕೆಟ್ಟಿತ್ತು. ದಿನಾ ನನ್ನ ಹಿಂದೆ ಒಬ್ಬ ಓಡಾಡೋಕೆ ಶುರು ಮಾಡಿದ. ೧೦ ದಿನ ಹಿಂಗೆ ಆಯಿತು ಭಯ ಆಗಿ ಅವಳಿಗೆ ಹೇಳಿದೆ ಅದಕ್ಕೆ ಅವಳು ನಿನ್ನ ನೋಡಿ ಮೆಚ್ಚುಗೆ ಆಗಿದೆ ಅವನಿಗೆ ನಿನ್ನ ಯಾವುದೇ ಕಾರಣಕ್ಕೂ ಬಿಡಲ್ಲ ಅವನು ನೀನು ಒಪ್ಪಿಲ್ಲ ಅಂದ್ರೆ ನೀನು ಎಲ್ಲಿಗೆ ಹೋಗಿದ್ದೆ ಅಂತ ನಿನ್ನ ಗಂಡನ ಹತ್ರ ಹೇಳ್ತೀನಿ ಅಂದ್ಲು ಏನೇನೋ ಹೇಳಿ ಹೆದರಿಸಿದ್ಲು. ನಂಗೆ ದಿಕ್ಕೆ ತೋಚದೆ. ಆ ಕೆಲಸಕ್ಕೆ ಒಪ್ಪಿಕೊಂಡೆ. ಇವಾಗಲೂ ನನ್ನ ಗಂಡ ಅಪ್ಪ ಅಮ್ಮಂಗೆ ಈ ಕೆಲಸ ಮಾಡ್ತಾ ಇದ್ದೀನಿ ಅಂತ ಗೊತ್ತಿಲ್ಲ. ನಾನು ಅಲ್ಲಿಗೆ ಹೋಗೋದು ನಿಲ್ಸಿದ್ರೆ ಅವನು ಮನೆಗೆ ಬರ್ತಾನೆ. ನಮ್ಮ ಊರು ಎಲ್ಲಾ ಗೊತ್ತು ಅವನಿಗೆ ಮನೇಲಿ ಗೊತ್ತಾದರೆ ಅಷ್ಟೇ ಸಾಯಿಸ್ತಾರೆ ನನ್ನ ಎಷ್ಟು ದಿನ ನಡಿಯುತ್ತೋ ಗೊತ್ತಿಲ್ಲ. ಆದರೆ ದಿನಾ ದಿನಾ ಸತ್ತು ಸತ್ತು ಬದುಕಿದ್ದೀನಿ. ದುಡ್ಡು ಸಿಗುತ್ತೆ ಆದರೆ ಮನಸ್ಸಿಗೆ ನೆಮ್ಮದಿ ಇಲ್ಲ. ಜೀವನ ಸಾಕಾಗಿದೆ. ಮಕ್ಕಳನ್ನು ಚೆನ್ನಾಗಿ ಓದಿಸಬೇಕು. ಒಳ್ಳೆ ಜೀವನ ಕೊಡಬೇಕು ಅಷ್ಟೇ ನೋಡಕ್ಕ ನನ್ನ ಆಸೆ. ಬದುಕಿರೋದೆ ಅವರಿಗೋಸ್ಕರ".

**ಪ್ರಕರಣ–೫**

ಹೆಸರು : ರುಚಿಕಾ

ವಯಸ್ಸು : ೨೪

ಜಾತಿ : ಬೌದ್ಧ ಧರ್ಮ

ಶಿಕ್ಷಣ : ಬಿ.ಬಿ.ಎಂ

ಸ್ಥಳ : ಬೆಂಗಳೂರು ನಗರ ಜಿಲ್ಲೆ.

**ನಿರೂಪಣೆ:** "ನಂಗೆ ಕನ್ನಡ ಬರುತ್ತೆ ಇಲ್ಲಿಗೆ ಬಂದ ಮೇಲೆ ಕಲ್ತಿದ್ದೀನಿ ತೋಡಾ ತೋಡಾ ಬರುತ್ತೆ. ಹಿಂದಿ ಮಾತಾಡ್ತೀನಿ ಮೇರಾ ನಾಮ್ ರುಚಿಕಾ ಮೊದಲ ನಾಮ್ ಭಾಗ್ಯಶ್ರೀ ಅಂತ. ಇವಾಗ ನಾಮ್ ಬದಲಿ ಆಗಿದೆ. ನಾನು ಸ್ಕೂಲ್‌ಗೆ ಹೋಗುವಾಗಲೇ ನನ್ನ ಶಾದಿ ಮಾಡಿದ್ರು ನಮ್ಮದು ಅಸ್ಸಾಂನಲ್ಲಿ ಒಂದು ಊರು ದುಬರಿನಲ್ಲಿ ಇರ್ತದೆ. ನಾನು ಶಾದಿ ಆದ ಮೇಲೆ ಎರಡು ವರ್ಷಕ್ಕೆ ನನ್ನ ಗಂಡ ಕೇಥ್‌ನಲ್ಲಿ ಸಾಂಪ್ ಕಚ್ಚಿ ಸತ್ತೋದ. ನಾನು ಪಾಪ ಮಾಡಿದೆ ಅನ್ಸುತ್ತೆ. ಆ ಮೇಲು ನಾನು ನಮ್ಮ ಪಿತಾ ಮನೆಗೆ ಹೋಗಲಿಲ್ಲ. ನಮ್ಮ ಗಂಡ ಮನೇಲಿ ಇದ್ದೆ. ಚಿಕ್ಕ ಹುಡುಗಿ ಅಂತ ಎಲ್ಲರೂ ಚೆನ್ನಾಗಿ ನೋಡ್ಕೊಂಡ್ರು ನಮ್ಮ ಗಂಡ ಇದಾರಲ್ಲ. ಅವರ ಅಣ್ಣ ನನ್ನ ಒಂಥರಾ

ನೋಡೋರು. ಯಾರೂ ಇಲ್ಲದಾಗ ನನ್ನ ಜೊತೆ ಸೇರಿಬಿಟ್ಟರು. ಇದು ಆವಾಗಾವಾಗ ಆಗ್ತಾನೆ ಇತ್ತು ನಾನು ಮನೇಲಿ ಹೇಳಿದ್ರೆ ಎಲ್ಲರೂ ನಂಗೆ ಭಕ್ವಾಸ್ ಮಾಡ್ತೀಯಾ ಅಂತ ಬೈದುಬಿಟ್ಟರು. ಒಂದಿನ ನಾನು ... ಮಾಡ್ಕೊಂಡೆ ಆವಾಗ ನಮ್ಮ ಚಾಚಿ ಕೇಳಿದ್ರು ಎಲ್ಲಾ ಹೇಳಿದೆ. ಎರಡುಮೂರು ದಿನಕ್ಕೆ ಭಾವಾಜೀ ನನ್ನ ಹೊರಗೆ ಕರಕ್ಕೊಂಡು ಹೋಗ್ತೀನಿ ಅಂತ ಹೇಳಿ ನನ್ನ ಟ್ರೈನ್‌ನಲ್ಲಿ ಕೂರ್ಸಿಕೊಂಡು ಬಂದ್ರು. ಡೆಲ್ಲಿನಲ್ಲಿ ಇಳಿದು ತಾಜ್ ಮಹಲ್ ತೋರಿಸಿ ಊಟ ಕೊಡ್ಸಿದ್ರು. ನಾನು ನಿನ್ನ ಮತ್ತೆ ಶಾದಿ ಮಾಡಿಕೊಂಡು ಚಎನ್ನಾಗಿ ದೇಖ್‌ಬಾಲ್ ಮಾಡ್ತೀನಿ ಅಂದ್ರು. ಫಿರ್ ಒಂದು ಟ್ರೈನ್ ಹತ್ತಿದ್ವಿ. ನೀನು ಇಲ್ಲೇ ಇರು ತಿಂಡಿ ತರ್ತೀನಿ ಟ್ರೈನ್ ಚಾಲು ಆದ್ರೆ ಗಾಬರಿ ಆಗಬೇಡ ಹಿಂದೆ ಹತ್ತಿ ಬರ್ತೀನಿ ಅಂದ್ರು ಸರಿ ಅಂತ ನಾನು ಚುಪ್ಕೆ ಆದೆ. ಟ್ರೈನ್ ಜೋರಾಗಿ ಹೊಗ್ತಾ ಇತ್ತು. ಕಾಫಿ ಸಮಯ್ ನೋಡಿದೆ ಬರ್ಲಿಲ್ಲಾ ಪೂರಾ ಟ್ರೈನ್ ಹುಡುಕಿದೆ ಭಾವ ಇರ್ಲಿಲ್ಲಾ ಕೈಯಲ್ಲಿ ಟಿಕೆಟ್ ಇತ್ತು ಎಲ್ಲಿವರೆಗೂ ಇದೆ ಅಂತ ನೋಡಿದೆ. ಬೆಂಗಳೂರು ಅಂತ ಇತ್ತು. ನಾನು ಮೋಸ ಹೋಗಿದ್ದು ಗೊತ್ತಾಯ್ತು ಇನ್ನು ಮನೆಗೆ ಹೋದ್ರು ಚಾಚಿ ನನ್ನ ಸಾಯಿಸ್ತಾಳೆ ಅಂತೆ ಸುಮ್ನೆ ಆದೆ. ಪರ್ಸ್‌ಲ್ಲಿ ಸ್ವಲ್ಪ ಪೈಸಾ ಇತ್ತು ದೀದಿ. ಮೂರು ದಿನ ಆದ ಮೇಲೆ ಬೆಂಗಳೂರು ಬಂದೆ. ಟ್ರೈನ್ ಇಂದ ಇಳಿದು ಎಲ್ಲಿಗೆ ಹೋಗ್ಬೇಕು ಗೊತ್ತಾಗದೆ ಸುಮ್ನೆ ಅಲ್ಲೇ ಕೂತೆ. ನಿದ್ದೆ ಬಂದಿತ್ತು ಮಲಗಿದೆ ಎದ್ದು ನೋಡಿದ್ರೆ ಮೇರಾ ಬ್ಯಾಗ್ ಗಾಯಬ್ ಆಗಿತ್ತು. ಭಯ ಆಗಿ ಅಳೂನೆ ಬಂತು. ಅಳ್ತಾ ಇದ್ದೆ. ಹಸಿವಾಗಿತ್ತು. ಹೊಟ್ಟೇಲಿ ಮಗು ಇತ್ತು ಎಂಥಾ ನಸೀಬ್ ಮೇರಾ ಅಂತ ಅಳ್ತಾ ಇದ್ದೆ. ಯಾರೋ ಒಬ್ಬ ಬಂದು ನನ್ನಪಕ್ಕ ಕೂತ. ದುಡ್ಡು ತೋರಿಸಿದ ಬೇಕು ಅಂದೆ ಅರ್ಧಗಂಟೆ ನನ್ನ ಜೊತೆ ಬಾ ಅಂದ ಹೋದೆ ಏನು ಕಾಮ್ ಮಾಡಬೇಕು ಅಂದೆ ಅದಕ್ಕೆ ಅವನು ಬಟ್ಟೆ ಬಿಚ್ಚು ಸಾಕು ಏನೂ ಬೇಡ ಅಂದ ಹಸಿವು ತಡೆಯೋಕೆ ಆಗದೆ ನಾನು ಎಲ್ಲಾ ಬಿಚ್ಚಿದೆ. ಅಷ್ಟೆ ಅವನು ಮತ್ತೆ ಬಟ್ಟೆ ಹಾಕೋ ಅಂದ ಮೇರೆ ಹಾಥ್ ಮೆ ೨೦೦ ರೂಪಾಯಿ ಇಟ್ಟ. ಖುಷಿ ಆಗಿ ಹೋಟೆಲ್‌ಗೆ ಹೋಗಿ ಊಟ ಮಾಡಿದೆ. ಅವನು ಬಂದ ನಿಂಗೆ ದುಡ್ಡು ಬೇಕಂದ್ರೆ ನಾನು ಕೆಲಸ ಕೊಡಸ್ತೀನಿ ಬಾ ಅಂದ ನಾನು ಹೋದೆ. ನಿಂಗೆ ಅಲ್ಲಿ ಕೆಲಸ ಹೇಳಿ ಕೊಡ್ತಾರೆ ಹಾಗೆ ಮಾಡು ಅಂದ. ಅದು ಯಾವ್ದೊ ಗೋಡಾನ್ ಇತ್ತು ಅದರ ಹಿಂದೆ ಹೋದ್ವಿ ಅಲ್ಲಿ ಚಿಕ್ಕ ಮನೆ ಇತ್ತು ಅಲ್ಲಿ ಇಬ್ಬರು ಹೆಂಗಸರು. ಮತ್ತೆ ೪ ಗಂಡಸರು ಇದ್ರು. ನನ್ನ ನೋಡಿ ಮಾತಾಡಿಸಿ ನೀರು ಚಾಯ್ ಕೊಟ್ರು ಆ ಮೇಲೆ ನನ್ನ ವಯಸ್ಸು ಕೇಳಿದ್ರು. ನಾನು ಗೋರಾ ಇದ್ದೆ. ದಪ್ಪ ಇದ್ದೆ. ಅದಕ್ಕೆ ಅವರು ಅಲ್ಲಿಂದ ನನ್ನ ಯಾವುದೋ ದೊಡ್ಡ ಎರಿಯಾದಲ್ಲಿ ಒಂದು ಮನೆಗೆ ತಂದು ಬಿಟ್ರು ನಾನು ಪೇಟ್‌ಮೆ ಇದ್ದೀನಿ ಅಂತ ಹೇಳೋದು ಮರ್‍ತೋಗಿತ್ತು. ಎರಡು ದಿನ ಅಲ್ಲಿ ಚೆನ್ನಾಗಿ ದೇಖ್‌ಬಾಲ್ ಮಾಡಿದ್ರು. ಒಂದಿನ ಚೆನ್ನಾಗಿ ಸಜಾವತ್ ಮಾಡಿ ರೂಂನಲ್ಲಿ ಬಿಟ್ರು ಅಲ್ಲಿಗೆ ಒಬ್ಬ ಪೈಲ್ವಾನ್ ತರಕ್ಕೆ ಇದ್ದವ ಬಂದ ನನ್ನ ಬಹುತ್ ಬುರಾ ತಿರಸ್‌ಸೆ ಯೂಸ್ ಕಿಯಾ ಇದೇ ತರ ನಾಲ್ಕು ದಿನ ಆಯ್ತು ನನಗೆ ಹೊಟ್ಟೆ ನೋವು ಜಾಸ್ತಿ ಆಗಿ ಮಗು ಹೋಗ್ಬಿಡ್ತು ನಾಲ್ಕು ದಿನ ಆಸ್ಪಿಟಲ್‌ನಲ್ಲಿ ಇದ್ದೆ. ಆವಾಗಲೂ ಚೆನ್ನಾಗಿ ದೇಖ್‌ಬಾಲ್ ಮಾಡಿದ್ರು. ೧೫

ದಿನ ರೆಸ್ಟ್ ಮಾಡ್ಸಿ ಮತ್ತೆ ಇದೇ ದಂದೆಗೆ ಚಾಲು ಮಾಡ್ಸಿದ್ರು. ನೋಡು ದೀದಿ ನನ್ನವರೆ ನಂಗೆ ದೋಖಾ ಮಾಡಿದ್ರು ಅದಕ್ಕೆ ಇಲ್ಲಿ ಇದ್ದೀನಿ. ೮ ಹಜಾರ್ ಕೊಡ್ತಾರೆ ಸಾಕು ನಂಗೆ ಸಾಯೋವರೆಗೂ ಇಲ್ಲೇ ಇರ್ತೀನಿ".

**ಪ್ರಕರಣ–೬**

ಹೆಸರು : ಲಾವಣ್ಯ

ವಯಸ್ಸು : ೨೯

ಜಾತಿ : ಒಕ್ಕಲಿಗ

ಶಿಕ್ಷಣ : ಪದವಿ

ಸ್ಥಳ : ಸಿಂಗಸಂದ್ರ, ಬೆಂಗಳೂರು ನಗರ ಜಿಲ್ಲೆ.

**ನಿರೂಪಣೆ:** "ಲಾವಣ್ಯ ಅಂತ, ಇದು ನನ್ನ ನಿಜವಾದ ಹೆಸರು ನಾನು ಟೂರಿಸಂನಲ್ಲಿ ಪದವಿ ಮಾಡಿದ್ದೀನಿ ಅದರಿಂದಾನೆ ವಿದೇಶಕ್ಕೂ ಹೋಗಿ ಬಂದಿದ್ದೀನಿ. ಟ್ರಾವೆಲ್ಸ್‌ನಲ್ಲಿ ಕೆಲಸ ಮಾಡ್ತಾ ಇದ್ದೆ. ನಂಗೂ ಟೂರ್ ಹೋಗೋ ಅವಕಾಶ ಸಿಗ್ತು ಮಲೇಶಿಯಾಗೆ ನಮ್ಮ ಟೀಂ ಜೊತೆ ಹೋದೆ. ಸಾಮಾನ್ಯ ಆ ದೇಶದಲ್ಲಿ ಸ್ಪಾಗಳು ಜಾಸ್ತಿ ಹೆಸರು ಮಾಡಿವೆ. ನಾವು ಒಂದು ಸ್ಪಾಗೆ ಹೋಗಿದ್ವಿ ನಮ್ಮ ಸಾಮಾನ್‌ಗಳನ್ನು ಇಡೋಕೆ ಒಂದು ಲಾಕರ್ ಕೊಟ್ಟಿದ್ರು ನಾನು ಅದರಲ್ಲಿ ಎಲ್ಲಾ ಇಟ್ಟು ಸ್ಪಾಗೆ ಹೋದೆ ಸರ್ವಿಸ್ ಶುರು ಮಾಡಿದ್ರು ಸುಮಾರು ೩ ಗಂಟೆ ಆದ ಮೇಲೆ ಡ್ರೆಸ್ ಹಾಕೋಳಣ ಅಂತ ಹೋಗಿ ನೋಡ್ತೀನಿ ನನ್ನ ಬ್ಯಾಗ್ ಓಪನ್ ಇತ್ತು. ಸೆಕ್ಯೂರಿಟಿನ ಕರೆದು ಕೇಳಿದೆ ಅಲ್ಲಿ ನಾನೊಬ್ಬಳೆ ಇದ್ದೆ. ಅವಳು ನನ್ನ ನೋಡಿ ಏನಾಯ್ತು ಅಂತ ಕೇಳಿದಳು. ಬ್ಯಾಗನಲ್ಲಿ ಏನು ಕಳೆದು ಹೋಗಿದೆ ಅಂತ ನೋಡಿದೆ. ಪಾಸ್‌ಪೋರ್ಟ್ ವಿಸಾ ಇರಲಿಲ್ಲ. ಅದನ್ನೆ ಹೇಳಿದೆ. ಅವಳು ಬಾ ಅಂತ ಹೇಳಿ ಒಂದು ರೂಂಗೆ ಕರಕ್ಕೊಂಡು ಹೋಗಿ ಕೂರಿಸಿ ಚೀಫ್ ಸೆಕ್ಯೂರಿಟಿ ಬರ್ತಾರೆ ಇರಿ ಅಂದ್ಲು. ಆ ಮೇಲೆ ಒಬ್ಬ ಪುರುಷ ಮತ್ತೆ ಒಬ್ಬಳು ಹೆಂಗಸು ಬಂದ್ರು ನನ್ನ ಮುಂದೆ ಬಂದು ಲ್ಯಾಪ್‌ಟಾಪ್ ಇಟ್ಟು ಆನ್ ಮಾಡಿದ್ರು, ನಂಗೆ ಅದನ್ನ ನೋಡಿ ತುಂಬಾ ಶಾಕ್ ಆಯಿತು. ನಾನು ಸ್ಪಾ ಮಸಾಜ್ ಲೇಡಿನೆ ಮಾಡ್ತಾಳೆ ಅಂತ ಬಟ್ಟೆ ಪೂರ್ತಿ ತೆಗೆದಿದ್ದೆ ನಾನು ಡ್ರೆಸ್ ಚೆಂಜ್ ಮಾಡಿ ಸ್ಪಾ ಮುಗಿಸಿ ಹೊರಗೆ ಬರೋದವರೆಗೂ ಎಲ್ಲಾ ರೆಕಾರ್ಡ್ ಆಗಿತ್ತು. ಜೀವ ಬಾಯಿಗೆ ಬಂದಿತು. ಆವಾಘ ಅವರು ನಾವು ಹೇಳಿದಂತೆ ಕೇಳ್ಬೇಕು ಇಲ್ಲಂದ್ರೆ ಇದನ್ನ ಲೀಕ್ ಮಾಡ್ತೀವಿ ಪಾಸ್ ಪೋರ್ಟ್ ವೀಸಾ ಸುಟ್ಟಾಕ್ತೀವಿ ಅಂತ ಹೆದರಿಸಿದ್ರು ಎಷ್ಟು ಬೇಡಿಕೊಂಡ್ರು ಬಿಡಲಿಲ್ಲ. ಅದು ಲೇಡಿಸ್ ಸ್ಪಾ ಅಂತ ಟೀಂನಲ್ಲಿ ಎಲ್ಲರೂ ಗಂಡಸರೆ ಇದ್ರು ಅಂತ ನಾನೊಬ್ಬಳೆ ಹೋಗಿದ್ದೆ. ನಾನು ಒಂಟಿ ಇದ್ದೀನಿ ಅನ್ನೋದು ಅವರಿಗೆ ಪ್ಲಸ್ ಪಾಯಿಂಟ್ ಆಗಿತ್ತು. ಆ ಮೇಲೆ ನನ್ನ ಅಲ್ಲಿ ಬರೋ ಪ್ರವಾಸಿಗರ ಜೊತೆ ಮಸಾಜ್ ರೂಂನಲ್ಲಿ ಮಲಗೋಕೆ ಹೇಳಿದ್ರು, ಆಗಲ್ಲ ಅಂದೆ ಮತ್ತೆ ಹೆದರಿಕೆ ಮೂಡಿಸಿದ್ರು.

ಸುಮಾರು ಎರಡು ವರ್ಷ ಪಾಸ್‌ಪೋರ್ಟ್ ಸಿಗೋವರೆಗೂ ಅವರು ಹೇಳಿದೆಲ್ಲಾ ಮಾಡಿದೆ. ನಾನು ಬಂದೋರತ್ರ ಹೆಲ್ಪ್ ಕೇಳೋಣ ಅಂದ್ರೆ ಅಲ್ಲಿ ಎಲ್ಲಂದ್ರೆ ಅಲ್ಲಿ ಹಿಡನ್ ಕ್ಯಾಮರಾಗಳು ಇರ್ತಿದ್ವು. ನನ್ನ ಟೀಂ ನನ್ನ ಹುಡುಕಿದಾರೆ ಅಲ್ಲಿ ಕಂಪ್ಲೆಂಟ್ ಸಹ ಕೊಟ್ಟಿದ್ದಾಋಎ. ಒಂದು ವಆರ ಹುಡುಕಿ ಆಮೇಲೆ ವಾಪಸ್ಸು ಇಂಡಿಯಾಗೆ ಬಂದಿದ್ದಾರೆ. ನಮ್ಮ ಮನೇಲಿ ಎಲ್ಲರಿಗೂ ನಾನು ಅಲ್ಲೇ ಕೆಲಸ ಮಾಡ್ತಾ ಇದ್ದೀನಿ ಅಂತ ಹೇಳಿದ್ದಾರೆ. ಹಾಗಾಗಿ ಯಾರಿಗೂ ನಾನು ಕಾಣೆ ಆಗಿದ್ದ ವಿಚಾರ ಗೊತ್ತಿರಲಿಲ್ಲ. ಎರಡು ವರ್ಷದವರೆಗೂ ಅದು ಸೆರೆ ಮನೆನೆ ಆಗಿತ್ತು. ಒಂದಿನ ಅಲ್ಲಿದ್ದ ಒಂದು ಹುಡುಗೀನೆ ನನ್ನ ಪಾಸ್‌ಪೋರ್ಟ್ ತಂದುಕೊಟ್ಲು. ನಾನು ಅಲ್ಲಿದ್ದಾಗ ಟೂರಿಸ್ಟ್ ಜೊತೆ ಹೋಟೆಲ್ಸ್‌ಗೂ ಹೋಗಲೇಬೇಕಿತ್ತು. ಹಾಗೆ ಔಟ್‌ಸೈಡ್ ಬಂದಾಗ ಪಾಸ್‌ಪೋರ್ಟ್ ಇದ್ದಿದ್ದರಿಂದ ತಪ್ಪಿಸಿಕೊಂಡೆ. ಇಂಡಿಯನ್ಸ್‌ನ ಹುಡುಕಿದೆ ಪುಣ್ಯಕ್ಕೆ ಹೈದರಾಬಾದ್ ಫ್ಯಾಮಿಲಿ ಸಿಕ್ತು ಅವರಿಗೆ ಎಲ್ಲಾ ವಿವರಿಸಿ ಹೇಳಿದೆ ಅವರು ನಂಗೆ ದುಡ್ಡುಕೊಟ್ಟು ನನಗೆ ಇಂಡಿಯಾಗೆ ಅವರ ಜೊತೆಗೆ ಕರ್ಕೊಂಡು ಬಂದ್ರು. ಅಪ್ಪನ ಮೊಬೈಲ್ ನಂಬರ್‌ನ ನಾನು ಮರೆತಿರಲಿಲ್ಲ. ಹೈದರಾಬಾದ್ ಫ್ಯಾಮಿಲಿ ಜೊತೆ ಅಲ್ಲಿಂದಾನೆ ಅಪ್ಪನಿಗೆ ಕಾಲ್ ಮಾಡಿ ವಿಷಯ ತಿಳಿಸ ಅವರ ಜೊತೆ ಮಾತಾಡಿಸಿ ನಂಬಿಕೆ ಗಳಿಸಿಕೊಂಡೆ ಆ ಫ್ಯಾಮಿಲಿಗೆ ಎಷ್ಟು ಥ್ಯಾಂಕ್ಯೂ ಹೇಳಿದ್ರೂ ಕಡಿಮೆನೆ ನೋಡಿ. ಈಗಲೂ ನಮ್ಮ ಜೊತೆ ಕಾಂಟ್ಯಾಕ್ಟ್‌ನಲ್ಲಿ ಇದ್ದಾರೆ. ಇದಾಗಿ ನಾಲ್ಕು ವರ್ಷ ಆಯ್ತು. ಆದರೆ ಆ ಕಹಿ ನೆನಪು ಮಾತ್ರ ಮಾಸಿಲ್ಲ. ಟ್ರಾವಲ್ಸ್‌ನಲ್ಲೇ ಕೆಲಸ ಮಾಡ್ತಿದ್ದೀನಿ. ಆದರೆ ಒಂಟಿಯಾಗಿ ಹೋಗೋರಿಗೆ ಎಚ್ಚರಿಕೆ ಕೊಡ್ತಾನೆ ಇರ್ತೀನಿ".

**ಪ್ರಕರಣ–೭**

ಹೆಸರು : ಸುಮ

ವಯಸ್ಸು : ೨೩

ಜಾತಿ : ಪರಿಶಿಷ್ಟ ಜಾತಿ

ಶಿಕ್ಷಣ : ಪಿ.ಯು.ಸಿ

ಸ್ಥಳ : ಎಲೆಕ್ಟ್ರಾನಿಕ್ ಸಿಟಿ, ಬೆಂಗಳೂರು ನಗರ ಜಿಲ್ಲೆ.

**ನಿರೂಪಣೆ:** "ನಾನು ಒಬ್ಬಳೇ ಮಗಳು, ನಮ್ಮದು ಜಯಿಂಟ್ ಫ್ಯಾಮಿಲಿ ನಾನು ನಮ್ಮನೇಲಿ ಮೊದಲ ಮೊಮ್ಮಗಳು ಅಂತ ತುಂಬಾ ಮುದ್ದಾಗಿ ಬೆಳೆಸಿದ್ರು. ಆ ಮುದ್ದಿನಿಂದಾನೆ ನಾನು ಹಾಳಾಗಿದ್ದು ಅನ್ಸುತ್ತೆ. ಎಲ್ಲಾ ಚಿಕ್ಕಪ್ಪ ಚಿಕ್ಕಮ್ಮಂದಿರು ಅಜ್ಜಿ ತಾತ, ಊರವರೆಗೆಲ್ಲ ನಾನು ಅಂದ್ರೆ ಸಖತ್ ಇಷ್ಟ. ನಾನು ಎಲ್ಲರ ಮಗುವಾಗಿ ಬೆಳೆದೆ. ೧೦ನೇ ತರಗತಿ ಹೇಗೋ ಪಾಸ್ ಮಾಡಿದೆ. ಆಮೇಲೆ ಪಿಯುಸಿಗೆ ಸೇರಿಸಿದ್ರು ಎಲ್ಲಾನು ಇಂಗ್ಲೀಷ್ ಮೀಡಿಯಂನಲ್ಲಿ ನಾನು ಓದಿದ್ದು, ಪಿಯುಸಿಗೆ ಹೋಗುವಾಗ ನಮ್ಮ ಕಾಲೇಜು ಮುಂದೆ ೫,೬ ಹುಡುಗರು ಇರೋರು ಹೋಗೋರು ಬರೋರನ್ನ

ರೇಗಿಸೋರು, ನಂಗೂ ರೇಗಿಸಿದ ನನ್ನ ದಿನಾ ಮಾತಾಡೋಕೆ ಟ್ರೈ ಮಾಡ್ತಿದ್ದ ಆಮೇಲೆ ಅವನ ಫ್ರೆಂಡ್ಸ್ ಕೈಲಿ ಚಾಕಲೇಟು ಗಿಫ್ಟ್ ಕೊಟ್ಟು ಕಳಿಸ್ತಾ ಇದ್ದ ನಾನು ನಮ್ಮನೇಲಿ ಇದೆಲ್ಲಾ ಗೊತ್ತಾದರೆ ಬೈಯುತ್ತಾರೆ. ಕಾಲೇಜು ಬಿಡಿಸ್ತಾರೆ ಹಾಗೆಲ್ಲ ಮಾಡ್ಬೇಡ ಅಂದೆ. ಆಮೇಲೆ ಅವನು ಸುಮ್ನೆ ಆದ ಅದಾದ ಮೇಲೆ ಸ್ವಲ್ಪದಿನ ಮಾತಾಡೋದು ಬಿಟ್ಟು ಆಗ ನಂಗೆ ಅವನು ಇಷ್ಟ ಆಗೋಕೆ ಶುರುವಾದ ನಾನೆ ಮಾತಾಡಿಸಿ ಅವನ ಪ್ರೀತಿನ ಒಪ್ಪಿಕೊಂಡಿದೀನಿ ಅಂತ ಹೇಳಿದೆ. ಆ ಮೇಲೆ ನಂದು ಪಿಯುಸಿ ರಿಸಲ್ಟ್ ಬಂತು ನಾನು ಫೇಲ್ ಆಗಿದ್ದೆ ಮನೇಲಿ ಎಲ್ಲಾ ಬೈಯ್ದರು ಬೇಜಾರಾಗಿದ್ದೆ. ಆ ಹುಡುಗನ ಹೆಸರು ಅಭಿಶೇಕ್ ಅಂತ ಯಾರದಾದ್ರೂ ಮೊಬೈಲ್ ಸಿಕಿದ್ರೆ ಅವನಿಗೆ ಕಾಲ್ ಮಾಡಿ ಮಾತಾಡ್ತಾ ಇದ್ದೆ. ಇದೆಲ್ಲಾ ಮನೇಲಿ ಗೊತ್ತಾಗಿ ದೊಡ್ಡ ಜಗಳ ಆಗಿ ನನ್ನ ಮನೇಲಿ ಕೂಡಿ ಹಾಕಿದ್ರು ಎಲ್ಲಾ ಹೊರಗಡೆ ಬಿಡ್ತಾ ಇರಲಿಲ್ಲ. ಬಾತ್ರೂಂಗೆ ಹೋಗೋಕು ಯಾರಾದರೂ ಜೊತೆ ಇರ್ತಿದ್ರು, ನಂಗೆ ಹಾಗೆ ಇರೋಕೆ ಕಷ್ಟ ಆಗಿತ್ತು. ಒಂದು ದಿನ ಅಮ್ಮನ ಪೋನ್ ಇಂದ ಅವನಿಗೆ ಕಾಲ್ ಮಾಡಿದ್ದೆ. ಅವನು ಊರು ಹಿಂದೆ ಇರೋ ನಮ್ಮ ತೋಟದ ಮನೆಹತ್ರ ಬಾ ಸಾಕು ನಾನು ಕರಕೊಂಡು ಹೋಗ್ತೀನಿ ಅಂದ. ನಾನು ನಂಬರ್ ಡಿಲಿಟ್ ಮಾಡಿ ಇರೋ ಬಟ್ಟೇನಲ್ಲೇ ಚಿಕ್ಕಪ್ಪನ ಮಕ್ಕಳ ಜೊತೆ ಹೂ ಕೀಳೋಕೆ ಅಂತ ಅಲ್ಲಿಗೆ ಬಂದೆ. ಮಕ್ಕಳು ಹೂ ಕೀಳ್ತಾ ಇದ್ರು ನಾನು ಸಊಸು ಮಾಡೋಕೆ ಹೋಗ್ತಿನಿ ಇಲ್ಲೆ ಇರಿ ಅಂತ ಹೇಳಿ ರೋಡಿಗೆ ಬಂದೆ ಅವನು ಒಂದು ಕಾರ್ ತಂದ ನಾನು ಅದರಲ್ಲಿ ಹತ್ಕೊಂಡು ಹೋಗಿಬಿಟ್ಟೆ. ನನ್ನ ಅವರ ಆಂಟಿ ಮನೆಗೆ ಕರಕೊಂಡು ಹೋಗಿ ಇಟ್ಟಿದ್ದ. ಅವರದೇ ಬಟ್ಟೆ ಕೊಟ್ರು ಸೀರೆ ಉಟ್ಕೊಂಡೆ ಅಲ್ಲೇ ಇದ್ವಿ ಅವತ್ತು. ಬೆಳಗ್ಗೆ ಎದ್ದು ಇಬ್ರೂ ರೆಡಿ ಆಗಿ ಅದೇ ಕಾರ್‌ನಲ್ಲಿ ಹೊರಟ್ವಿ ದಾರಿ ಮಧ್ಯೆ ಅಭಿ ದುಡ್ಡು ಇಲ್ಲ ಏನ್ಮಾಡೋದು ಅಂದ ನನ್ನ ಕತ್ತಲ್ಲಿ ಚೈನ್ ಇತ್ತು. ಅಪ್ಪಂದು ಅದನ್ನೇ ಕೊಟ್ಟೆ ಅದನ್ನು ಅಡಮಾನ ಇಟ್ಟು ದುಡ್ಡು ತಂದ ವಾಪಸ್ ಬಂದ ಮೇಲೆ ಬಿಡಿಸಿಕೊಡ್ತೀನಿ ಅಂದ. ಸರಿ ನಾವು ಎಲ್ಲಿಗೆ ಹೋಗ್ತಿರೋದು ಅಂದೆ ಹುಬ್ಬಳಿ ಅಥವಾ ಬೆಳಗಾಂ ಅಂದ ಸರಿ ಅಂತ ಸುಮ್ಮನಾದೆ ಆದರೆ ಹರಿಹರದತ್ರ ಕಾರು ರಿಪೇರಿ ಆಯ್ತು ಗ್ಯಾರೇಜ್‌ನಲ್ಲಿ ಇದ್ವಿ, ಆಗ ಒಂದು ಕಾರು ಜೋರಾಗಿ ಬಂದು ನಮುಂದೆ ನಿಲ್ತು ನಂಗೆ ಹೆದರಿಕೆ ಆಯ್ತು ಅದರಲ್ಲಿ ನಮ್ಮ ಚಿಕ್ಕಪ್ಪಂದಿರು ನಮ್ಮ ಊರಿನ ಹುಡುಗರು ಇದ್ರು. ಇಳಿದ ತಕ್ಷಣ ನನ್ನ ಕೆನ್ನೆಗೆ ಚಿಕ್ಕಪ್ಪ ಹೊಡೆದ ಅಭಿನ ಸಿಕ್ಕಾಪಟ್ಟೆ ಹೊಡೆದರು. ಪೋಲೀಸ್ ಬಂತು ಅವನನ್ನು ಎಳಕೊಂಡು ಹೋದ್ರು, ಇದೆಲ್ಲಾ ಆಗಿ ನನ್ನ ಮನೆಗೆ ಕರಕ್ಕೊಂಡು ಬಂದಾಗ ಮಧ್ಯರಾತ್ರಿ ಆಗಿತ್ತು. ಬರುವಾಗ ಯಾರೂ ಏನೂ ಮಾತಾಡ್ಲೇ ಇಲ್ಲ. ಊರು ಮುಂದೇನೆ ಕಾರು ನಿಲ್ಸಿದ್ರು ನಾನು ಇಳೀತಿದ್ದ ಹಾಗೆ ನಮ್ಮ ಸಂಬಂಧಿಕರು ಚಿಕ್ಕಮ್ಮಂದಿರು ಅಮ್ಮ ಅಜ್ಜಿ, ಅತ್ತೆ, ಎಲ್ಲೂ ಓಡಿ ಬಂದರು. ಊರು ಮುಂದೇನೆ ನನ್ನ ತಲೆಗೆ ಎಳ್ಳು ನೀರು ಸಿಗೆಕಾಯಿ ಹಾಕಿ ಬಟ್ಟೆ ಬದಲಾಯಿಸಿ ಅದನ್ನು ಅಲ್ಲೇ ಸುಟ್ಟು ಊರ ಒಳಗೆ ನನ್ನ ಕರಕೊಂಡ್ರು ಆಮೇಲೆ ಚೆನ್ನಾಗಿ ಬೈದು ಒಡೆದ್ರು. ಮೂರು ನಾಲ್ಕು ದಿನ ನರಕ ಅನ್ನಿಸ್ತು ನಮ್ಮ ಅಣ್ಣ ಒಬ್ಬ ನಂಗೆ ಎನೇನಲ್ಲಾ ಆಯ್ತು ಅಂತ ಹೇಳಿದ ನಾನು ಸಿಕ್ಕಿಲ್ಲ

ಅಂದಿದ್ರೆ ಇಷ್ಟೊತ್ತಿಗೆ ಬಾಂಬೆಗೆ ಮಾರಿರ್ತಿದ್ದ ಅವನು ಅಂತಹೇಳಿದ ಅಭಿಗೆ ಈಗಾಗಲೇ ಎರಡು ಮದುವೆ ಆಗಿದೆ. ಈತರ ಚೆನ್ನಾಗಿರೋ ಹುಡುಗಿರನ್ನು ಬಳಸಿ ಅವರನ್ನು ಎಲ್ಲಿಗಾದರೂ ಮರೋದು ಮಾಡ್ತಾನೆ ಅಂತ ಶಾಕಿಂಗ್ ನ್ಯೂಸ್ ಹೇಳಿದ್ರು ಫ್ರೆಂಡ್ಸ್ ಎಷ್ಟು ಹೇಳಿದ್ರು ನಾನು ನಂಬಿರಲಿಲ್ಲ. ನಾನು ನಾಪತ್ತೆ ಆದ ತಕ್ಷಣನೇ ಎಲ್ಲರೂ ನನ್ನ ಹುಡುಕೋ ಪ್ರಯತ್ನ ಮಾಡಿದಾರೆ. ಪೋಲೀಸ್ ಹೆಲ್ಪ್ ತಗೊಂಡಿದ್ದಾರೆ. ನಮ್ಮ ಕಾರು ಎಲ್ಲಿದೆ ಅಂತ ಪ್ರತಿ ನಿಮಿಷದ ಇಂಪರ್ಮೇಷನ್ ಸಿಕ್ಕಿದೆ. ಹೈವೇ ಟ್ಯಾಕ್ಸಿ, ಲಾರಿ ಡ್ರೈವರ್‌ಗಳು ಸಹ ಇದಕ್ಕೆ ಸಹಾಯ ಮಾಡಿದ್ದಾರೆ. ನಮ್ಮ ಊರಿನ ಜನರೇ ೪ ಕಾರರಲ್ಲಿ ನನ್ನ ಹುಡುಕಿರೋದು. ಕೊನೆಗೂ ನನ್ನ ಹುಡುಕೇ ಬಿಟ್ಟರು. ಇಲ್ಲ ಅಂದಿದ್ರೆ ಯಾವ ನರಕದಲ್ಲಿ ಇರ್ತಿದ್ದೆ ನಂಗೆ ಗೊತ್ತಿಲ್ಲ. ಇದೆಲ್ಲಾ ಆಗಿ ಒಂದು ವರ್ಷಕ್ಕೆ ನಮ್ಮ ಅತ್ತೆ ಮಗನ ಜೊತೆಗೆ ಮದುವೆ ಆಯ್ತು. ಅವನಿಗೆ ಎಲ್ಲಾ ಸತ್ಯಗೊತ್ತು ಅವನು ಇದುವರೆಗೂ ಅದರ ಬಗ್ಗೆ ನನ್ನತ್ರ ಒಂದು ಮಾತು ಆಡಿಲ್ಲ. ಆದರೆ ಊರಿನ ಜನ ಸಂಬಂಧಿಕರೆ ಚುಚ್ಚೊ ಹಾಗೆ ಮಾತಾಡ್ತಾರೆ. ಈಗ ನಮಗೆ ಎರಡು ವರ್ಷದ ಮಗಳಿದ್ದಾಳೆ. ನಾನು ನನ್ನ ಫ್ಯಾಮಿಲಿ ಚೆನ್ನಾಗಿ ಇದೀವಿ. ಆ ಲೋಫರ್ ಜೈಲಲ್ಲೆ ಇದ್ದಾನೆ. ಅವನ ಇಬ್ಬರು ಹೆಂಡತೀರು ಅವನು ಬೇಡ ಅಂತ ಬರ್ದುಕೊಟ್ಟಿದ್ದಾರೆ. ಅವನು ಮತ್ತೆ ನನ್ನ ತಂದೆಗೆ ಬರಲ್ಲ ಈಗ ನೋವೆಲ್ಲಾ ಮರೆತು ಚೆನ್ನಾಗಿ ಇದೀನಿ".

**ಪ್ರಕರಣ–೮**

ಹೆಸರು : ಶಾಂತಮ್ಮ

ವಯಸ್ಸು : ೨೮

ಜಾತಿ : ಹೊಲೆಯರು

ಶಿಕ್ಷಣ : ಅನಕ್ಷರಸ್ಥೆ

ಸ್ಥಳ : ಹಾರಗದ್ದೆ, ಬೆಂಗಳೂರು ನಗರ

**ನಿರೂಪಣೆ:** "ನಮ್ಮ ತಂದೆ ತಾಯಿಗೆ ನಾವು ೭ ಜನ ಹೆಣ್ಣುಮಕ್ಕಳು ನಾನೇ ದೊಡ್ಡ ಮಗಳು. ತುಂಬಾ ಬಡತನ ಇತ್ತು. ಒಂದು ಎಕರೆ ಹೊಲ ಮನೆ ಅಷ್ಟೇ ನಮ್ಮ ಆಸ್ತಿ. ಇದರಿಂದ ಕುಟುಂಬದಲ್ಲಿ ಯಾರ ಹೊಟ್ಟೇನು ತುಂಬುತಿರಲಿಲ್ಲ. ಅವರಿವರ ತೋಟದ ಕೆಲಸಕ್ಕೆ ಹೋಗ್ತಿದ್ವಿ ಅಮ್ಮನು ದುಡಿತಿದ್ಲು. ಅಪ್ಪನಿಗೆ ಸರಿಯಾಗಿ ಕಣ್ಣು ಕಾಣಿಸ್ತಾ ಇರಲಿಲ್ಲ. ಹಾಗಾಗಿ ಅವನ ದುಡಿಮೆ ಇರಲಿಲ್ಲ. ಅವರಿವರು ಕೊಟ್ಟ ಬಟ್ಟೆ ಹಾಕ್ಕೋತಿದ್ವಿ. ಕಡಲೆಕಾಯಿ ಆಲೂಗಡ್ಡೆ ಬೆಳೆ ತೆಗೆದ ಮೇಲೆ ಭೂಮೀಲಿ ಆಳದಲ್ಲಿ ಇರ್ತಿದ್ದ ಅವುಗಳನ್ನು ಕೆದಕಿ ತೆಗೆಯೋಕೆ ಮನೆ ಮಕ್ಕಳೆಲ್ಲ ಹೋಗ್ತಾಇದ್ವಿ, ಅಮ್ಮ ಅವರಿವರ ಮನೆ ಕೆಲಸಕ್ಕೆ ಹೋಗ್ತಿದ್ದಳು. ಏನಾದರೂ ತಿನ್ನೋಕೆ ತರ್ತಿದ್ಲು ಸರಿ. ಆಧರೆ ಅದು ಎಷ್ಟು ಜನರ ಹೊಟ್ಟೆ ತುಂಬಿಸೋಕೆ ಸಾಧ್ಯ ಹೇಳಮ್ಮ. ನನ್ನ ತಮ್ಮ ನನ್ನ ಅಪ್ಪ ಗೌಡರ ಮನೆಯಲ್ಲಿ ಜೀತಕ್ಕೆ ಇಟ್ಟಿದ್ದ. ಅಮ್ಮನು ಅಲ್ಲಿ ಕೆಲಸಕ್ಕೆ ಹೋಗಿ ಬರ್ತಿದ್ದಳು. ನಾವು ಹಾರಗದ್ದೆ ಅತ್ರ ಇದ್ವಿ

ನಾನು ಋತುಮತಿ ಆದಾಗ ಜಾಸ್ತಿ ದಿನ ಕಾಯದೆ ನನಗೆ ಮದುವೆ ಮಾಡಿದ್ರು. ಗಂಡನಿಗೂ ನನಗೂ ೨೫ ವರ್ಷದ ಅಂತರ ಏನ್ಮಾಡ್ತಿಯಾ ಮನೇಲಿ ಬಡತನ ಇನ್ನು ಜಾಸ್ತಿ ದಿನ ಮನೇಲಿ ನನ್ನ ಇಟ್ಕೊಂಡ್ರೆ ನನ್ನ ಶೀಲಕ್ಕೆ ಅಪಾಯ. ನನ್ನಿಂದೆ ಇರೋ ತಂಗೇರಿಗೆ ಬೇರೆ ಜೀವ್ನ ನೋಡ್ಬೇಕಲ್ಲ. ಅಂತು ಮದುವೆ ಆಯ್ತು. ಅಲ್ಲಿ ಗಂಡನ ಮನೇಲೂ ಸಹ ಬಡತನ ದುಡಿದರೆ ಮಾತ್ರ ಹೊಟ್ಟೆಗೆ ಅನ್ನ. ನನ್ನ ಗಂಡ ಡ್ರೈವರ್ ಕೆಲಸ ಮಾಡ್ತೋಕೆ ಶುರುಮಾಡಿದ ಆಗ ಮನೆ ಕಡೆ ಸ್ವಲ್ಪ ಚೆನ್ನಾಗಿ ಆಯ್ತು ಮೂರು ವರ್ಷ ಚೆನ್ನಾಗಿ ಇದ್ವಿ. ಆ ಮೇಲೆ ನನ್ನ ಗಂಡ ಒಂದಿನ ಒಂದು ಹುಡುಗಿನ ಮನೆಗೆ ಕರ್ಕೊಂಡು ಬಂದು ಮದುವೆ ಆಗಿದೀನಿ ಅಂದ. ನಾನು ಆ ಹುಡುಗಿ ಬಾಳು ಹಾಳಾಗುತ್ತಲ್ಲ ಅಂತ ಸುಮ್ಮನಾದೆ. ಆದರೆ ನನ್ನ ಸಂಪೂರ್ಣ ಕಡೆಗಣಿಸಿದ. ಒಂದು ದಿನ ಅವಳ ಜೊತೆ ಜೋರು ಜಗಳ ಆಡಿದೆ. ಅಷ್ಟೊತ್ತಿಗಾಗಲೆ ಆಕೆಗೆ ಒಂದು ಮಗೂನು ಆಗಿತ್ತು. ಜಗಳಾಡಿದ್ದೇ ತಡ ಅವಳು ಮಗು ಕರ್ಕೊಂಡು ತವರು ಮನೆಗೆ ಹೋಗ್ಬಿಟ್ಲು. ಸಾಯಂಕಾಲ ನನ್ನ ಗಂಡ ಬಂದ ಅವಳು ಇಲ್ಲ ಅಂತ ಗೊತ್ತಾಗಿ ನನ್ನ ಚೆನ್ನಾಗಿ ಹೊಡೆದುಬಿಟ್ಟ. ಆದರೆ ಅವನು ಅವಳ ಮನೆಗೆ ಹೋದವಾ ವಾಪಸ್ಸು ಬರ್ಲೇ ಇಲ್ಲ. ಆದರೆ ಒಂದಿನ ಅಪ ಮನೆಗೆ ಕರೆಯೋಕೆ ಬಂದ. ಅತ್ತೆ ಮಾವ ಒಂದೆರಡು ದಿನ ಇದ್ದು ಬಾ ಅಂತ ಕಳಿಸಿದ್ರು. ವರ್ಷ ಕಳೆದರೂ ಯಾರೂ ಕರೆಯೋಕೆ ಬರ್ಲೇ ಇಲ್ಲ. ಆದರೆ ಕೂಲಿ ಕೆಲಸಕ್ಕೆ ಹೋಗಿ ಬರ್ತಿದ್ದೆ. ರಾತ್ರಿ ಮನೆ ಮುಂದೆ ಬರೋದು ಕಲ್ಲು ಎಸೆಯೋದು. ಶಿಳ್ಳೆ ಹೊಡೆಯೋದು ಮಾಡಿ ಹೆದರಿಕೆ ಹುಟ್ಟಿಸೋರು ಅವರಿಗೆ ನನ್ನ ದೇಹ ಬೇಕಿತ್ತು. ಅದ್ಕೆ ಹಾಗೆ ಮಾಡ್ತಿದ್ರು.

ಒಂದು ದಿನ ಹೊಲದ ಕೆಲಸ ಮುಗಿಸಿ ಸ್ವಲ್ಪ ಸೊಪ್ಪು ಕಿತ್ಕೊಂಡು ಬರೋಣ ಅಂತೇಳಿ ತಡ ಆಯ್ತು. ವಾಪಸ್ಸು ಬರುವಾಗ ಅಲ್ಲೊಂದು ನೀಲಗಿರಿ ತೋಪು ದಾಟಿ ಬರಬೇಕು ಹಿಂದೆ ಮುಂದೆ ಯಾರು ಇರಲಿಲ್ಲ. ಬರ್ತಾ ಇದ್ದೆ. ಅಷ್ಟರಲ್ಲಿ ಯಾರೋ ಹಿಂದೆ ಬಂದಂಗಾಯ್ತು ತಿರುಗಿ ನೋಡಿದೆ ಅಷ್ಟೇ. ಹಿಂದೆಯಿಂದ ನನ್ನ ಬಾಯಿಗೆ ಯಾರೋ ಬಟ್ಟೆ ಮುಚ್ಚಿ ಗಟ್ಟಿಯಾಗಿ ಹಿಡಿದರು. ಅದೇ ನೀಲಗಿರಿ ತೋಪಿಗೆ ಹೊತ್ತೊಯ್ದ್ರು ನನ್ನ ಕೈಗಳಿಗೆ ಕಟ್ಟಿ ಹಾಕಿದ್ರು. ಬಾಯಿಗೆ ಬಟ್ಟೆ ತುಂಬಿದ್ರು. ನನ್ನ ಕೆಳಗೆ ಹಾಕಿ ನನ್ನ ವಿವಸ್ತ್ರ ಮಾಡಿದ್ರು. ಅವರು ಒಬ್ಬರು ಇರಲಿಲ್ಲ ನಾಲ್ಕು ಜನ ಇದ್ರು. ನನ್ನ ಹಾಳು ಮಾಡಿದ್ರು. ಈ ಘಟನೆ ಆದ ಮ್ಯಾಲೆ ನಾನು ಸ್ವಲ್ಪ ದಿನ ಕೆಲಸಕ್ಕೆ ಹೋಗ್ಲೆ ಇಲ್ಲ ಇದರ ಬಗ್ಗೆ ಯಾರತ್ರಾನು ಹೇಳಲು ಇಲ್ಲ. ಒಂದಿನ ನಮ್ಮೂರಲ್ಲೇ ಒಬ್ಬಳು ಬೆಂಗಳೂರಿಗೆ ಜಾಸ್ತಿ ಹೋಗಿ ಬರ್ತಾ ಇರ್ತಿದ್ಲು ಏನೋ ಕೆಲಸ ಮಾಡ್ತೀನಿ ಅಂತಿದ್ಲು. ಅವಳು ಒಂದು ಮಾತಾಡಿಸಿದ್ಲು ಒಬ್ಬಳನ್ನೇ ಅವರ ಮನೆಗೆ ಕರ್ಕೊಂಡು ಹೋದ್ಲು. ಅಲ್ಲಿ ನಿನ್ನ ಜೊತೆ ಏನಾಯ್ತು ಅಂತ ನಂಗೆ ಗೊತ್ತಿದೆ. ಅವರು ಯಾರು ಅಂತಾನು ಗೊತ್ತು ಅಂದ್ಲು. ನನಗೆ ದಿಗಿಲಾಯ್ತು. ಹೆದರಬೇಡ ಯಾರ್ಗೂ ಹೇಳಲ್ಲ. ಆದ್ರೆ ನೀನು ನಿನ್ನ ಈ ಕಷ್ಟದಿಂದ ಹೊರಗೆ ಬರಬೇಕು. ಅದ್ಕೆ ನಾನು ಹೇಳಿದಾಗೆ ಕೇಳು ಅಂದ್ಲು. ನಾನು ಸರಿ ಅಂದೆ. ಬೆಂಗಳೂರಿಗೆ ಹೋದೆ. ಅಲ್ಲಿ ಹೋದ ಮೇಲೆ ಗೊತ್ತಾಗಿದ್ದು ಈ ಮೈಮಾರಿಕೊಳ್ಳೋರ

ಜೀವನ ಹೇಗಿರುತ್ತೆ ಅಂತ. ಯೋಚನೆ ಮಾಡಿದೆ ಹೇಗಿದ್ರು ಹಾಳಾಗಿದ್ದೀನಿ. ಗಂಡ ವಾಪಸ್ಸು ಬರೊಲ್ಲ ಇನ್ನು ಮನೆಯವರಿಗೆ ಹೊರೆಯಾಗಿ ಯಾಕೆ ಇರೋದು ಅಂತ ಹೇಳಿ. ಇದಕ್ಕೆ ಒಪ್ಪಿಕೊಂಡೆ. ಆ ಮೇಲೆ ಮನೆಕಡೆ ಚೆನ್ನಾಗಿ ಆಯ್ತು. ಎಲ್ಲರದೂ ಮದುವೆ ಆಯ್ತು ಚೆನ್ನಾಗಿದ್ದಾರೆ. ನಂಗೂ ಒಬ್ಬ ಮಗ ಹುಟ್ಟಿದ. ತಂಗಿ ಮನೆಯಲ್ಲಿ ಬೆಳೆದ ಈಗ ನನ್ನ ಜೊತೆ ಇದ್ದಾನೆ. ನಾನು ಆ ಕೆಲಸ ಬೇಸರ ಹಾಗಿ ಬಿಟ್ಟುಬಿಟ್ಟೆ. ಸಿಕ್ಕ ಹಣದಲ್ಲಿ ಜಮೀನು ತೆಗೆದುಕೊಂಡೆ. ಇಲ್ಲೇ ಊರೊಳಗೆ ಒಂದು ಪ್ರಾವಿಷನ್ ಸ್ಟೋರ್ ತೆಗಿದಿದ್ದೀವಿ. ಅದು ನಡೀತಿದೆ. ಈಗ ಜೀವನ ಚೆನ್ನಾಗಿದೆ. ವಿದ್ಯಾಭ್ಯಾಸ ಇರಲಿಲ್ಲ ಅಂತ ಆ ಕೆಲಸ ಮಾಡಿ ದುಡ್ಡು ಸಂಪಾದಿಸಬೇಕಾಯ್ತು. ಆದ್ರೆ, ಅದರಿಂದ ಸುಖ ಇಲ್ಲ. ಗೌರವ ಇಲ್ಲ. ಕಣ್ತುಂಬ ನಿದ್ರೆ ಇಲ್ಲ. ಈಗ ಒಂದು ಹೊತ್ತು ತಿಂದ್ರೂ ಸಹ ಚೆನ್ನಾಗಿ ನಿದ್ದೆ ಮಾಡ್ತೀನಿ."

**ಪ್ರಕರಣ–೯**

ಹೆಸರು : ಭಾಗ್ಯಮ್ಮ

ವಯಸ್ಸು : ೨೬

ಜಾತಿ : ಹೊಲೆಯ

ಶಿಕ್ಷಣ : ೧೦ನೇ ತರಗತಿ

ಸ್ಥಳ : ಚಿಕ್ಕ ಬೆಟ್ಟಹಳ್ಳಿ, ಬೆಂಗಳೂರು ನಗರ

**ನಿರೂಪಣೆ:** "ನಾನು ಹತ್ತನೇ ಕ್ಲಾಸ್ ಫೇಲ್ ಅಕ್ಕ. ನ"ಆನು ಒಬ್ಬಳೇ ಮಗಳು ನೋಡೋಕು ಬೆಳ್ಳಗೆ ಇದ್ದೀನಿ ಅಲ್ವಾ ಚೆನ್ನಾಗಿ ಕಾಣ್ತೀಸಿ ಅಂತ ನನ್ನ ಹಿಂದೆ ತುಂಬಾ ಜನ ಹುಡುಗರು ಬರೋರು ಇದು ನಮ್ಮನೇಲಿ ತುಂಬಾ ತೊಂದರೆ ಆಯ್ತು. ಅದಕ್ಕೆ ನಮ್ಮ ಮನೇಲಿ ಕೂಡಿ ಹಾಕ್ತಿದ್ರು ನಂಗೆ ಹುಡುಗರನ್ನು ನೋಡಿದ್ರೆ ಸಿಟ್ಟೇ ಬರ್ತಿತ್ತು ಆದ್ರು ನನ್ನ ಸಲುವಾಗಿ ಅಪ್ಪ ಹಿಂಗೆ ಮಾಡ್ತಾನೆ ಅಂತ ಸುಮ್ನೆ ಮನೇಲಿ ಇರ್ತಿದ್ದೆ. ಅಮ್ಮ ಗಾರ್ಮೆಂಟ್ಸ್‌ಗೆ ಹೋಗ್ತಾ ಇದ್ಲು. ಅಪ್ಪ ಅಂಗಡಿ ಕೆಲಸಕ್ಕೆ ಹೋಗ್ತಿದ್ರು. ಒಂದು ದಿನ ಯಾರೋ ಬಾಗಿಲು ತಟ್ಟಿದ್ರು. ಕಿಟಕಿಲಿ ನೋಡಿದೆ ಯಾಔಉದೋ ಹೆಂಗ್ಸು ಇದ್ರು. ಸರಿ ಅಂತ ಬಾಗಿಲು ತೆಗೆದೆ ಮಧ್ಯಾಹ್ನ ಬೇರೆ ಇನ್ನೇನು ಅಪ್ಪ ಊಟಕ್ಕೆ ಬರೋ ಟೈಮು ಅಂತ ಧೈರ್ಯ ಇತ್ತು. ಆ ಹೆಂಗಸು ಏನೋ ಒಡವೆಗಳು ತಂದಿದ್ದೀನಿ ಕಡಿಮೆ ಬೆಲೆ ಒಂದು ಸಲ ನೋಡು ಅಂತು ಸರಿ ಅಂತ ಬಾಗಿಲಲ್ಲೇ ಕೂತು ನೋಡಿದೆ. ಯಾವುದೋ ಪೌಡರ್ ಕೊಟ್ಟು ಮೂಸಿ ನೋಡು ಅಂತು. ನಾನು ಹಾಗೆ ಮಾಡಿದೆ ತಲೆಸುತ್ತು ಬರೋದಾ ಮಂಪರು ಆಯ್ತು ಸ್ವಲ್ಪ ಎಚ್ಚರ ಇತ್ತು ಎಲ್ಲನ್ನು ಗೊತ್ತಾಗ್ತಾ ಇತ್ತು. ಆ ಮೇಲೆ ನನ್ನ ಮಾರೋ ಎತ್ತಿಕೊಂಡು ಒಡಾಡೋ ಹಾಗೆ ಅನ್ನಿಸ್ತು. ಎಲ್ಲೋ ಕರಲ್ಲಿ ಹೋಗೋ ತರ ಅನ್ನಿಸಿತು. ಆ ಮೇಲೆ ಯಾವಾಗ ನಿದ್ದೆ ಮಾಡಿದ್ನೊ ಗೊತ್ತಿಲ್ಲ. ನಂಗೆ ಎಚ್ಚರ ಆದಾಗ ಯಾವುದೋ ಬೇರೆ ಮನೇಲಿ ಮಲಗಿದ್ದೆ. ಅದು ಆ

ಮೇಲೆ ಗೊತ್ತಾಯ್ತು ಬೆಂಗಳೂರೇ ಅಂತ. ನನ್ನ ಆ ಹೆಂಗ್ಸು ಮತ್ತೆ ನಾಲ್ಕೈದು ಜನ ಗಂಡಸರು ಸೇರಿ ನಮ್ಮ ಮನೆಯಿಂದಾನೆ ನನ್ನ ಎತ್ತುಕೊಂಡು ಬಂದಿದ್ರು. ಅವರ ಮುಖಗಳು ನೋಡಿದ ಮೇಲೆ ಗೊತ್ತಾಯಿತು ಅವರೆಲ್ಲಾ ನಮ್ಮೂರಲ್ಲಿ ಆವಾಗವಾಗ ಕಾಣಿಸ್ತಿದ್ರು ಅಂತ. ನನ್ನ ಆ ಮನೆಯವರಿಗೆ ೫೦ ಸಾವಿರಕ್ಕೆ ಮಾರಿ ಹೋದ್ರು. ನಮಗೆ ದಿಕ್ಕೆ ತೋಚಲಿಲ್ಲ. ನಾನು ಚಿಕ್ಕಳು ಆಗಿದ್ದಕ್ಕೆ ನನ್ನ ಎಲ್ಲೂ ಬಿಡ್ತಾ ಇರಲಿಲ್ಲ. ಕೂಡಿ ಹಾಕಿದ್ರು. ನಮ್ಮಪ್ಪ ನನ್ನ ಹುಡುಕಾಟ ನಡೆಸಿದ್ದ ನನ್ನ ತಲುಪೋ ಟೈಮಿಗೆ ನಾನು ಆ ಮನೆಯ ಉಳಿದ ಹೆಣ್ಣುಮಕ್ಕಳಂತೆ ಆಗಿ ಎರಡು ತಿಂಗಳು ಆಗಿತ್ತು. ನನಗೆ ಗರ್ಭ ಬೇರೆ ನಿಂತಿತ್ತು. ಅಪ್ಪ ಯಾರದೋ ಸಹಾಯದ ಮೂಲಕ ಬಂದ ಅವರತ್ರ ಜಗಳ ಮಾಡಿ ನನ್ನ ಕಳಿಸಿ ಅಂತ ಗೋಗರೆದ ಅವರು ಆಗಲ್ಲ ಅಂದಿದಕ್ಕೆ ಪೋಲೀಸ್‌ಗೆ ಹೇಳ್ತೀನಿ ಅಂದ ಆಗ ಅವರು ನನ್ನ ಹೋಗು ಅಂದ್ರು ಆದರೆ ನಾನೇ ಅಪ್ಪ ನಾನು ಹೇಗಿದ್ದರೂ ಕೆಟ್ಟು ಹೋಗಿದ್ದೀನಿ ಮನೆಗೆ ಬಂದು ಏನು ಮಾಡೋದು ನಾನು ಬಂದ್ರೆ ನಿಂಗೆ ಅಮ್ಮಂಗೆ ಹಿಂಸೆ ಆಗುತ್ತೆ. ಬೇಡ ನಾನು ಇಲ್ಲೇ ಇರ್ತೀನಿ ಅಂತ ಹೇಳಿದೆ ಆದರೆ ಅಪ್ಪ ಕೇಳ್ಬೇಕಲ್ಲ ಬಿಡಲಿಲ್ಲ ಕರ್‍ಕೊಂಡು ಬಂದ. ಆಮೇಲೆ ಗೊತ್ತಾಯ್ತು ನಾನು ಬಸಿರು ಅಂತ. ಆಗ ಡಾಕ್ಟರ್ ಹತ್ರ ಹೋದ್ರು ಪ್ರಯೋಜನಾ ಆಗಲಿಲ್ಲ. ಮಗು ಹುಟ್ಟೋದು ಬಿಟ್ಟು ಮತ್ತೇನು ಮಾಡೋ ಹಾಗಿರಲಿಲ್ಲ. ಅದಕ್ಕೆ ನಾನು ನಿರ್ಧಾರ ಮಾಡಿ ಸಾಯಬೇಕು ಅನ್ಕೊಂಡೆ ಆಗಲಿಲ್ಲ. ನಮ್ಮ ಮನೆಗೆ ಆ ಮನೆಯವರು ಬರ್ತಾ ಇದ್ರು ಅದೂ ಇದೂ ಅಂತ ಹೇಳಿ ನನ್ನ ತಲೆ ಕೆಡಿಸೋರು. ಇದು ಅಕ್ಕ ಪಕ್ಕ ಮನೆಯವರಿಗೆ ಅನುಮಾನ ಬರೋಕೆ ಶುರು ಆಯ್ತು. ಮಗು ಆಯ್ತು ಆ ಮಗುನಾ ಡೆಲವರಿ ಆದ ಹಾಸ್ಪಿಟಲ್ ಡಾಕ್ಟರ್ ಗಂಡ ಹೆಂಡತಿಗೆ ಕೊಟ್ಟುಬಿಟ್ಟೆ. ಅದು ಗಂಡು ಮಗು ಇತ್ತು ತುಂಬಾ ಬೆಳ್ಳಗೆ ಚೆನ್ನಾಗಿತ್ತು. ಮನೆಗೆ ಬಂದ ಮೇಲೆ ಮುಂದೇನು ಅಂತ ಯೋಚನೆ ಆಯ್ತು. ಮಾರ್ಕೆಟ್‌ಗೆ ಹೋಗಿದ್ದಾಗ ಮತ್ತೆ ಆ ಹೆಂಗ್ಸು ಸಿಕ್ಕಿದ್ಲು ಬಾ ಅಂದ್ಲು ನಾನು ಬರಲ್ಲಾ ಅಂದೆ. ಆಧರೆ ಮನೆಗೆ ಬರೋ ಟೈಮಲ್ಲಿ ಮತ್ತೆ ನನ್ನ ಕಾರಲ್ಲಿ ಎತ್ತುಕೊಂಡು ಬಂದ್ರು ಆದರೆ ಈ ಸಲ ನನ್ನ ಬೇರೆ ಯಾವುದೋ ಊರಿಗೆ ಕಳಿಸಿದ್ರು. ಆ ಮೇಲೆ ನಮ್ಮಪ್ಪ ಹುಡುಕಾಡಿರ್ತಾನೆ. ಆದರೆ ನಾನು ಇದ್ದಿದೋ ಬೇರೆ ಕಡೆ. ಮೂರು ವರ್ಷ ಅಲ್ಲೇ ಇದ್ದೆ. ಈಗ ಮತ್ತೆ ಬೆಂಗಳೂರಿಗೆ ಬಂದೆ ಅಪ್ಪ ಸಿಕ್ಕಿದ್ದ. ಅಮ್ಮನಿಗೆ ಹುಶಾರಿಲ್ಲ. ನಾನು ಇದೇ ಕೆಲಸ ಮಾಡ್ತೀನಿ ಅಂತಾನು ಗೊತ್ತು. ಆದರೆ ಈಗ ಮನೆಗೆ ಕರೆಯಲ್ಲ. ಪೋನ್ ಮಾಡಿ ಮಾತಾಡ್ತೀನಿ ಅಷ್ಟೆ. ಯಾವಾಗಾದ್ರೂ ಅಪ್ಪ ಸಿಕ್ಕಿದ್ರೆ ದುಡ್ಡು ಕೊಡ್ತೀನಿ. ಅವರಿಗೂ ವಯಸ್ಸಾಯಿತು ಆದ್ರೂ ಮಗಳಾಗಿ ನಾನು ನೋಡ್ಕೊಬೇಕು ತಾನೆ. ನನ್ನ ಹಣೆಬರ ಹೀಗೆ ಅಂತ ಆ ದೇವರು ಬರೆದ ಮೇಲೆ ನಾನು ತಾನೇ ಏನು ಮಾಡ್ಲಿ ಹೇಳಿ. ಇದರಿಂದ ರೋಗ ಬರುತ್ತೆ ಅಂತ ಗೊತ್ತು. ಆದರೆ ನಾನು ಎಚ್ಚರವಾಗಿ ಇರ್ತೀನಿ.

## ೭.೩ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಕರಣಗಳು

**ಪ್ರಕರಣ–೧**

ಹೆಸರು : ಆಯೇಷಾ

ವಯಸ್ಸು : ೨೪

ಜಾತಿ : ಮುಸ್ಲಿಂ

ಶಿಕ್ಷಣ : ಅನಕ್ಷರಸ್ಥೆ

ಸ್ಥಳ : ನೆಲಮಂಗಲ, ಬೆಂಗಳೂರು ಗ್ರಾಮಾಂತರ

**ನಿರೂಪಣೆ:** "ಚಿಕ್ಕ ವಯಸ್ಸಿಗೆ ಅಂದ್ರೆ ೧೯ ವಯಸ್ಸಿಗೆ ಗಂಡ ಸತ್ತೋದ ಎರಡು ಮಕ್ಕಳು ತವರು ಮನೆಯವರು ತಿರುಗಿನೋಡಲಿಲ್ಲ. ಗಂಡನ ಮನೆಯವರು ಜವಾಬ್ದಾರಿನೇ ಬೇಡ ಅಂತ ಗಮನ ಕೊಡ್ಲೇ ಇಲ್ಲ. ಎಷ್ಟು ದಿನ ಅಂತ ಉಪವಾಸ ಕುರೋನು ಯಾರೂ ಸಹಾಯಕ್ಕೆ ಬರಲಿಲ್ಲ. ಮಕ್ಕಳನ್ನು ಪುಸ್ತಕ ಇಲ್ಲ ಅಂತ ಟೈಮಲ್ಲಿ ಇಲ್ಲ ಅಂತ ಇಸ್ಕೂಲ್‌ನಿಂದ ಆಚೆ ಹಾಕಿದ್ರು ಅಂತ ಟೈಮಲ್ಲಿ ನನ್ನನ್ನು ಚಿಕ್ಕವಳಿದ್ದಾಗ ಬೆಳೆಸಿದ್ದ ಪಕ್ಕದ ಮನೆಯ ಹೆಂಗಸು ಬಟ್ಟೆ ಅಂಗಡಿಯಲ್ಲಿ ಕೆಲಸ ಕೊಡಿಸುತ್ತೇನೆ ಅಂತ ಹೇಳಿದ್ದು ನಾನೂ ಹೂ ಅಂದೆ ಮಕ್ಕಳನ್ನು ತಾಯಿ ಮನೇಲಿ ಬಿಟ್ಟು ಬಾ ಅಂದ್ಲು, ಆ ಮೇಲೆ ಕೆಲಸ ದೂರದಲ್ಲಿ ಆಯ್ತೆ ನೀನು ಹೋಗೋಕೆ ಬರೋಕೆ ಆಗಲ್ಲ ಅದ್ಕೆ ಅಲ್ಲೇ ಇರುವಂತೆ ಬಟ್ಟೆ ಬರೆ ತಗೋ ಅಂದ್ಲು ತಂಗೊಂಡೆ ಅವಳ ಜೊತೆ ಹೋದೆ. ಆದ್ರೆ ನಾನು ಹೋಗಿದ್ದು ಚಿಕ್ಕಪೇಟೆಯಲ್ಲಿರೋ ಬಟ್ಟೆ ಗೋಡೋನ್‌ಗೆ ಅಲ್ಲಿ ತುಂಬಾ ಜನ ಹೆಣ್ಮಕ್ಳು ಇದು ಎರಡು ದಿನ ಅವರ ಜೊತೆ ಕೆಲಸ ಮಾಡಿದೆ. ಆ ಮೇಲೆ ಒಬ್ಬ ಗಂಡಸು ಬಂದು ಅಲ್ಲಿ ಸರ್ ಕರಿತಿದ್ದಾರೆ. ಹೋಗು ಅಂದ ನಾನು ಹೋದೆ ಅಲ್ಲಿ ಇಬ್ಬರು ನನ್ನಂತೋರೆ ಇದ್ರು ಧೈರ್ಯವಾಗಿ ಇದ್ದೆ ಆದರೆ ಆ ರೂಂನಲ್ಲಿ ನನ್ನ ಬಿಟ್ಟು ಆ ಇಬ್ರು ಹೆಂಗಸ್ಸು ಆಚೆ ಹೋದ್ರು ಆ ಸರ್ ನನ್ನ ಬಗ್ಗೆ ವಿಚಾರಿಸಿದ್ರು ಆ ಮೇಲೆ ನನ್ನತ್ರ ನೀನು ಚೆನ್ನಾಗಿ ನಡೆದುಕೊಂಡ್ರೆ ನಿನ್ನ ಮಾನ ಹಣ ಬಟ್ಟೆ ಎಲ್ಲಾ ನೋಡ್ಕೋತೀನಿ ಅಂದ ನನಗೆ ಹೆದರಿಕೆ ಆಯ್ತು. ಆದರೆ ಆತ ಹತ್ರ ಬಂದು ನನ್ನ ಮೈ ಮುಟ್ಟಿದ ನಾನು ಬೇಡ ಅಂದ್ರು ನನ್ನ ಬಲವಂತ ಮಾಡಿಬಿಟ್ಟು ಆ ಮೇಲೆ ದುಡ್ಡು ಕೊಟ್ರು ನೀನು ಇನ್ನು ಯಾವತ್ತು ನಿನ್ನ ಊರಿಗೆ ಹೋಗೋಕೆ ಆಗಲ್ಲ. ಇಲ್ಲೇ ಇರಬೇಕು ನಾನು ಹೇಳಿದಾಗಷ್ಟೆ ನೀನು ಹೋಗಬೇಕು. ಬೋರು ಮಾಡೋದು ಹಠಮಾಡೋದು ಮಾಡಿದ್ರೆ ಜೀವಂತವಾಗಿ ಇರೋದಿಲ್ಲ ಅಂದ ಅವತ್ತೇ ನಾನು ಸತ್ತೋದಾಗೆ ಆಯ್ತು ಮತ್ತೆ ಮಕ್ಕಳ ಮುಖ ನೋಡ್ಬೇಕಂತ್ತಲ್ಲ ಬಾಯಿ ಮುಟ್ಕೊಂಡು ಸುಮ್ಮನಾದೆ ನನಗೆ ಕೆಲಸ ಕೊಡಿಸಿದ ಹೆಂಗಸು ನನ್ನ ಬೆಳೆಸಿದಾಕೆ ನಾನು ಅವಳ ಮುಂದೆ ಬೆಳೆದ ಮಗು. ಅವಳು ನನ್ನ ಕಷ್ಟಕ್ಕೆ ಆಗ್ತಾಳೆ ಅಂದ್ರೆ. ನಂಬದೇ ಇರೋಕಾಗ್ತಿತ್ತು ನಂಬಿದೆ. ಇವತ್ತು ಹೆಚ್.ಐ.ವಿ ಬಂದು ಹಾಳಾದೆ ಕುಟುಂಬದವರು ಯಾರೂ ನನಗೆ ಹೆಚ್.ಡಿ.ಪಿ ಮಾಡ್ತಿಲ್ಲ.

ಸಾಕಾಗಿದೆ. ಈ ಜೀವನ ಬೇರೆ ಕೆಲ್ಸ ಮಾಡೋಕೆ ನಾನು ಓದಿಲ್ಲ ಎನ್ಮಾಡ್ಲಿ ಹೇಳಿ ಈ ಕೆಲಸ ಬಿಟ್ಬೋಗ್ಬೇಕು ಅಂತ ತುಂಬಾ ಅನ್ಸುತ್ತೆ ಆದರೆ ಆಗ್ತಿಲ್ಲ ಜೀವನಕ್ಕೆ ದುಡ್ಡು ಬೇಕಲ್ಲ. ನನ್ನ ಕಥೆ ಕೇಳಿ ನೀವು ತರಿಸಿ ಏನ್ಮಾಡ್ತೀರಾ ಬಿಡಿ ನೀವು ನಮ್ಮೂರ್‍ರೆ ಅಲ್ವ ಪ್ಲೀಸ್ ಯಾರಲ್ಲಿ ನನ್ನ ಬಗ್ಗೆ ಹೇಳೋಕೆ ಹೋಗ್ಬೇಡಿ ನಾನು ಸತ್ತಿದೇನೆ ಅನ್ಕೊಂಡಿದ್ದಾರೆ. ಅದು ಹಾಗೇ ಇರಲಿ ಆಯ್ತು ಅಂತ ನೊಂದು ನುಡಿದಳು.

**ಪ್ರಕರಣ–೨**

ಹೆಸರು : ಸಂಗೀತ

ವಯಸ್ಸು : ೨೩

ಜಾತಿ : ಕುರುಬ

ಶಿಕ್ಷಣ : ಅನಕ್ಷರಸ್ಥೆ

ಸ್ಥಳ : ಹೊಸಕೋಟೆ, ಬೆಂಗಳೂರು ಗ್ರಾಮಾಂತರ

ಸಂಗೀತ ೨೩ವರ್ಷದ ಅನಕ್ಷರಸ್ಥ ಮಹಿಳೆ ತನ್ನ ೧೨–೧೩ನೇ ವಯಸ್ಸಿನಲ್ಲಿಯೇ ಮುಂಬಯಿಯ ವೇಶ್ಯಾಗೃಹಕ್ಕೆ ಸಾಗಣೆಗೊಂಡು ೧೦ವರ್ಷ ಅಲ್ಲಿ ಕಳೆದು ತನ್ನ ೨೩ನೇ ವಯಸ್ಸಿನಲ್ಲಿ ತನ್ನ ಊರಿಗೆ ವಾಪಾಸ್ಸಾಗಿದ್ದಾಳೆ. ಅನಕ್ಷರಸ್ಥಳಾದರೂ ಸಹ ಇವಳಿಗೆ ಉತ್ತಮವಾದ ವ್ಯವಹಾರ ಜ್ಞಾನವಿದೆ. ಮಾತನಾಡುವ ಕೌಶಲ್ಯವಿದೆ. ಅದಕ್ಕಾಗಿ ಸಂಸ್ಥೆಯೊಂದರಲ್ಲಿ ಕಾರ್ಯಕರ್ತೆಯಾಗಿ ಕೆಲಸ ಮಾಡುತ್ತಿದ್ದಾಳೆ.

**ನಿರೂಪಣೆ:** "ನನ್ನ ತಂದೆ ಮುನ್ಸಿಪಾಲಿಟಿಯಲ್ಲಿ ಕೆಲಸ ಮಾಡುತ್ತಿದ್ದ ಅಮ್ಮ ಕೂಲಿ ಕೆಲಸ ಮನೆಕೆಲಸ ಮಾಡುತ್ತಿದ್ಲು. ನನಗೆ ಇಬ್ಬರು ತಂಗಿಯರು, ಮೂರು ಜನ ತಮ್ಮಂದಿರು ಒಟ್ಟು ಆರು ಮಕ್ಕಳು ಅಪ್ಪನಿಗೆ ಕುಡಿತದ ಚಟ. ಮತ್ತೊಬ್ಬ ಮಹಿಳೆ ಜೊತೆ ಸಂಬಂಧ ಇಟ್ಟುಕೊಂಡಿದ್ರು, ಹೀಗಾಗಿ ದುಡಿದ ಹಣ ಮನೆ ಸೇರುತ್ತಿರಲ್ಲ. ಅಮ್ಮನೇ ಕೂಲಿ ನಾಲಿ ಮಾಡಿ ಹೊಟ್ಟೆ ತುಂಬಿಸುತ್ತಿದ್ದಳು. ನಾನು ೧೨ ವರ್ಷ ವಯಸ್ಸಿದ್ದಾಗ ಸಂಬಂಧಿಕರ ಹುಡುಗನೊಬ್ಬನ ಜೊತೆ ನನ್ನ ಮದುವೆ ನಿಶ್ಚಯಿಸಿದರು ಆದರೆ ಅದೇನೋ ಸಮಸ್ಯೆಯಾಗಿ ಆತ ಜೈಲು ಪಾಲಾದ ಅದಾದ ಮೇಲೆ ಅವನು ಬರುತ್ತಾನೋ ಇಲ್ಲವೋ ಅಂತೇಳಿ ಪಕ್ಕದ ಹಳ್ಳಿಯ ವ್ಯಕ್ತಿಯೊಂದಿಗೆ ನನ್ನ ಮದುವೆ ಮಾಡಿದರು. ನನ್ನ ಮದುವೆ ದಿನಾನೆ ಆ ಹುಡುಗ ಜೈಲಿನಿಂದ ಬಂದು ಗಲಾಟೆ ಮಾಡಿದ ಆದರೆ ನನ್ನ ಮದುವೆ ನಡೆದು ಹೋಗಿತ್ತು. ಗಂಡನ ಮನೆ ಹತ್ತಿರ ಬಂದು ನಿಲ್ಲುತ್ತಿದ್ದ ಆದರೆ ನಾವು ಇದ್ಯಾವುದಕ್ಕೂ ತಲೆ ಕೆಡಿಸಿಕೊಳ್ಳಲಿಲ್ಲ. ನನ್ನ ಗಂಡ ನನಗಿಂತ ಇಪ್ಪತ್ತು ವರ್ಷ ದೊಡ್ಡವನಿದ್ದು ಅವನು ಯಾವುದೋ ಲಿಂಗಾಯಿತ ಜಾತಿ ವಿಧವೆ ಹೆಂಗ್ಸನ್ನು ಮನೆಯಲ್ಲಿ ತಂದಿಟ್ಟುಕೊಂಡಿದ್ದ. ಅವಳ ಜೊತೆ ಮಜ ಮಾಡ್ತಿದ್ದ ನಾನು ಮನೆಕೆಲಸ ಮಾಡ್ತಿದ್ದೆ. ಆಥರೆ ನಂಗೆ ತುಂಬಾ ಬೈಯ್ಯೋದು ಹೊಡೆಯೋದು ಮಾಡ್ತಿದ್ರು ಅದಕ್ಕೆ ಅಪ್ಪನ ಕರೆಸಿಕೊಂಡೆ ಅಪ್ಪ ಇದೆಲ್ಲಾ ನೋಡಿ ಸ್ವಲ್ಪ ದಿನ ಬಿಟ್ಟು ಕಳಿಸಿಕೊಡ್ತೀನಿ

ಅಂತೇಳಿ ತವರು ಮನೆಗೆ ಕರೆದುಕೊಂಡು ಬಂದ್ರು. ತಿರುಗಿ ಗಂಡನ ಮನೆಗೆ ಕಳಿಸಲೇ ಇಲ್ಲ. ನಾನು ತವರಿಗೆ ಬಂದ ಮೇಲೆ ನನ್ನನ್ನು ಮದುವೆಯಾಬೇಕಿದ್ದ ಹುಡುಗನ್ನ ಇಷ್ಟ ಪಟ್ಟೆ ಇಬ್ಬರೂ ಪ್ರೀತಿ ಮಾಡಿದ್ವಿ ಅವನ ಜೊತೆ ದೇಹ ಸಂಪರ್ಕನೂ ಆಯ್ತು. ಅದಕ್ಕೆ ಹೆದರಿ ಮದುವೆ ಮಾಡ್ಕೊ ಅಂದೆ. ಆದರೆ ಅವರ ಮನೆಯವರು ಗಂಡ ಬಿಟ್ಟು ಬಂದವಳು ಅಂತ ನನ್ನನ್ನು ಒಪ್ಪಿಕೊಳ್ಳಲಿಲ್ಲ. ಅದಕ್ಕೆ ನಾನು ಆತ ಬೆಂಗಳೂರಿಗೆ ಹೋಗೋಣ ಅಲ್ಲೆ ಜೀವನ ಮಾಡೋಣ ಬಾ ಅಂದ ನನಗೂ ಕಷ್ಟದ ಜೀವನ ಸಾಕಾಗಿತ್ತು. ಹೊರಟು ಬಿಟ್ಟೆ. ಎರಡು ತಿಂಗಳು ನನ್ನ ಜೊತೆ ಚೆನ್ನಾಗೆ ಇದ್ದ ಯಾವುದೋ ಲಾಡ್ಜ್‌ನಲ್ಲಿ ಕೆಲಸ ಮಾಡುತ್ತಿದ್ದ ನಾನು ಗರ್ಭಿಣಿ ಆದೆ. ಅದು ಅವನಿಗೆ ಸಹಿಸೋಕೆ ಆಗಲಿಲ್ಲ. ಒಂದು ದಿನ ಕೆಲಸ ಮಾಡ್ತಾ ಇದ್ದ ಓನರ್ ಮನೆಗೆ ಕರ್ಕೊಂಡು ಹೋದ ನಿನಗೂ ಕೆಲಸ ಕೊಡ್ಸ್ತೀನಿ ಅಂತ ಹೇಳಿದ. ನಾನು ನಂಬಿ ಹೋದೆ. ನನ್ನ ಅಲ್ಲಿ ಬಿಟ್ಟು ಒಂದು ಹತ್ತು ನಿಮಿಷ ಬರ್ತೀನಿ ಇಲ್ಲೆ ಇರು ಅಂತ ಹೇಳಿ ಆಚೆ ಹೋದ. ಸಂಜೆ ಆದ್ರು ಬರಲೇ ಇಲ್ಲ. ಆ ಮನೇಲಿ ಚಎನ್ನಾಗಿ ನೋಡಿಕೊಂಡ್ರು ಊಟ, ನೀರು, ಕಾಫಿ ಕೊಟ್ರು, ಆದರೆ ರಾತ್ರಿ ಆದ ಮೇಲೆ ಆ ಮನೆ ಓನರ್ ಬಂದು ಹೇಳಿದ್ರು ನಿನ್ನ ೪೦.೦೦೦ ಸಾವಿರಕ್ಕೆ ನಮಗೆ ಮಾರಿ ಹೋಗಿದ್ದಾನೆ ಅಂತ. ಆಗ ಭೂಮಿನೆ ಕುಸಿದ ಅನುಭವ ಆಯ್ತು. ಇಲ್ಲ ನಾನು ಇರೋದಿಲ್ಲ ಬಿಟ್ಟು ಬಿಡಿ ಅಂದೆ ಅವರು ಬಿಡಲೇ ಇಲ್ಲ. ಕೂಡಿ ಹಾಕಿದ್ರು, ಹೊಡೆದು ಬಡಿದು ಮಾಡಿದ್ರು. ಆ ಹಿಂಸೆಗೆ ದೇಹ ಮಾರಿಕೊಳ್ಳೋಕೆ ಒಪ್ಪಿಕೊಂಡೆ. ಅವರ ಸಾಲ ತೀರೋವರೆಗೂ ದುಡಿದೆ. ಅಂದರೆ ೫ ವರ್ಷ ಆ ಕೆಲಸ ಮಾಡಿದೆ. ಆದರೆ ಬೆಂಗಳೂರಿನಲ್ಲಿ ಮಾತ್ರ ಅಲ್ಲ. ಕೆಲಸ ಮಾಡಿದ್ದು ನನ್ನ ಮುಂಬೈಗೂ ಕಳಿಸಿದ್ದರೂ ನಾನು ಗರ್ಭಿಣಿ ಅನ್ನೋ ವಿಚಾರ ಗೊತ್ತಾಗಿ ಆ ಮನೆಯವರು ಬೈದರೂ ತೆಗೆಸಿಕೊ ಅಂದ್ರು ಆದರೆ ತೆಗೆಸಿಕೊಳ್ಳಲಿಲ್ಲ. ಆ ಮಗು ಹುಟ್ಟಿ ಸತ್ತೋಯ್ತು. ಅದಾದ ಎರಡು ತಿಂಗಳಿಗೆ ನನ್ನ ಮುಂಬೈಗೆ ಕಳುಹಿಸಿದ್ರು. ಅಲ್ಲಿ ಇಲ್ಲಿಗಿಂತ ಜಾಸ್ತಿ ದುಡ್ಡು ಸಿಗ್ತಿತ್ತು. ಆದರೆ ಕೆಲಸ ಜಾಸ್ತಿ ಸುಸ್ತು ಜಾಸ್ತಿ. ಮತ್ತೆ ಗರ್ಭಿಣಿ ಆದೆ ಆಗ ತಾಯಿಮನೆಗೆ ಹೆರಿಗೆಗೆ ಅಂತ ಬಂದೆ. ಅಮ್ಮ ಸೇರಿಸಿಕೊಂಡ್ಲು ಯಾಕಂದ್ರೆ ನಾನು ಬರೋವಾಗ ದುಡ್ಡು ತಂದಿದ್ದೆ ಅದ್ಕೆ. ಇಲ್ಲೇ ಇರ್ತೀನಿ ಆ ಕೆಲಸ ಮಾಡಲ್ಲ ಅಂದೆ ಆದರೆ ನನ್ನ ಹೆತ್ತ ತಾಯಿನೇ ಮತ್ತ ಮುಂಬೈಗೆ ಹೋಗು ದುಡ್ಡು ಸಂಪಾದಿಸು ಅಂತ ಪೀಡಿಸೋಕೆ ಶುರು ಮಾಡಿದ್ಲು. ಮತ್ತೇನು ಮಾಡ್ಲಿ ಹೋದೆ. ಮುಂಬೈಲಿ ಕೆಲಸ ಮಾಡ್ತಾ ಇದ್ದ ಲಾಡ್ಜ್ ಪೋಲೀಸ್ ರೇಡ್ ಆಗಿತ್ತು. ಬೇರೆ ಕಡೆ ಕೆಲಸಕ್ಕೆ ಸೇರಕೊಂಡೆ. ಆದರೆ ಅಲ್ಲಿ ಯಾರು ನನ್ನತ್ರ ಬರ್ತಿರಲಿಲ್ಲ. ಚಿಕ್ಕ ಹುಡುಗಿರನ್ನೇ ಕೇಳ್ತ ಇದ್ರು. ಎದುರುಗಡೆ ಒಬ್ಬಳು ಹೆಂಗಸು ಇದ್ಲು ಕೆಲಸಕ್ಕೆ ಹೋಗಿ ರಾತ್ರಿ ಬರ್ತಿದ್ದಳು. ಅವಳು ಬಂದು ನಾನು ಕೊಡಿಸುತ್ತೇನೆ ಅಂತ ಹೇಳಿ ಲಾಡ್ಜ್ ಒಂದರಲ್ಲಿ ಕೆಲಸ ಕೊಡಿಸಿದಳು. ಇದರಿಂದ ಒಳ್ಳೆ ಆದಾಯ ಬರ್ತಾ ಇತ್ತು. ಆದರೆ ನಾನು ಇದ್ದ ಮನೆಯ ಘರ್‌ವಾಲಿ ಬಂದಿದ್ದರಲ್ಲಿ ಅರ್ಧ ಕೊಡು ಅಂತ ಪೀಡಿಸೋಕೆ ಶುರುಮಾಡಿದ್ಲು ಆ ಮೇಲೆ ಅದೇ ಟೈಮಿಗೆ ನಾನು ಕೆಲಸ ಮಾಡ್ತಾ ಇದ್ದ ಲಾಡ್ಜ್ ಮೇಲೆ ರೇಡ್ ಆಯ್ತು ನನ್ನ ಕೆಲಸ ಹೋಯ್ತು. ಮತ್ತೆ ನಾನು

ಊರಿಗೆ ವಾಪಸ್ಸು ಬರಬೇಕಾಯಿತು. ಪುಣೆಗೂ ಹೋಗಿ ಬಂದಿದ್ದೆ. ಆದರೆ ಅಲ್ಲಿ ಮುಂಬೈ ಅಷ್ಟು ಸುಲಭ ಇರಲಿಲ್ಲ. ಹೀಗೆ ೧೫ ವರ್ಷ ಈ ವೃತ್ತಿಯಲ್ಲಿ ಕಳೆದೆ. ದೇವರು ಬಡತನ ಕೊಟ್ಟ ಮೋಸ ಮಾಡಿದ. ಹೆಣ್ಣಾಗಿ ಹುಟ್ಟಿಸಿ ಮೋಸ ಮಾಡಿದ. ಪ್ರೀತಿಸಿದವ ಕೈಕೊಟ್ಟ ಮೋಸ ಮಾಡಿದ ಕಟ್ಟಿಕೊಂಡ ಗಂಡ ಅನ್ಯಾಯ ಮಾಡಿದ ಇನ್ನು ಹೆತ್ತ ಅಪ್ಪ ಅಮ್ಮನೇ ದುಡ್ಡಿಗಾಗಿ ನನಗೆ ಮೋಸ ಮಾಡಿದ್ರು. ಇನ್ನು ಯಾರನ್ನು ನಂಬಬೇಕು ಹೇಳಮ್ಮ ನೀನೆ.

ಅಲ್ಲಿಂದ ಬಂದೆ ಬರೋವಾಗ ಸಾರಾಯಿ, ತಂಬಾಕು ಚಟಹತ್ತಿಸಿಕೊಂಡು ಬಂದಿದೆ. ಇದು ದಿನಾ ಬೇಕು ಅನ್ನಿಸಿತ್ತು. ಅದ್ಕೆ ಇಲ್ಲೇ ಒಂದು ಲಾಡ್ಜ್‌ನಲ್ಲಿ ಸಂಪರ್ಕ ಸಿಕ್ತು ಹೋಗ್ತಾ ಬರ್ತಾ ಇದ್ದೆ. ಆದರೆ ಅದು ಅಷ್ಟು ಚೆನ್ನಾಗಿ ಅನ್ನಿಸಲಿಲ್ಲ. ಬಿಟ್ಟೆ ಆದರೆ ಒಬ್ಬ ಪಾರ್ಟನರ್ ಸಿಕ್ಕಿದ್ದಾನೆ. ಇವತ್ತಿಗೂ ನನ್ನ ಜೊತೆ ಇದ್ದಾನೆ. ಅವನ ಸಹಾಯದಿಂದ ಜೀವನ ಹೆಂಗೋ ನಡಿತಿದೆ. ಆದರೆ, ಮೊದಲಿನ ನನ್ನ ಜೀವನಕ್ಕೂ ಇಂದಿನ ಜೀವನಕ್ಕೂ ತುಂಬಾ ವ್ಯತ್ಯಾಸವಿದೆ. ಅಲ್ಲಿ ಪ್ರಪಂಚದಲ್ಲಿ ನೋವು, ಚಿಂತೆ ಇರಲಿಲ್ಲ. ಆದರೆ ಇಲ್ಲಿ ಇವುಗಳನ್ನು ಬಿಟ್ಟರೆ ಬೇರೆ ಏನೂ ಇಲ್ಲ. ಇಟ್ಟುಕೊಂಡವನಿಗೆ ಸಾಲ ಮಾಡಿ ದುಡ್ಡು ಕೊಡಬೇಕು. ಆತ ಸರಿಯಾಗಿ ವಾಪಸ್ಸು ಕೊಟ್ಟಿಲ್ಲ ಅಂದಾಗ ಪರದಾಡಬೇಕು. ಸಾಲಕೊಟ್ಟೋರು ಸುಮ್ಮನೆ ಇರ್ತಾರ ನೀನೇ ಹೇಳು ಎಂದು ಹೇಳಿ ತನ್ನ ಮಾತು ಮುಗಿಸಿತು.

**ಪ್ರಕರಣ–೩**

ಹೆಸರು : ಅನುಸೂಯ

ವಯಸ್ಸು : ೩೩

ಜಾತಿ : ಗೊಲ್ಲ

ಶಿಕ್ಷಣ : ಅನಕ್ಷರಸ್ಥೆ

ಸ್ಥಳ : ನಂದಗುಡಿ, ಬೆಂಗಳೂರು ಗ್ರಾಮಾಂತರ.

**ನಿರೂಪಣೆ:** "ನನ್ನನ್ನು ತುಂಬಾ ಚಿಕ್ಕ ವಯಸ್ಸಿನಲ್ಲಿಯೇ ಅಂದ್ರೆ ೧೯–೨೦ ವಯಸ್ಸಿಗೆ ನಮ್ಮೂರಿಗೆ ತುಂಬಾ ದೂರದಲ್ಲಿರೋ ಊರಿಗೆ ಮದುವೆ ಮಾಡಿಕೊಟ್ಟಿದ್ದರು. ಮದುವೆಯಾಗುವಾಗ ಕೊಟ್ಟ ಮಾತಿನಂತೆ ನನ್ನ ತಂದೆಗೆ ವರದಕ್ಷಿಣೆ ಕೊಡೋಕೆ ಆಗಲಿಲ್ಲ. ಇದನ್ನೇ ಕಾರಣ ಮಾಡಿ ನನ್ನ ಅತ್ತೆ, ಗಂಡ ನನಗೆ ತುಂಬಾ ಹಿಂಸೆ ಕೊಡುತ್ತಿದ್ರು. ಒಂದು ಸಾರಿ ದುಡ್ಡು ತರಲೇಬೇಕು ಅಂತ ಹೊಡೆದು ಮನೆಯಿಂದ ಹೊರಹಾಕಿದ್ರು. ಊರಿಗೆ ಬಂದ ನನ್ನನ್ನು ತಂದೆ–ತಾಯಿ ಸ್ವಲ್ಪ ದಿನದಲ್ಲೇ ಕೊಡ್ತೀವಿ. ಅಂತ ಹೇಳಿ ಮತ್ತೆ ಗಂಡನ ಮನೆಗೆ ತಂದುಬಿಟ್ಟರು. ಆದರೆ ಬಹಳ ದಿನ ಅಲ್ಲಿ ಉಳಿಲಿಲ್ಲ ನಾನು. ಒಂದು ದಿನ ಅತ್ತೆ ಮತ್ತು ನನ್ನ ಗಂಡ ನನಗೆ ಸೀಮೆ ಎಣ್ಣೆ ಸುರಿದು ಸಾಯಿಸಲು ನೋಡಿದ್ರು. ಹೆಂಗೋ ಅವರಿಂದ ತಪ್ಪಿಸಿಕೊಂಡು ಹೊರಗೆ ಬಂದೆ. ಅಲ್ಲಿಂದ ಹೇಗೋ ಮಾಡಿ ಬೆಂಗಳೂರಿಗೆ ಬಂದೆ ಆದರೆ ಅಲ್ಲಿಂದ ನಮ್ಮೂರಿಗೆ ಹೋಗೋಕೆ ಕೈಯಲ್ಲಿ ದುಡ್ಡು ಇರಲಿಲ್ಲ. ನಮ್ಮ

ಕಡೆಯವರು ಯಾರಾದ್ರು ಸಿಗ್ತಾರೆನೋ ಅಂತ ಹುಡುಕಿದೆ ಯಾರೂ ಸಿಗಲಿಲ್ಲ. ಅದು ಮೆಜೆಸ್ಟಿಕ್ ಬಸ್‌ಸ್ಟ್ಯಾಂಡ್ ನೋಡಿ ಮೇಡಂ ಅಲ್ಲೆ ತಂಬಾ ಹೊತ್ತು ಕುಂತಿದ್ದೆ ಆಗ ಒಂದು ಹೆಂಗಸು ನನ್ನ ಹತ್ತಿರ ಬಂದು ಕುಳಿತಿದ್ಲು ತುಂಬಾ ಹೊತ್ತು ಅಲ್ಲೇ ಇದ್ಲು. ಆ ಮೇಲೆ ಒಬ್ಬ ಗಂಡಸು ಸಹ ಅಲ್ಲಿ ಬಂದು ಅವಳ ಜೊತೆ ಬಂದು ಕವಿತ. ಆ ಹೆಂಗಸಿಗೆ ತಾನಾಗೆ ನನ್ನ ಮಾತಾಡಿಸಿದಳು. ನಾನು ಕಷ್ಟ ಹೇಳಿಕೊಳ್ಳಲು ಒಂದು ದಾರಿ ಆಯಿತು ಅಂತ ನನ್ನ ಕಥೆ ಎಲ್ಲಾ ಹೇಳಿಬಿಟ್ಟೆ. ಆಗ ಅವರು ನನ್ನ ಕಥೆಗೆ ಮರುಗಿ ನಾವೇ ನಿಮ್ಮ ಊರಿಗೆ ಬಿಟ್ಟು ಬರ್ತೀವಿ ಅಂತ ಹೇಳಿದರು. ಬೇಡ ಸ್ವಲ್ಪ ದುಡ್ಡು ಸಹಾಯ ಮಾಡಿ ನಾನು ಹೋಗ್ತೇನೆ ಅಂದೆ. ಅದಕ್ಕೆ ಅವರು ಸರಿ ಆಯ್ತು ಅಂತ ಹೇಳಿ. ಟೀಕುಡಿಯೋಣ ಅಂತ ಹೇಳಿ ಹೋಟೆಲ್‌ಗೆ ಕರೆದುಕೊಂಡು ಹೋದರು. ಅಲ್ಲಿ ನನಗೆ ದುಡ್ಡು ಕೊಟ್ಟರು ನಂತರ ಟೀ ಕುಡಿದೆವು. ಅಷ್ಟೇ ನನಗೆ ಗೊತ್ತಾಗಿದ್ದು. ಮತ್ತೆ ಎಚ್ಚರ ಆಗಿ ಕಣ್ಣು ಬಿಟ್ಟು ನೋಡಿದಾಗ ನಾನು ಗುರುತು ಪರಿಚಯವಿಲ್ಲದ ಯಾವುದೋ ಬೇರೆ ಊರಿನಲ್ಲಿದ್ದೆ. ನನ್ನ ಅತ್ತೆ ಮತ್ತು ಗಂಡನಿಂದ ತಪ್ಪಿಸಿಕೊಂಡು ಬಂದಿದ್ದ ನಾನು ಬಸ್ ನಿಲ್ದಾಣದಲ್ಲಿ ಮತ್ಯಾರೋ ಮೋಸಗಾರರಿಗೆ ಬಲಿಯಾಗಿ ಬಿಟ್ಟಿದ್ದೆ. ನಂತರ ಗೊತ್ತಯಾಯ್ತು ನಾನು ಮುಂಬಯಿಯ ಕಮಾಟಿಪುರದ ವೇಶ್ಯಾವೃತ್ತಿ ಮಾಡುವವರ ಕೈಗೆ ಮಾರಾಟ ಮಾಡಿದ್ದಾರೆ ಅಂತ. ಆದರೆ ನಾನು ಅಲ್ಲಿಂದ ತಪ್ಪಿಸಿಕೊಂಡು ಬರಲು ಮಾಡಿ ಪ್ರಯತ್ನಗಳು ಒಂದೆರಡಲ್ಲ. ಆದರೆ ಬರೋಕೆ ಸಾಧ್ಯವಾಗಲೇ ಇಲ್ಲ. ಸುಮಾರು ೬ ವರ್ಷ ನಾನು ಆ ಮನೆಯಲ್ಲಿ ಕಳೆದೆ. ಅದು ಕತ್ತಲ ಕೋಣೆಯ ಸೆರೆ ಮನೆಯಂತೆ ಇತ್ತು. ದಿನಪ್ರತಿ ಯಾರೋ ಬರುತ್ತಿದ್ದರು. ಹೋಗುತ್ತಿದ್ದರು. ತಿಂಗಲ ಮುಟ್ಟಿನ ದಿನಗಳಲ್ಲಿಯೂ ಸಹ ಅವರು ಬಿಡುತ್ತಿರಲಿಲ್ಲ. ಗರ್ಭಿಣಿಯಾದ ಸಂದರ್ಭದಲ್ಲಿ ಅಬಾರ್ಶನ್ ಮಾಡಿಸುತ್ತಿದ್ದರು. ಅದು ಎಷ್ಟು ಸಲ ಆಗಿದೆಯೋ ಗೊತ್ತಿಲ್ಲ.

ಆ ದಂದೆಯ ಮನೆಗಳಲ್ಲಿ ತಾವಾಗಿಯೇ ದಂದೆ ಮಾಡಲು ಬಂದವರು ಇದ್ರು. ಅಪ್ಪ ಅಮ್ಮ ಕುಟುಂದವರೇ ತಂದು ಬಿಟ್ಟು ಹೋದಂತ ಹೆಣ್ಣುಮಕ್ಕಳಿದ್ರು, ಅವರು ಗಳಿಸಿದ್ದರಲ್ಲಿ ಘರವಾಲಿಗೆ ಅರ್ಧ, ಹುಡುಗಿಗೆ ಅರ್ಧಪಾಲು ಬರುತ್ತಿತ್ತು. ನನ್ನಂತೆ ಯಾರೋ ಕದ್ದು ತಂದು ಮಾರಾಟ ಮಾಡಿ ಹೋದ ಹುಡುಗಿಯರಿಗೆ ಯಾವ ಹಣವು ಸಿಗ್ತಿರಲಿಲ್ಲ. ನಮಗೆ ಊಟ ಬಟ್ಟೆ ಬಿಟ್ಟರೆ ಬೇರೆ ಏನೂ ಸಿಗುತ್ತಿರಲಿಲ್ಲ. ಘರವಾಲಿಯ ಸೆರೆಮನೆಯಲ್ಲಿ ಬಂಧಿತ ಅಪರಾದಿಗಳು ನಾವು ಅಷ್ಟೇ.

ನಮ್ಮ ಪರಿಸ್ಥಿತಿ ನಮಗೆ ಮೋಸ ಮಾಡಿತ್ತು. ನಾನು ಈ ಸಾಗಾಣಿಕೆ ಜಾಲಕ್ಕೆ ಬಿದ್ದೆ. ಅಕ್ಷರ ಜ್ಞಾನವಿಲ್ಲ. ಯಾರೋ ಮೋಸ ಮಾಡಿಕರೆದುಕೊಂಡು ಬಂದರು. ಆದರೆ ಆ ಮನೆಯಲ್ಲಿ ತುಂಬಾ ಓದಿಕೊಂಡಿದ್ದ. ಒಳ್ಳೆ ಮನೆತನದ ತುಂಬಾ ಒಳ್ಳೆಯ ಹುಡುಗಿಯರು ಇದ್ದರು ಅವರದೇನು ತಾವು ಪ್ರೀತಿ ಮಾಡಿದ್ದ ಗೆಳಯರು. ಮದುವೆ ಮಾಡಿಕೊಂಡಿದ್ದ ಗಂಡಂದಿರೇ ತಂದು ಮಾರಿ ಹೋಗಿದ್ದರು. ಇಲ್ಲಿ ನಾವು ಮಾಡಿದ ತಪ್ಪಾದರೂ ಏನು? ನಮಗೆ ಯಾಕೆ ಈ ಶಿಕ್ಷೆ?

ನಾನು ಮನೆಗೆ ವಾಪಸ್ಸು ಬರುವವರೆಗೂ ನಮ್ಮ ಮನೆಯಲ್ಲಿ ನಾನು ಸತ್ತೇ ಹೋಗಿದ್ದೀನಿ ಅನ್ಕೊಂಡಿದ್ರು, ಒಂದು ದಿನ ಪೋಲೀಸ್ ರೇಡ್‌ನಲ್ಲಿ ನನ್ನ ಹಿಡಿದ್ರು ನನ್ನ ವಿಳಾಸ ಕೇಳಿ ಕರ್ನಾಟಕಕ್ಕೆ ಹಸ್ತಾಂತರಿಸಿದ್ರು, ಬೆಂಗಳೂರಿನ ಸರ್ಕಾರೇತರ ಸಂಸ್ಥೆಗೆ ನನ್ನ ಕಳುಹಿಸಿದರು. ಅಲ್ಲಿಂದ ನಾನು ನನ್ನ ತಾಯಿ ಮನೆ ಸೇರಿಕೊಂಡೆ. ಕೆಲಸಕ್ಕೂ ಹೋಗ್ತಾ ಇದ್ದೀನಿ ಆದರೆ ಹೊಟ್ಟೆ ನೋವು ತುಂಬಾ ಬರ್ತಿತ್ತು. ಆಸ್ಪತ್ರೆಗೆ ತೋರಿಸಿದೆ. ಹೆಚ್.ಐ.ವಿ ಇದೆ ಅಂದ್ರು ಜೊತೆಗೆ ಪದೇ ಪದೇ ಅಬಾರ್ಶನ್ ಮಾಡಿರೋದ್ರಿಂದ ನನ್ನ ಕಿಡ್ನಿಗಳಿಗೆ ಯಾವುದೋ ರೋಗ ಬಂದಿದೆ ಅಂದ್ರು, ಅಷ್ಟೊಂದು ದುಡ್ಡು ನನ್ನತ್ರ ಇಲ್ಲ. ಹೇಗೆ ವಾಸಿ ಮಾಡ್ಕೊಬೇಕು ಹೇಳಿ ಎಷ್ಟು ದಿನ ಇರ್ತೀನೊ ಅಷ್ಟು ದಿನ ಬದುಕೋದು ಅಂತ ನಿರ್ಧಾರ ಮಾಡಿದ್ದೀನಿ" ಅಂತ ಬಹಳ ಸಂಕಟದಿಂದ ಹೇಳಿದಾಗ ಒಂದು ಕ್ಷಣ ಹೆಣ್ಣಿನ ಜನ್ಮ ಯಾಕೆ ಬೇಕು? ಎಂದು ಅನ್ನಿಸಿತು.

**ಪ್ರಕರಣ–೪**

ಹೆಸರು : ಗೌರಿ

ವಯಸ್ಸು : ೩೦

ಜಾತಿ : ಲಿಂಗಾಯತ

ಶಿಕ್ಷಣ : ೭ನೇ ತರಗತಿ

ಸ್ಥಳ : ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ

**ನಿರೂಪಣೆ:** "ನಾನು ಚಿಕ್ಕವಳಿದ್ದಾಗ ತುಂಬಾ ಚೆನ್ನಾಗಿದ್ದೆ. ದುಂಡಗೆ ಬೆಳ್ಳಗೆ ಇದ್ದೆ. ನನ್ನಲ್ಲಿ ಹುಡುಗಾಟದ ಸ್ವಭಾವ ಆಗ ಬಹಳ ಇತ್ತು ನಮ್ಮ ತಂದೆ ತಾಯಿಗೆ ನಾನು ಒಬ್ಬಳೇ ಮುದ್ದಿನ ಮಗಳು. ನಾವು ಇದ್ದಿದ್ದು ದೊಡ್ಡಬಳ್ಳಾಪುರ ಹತ್ರ, ಒಂದು ಸಲ ನಾನು ಅಮ್ಮನ ಜೊತೆ ಮದುವೆಗೆಂದು ನೆಂಟರ ಊರಿಗೆ ಹೋಗಿದ್ದೆ. ನೋಡಲು ತುಂಬಾ ಚೆನ್ನಾಗಿ ಇದ್ದ ಆಂಟಿ ಒಬ್ಬರು ನನ್ನ ಮಾತಾಡಿಸಿದರು. ನನ್ನ ತುಂಬಾ ಗಮನಿಸಿದ್ದರು ಅಂತ ಅನ್ನಿಸುತ್ತೆ. "ನಿನಗೆ ಬೆಂಗಳೂರು ತೋರಿಸುತ್ತೇನೆ ಬಣ್ಣ ಬಣ್ಣದ ಗೊಂಬೆ ಕೊಡಿಸುತ್ತೇನೆ. ತುಂಬಾ ಹತ್ತಿರದಲ್ಲೇ ಇದೆ ಈಗ ಹೋಗಿ ಬೇಗ ವಾಪಸ್ಸು ಬರೋಣ" ಅಂತ ಕರೆದರು. ಅಮ್ಮನಿಗೆ ಹೇಳಿದರೆ ಕಳಿಸೋದಿಲ್ಲ ಅಂತ ಹೇಳಿ. ಅವಳಿಗೆ ಹೇಳದೆ ಹೊರಟೆ, ಬೆಂಗಳೂರು ತುಂಬಾ ಚೆನ್ನಾಗಿರುತ್ತದೆ. ಬಣ್ಣ ಬಣ್ಣದ ಪ್ರಾಕು. ಗೊಂಬೆ, ತಿಂಡಿ ಇವಿಷ್ಟೇ ನನ್ನ ತಲೆಯಲ್ಲಿ ತುಂಬಿತ್ತು. ಆದರೆ ನಾನು ಎಲ್ಲಿಗೆ ಬಂದಿದ್ದೇನೆ ಅಂತ ತಿಳಿದುಕೊಳ್ಳೋಕೆ ತುಂಬಾ ಸಮಯ ಬೇಕಾಯಿತು. ಅಲ್ಲಿನ ಜಾಗ ನೋಡಿ ನನ್ನ ನಿದ್ದೇನೆ ಹಾರಿ ಹೋಯ್ತು. ನಾನು ಯಾವ ಅನಾಹುತಕ್ಕೂ ಬಲಿಯಾಗುವ ಮೊದಲೆ ನನ್ನ ಇಟ್ಟಿದ್ದಂತ ಬಿಲ್ಡಿಂಗ್ ಮೇಲೆ ಪೋಲೀಸ್ ರೇಡ್ ನಡೀತು. ನಾನು ಅಲ್ಲಿಗೆ ಹೋಗಿ ೪ ದಿನ ಆಗಿತ್ತಷ್ಟೇ ಸಮಸ್ಯೆಗೆ ಸಿಕ್ಕಿಹಾಕಿಕೊಂಡಿದ್ರು ದೇವರ ದಯೆಯಿಂದ ಈ ರೀತಿ ಪಾರಾದೆ.

ನನ್ನನ್ನು ಬೆಂಗಳೂರಿನ ಸಂಸ್ಥೆಯಲ್ಲಿ ಇಟ್ಟಿದ್ದರು. ಅವರೆಲ್ಲ ಚೆನ್ನಾಗಿ ನೋಡಿಕೊಂಡಿದ್ದರು. ನಾನು ಊರಿಗೆ ಹೋಗಬೇಕು. ಅಮ್ಮ ಬೇಕು ಅಂತ ತುಂಬಾ ಹಠ ಮಾಡಿದೆ. ಆದರೆ ಒಂದು ವರ್ಷದ ವರೆಗೂ ನನಗೆ ಬಿಡಲಿಲ್ಲ. ಬ್ಯೂಟಿ ಪಾರ್ಲರ್ ಟ್ರೈನಿಂಗ್ ಕೊಟ್ರು ಕಲಿತುಕೊಂಡೆ. ಆ ಮೇಲೆ ನಮ್ಮ ಊರಿನ ಹತ್ತಿರ ಪೋಲಿಸ್ ಸ್ಟೇಷನ್ನಿನ ಮೂಲಕ ಅಪ್ಪ ಅಮ್ಮ ನನ್ನ ಕರೆದು ನನ್ನ ಒಪ್ಪಿಸಿದರು. ಊರಿಗೆ ಬಂದ ಮೇಲೆ ಮೂರು ನಾಲ್ಕು ವರ್ಷದ ನಂತರ ಸಂಬಂಧಿಕರ ಹುಡುಗನಿಗೆ ಕೊಟ್ಟು ಮದುವೆ ಮಾಡಿದರು. ಮೊದಮೊದಲು ಗಂಡ ಹಳೆ ಕಥೆ ಬಗ್ಗೆ ಕೇಳಿ ಹಿಂಸೆ ಮಾಡುತ್ತಿದ್ದ. ಆ ಮೇಲೆ ಆ ಮೇಲೆ ಸುಮ್ಮನಾದ ನಾನು ಬ್ಯೂಟಿಪಾರ್ಲರ್ ಮತ್ತೆ ಟೇಲರಿಂಗ್ ಕೆಲಸವನ್ನು ಮುಂದುವರಿಸಿದ್ದೇನೆ. ನನ್ನ ಗಂಡ ಫ್ಯಾಕ್ಟರಿಯಲ್ಲಿ ದುಡಿಯುತ್ತಾನೆ. ನಾನು ಸ್ಕೂಲಿಗೆ ಹೋಗಲಿಲ್ಲ ಆದರೆ ನನ್ನ ಮಗಳನ್ನು ಸ್ಕೂಲಿಗೆ ಹಾಕಿದ್ದೇನೆ ಚೆನ್ನಾಗಿ ಓದುತ್ತಿದ್ದಾಳೆ. ಅದೇ ನನಗೆ ಖುಷಿ.

**ಪ್ರಕರಣ–೫**

ಹೆಸರು : ಸುಜಾತ

ವಯಸ್ಸು : ೩೩

ಜಾತಿ : ಪರಿಶಿಷ್ಟ ಜಾತಿ

ಶಿಕ್ಷಣ : ಅನಕ್ಷರಸ್ಥೆ

ಸ್ಥಳ : ದೇವನಹಳ್ಳಿ, ಬೆಂಗಳೂರು ಗ್ರಾಮಾಂತರ

**ನಿರೂಪಣೆ:** " ನಾನಿರೋದು ಇಲ್ಲೇ ನಮ್ಮ ಊರು ದೇವನಹಳ್ಳಿ ಹತ್ರ ಒಂದು ಸಣ್ಣ ಹಳ್ಳಿ, ಸುಜಾತ ಅಂತ ನನ್ನ ಹೆಸರು ಇದು ನಿಜವಾದ ಹೆಸರೇನೆ ನಮ್ಮಮ್ಮಂಗೆ ಮೊದಲೇ ಒಂದು ಮದ್ವೆ ಆಗಿತ್ತಂತೆ ಅವನು ಸರಿಯಾಗಿ ನೋಡ್ಕೊಳಲ್ಲ ಅಂತ ನಮ್ಮಪ್ಪನ ಜೊತೆ ಬಂದ್ಲಂತೆ. ನಮ್ಮಪ್ಪರಿಗೂ ಮೊದಲೇ ಮದ್ವೆ ಆಗಿ ಇವನ ಕುಡಿತ ಜಗಳಕ್ಕೆ ಬೇಸತ್ತು ಆ ಹೆಂಡತಿ ಮನೆ ಬಿಟ್ಟು ಹೋಗಿದ್ಲಂತೆ ನಮ್ಮಮ್ಮನ್ನ ಅಪ್ಪ ಚೆನ್ನಾಗೆ ನೋಡ್ಕೊತಿದ್ದು ನಾನು ನನ್ನ ತಂಗಿ ಇಬ್ಬರೇ ಮಕ್ಕಳು ನಾನು ದೊಡ್ಡವಳಾಗಿ ೬ ತಿಂಗಳಿಗೆ ಅಮ್ಮ ಖಾಯಿಲೆ ಬಂದು ಸತ್ತೋದ್ಲು. ನಮ್ಮಪ್ಪ ಮತ್ತೆ ಕುಡುಕ ಆದ. ನಾನು ತಂಗಿ ಊಟಕ್ಕೂ ಗತಿ ಇಲ್ಲದೆ ಮನೆ ಮನೆ ತಿರುಗಿದ್ವಿ ಆದರೆ ಯಾರು ನಮ್ಮನ್ನ ಸೇರಿಸ್ಕೊಳ್ಳಲಿಲ್ಲ. ಅನಾಥರು ಮಾಡಿದ್ರು ನಮ್ಮಪ್ಪ ಮತ್ತೆ ಯಾರನ್ನೋ ಕಟ್ಟಿಕೊಂಡು ಬಂದ ಚಿಕ್ಕಮ್ಮ ಅಂತ ಕರೀರಿ ಅಂದ. ಆ ಚಿಕ್ಕಮ್ಮ ನಮ್ಮನ್ನ ಬೈಯ್ಯೋದು ಹೊಡೆಯೋದು ಮಾಡ್ತಿತ್ತು. ಒಂದಿನ ನಮ್ಮಪ್ಪನ ಹತ್ರ ಇಂತ ಹೆಣ್ಣುಮಕ್ಕಳು ನಮಗೆ ಯಾಕೆ ಇವರನ್ನು ಎಲ್ಲಾದ್ರೂ ಜೀತಕ್ಕೆ ಇಡು ಇಲ್ಲಂದ್ರೆ ಎಲ್ಲಾದ್ರೂ ಬಿಟ್ಟು ಬಿಡು ಅಂತ ಹೇಳ್ತಾ ಇತ್ತು. ನಂಗೆ ಇದೆಲ್ಲಾ ಕೇಳಿಸಿಕೊಂಡು ಭಯ ಆಯ್ತು. ನಾವು ಮಲಗಿದ್ದಾಗ ನಮ್ಮನ್ನ ಯಾವುದೋ ಊರಿಗೆ ತಗಂಡು ಬಂದಿದ್ರು ಸ್ವಲ್ಪ ಎಚ್ಚರ ಇತ್ತು. ಆದರೆ ಏನೂ ಸರಿಯಾಗಿ ಗೊತ್ತಾಗಲೇ ಇಲ್ಲ. ಬೆಳಿಗ್ಗೆ ಎಚ್ಚರವಾದಾಗ ನಮ್ಮಪ್ಪ ಎದುರಿಗೆ ಇದ್ದ ಟೀ ಬನ್ನು ತಂದುಕೊಟ್ಟ ಇನ್ಮೇಲೆ ನೀವು ಇದೆ ಮನೇಲಿ ಇರಬೇಕು ಕೆಲಸ ಮಾಡಬೇಕು ಮೂರು

ಹೊತ್ತು ಊಟ ಬಟ್ಟೆ ಕೊಡ್ತಾರೆ ಅಂತ ನಾವು ಇರಲ್ಲ ಅಂತ ಹಟಮಾಡಿದ್ರೂ ಅಲ್ಲೇ ಬಿಟ್ಟು ಹೋದ. ಆ ಮನೆಯಲ್ಲಿ ಇದ್ದವ್ರೆಲ್ಲಾ ಒಂಥರಾ ಜಾಸ್ತಿ ಮೇಕಪ್ಪು ಮಾಡಿಕೊಂಡು ಹೆಂಗೆಂಗೊ ಆಡ್ತ ಇದ್ರು. ಆಧರೆ ನಮ್ಮನ್ನ ಒಂದು ವಾರ ಚೆನ್ನಾಗಿ ನೋಡ್ಕೊಂಡು ಒಳ್ಳೆ ಊಟ ಕೊಟ್ರು. ಒಂದು ವಾರ ಆದ ಮೇಲೆ ನನ್ನ ತಂಗಿನ ಬಿಟ್ಟು ನನ್ನ ಮಾತ್ರ ಕಾರಲ್ಲಿ ಕರಕೊಂಡು ಹೋದ್ರು ತುಂಬಾ ದೂರ ಹೋದ್ವಿ ರೈಲಲ್ಲಿ ಹೋದ್ವಿ ಅದು ಮುಂಬೈಗೆ ಅಂತ ಆ ಮೇಲೆ ಗೊತ್ತಾಯ್ತು. ಅಲ್ಲಿ ನಾನು ಮೊದಲು ಇದ್ದಂತ ಮನೆ ತರದ್ದೇ ಮನೆಗೆ ತಂದು ಬಿಟ್ರು ಅಲ್ಲೀನೂ ಚೆನ್ನಾಗಿ ಊಟ ಕೊಟ್ರು. ಒಂದಿನ ಆ ಮನೆ ಯಜಮಾನಿ ಘರ್‌ವಾಲಿ ಯಾರತ್ರಾನೋ ಕನ್ನಡದಲ್ಲೇ ಮಾತಾಡ್ತಾ ನನ್ನ ಹೆಸರು ಹೇಳಿದ್ಲು ೪೦ ಸಾವಿರಕ್ಕೆ ತಂದಿರೋದು ಅವಳನ್ನು ನೀನು ೮೨ ಆದ್ರೂ ಕೊಡು ಅಂತ ಹೇಳ್ತಾ ಇದ್ದಳು. ನಮಗೆ ಯಾವುದೂ ಅರ್ಥ ಆಗಲಿಲ್ಲ. ಆ ಮೇಲೆ ಒಂದು ವಾರಕ್ಕೆ ಯಾರೋ ಒಬ್ಬಾತ ಬಂದ ನನ್ನ ಮದುವೆ ಹೆಣ್ಣಿನತರ ರೆಡಿಮಾಡಿ ನಿಲ್ಸಿದ್ರು ಅವನು ನಿನ್ನ ಮದುವೆ ಆಗ್ತಾನೆ ಅವನ ಜೊತೆ ಗೋಗು ಅಂದ್ರು. ನಾನು ಖುಷಿಯಿಂದ ಹೋದೆ. ಅವನು ಯಾವುದೋ ಮನೆಗೆ ಕರ್ಕೊಂಡು ಹೋದ ಅಲ್ಲಿ ಎಷ್ಟೋಂದು ಗಂಡಸರು ಕುಡಿತಾ ಕೂತಿದ್ದರು. ನನ್ನ ರೂಮಿಗೆ ಕಳಿಸಿ ಆಮೇಲೆ ಆತ ಬಂದ ನನ್ನ ಬಲವಂತದಿಂದ ಮುಟ್ಟಿ ಅನುಭವಿಸಿದ ಗಂಡ ಆಗೋನಲ್ವಾ ಅಂತ ನಾನು ಸಹಿಸಿಕೊಂಡೆ ಆದ್ರೆ ಅವನು ಎದ್ದು ಹೋದ ಮೇಲೆ ಒಬ್ಬ ಬಂದ ಹೀಗೆ ನಾಲ್ಕು ಜನ ಬಂದ್ರು ನಾನು ನಿಜಕ್ಕೂ ಸತ್ತ ಹೆಣವಾಗಿದ್ದೆ. ಅಲ್ಲಿ ೬ ವರ್ಷ ಇದ್ದೆ. ಅಲ್ಲಿಂದ ವಾಪಸ್ಸು ಬೆಂಗಳೂರಿಗೆ ಬಂದೆ ಚಿಕ್ಕ ಪೇಟೆ, ಶ್ರೀರಾಮಪರ, ಯಲಹಂಕ ಹೀಗೆ ಸುತ್ತಾಡಿ ಈಗ ನಮ್ಮೂರಲ್ಲೇ ಇದ್ದೀನಿ ಆದರೆ ನಾನೆ ಅಂತ ಇಲ್ಲಿ ಯಾರಿಗೂ ಗೊತ್ತಿಲ್ಲ. ಇದಾಗಿ ೨೦ ವರ್ಷ ಆಯ್ತು ಈಗಲೂ ಇದೇ ಕೆಲಸ ನಂಗೆ ವಯಸ್ಸಾಯ್ತು, ಮುಖ ಒಣಗಿದೆ. ಹೆಚ್.ಐ.ವಿ. ಸಓಂಕು ಇದೆ. ಆದಾಯ ತುಂಬಾ ಕಡಿಮೆ. ಊಟಕ್ಕೆ ಸಿಕ್ಕಿದ್ರೆ ಸಾಕು ಅನ್ನೋ ಹಾಗೆ ಇದೆ. ಕೂಡಿಟ್ಟ ದುಡ್ಡು ಇಲ್ಲ ಎಷ್ಟು ದಿನ ನಡಿಯುತ್ತೋ ನಡೀಲಿ. ನಂಗೆ ಒಬ್ಬ ಮಗ ಹುಟ್ಟಿದ್ದ ಗಟ್ಟಿ ಮನಸ್ಸು ಮಾಡಿ ಅದು ೫ ತಿಂಗಳಿದ್ದಾಗ ಒಬ್ಬರಿಗೆ ದತ್ತು ಕೊಟ್ಟೆ ಅವನು ಚೆನ್ನಾಗಿರಲಿ ಅಂತ. ಹೇಗಿದ್ದಾನೋ ಏನೋ ತಿಳುಕೊಳ್ಳೊಕೆ ಆಗಲೇ ಇಲ್ಲ. ಈ ಕೆಲಸ ಬಿಟ್ರು ಯಾರು ನಮಗೆ ಬೇರೆ ಕೆಲ್ಸ ಕೊಡ್ತಾರೆ. ಎಲ್ಲರಿಗೂ ನಾನು ಪರಿಚಯಾನೆ ಇದ್ದೀನಿ. ನಿಮ್ಮಂಗೆ ಜೀವನ ಮಾಡೋಕೆ ನಮ್ಮ ಕೆಟ್ಟ ಕೆಲಸ ಬಿಡಲ್ಲಮ್ಮ".

**ಪ್ರಕರಣ–೬**

ಹೆಸರು : ಯಲ್ಲಮ್ಮ

ವಯಸ್ಸು : ೨೩

ಜಾತಿ : ಹೊಲೆಯಾ

ಶಿಕ್ಷಣ : ಅನಕ್ಷರಸ್ಥೆ

ಸ್ಥಳ : ದೊಡ್ಡ ಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ನಿರೂಪಣೆ:** "ಅಕ್ಕ ನನ್ನ ಕಥೆ ಕೇಳಿ ಏನು ಮಾಡ್ತೀಯಾ ಬಿಡು. ಏನೋ ನಿನ್ನ ಓದಿಗೆ ಬೇಕು ಅಂದೆ ಅಲ್ವಾ, ಅದಕ್ಕಾದ್ರೂ ಉಪಯೋಗ ಆಗ್ತೀನಾ. ನಾ ಹುಟ್ಟಿ ಬೆಳೆದಿದ್ದೆಲ್ಲಾ ಚಿಕ್ಕೋಡಿ ಹತ್ರ ಒಂದು ಸಣ್ಣ ಹಳ್ಳೀಲಿ ನೋಡ್ರಿ ನಾವು ನಾಕು ಜನ ಹೆಣ್ಮಕ್ಕಳು ಒಬ್ಬನೇ ತಮ್ಮ ರಳಈ ನಾನು ಎರಡನೇ ಆಕಿ. ಅಕ್ಕನಿಗೆ ಮದುವೆ ಮಡಿದ್ರು. ನಮಗಾ ಅಂತ ಹೊಲ ಇದ್ದಿರಲಿಲ್ಲ ರೀ ಕೂಲಿ ಮಾಡಿ ಜೀವನ ಮಾಡ್ತೀದ್ವಿ. ನಾನು ೧೭ ಅಥವಾ ೧೮ ವರ್ಷ ಇದ್ದಾಗ ಅಪ್ಪನ ಕಡೆಯವರು ಹೆಣ್ಣು ಕೇಳ್ತಾ ಬಂದ್ರು. ನಮ್ಮಮ್ಮ ಬ್ಯಾಡ್ರೀ ಅಂದ್ರು ನಮ್ಮಪ್ಪಾಗ ದುಡ್ಡು ಸಿಗತೈತಿ ಅಂತ ನನ್ನ ಅವರಿಗೆ ಕೊಟ್ಟು ನಾಲ್ಕೇ ದಿನದಾಗ ಮದುವೆ ಮಾಡಿದ್ರು. ಅಪ್ಪಗ ಸ್ವಲ್ಪ ರೊಕ್ಕ ಕೊಟ್ಟರು ಅನ್ಸುತ್ತು. ಅಪ್ಪ ಬರೇನ ಖುಷಿಯಾಗಿದ್ದ. ಮದುವೆ ಮಾಡಿಕ್ಕೊಂಡು ಟ್ರೈನ್ ಹತ್ತಿದ್ದಿ ರೀ. ನಂಗೋ ಅವರ ಭಾಷೆ ಸ್ವಲ್ಪ ಸ್ವಲ್ಪ ಮಾತ್ರ ತಿಳಿತ್ತಿತ್ತು. ಅವರ ಊರಿಗೆ ಕರಕ್ಕೊಂಡು ಹೋದ್ರು ಮನಿ ದೊಡ್ಡದು ಇತ್ತು. ಗಂಡನ ಅಮ್ಮ ಬಿಟ್ರೆ ಆ ಮನೀ ಒಳಗ ಒಂದು ಹೆಣ್ಣು ಇದ್ದಿರ್ಲಿ. ಎರಡುಮೂರು ದಿನಕ್ಕೆ ಮದುವೆ ಆದ ರಾತ್ರಿ ಮಾಡಿದ್ರು. ಆದ್ರ ನಂಗೆ ತಾಲಿಕಟ್ಟಿದವ ಕೋಣೆಗೆ ಬರಲಿಲ್ಲಾ ನೋಡ್ರಿ. ಅವರ ಅಣ್ಣ ಬಂದ ನಂಗೆ ಭಯ ಆಯಿತು. ಅವ ನನಗಾ ಹೇಳಿದ್ದು ಹೇಳ್ತೀನಿ ನೋಡ್ರಿ ನಿನ್ನ ಮದುವೆ ಆಗಿರೋದು ಅವ ಒಬ್ಬನೇ ಅಲ್ಲ ಮನೇಲಿ ಇರೋ ಎಲ್ಲಾ ಗಂಡಸರು ಅಂದ, ಅಂದ್ರ ಅವರು ನಾಲ್ಕು ಜನ ಮಕ್ಕಳು, ಆ ರಾತ್ರಿ ನನ್ನ ಹೆಂಗಬೇಕೋ ಹಾಂಗ ಮಾಡಿದ ರೀ ಅವೆಲ್ಲಾ ನಿಮ್ಮತ್ರ ಹೇಳೋದು ಸರಿ ಅಲ್ಲಬಿಡ್ರಿ. ದಿನಾ ಒಬ್ಬರು ಬರ್ತಿದ್ರು. ಬೇರೆ ಟೈಮ್ ದಾಗ ಮನಿಕೆಲಸ ಮಾಡ್ತಿದ್ದೆ. ಬಾಳ ಹಿಂಸೆ ಆಗ್ತಿತ್ತು ನೋಡಕ್ಕ ಭಾಷೆ ತಿಳೀತಿದ್ದಿಲ್ಲ. ಓಗ್ಲಿ ಮನಿ ಕೆಲಸ ಅದಲ್ಲದಾ ಮತ್ತ ಅಷ್ಟು ಮಂದಿಗೆ ನನ್ನ ದೇಹ ಕೊಡಬೇಕಿತ್ತು ಇದು ಹಾದರ ಮಾಡಿದಂಗೆ ಅಲ್ವೇನಕ್ಕ. ಮೂರು ವರ್ಷ ಅಲ್ಲಿದ್ದೆ ಒಂದು ಸಲಾನು ಅಮ್ಮನ ಮನೀಗೆ ಕಳಿಸಲೇ ಇಲ್ಲ. ಆ ನಾಲ್ಕು ಜನ ಗಂಡಂದಿರು ಅಲ್ದೆ ಆ ಮೇಲೆ ಆ ಮೇಲೆ ಮಾವಾನು ಹಂಗೆ ಮಾಡ್ದ ಏನೋ ಔಷಧಿ ಕೊಡ್ತಿದಲ್ಲ ನಮ್ಮತ್ತೆ ಅದಕ್ಕೆ ಏನೋ ಮಕ್ಕಳೇ ಆಗಲಿಲ್ಲ. ಆ ಊರು ಗಂಡಸರಿದಾನೆ ತುಂಬೈತೆ ನಾನು ಬೇರೆ ಯಾವ ಹೆಣ್ಮಕ್ಕಳನ್ನು ನೋಡಲೇ ಇಲ್ಲ. ನಂಗೆ ಆ ಜೀವನ ಸಾಕಾಗಿತ್ತು. ಒಂದಿನ ನಮ್ಮ ಮನಿಗೆ ದವಸ ತುಂಬಾಕೆ ಅಂತ ಒಂದು ಟೆಂಪೋ ಬಂದಿತ್ತು. ಕಿರನೇ ಗಂಡ ಅದನ್ನೆಲ್ಲಾ ನೋಡ್ಕೊತಿದ್ದ ಅವನು ಅಂಗಿ ತೆಗೆದು ಗೂಟಕ್ಕೆ ಹಾಕಿದ್ದ ಜೋಬಲ್ಲಿ ಎಷ್ಟು ರೊಕ್ಕ ಇತ್ತೊ ಅಷ್ಟು ಕದ್ದೆ. ಟೆಂಪೋ ಹತ್ರ ಯಾರೂ ಇರಲಿಲ್ಲ ಅದರಲ್ಲಿ ಹತ್ತಿ ಮರೆನಲ್ಲಿ ಕೂತೆ ಅದು ಯಾವುದೋ ಸಿ.ಟಿ.ಗೆ ಬಂದು ನಿಲ್ಸಿತ್ತು. ಟೆಂಪೋದವರು ಯಾವುದೋ ದಾಬಾ ಅತ್ರ ನಿಲ್ಸಿದ್ರು. ನಾನು ಮೆಲ್ಲಗೆ ಇಳಿದೆ. ಅಲ್ಲಿಂದ ರೋಡಿಗೆ ಬಂದೆ ಯಾವಕಡೆ ಹೋಗೋದು ಅಂತ್ಲೇ ಗೊತ್ತಾಗ್ಲಿಲ್ಲ ಆಗಿದ್ದು ಆಗ್ಲಿ ಅಂತ ಅಲ್ಲಿ ಒಬ್ಬ ಹೆಂಗ್ಸಿಗೆ ಕೇಳಿದೆ ಟ್ರೈನು ಅಂತ ದಾರಿ ತೋರ್ಸಿದ್ಲು ನಡಕೋತ ಬಂದೆ. ಅಲ್ಲಿ ರೈಲು ಕಂಬಿ ಸಿಕ್ತು ಅದರ ಮೇಲೆ ನಡೀತಾ ಹೋದೆ ಸ್ಟೇಷನ್ನು ಸಿಕ್ತು ಅಲ್ಲಿ ಟ್ರೈನು ಇತ್ತು ಹೋಗಿ ವಿಚಾರಿಸಿದೆ ನಂಗೆ ಭಾಷೆ ಬರ್ತಿತ್ತು. ಮರಾಠಿ ಕಲ್ತಿದ್ದೆ. ಬೆಂಗಳೂರಿಗೆ ಅಂದ್ರು ದುಡ್ಡು ಇತ್ತಲ್ಲ ಟಿಕೆಟ್ ಹರಿಸಿ ರೈಲು ಹತ್ತಿದೆ.

ರೈಲು ಮುಂದೆ ಓಡಿದ ಮೇಲೆ ಮನಸ್ಸಿಗೆ ಸಮಾಧಾನ ಆಯ್ತು. ಬೆಂಗಳೂರಲ್ಲಿ ಇಳಿದೆ. ಅನ್ಕೊಂಡೆ ನೋಡಿದ್ರೆ ಇಲ್ಲೇ ಇಳ್ಬಿದ್ದೆ. ಒಳ್ಳೇದೆ ಆಯಿತು ನೋಡ್ರಿ ಅಕ್ಕಾ ಇವತ್ತು ಇಲ್ಲೇ ಬದುಕು ಸಿಕ್ಕಿದೆ. ನಾನು ರೈಲು ಇಳಿದು ಸುಮ್ಮನೆ ಕೂತಿದ್ದೆ. ಒಂದು ಅಜ್ಜಿ ಬಂದು ಮಾತಾಡ್ಸಿತು. ನನ್ನ ಕಷ್ಟ ಕೇಳ್ತು ನಮ್ಮನಿಗೆ ಬಾ ನಂಗು ಯಾರಿಲ್ಲ ಅಂತು. ಈಗ ಅಜ್ಜಿ ಜೊತೇಲಿ ಇದ್ದೀನಿ. ಸಣ್ಣಪುಟ್ಟ ವ್ಯಾಪಾರ ಮಾಡ್ತೀನಿ ಮದುವೆ ಅನ್ನೋದೆ ಬೇಡ ಅನ್ಸಿದೆ. ನಾನು ಅಜ್ಜಿ ಜೊತೆ ಹಿಂದೆ ಇರ್ತೀನಿ ಅಕ್ಕ".

**ಪ್ರಕರಣ–೭**

ಹೆಸರು : ಲಲಿತ

ವಯಸ್ಸು : ೨೬

ಜಾತಿ : ಲಿಂಗಾಯತ

ಶಿಕ್ಷಣ : ನರ್ಸಿಂಗ್

ಸ್ಥಳ : ದೊಡ್ಡ ಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ನಿರೂಪಣೆ:** "ನನಗೆ ಹದಿನಾರು ವರ್ಷವಾದಾಗ ನನ್ನ ಮದುವೆ ನಡೆಯಿತು. ನನ್ನ ಗಂಡ ನನಗಿಂತ ಹದಿಮೂರು ವರ್ಷ ದೊಡ್ಡವನಾಗಿದ್ದ ನನ್ನ ಕುಟುಂಬ ತುಂಬಾ ಸಾಂಪ್ರದಾಯಿಕವಾದದ್ದು. ಆಚಾರ–ವಿಚಾರ, ಪೂಜೆ ಪುನಸ್ಕಾರ ದೈವತ್ವ ಅಂತ ಯಾವಾಗಲೂ ಸಂಪ್ರದಾಯದಲ್ಲೇ ನಡೆಯುತ್ತಿದ್ದ ಕುಟುಂಬ ನಮ್ಮ ಮನೆ ಇದ್ದದ್ದು ದೊಡ್ಡಬಳ್ಳಾಪುರದಲ್ಲಿ ಮದುವೆ ಆದ ಮೇಲೆ ಈ ಉಸಿರುಗಟ್ಟಿಸುವ ವಾತಾವರಣದಿಂದ ಬಿಡುಗಡೆ ಸಿಗಬಹುದು ಅಂತ ಒಪ್ಪಿಕೊಂಡೆ ಆದರೆ ನಾನು ಅಂದುಕೊಂಡಂತೆ ಆಗಲಿಲ್ಲ. ಗಂಡನ ಮನೆ ಬೆಂಗಳೂರು ಆದರೂ ಗಂಡ ಅತ್ತೆ ಅಷ್ಟು ಉದಾರವಾಗಿ ನಡೆದುಕೊಳ್ಳುತ್ತಿರಲಿಲ್ಲ. ನನ್ನ ಗಂಡನಿಗೆ ನನ್ನನ್ನು ಬಸಿರು ಮಾಡುವುದೊಂದೇ ಯೋಚನೆ. ಅಲಂಕಾರ ಮಾಡಿಕೊಂಡರೆ. ಮನೆಯಲ್ಲೇ ಬಿದ್ದಿರೋಳಿಗೆ ಇವೆಲ್ಲ ಯಾಕೆ ಅನ್ನುತ್ತಿದ್ದ. ಸಿನಿಮಾಗೆ ಹೋದರೆ. ಬೈಯುತ್ತಿದ್ದ ಸೆರಗು ಹಕ್ಕೋ ಸರಿಯಾಗಿ ನಡಿ ಅಲ್ಲಿ ಇಲ್ಲಿ ನೋಡಬೇಡ ಯಾವ ಗಂಡಸನ್ನು ತಲೆ ಎತ್ತಿನೋಡಬೇಡ ಅಂತ ಹಿಂಸೆ ಮಾಡುತ್ತಿದ್ದ, ನನ್ನ ಅತ್ತೆ ಸಹ ಮಗನಿಗೆ ಬೆಂಬಲವಾಗಿದ್ದಳು. ಯಾವಾಗಲೂ ಕಾವಲಿರುತ್ತಿದ್ದಳು. ಮಗ ಮಾಡಿದ್ದೆಲ್ಲಾ ಸರಿ ಎನ್ನುತ್ತಿದ್ದಳು. ಎರಡು ವರ್ಷದಲ್ಲಿ ಎರಡು ಮಕ್ಕಳನ್ನು ಹೆತ್ತ ಈ ಜೀವನ ಸಾಕಾಗಿದೆ ಅನಿಸಿ ಗಂಡ ಅತ್ತೆಗೆ ಕಾಡಿಬೇಡಿ ನರ್ಸ್ ವೃತ್ತಿಯ ತರಬೇತಿ ಪಡೆದೆ. ಅದು ನನಗೆ ಇಷ್ಟದ ಕೆಲಸವಾಯಿತು. ತರಬೇತಿ ನಂತರ ಒಂದು ಆಸ್ಪತ್ರೆಯಲ್ಲಿ ಕೆಲಸಕ್ಕೆ ಸೇರಿದೆ. ಮೊದಲು ಆರು ತಿಂಗಳು ಯಾವುದೇ ಸಮಸ್ಯೆ ಆಗಿರಲಿಲ್ಲ. ಆದರೆ ಅಲ್ಲಿ ಒಬ್ಬ ಗಯ್ಯಾಳಿ ನರ್ಸ್ ಒಬ್ಬಳು ಇದ್ದಳು. ಅವಳು ವಿಚಿತ್ರ ಸ್ವಭಾವದವಳು ಮಾತಾಡ್ತ ಮಾತಾಡ್ತ ಏನೇನೋ ಹೊಸ ವಿಷಯ ಹೇಳಿದಳು ಒಂದು ದಿನ ಆಸ್ಪತ್ರೆಯಲ್ಲಿಯೇ ಒಬ್ಬ ಪುರುಷ ಬಂದು ನನ್ನ ಕೈಹಿಡಿದು ನಿನ್ನತ್ರ ಸ್ವಲ್ಪ ಮಾತಾಡಬೇಕು ಅಂದ. ಏನು ಅಂತ ಕೇಳು ಹೋದೆ. ಆಗ ಒಂದು ಅಬಾಷನ್ ಮಾಡಬೇಕು

ಎಷ್ಟು ದುಡ್ಡಾದ್ರು ಕೊಡ್ತೀನಿ ಒಂದು ಹುಡುಗನ ಲೈಫ್ ಕಾಪಾಡು ಎಂದ. ನಾನು ಅದನ್ನು ಅಂತ ನಂಬಿ ಅವನ ಜೊತೆ ಹೋದೆ ಒಂದು ಅಪಾರ್ಟ್‌ಮೆಂಟಿಗೆ ಹೋದೆವು. ಒಂದು ಮನೆಯ ಬೆಲ್ ಒತ್ತಿದ ಒಂದು ಹೆಂಗಸು ಬಾಗಿಲು ತೆರೆದರು ನಾನು ಒಳಗೆ ಹೋದದಷ್ಟೇ ನನ್ನ ಹಿಂದಿನಿಂದ ಜೊರಾಗಿ ಒಂದು ರೂಂಗೆ ತಳ್ಳಲಾಯಿತು ಏನಾಗ್ತಿದೆ ಅಂತ ತಿಳಿಯೋದರಲ್ಲೇ ಆ ವ್ಯಕ್ತಿ ನನ್ನ ಮೇಲೆ ಬಂದಿದ್ದ ಎಷ್ಟು ಹೇಳಿದರೂ ಬೇಡಿಕೊಂಡರೂ ನನ್ನ ಬಿಡಲಿಲ್ಲ. ಅತ್ಯಾಚಾರ ಮಾಡಿದ. ಒಂದು ಸಲ ಅಲ್ಲ ೪ ಸಲ ಅದನ್ನು ಪೋಟೊ ತೆಗೆದಿದ್ದರೂ ವಿಡಿಯೋ ರೆಕಾರ್ಡ್ ಮಾಡಿದ್ದರು. ಹೊರಗಡೆ ಬಾಯಿಬಿಟ್ರೆ ನಿನ್ನ ಮರ್ಯಾದೆನೇ ಹೋಗುತ್ತೆ. ಅಂತ ಗದರಿಸಿದರು. ನಂತರ ಸ್ವಲ್ಪ ದಿನ ಹೆದರಿ ಆಸ್ಪತ್ರೆಗೆ ಹೋಗೋದು ಬಿಟ್ಟೆ ನಂತರ ಹೋದೆ ಎರಡು ತಿಂಗಳು ಸಮಸ್ಯೆ ಇರಲಿಲ್ಲ. ಒಂದು ದಿನ ಒಬ್ಬ ಬಂದು ಮೇಡಂ ಯಾರೋ ಕರಿತಿದ್ದಾರೆ ಅಂದ ಹೊರಗೆ ಹೋದೆ ಅಲ್ಲಿ ಅದೇ ವ್ಯಕ್ತಿ ಆ ನರ್ಸ್ ಕರೆದಾಗ ಬರಬೇಕು ನಾವು ಕಳಿಸಿದವರ ಜೊತೆ ಹೋಗ್ಬೇಕು ಅಂತ ಹೆದರಿಸಿದರೂ ಕುಟುಂಬಕ್ಕೆ ಅವಮಾನ ಆಗುತ್ತೆ ಗಂಡ ನನ್ನ ಸಾಯಿಸ್ತಾನೆ ಅಂತ ಹೆದರಿ ಒಪ್ಪಿಕೊಂಡೆ ತುಂಬಾ ದಿನ ಇದೇ ನಡೀತು. ಒಂದಿನ ನನ್ನ ಪ್ರಜ್ಞೆ ತಪ್ಪಿಸಿ ಬೇರೆ ಕಡೆಗೆ ತಂದು ಹಾಕಿದರು. ಅದು ತಮಿಳುನಾಡು ಅಂತ ಅವರ ಭಾಷೆ ನೋಡಿ ಗೊತ್ತಾಯಿತು. ಅಲ್ಲಿ ಒಬ್ಬ ಹೆಂಗಸಿನ ಜೊತೆ ಇರಿಸಿದ್ದರು. ಅಲ್ಲಿಗೆ ಬರುತ್ತಿದ್ದ ಒಬ್ಬ ಗಿರಾಕಿ ನನ್ನ ಅವನ .... ಜೊತೆ ಕರೆದುಕೊಂಡು ಹೋಗ್ತಿನಿ ಅಂತ ದುಡ್ಡುಕೊಟ್ಟು ನನ್ನ ಕೊಂಡುಕೊಂಡ ಕನ್ಯಾಕುಮಾರಿಯಲ್ಲಿ ನನ್ನ ಒಬ್ಬಳನ್ನೇ ರೂಂನಲ್ಲಿ ಬಿಟ್ಟು ಎಲ್ಲಿಗೋ ಹೋಗಿದ್ದು ಆಗ ನಾನು ಅಲ್ಲಿಂದ ತಪ್ಪಿಸಿಕೊಂಡು ಬೆಂಗಳೂರಿಗೆ ಬಂದೆ. ಆದರೆ ಎಲ್ಲಿ ಹೋಗ್ಬೇಕು ಅಂತ ಗೊತ್ತಾಗಲಿಲ್ಲ. ಇದ್ದ ದುಡ್ಡಲ್ಲಿ ಒಂದು ಚಿಕ್ಕ ರೂಂತಗೊಂಡೆ ಬೀದಿಲಿ ಬೀಳಬಾರದು ಅಂತ. ಒಂದು ಕ್ಲಿನಿಕ್‌ನಲ್ಲಿ ಕೆಲಸ ಹಿಡಿದೆ ನನಗೆ ಇಷ್ಟವಾದ ಕೆಲಸ ಇದು ಈಗಲು ಮಾಡ್ತಿದ್ದೀನಿ. ಗಂಡನ ಮನೆಗೆ ಹೋಗಲ್ಲ ಹೋದರೆ ಸಾಯಿಸುತ್ತಾರೆ. ಮತ್ತೊಂದು ಮದುವೆ ಆಗಿದ್ದಾನೆ ಏನು ಮಾಡ್ಲಿ ಅಂತ ಗೊತ್ತಾಗಲಿಲ್ಲ. ಕೆಲಸ ಇದೆ ಅದರಲ್ಲೇ ಜೀವನ ಕಳೀತಿದೆ. ಇಲ್ಲೇ ಒಂದು ಅನಾಥಾಶ್ರಮ ಇದೆ. ಆಗಾಗಹೋಗಿ ಮಕ್ಕಳನ್ನು ಮಾತಾಡಿಸಿ ತಿಂಡಿ ಕೊಟ್ಟು ಬರ್ತೀನಿ ನಾನು ಏನು ತಪ್ಪು ಮಾಡಿದೆ ನನಗೆ ಯಾಕೆ ಈ ಪರಿಸ್ಥಿತಿ ಬಂತು ಒಂದು ಅರ್ಥ ಆಗ್ತಿಲ್ಲ. ನೋಡೋಣ ಎಷ್ಟು ದಿನ ಆಗುತ್ತೆ ಅಷ್ಟು ದಿನ ಬದುಕೋದು ಎಂದು ಹತಾಷೆಯಿಂದ ತಮ್ಮ ಪರಿಸ್ಥಿತಿಯನ್ನು ವಿವರಿಸಿದರು".

**ಪ್ರಕರಣ–೮**

ಹೆಸರು : ಪ್ರಭಾ

ವಯಸ್ಸು : ೩೫

ಜಾತಿ : ಒಡ್ಡರು

ಶಿಕ್ಷಣ : ೧೦ನೇ ತರಗತಿ

ಸ್ಥಳ : ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ನಿರೂಪಣೆ:** "ನಾನು ಮದುವೆಯಾಗಿದ್ದು ೨೦ ವರ್ಷಕ್ಕೆ ಒಬ್ಬ ಮಗ ಇದ್ದಾನೆ. ನಮ್ಮ ಮಾವನಿಗೆ ನನ್ನ ಮದುವೆ ಮಾಡಿದ್ರು ನಮ್ದು ಆಂಧ್ರ ನಮ್ಮ ಮಾವ ಇಲ್ಲಿ ಕಂಟ್ರಾಕ್ಟ್ ಕೆಲಸ ಮಾಡಿಸ್ತಾನೆ. ಅದಕ್ಕೆ ಇಲ್ಲಿ ಇದ್ದೀವಿ ನಾನು ದೊಡ್ಡ ಹೆಂಡ್ತಿ. ಮಾವನಿಗೆ ಮತ್ತೊಬ್ಬಳು ಹೆಂಡ್ತಿ ಇದ್ದಾಳೆ ಅವಳಿಗೂ ಇಬ್ಬರು ಮಕ್ಕಳು ನಮ್ಮ ನೆಂಟ್ರಲ್ಲೆ ಒಬ್ರು ದುಬೈಗೆ ಹೋಗಿ ದುಡ್ಡು ಸಂಪಾದನೆ ಮಾಡ್ತಾ ಇದ್ರು, ಮನೆ ಕೆಲಸಲಕ್ಕೆ ಬೇಕು ಬರ್ತೀಯಾ ಅಂದ್ರು ನಾನು ಒಪ್ಪಿದೆ. ನಮ್ಮ ಮಾವನೆ ಮುಂದೆ ನಿಂತು ಎಲ್ಲಾ ರೆಡಿ ಮಾಡಿ ನನ್ನ ಅದ್ರ ಜೊತೆ ಕಳಿಸಿದ ನಮ ಖುಷಿಯಿಂದ ಹೋದೆ. ಅವರು ಕೆಲಸ ಮಾಡ್ತಾ ಇದ್ದ ಜಾಗದಲ್ಲೇ ನಂಗೂ ಕೆಲಸ ಕೊಡಿಸಿದ್ರು ಒಂದು ತಿಂಗಳು ಕೆಲಸ ಮಾಡಿದೆ. ಅಲ್ಲಿ ಒಂದು ಮುಸ್ಲಿಂ ಫ್ಯಾಮಿಲಿ ಫುಲ್ ಶ್ರೀಮಂತರು ನಾವು ಇರೋಕೆ ಅಂತ Out house ಕೊಟ್ಟಿದ್ರು ಚೆನ್ನಾಗಿ ಊಟ ಕೊಡ್ತಾ ಇದ್ರು ನಾನು ನೆಲ ಬರೆಸೋದು ಬಟ್ಟೆ ಪಾತ್ರೆ ತೊಳೆಯೋದು. ಜಾತ್ರಾಂ, ಲೆಟ್ರಿನ್ ತೊಳೆಯೋದು ಮುಡ್ತಾ ಇದ್ದೆ. ಒಂದು ತಿಂಗಳು ಸಂಬಳನು ಕೊಟ್ರು, ಆ ಮನೇಲಿ ಮೂರು ಜನ ಗಂಡಸರು ಇಬ್ಬರು ಹೆಂಗಸರು ಇದ್ರು ಎಲ್ಲಿಗೋ ಹೋಗೋರು, ಬರೋರು ಆವಾಗವಾಗ ಜನ ಒಂದು ಹೋಗ್ತಿದ್ರು, ಎರಡನೆ ತಿಂಗಳಿಗೆ ನನ್ನ ಪಾಸ್ ಪೋರ್ಟ್ ಎಲ್ಲಾ ಡ್ಯಾಕುಮೆಂಟ್ಸನ ಅವರ ಮನೇಲಿ ಭದ್ರವಾಗಿ ಇಡ್ತೀವಿ ಅಂತ ಇಸ್ಕಂಡ್ರು ಆ ಮೇಲೆ ರಾತ್ರಿ ಒಂದು ಮನೆ ಕ್ಲೀನ್ ಮಾಡು ಅಂದ್ರು ನಾನು ಮಾಡ್ತಾ ಇದ್ದೆ ಒಬ್ಬ ಯಾರೋ ಬಂದು ಬಾತ್‌ರೂಂನಲ್ಲೆ ನನ್ನ ಹಿಡ್ಕೊಂಡ ತಪ್ಪಿಸಿಕೊಳ್ಳಕೆ ನೋಡೊ ಆಗಲಿಲ್ಲ ಆಯಮ್ಮ ಬಂದು ಸನ್ನೆ ಮಾಡಿ ನಾನು ಅವನ ಜೊತೆ ಮಲಗಬೇಕು ಅಂತ ಹೇಳಿದ್ಲು ಆಗಲ್ಲ ಅಂದರೆ ಕಪಾಳಕ್ಕೆ ಹೊಡೆದಳು. ರೂಂ ಬಾಗಿಲು ಹಾಕ್ಕೊಂಡು ಓದಲ್ಲ ಅ... ನನ್ನ ಹೆಂಗೆಬೇಕೋ ಹಾಗೆ ಬಳಸಿದ. ಇಂಡಿಯಾ ಹೆಂಗಸರು ಅವನಿಗೆ ಇಷ್ಟ ಅಂತ ಅಂದ ದುಡ್ಡು ಕೊಟ್ಟ, ಎದ್ದು ಹೋದ ಬೆಳಿಗ್ಗೆ ಅವಮ್ಮ ಒಂದು ಹೋಗು ಅಂದ್ಲು ದುಡ್ಡು ಅವಳ ಎತ್ತೊಂಡ್ಲು ನಾನು ಅವಳ ಮಾತು ಕೇಳಲ್ಲ ನನ್ನಿ ವಾಪಸ್ಸು ಕಳಿಸಿ ಅಂದೆ ನನ್ನ ಅಲ್ಲಿಗೆ ಜೊತೇಲಿಕರ್ಕೊಂಡು ಹೋಗಿದ್ದಲ್ಲ ಆ ದರ್ಮ ನನ್ನ ಹೆದರಿಸಿದ್ಲು ಕಳ್ಳತನ ಇಲ್ಲಂದ್ರೆ ನೀನು ವೇಶ್ಯೆ ಅಂತ ಹೇಳಿ ಪೋಲಿಸ್‌ಗೆ ಹೇಳಿದ್ರೆ ನೀನು ವಾಪಸ್ಸು ಇಂಡಿಯಾಗೆ ಹೋಗಲ್ಲ ಬಾಯಿಮುಚ್ಕೊಂಡು ಇವರು ಹೇಳಿದಂಗೆ ಕೇಳು ಅಂದ್ಲು. ನಾನೂ ಎರಡು ವರ್ಷ ಆಗಲ್ಲ ಅಂತ ಸತಾಯಿಸ್ತಾ ಇದ್ದೆ. ಊಟ ಕೊಡೋದು ಕಡಿಮೆ ಮಾಡಿದ್ರು ನೀರು ಸ್ವಲ್ಪ ಕೊಡೋರು ಆ Out house ನಲ್ಲಿಕೂಡಿ ಹಾಕಿದ್ರು. ಆವಾಗಲೂ ನನ್ನ ಬೇರೆ ಗಂಡಸರ ಹತ್ರ ಮಲಗೋಗೆ ಬಿಡೋರು. ಮನೆಗೆ ಪೋನ್ ಮಾಡಿಕೊಡ್ತಿದ್ರು, ಸರಿಯಾಗಿ ಸಂಬಳ ಕೊಡ್ತಿದ್ರು, ನಾನು ನಾಲ್ಕು ಮಾತಾಡೋಕೆ ಮಾತ್ರ ಅವಕಾಶ ಕೊಡೋರು. ನನ್ನ ಕೆಲಸಕ್ಕೆ ಸೇರಿಸಿದ ಅವಮ್ಮ ನಾನೇನಾದ್ರು ಬಾಯಿಬಿಟ್ರೆ ನಿಂದೆ ಮರಿಯಾದೆ ಹೋಗೋದು. ಆಮೇಲೆ ನಿನ್ನ ಮನೆಯವರು ಸೇರಿಸಲ್ಲ. ಆವಾಗ ಏನು ಮಾಡ್ತೀಯಂ ಅಂತ ಹೆದರಿಸಿದ್ಲು ೫ ವರ್ಷ ಆದ ಮೇಲೆ ಒಂದು ಸಲ ನನ್ನಿ ಇಂಡಿಯಾಗೆ ಹೋಗೋಕೆ ಅವಕಾಶ ಕೊಟ್ರು ನಾನು ಮೂರು ತಿಂಗಳು ಇದ್ದು ದುಡ್ಡು ಚಿನ್ನಿ

ಕೊಟ್ಟು ಮತ್ತೆ ವಾಪಸ್ಸು ಹೋದೆ. ಯಾಕಂದ್ರೆ ನನ್ನ ಬ್ಲಾಕ್ ಮೇಲ್ ಮಾಡಿದ್ರು. ಅವರಿತ್ರ ನನ್ನ ಎಲ್ಲಾ ವಿಡಿಯೋ ಫೋಟೋ ಇದಾವೆ ಅಂತ ಮತ್ತೆ ಹೋಗಿ ಅದೇ ಕೆಲಸ ಮಾಡಿ ವಾಪಸ್ಸು ಬಂದಿದೀನಿ. ನನಗೆ ಸ್ತನ ಕ್ಯಾನ್ಸರ್ ಆಯ್ತು ಅದಕ್ಕೆ ಇಲ್ಲಿಗೆ ಕಳ್ಸಿದ್ರು ಒಂದು ಸ್ತನ ತೆಗೋದ್ದಾರೆ. ಗಂಡ ಮಕ್ಕಳಿಗೆ ದುಡ್ಡು ಬೇಕಿದ ನಾನಲ್ಲ. ಏನೋ ಇನ್ನೂ ಬದುಕಿದೀನಿ ನೋಡು. ಆರೋಗ್ಯ ಸರಿ ಇಲ್ಲ. ಅವರಾದ್ರು ಚೆನ್ನಾಗಿ ಇರಲಿ ನಮ್ಮಂಗೆ ಮೋಸ ಹೋದವ್ರು ಬಹಳ ಜನ ಇದಾರೆ ಅಲ್ಲಿ ಕಡಿಮೆ ಕೂಲಿ ಕೊಡ್ತಾರೆ ಜಾಸ್ತಿ ದುಡುಸ್ತಾರೆ. ನನ್ನಂತವರು ಎಷ್ಟೋ ಅಲ್ಲಿ". (ಈ ಮಹಿಳೆಯನ್ನು ಸಂದರ್ಶನ ಮಾಡಿದ ೧ ವರ್ಷಕ್ಕೆ ಆರೋಗ್ಯ ಸಮಸ್ಯೆಯಿಂದಾಗಿ ಮರಣಿಸಿದರು)

ಅಧ್ಯಾಯ : ಎಂಟು

# ಸಮಾರೋಪ

೮.೧ ಅಧ್ಯಯನದ ಫಲಿತಗಳು

೮.೨ ಅಧ್ಯಯನದ ಮಿತಿಗಳು

೮.೩ ಅಧ್ಯಯನದ ಸವಾಲುಗಳು

೮.೪ ಶಿಫಾರಸ್ಸುಗಳು

ಅಧ್ಯಾಯ : ಎಂಟು

# ಸಮಾರೋಪ

ಪ್ರಸ್ತುತ ಅಧ್ಯಾಯದಲ್ಲಿ ನನ್ನ ಸಂಶೋಧನಾ ವಿಷಯವಾದ "ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ : ಸ್ತ್ರೀವಾದಿ ಅಧ್ಯಯನ"ಕ್ಕೆ ಸಂಬಂಧಿಸಿದಂತೆ ಅಧ್ಯಯನದ ಫಲಿತಗಳು, ಅಧ್ಯಯನದ ಮಿತಿಗಳು ಮತ್ತು ಅಧ್ಯಯನದ ಮುಂದಿನ ಸಾಧ್ಯತೆಗಳು ಸಲಹೆಗಳನ್ನು ನಿರೂಪಿಸಲಾಗಿದೆ.

ಶತಮಾನಗಳಿಂದ ಅಪರಾಧೀಕರಣಕ್ಕೆ ತುತ್ತಾಗಿ ಸಮಾಜದಿಂದ ಬಹಿಷ್ಕೃತಗೊಂಡ ದಮನಿತ ಹೆಣ್ಣುಮಕ್ಕಳು ಸಂವಿಧಾನದ ಅಡಿಯಲ್ಲಿ ತಮ್ಮ ಸ್ವಾತಂತ್ರ್ಯವನ್ನು ಅನುಭವಿಸುವುದರಿಂದ ಹೊರದೂಡಲ್ಪಟ್ಟಿದ್ದಾರೆ. ಹೆಣ್ಣಿನ ಮೇಲೆ ದಿನನಿತ್ಯ ನಡೆಯುತ್ತಿರುವ ಅತ್ಯಾಚಾರ, ದೌರ್ಜನ್ಯಗಳ ಜೊತೆಗೇ ರಾಜ್ಯದಲ್ಲಿ ಹೆಣ್ಣುಮಕ್ಕಳ ನಾಪತ್ತೆ ಪ್ರಕರಣಗಳು ಹೆಚ್ಚುತ್ತಿವೆ. ರಾಜ್ಯ ಪೋಲೀಸ್ ಮತ್ತು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ನೀಡಿರುವ ಅಂಕಿ ಅಂಶಗಳ ಪ್ರಕಾರ ೨೦೦೯ರಿಂದ ೨೦೧೧ರ ವರೆಗೆ ದಾಖಲಾದ ನಾಪತ್ತೆಯಾದ ಹೆಣ್ಣು ಮಕ್ಕಳು ೧೪.೯೮೯. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಮರ್ಯಾದೆಗೆ ಅಂಜಿ ದಾಖಲಾಗದವು ಎಷ್ಟೋ. ಆದರೆ ದಾಖಲಾದವುಗಳಲ್ಲೇ ಪತ್ತೆಯಾಗದೇ ಉಳಿದ ಹೆಣ್ಣುಮಕ್ಕಳು ೮೦೩೬, ೨೦೧೨ರಲ್ಲಿ ನಾಪತ್ತೆಯಾದವರು ೮೦೮೪. ಹೀಗೆ ನಾಪತ್ತೆಯಾದವರಲ್ಲಿ ಬಹುಪಾಲು ಅನೈತಿಕ ಸಾಗಾಣಿಕೆಗೆ ಬಲಿಯಾಗಿರುತ್ತಾರೆ. ಒಳ್ಳೆಯ ಕೆಲಸದ ಬರವಸೆ, ಪ್ರೀತಿ ಅಥವಾ ಮದುವೆಯ ಸುಳ್ಳು ಭರವಸೆ, ಹಣದಾಸೆಗೆ ಹೆಣ್ಣು ಮಕ್ಕಳನ್ನು ಹೆದರಿಸಿ ಅವರನ್ನು ಬಲಿಪಶು ಮಾಡಲಾಗುತ್ತಿದೆ. ಈ ಅಂಶಗಳನ್ನು ಪ್ರಾಯೋಗಿಕವಾಗಿ ಪ್ರಸ್ತುತ ಅಧ್ಯಾಯದಲ್ಲಿ ನೋಡಲಾಗಿದೆ.

## ೮.೧ ಅಧ್ಯಯನದ ಫಲಿತಗಳು

ನನ್ನ ಸಂಶೋಧನಾ ವಿಷಯವಾದ 'ಹೆಣ್ಣು ಮಕ್ಕಳ ಅನೈತಿಕ ಸಾಗಾಣಿಕೆ: ಸ್ತ್ರೀವಾದಿ ಅಧ್ಯಯನ' (ಮೈಸೂರು, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳನ್ನು ಅನುಲಕ್ಷಿಸಿ)ಕ್ಕೆ ಸಂಬಂಧಿಸಿದಂತೆ ಸಂಶೋಧನೆ ಕೈಗೊಂಡಿದ್ದು ಸಂಶೋಧಾನಾ ಉದ್ದೇಶದಂತೆ ಅಧ್ಯಯನ ನಡೆಸಿ ಕೆಲವು ಫಲಿತಗಳನ್ನು ಕಂಡುಕೊಂಡಿದ್ದು ಅವು ಈ ಕೆಳಗಿನಂತಿವೆ.

೧. ಪ್ರಕರಣಗಳನ್ನು ಅಧ್ಯಯಿಸಿದಾಗ ಒಟ್ಟು ೨೩ ಪ್ರಕರಣಗಳಲ್ಲಿ ಬೆಂಗಳೂರು ನಗರ ಜಿಲ್ಲೆ ಶೇ.೩೪.೭೮, ಬೆಂಗಳೂರು ಗ್ರಾಮಾಂತರ ಜಿಲ್ಲೆ ಶೇ.೩೪.೭೮ ಮತ್ತು ಮೈಸೂರು ಜಿಲ್ಲೆ ಶೇ. ೩೦.೪೩ ಪ್ರಮಾಣದಲ್ಲಿ ಹೆಣ್ಣು ಮಕ್ಕಳ ಸಾಗಾಣಿಕೆಯಾಗಿರುವುದು ಕಂಡುಬಂದಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಗೂ ಮತ್ತು ನಗರ ಜಿಲ್ಲೆಯ ನಡುವೆ ಯಾವುದೇ ವ್ಯತ್ಯಾಸವಿಲ್ಲ.

೨. ಅನೈತಿಕ ಸಾಗಾಣಿಕೆಯಾದ ಸಂದರ್ಭದಲ್ಲಿ ವಕ್ತೃಗಳ ವಯಸ್ಸು ಪರಿಶೀಲಿಸಿದಾಗ ಶೇ.೩೦.೪೩. ೧೧ ರಿಂದ ೧೫, ಶೇ.೪೩.೪೭, ೧೬ ರಿಂದ ೨೦ ವಯಸ್ಸಿನವರೇ ಆಗಿದ್ದಾರೆ. ಅಂದರೆ ಪ್ರಮುಖವಾಗಿ ಬಹಳ ಕಡಿಮೆ ವಯಸ್ಸಿನಲ್ಲಿಯೇ ಹೆಣ್ಣುಮಕ್ಕಳ ಅಪಹರಣ ಮತ್ತು ಸಾಗಾಣಿಕೆ ನಡೆಯುತ್ತಿದೆ. ಒಟ್ಟಾರೆ ಎಲ್ಲಾ ಪ್ರಕರಣಗಳನ್ನು ವಿಶ್ಲೇಷಿಸಿದಾಗ ೧೩ ರಿಂದ ೨೫ನೇ ವಯಸ್ಸಿನವರೆಗೂ ಸಾಗಾಣಿಕೆ ನಿರಂತರವಾಗಿ ನಡೆದಿದೆ. ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳೇ ಹೆಚ್ಚು ಸಾಗಾಣಿಕೆಯಾಗುತ್ತಿದೆ. ಅಪ್ರಾಪ್ತರಿಗೆ ಹೆಚ್ಚಿನ ಬೇಡಿಕೆ ಇರುವುದು ಮತ್ತು ಅವರನ್ನು ಸುಲಭವಾಗಿ ಮೋಸಗೊಳಿಸಿ ಮತ್ತು ಅಪಹರಿಸಲು ಸಾಧ್ಯವಾಗುವುದರಿಂದ ಈ ಕೃತ್ಯವೆಸಗಲು ಮತ್ತಷ್ಟು ಪುಷ್ಠಿ ನೀಡಿದೆ. ಮತ್ತು ಕನ್ಯೆಯೊಡನೆ ಸೇರುವುದರಿಂದ ಲೈಂಗಿಕ ಕಾಯಿಲೆಗಳನ್ನು ವಾಸಿ ಮಾಡಿಕೊಳ್ಳಬಹುದೆಂಬ ನಂಬಿಕೆಯಿಂದ ಅಪ್ರಾಪ್ತರನ್ನೇ ಸಾಗಾಣಿಕೆಗೆ ಗುರಿಯಾಗಿಸಲಾಗಿದೆ.

೩. ಬಹಳಷ್ಟು ಹೆಣ್ಣು ಮಕ್ಕಳು ಹಿಂದೂ ಧರ್ಮದವರೇ ಆಗಿದ್ದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಮಾಹಿತಿಯಂತೆ ಶೇ.೮೨.೬೦ರಷ್ಟು ಹೆಣ್ಣು ಮಕ್ಕಳು ಹಿಂದೂ ಧರ್ಮದವರು. ಈ ಹೆಣ್ಣು ಮಕ್ಕಳನ್ನು ಅವರ ಜಾತಿ ವರ್ಗದ ಆಧಾರದ ಮೇಲೆ ವಿಂಗಡಿಸಿದಾಗ ಪರಿಶಿಷ್ಟ ಪಂಗಡ, ಪರಿಶಿಷ್ಟ ಜಾತಿಗೆ ಸೇರಿದ ಹೆಣ್ಣುಮಕ್ಕಳೇ ಅಧಿಕವಾಗಿದ್ದಾರೆ. ಜಾತಿಯ ಕಾರಣಕ್ಕಾಗಿಯೇ ಬಹುಪಾಲು ಹೆಣ್ಣು ಮಕ್ಕಳು ಅನೈತಿಕ ವ್ಯವಹಾರಗಳಿಗೆ ಬಲಿಯಾಗಿದ್ದಾರೆ. ಲೈಂಗಿಕತೆ, ಲೈಂಗಿಕ ಸುಖ ಎಂಬುದರ ಅರ್ಥವೇ ಗೊತ್ತಿರದ ಹೇಳಿದರೂ ಅರ್ಥವಾಗದ ಅತ್ಯಂತ ಮುಗ್ಧ ಮತ್ತು ಅಮಾಯಕ ಹೆಣ್ಣು ಮಕ್ಕಳನ್ನು ಲೈಂಗಿಕ ಜೀತಕ್ಕೆ, ಅನೈತಿಕ ವ್ಯವಹಾರಗಳಿಗೆ ತಳ್ಳುತ್ತಿರುವುದು ಪುರುಷ ಪ್ರಧಾನ ಸಮಾಜದಲ್ಲಿ ಆಚರಣೆಯಲ್ಲಿರುವ ಜಾತಿ ಆಧಾರಿತ ವಿಕಾರಗಳು ಪ್ರಮುಖವಾಗಿವೆ.

೪. ಪ್ರಸ್ತುತ ಪ್ರಕರಣ ಅಧ್ಯಯನವು ಹೆಣ್ಣು ಮಕ್ಕಳು ಇಂದು ಎದುರಿಸುತ್ತಿರುವ ಎಲ್ಲಾ ರೀತಿಯ ತಾರತಮ್ಯ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಅನಕ್ಷರತೆಯ ಪಾತ್ರವು ಇದೆ ಎಂಬುದನ್ನು ಸಾಬೀತುಪಡಿಸಿದೆ. ಈ ಅಧ್ಯಯನದಲ್ಲಿ ಶೇ. ೩೪.೭೮ರಷ್ಟು ಹೆಣ್ಣು ಮಕ್ಕಳು ಅನಕ್ಷರಸ್ಥರಾಗಿದ್ದಾರೆ. ಶೇ.೪೩.೪೭ರಷ್ಟು ಹೆಣ್ಣು ಮಕ್ಕಳು ಮಾತ್ರ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಪಡೆಯಲು ಸಾಧ್ಯವಾಗಿದೆ. ಕೆಳವರ್ಗದ ಜಾತಿಯ ಕಾರಣಕ್ಕೆ, ಬಡತನದ ಕಾರಣಕ್ಕೆ, ಹೆಣ್ಣು ಮಗು ಎನ್ನುವ ಕಾರಣಕ್ಕೆ ಶಾಲೆಯಿಂದ ದೂರ ಉಳಿದಿದ್ದಾರೆ. ಈ ಅನಕ್ಷರತೆಯು ಈ ಹೆಣ್ಣು ಮಕ್ಕಳು ಸಾಗಾಣಿಕೆಗೊಂಡಾಗ ಭಾಷೆಯ ಅರಿವಿಲ್ಲದೆ ಮತ್ತು ಲೋಕ ಜ್ಞಾನದ ಅರಿವಿಲ್ಲದೆ ತಪ್ಪಿಸಿಕೊಳ್ಳಲು

ಅಡ್ಡಿ ಮಾಡಿದೆ ಅನೈತಿಕ ವ್ಯವಹಾರಗಳಿಗೆ ಸಿಲುಕಿ ಅದರಿಂದ ಹೊರಬಂದು ಉದ್ಯೋಗ ಕೈಗೊಳ್ಳಲು ಸಾಧ್ಯವಾಗದೆ ಮತ್ತೆ ಅದೇ ಕೂಪಕ್ಕೆ ತೆರಳಲು ಕಾರಣವಾಗಿದೆ.

೫. ಅಧ್ಯಯನಕ್ಕೆ ಒಳಪಟ್ಟ ಹೆಣ್ಣುಮಕ್ಕಳಲ್ಲಿ ಎಲ್ಲಾ ಧರ್ಮದವರು ಇದ್ದು ಶೇ. ೩೯.೧೩ರಷ್ಟು ಹೆಣ್ಣು ಮಕ್ಕಳು ಅವಿವಾಹಿತೆಯರಿದ್ದಾರೆ. ಇವರಲ್ಲಿ ಹಲವರು ಅನಕ್ಷರಸ್ಥರು ಆಗಿದ್ದು, ಸಾಗಾಣಿಕೆಗೆ ಒಳಗಾದ ಸಮಯದಲ್ಲಿ ಅಪ್ರಾಪ್ತ ವಯಸ್ಸಿನವರಾಗಿದ್ದವರು. ಶೇ. ೪.೩೪ರಷ್ಟು ಹೆಣ್ಣು ಮಕ್ಕಳು 'ಗುಜ್ಜಾರ್' ಮದುವೆಗೆ ಒಳಪಟ್ಟವರಾಗಿದ್ದು, ಬೇರೆ ರಾಜ್ಯಕ್ಕೆ ತೆರಳಿ ಅಲ್ಲಿನ ಜೀವನ ಸ್ಥಿತಿಗೆ ಬೇಸತ್ತು ತಪ್ಪಿಸಿಕೊಂಡು ಬಂದವರಾಗಿದ್ದಾರೆ. ಕುಟುಂಬವು ಬಡತನ ಮತ್ತು ಹೆಚ್ಚು ಹೆಣ್ಣುಮಕ್ಕಳು ಇದ್ದ ಕಾರಣಕ್ಕೆ ಹಣದ ಆಮಿಷಕ್ಕೆ ಬಲಿಯಾಗಿ ಗುಜ್ಜಾರ್ ವಿವಾಹ ಮಾಡಿದ್ದಾರೆ. ಶೇ.೩೦.೪೩ರಷ್ಟು ಹೆಣ್ಣು ಮಕ್ಕಳು ವಿವಾಹಿತೆಯರೆಂದು ಉತ್ತರಿಸಿದ್ದು, ಇದರಲ್ಲಿ ಶೇ.೮.೬೯ರಷ್ಟು ಹೆಣ್ಣು ಮಕ್ಕಳು ತಾವು ಸುಳ್ಳು ಪ್ರೀತಿಗೆ ಮೋಸಹೋಗಿ ವಿವಾಹವಾಗಿ ನಂತರ ಪ್ರಿಯತಮನಿಂದಲೇ ಮಾರಾಟವಾದವರು. ಶೇ.೪.೩೪ರಷ್ಟು ಹೆಣ್ಣು ಮಕ್ಕಳು ಮುಸ್ಲಿಂ ಧರ್ಮದವರಾಗಿದ್ದು ತಮ್ಮ ಪತಿಯ ಒತ್ತಾಯಕ್ಕೆ ಅನೈತಿಕ ವ್ಯವಹಾರದಲ್ಲಿ ತೊಡಗಿರುವರು. ಪತಿಯೇ ತನ್ನ ಮನೆಯಲ್ಲಿಯೇ ಹೆಂಡತಿಯ ಮೂಲಕ ವೇಶ್ಯಾವಾಟಿಕೆ ನಡೆಸುತ್ತಿದ್ದಾನೆ. ಶೇ.೧೭.೩೯ರಷ್ಟು ಹೆಣ್ಣು ಮಕ್ಕಳು ಬಹಳ ಚಿಕ್ಕ ವಯಸ್ಸಿನಲ್ಲಿಯೇ ವಿವಾಹವಾಗಿದ್ದು ಶಿಕ್ಷಣದ ಅವಕಾಶದಿಂದ ವಂಚಿತರಾಗಿದ್ದಾರೆ. ಬಾಲ್ಯ ವಿವಾಹದ ಕಾರಣಕ್ಕೆ ಶೇ. ೮.೬೯ ಹೆಣ್ಣು ಮಕ್ಕಳು ಬಾಲ್ಯದಲ್ಲಿಯೇ ವಿಧವೆಯರಾಗಿದ್ದಾರೆ. ಇದರಿಂದ ಗಂಡನ ಮನೆಯವರಿಂದ ತಿರಸ್ಕಾರಕ್ಕೆ ಒಳಗಾಗಿ ಸಾಗಾಣಿಕೆಗೆ ತುತ್ತಾಗಿದ್ದಾರೆ. ಪಾಪ ಪ್ರಜ್ಞೆಯಿಂದ ತಪ್ಪಿಸಿಕೊಳ್ಳಲು ದೇವದಾಸಿ ಮಾಡುವ ಮೂಲಕ ತಂದೆಯೇ ಮಗಳನ್ನು ಅನೈತಿಕ ಸಾಗಾಣಿಕೆಗೆ ಒಳಗು ಮಾಡಿದ್ದಾರೆ.

ಈ ಮೇಲಿನ ಫಲಿತಗಳು ಬಾಲ್ಯ ವಿವಾಹ ಮತ್ತು ದೇವದಾಸಿ ಪದ್ಧತಿಗಳು ಇಂದಿಗೂ ಜೀವಂತವಿದ್ದು ಚಾಲ್ತಿಯಲ್ಲಿವೆ ಎಂಬುದನ್ನು ತಿಳಿಸುತ್ತದೆ. ಹಾಗೆಯೇ ಸಮಾಜದ ನಿಯಮದಂತೆ ನಡೆದುಕೊಳ್ಳುವ ಮೂಲಕ ಹೆಣ್ಣನ್ನು ಮೋಸ ಮಾಡಲು ವಿವಾಹವನ್ನೇ ದಾಳವಾಗಿ ಬಳಸಿರುವ ಪುರುಷ ಪ್ರಧಾನತೆಯ ಕ್ರೌರ್ಯವನ್ನು ನಿರ್ವಚಿಸುತ್ತದೆ.

೬. ಹೆಣ್ಣಿನ ಸಂಪೂರ್ಣ ಜವಾಬ್ದಾರಿ ತಂದೆ, ಗಂಡ, ಮಗನದೆಂದು ಧರ್ಮ ಶಾಸ್ತ್ರಗಳು ಹೇಳುತ್ತವೆ. ಸಾಮಾಜಿಕವಾಗಿ ಇದಕ್ಕೆ ಒತ್ತನ್ನು ನೀಡಲಾಗಿದೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ತಂದೆ ಮತ್ತು ಗಂಡನೇ ಲೈಂಗಿಕ ಜೀತಕ್ಕೆ ತಮ್ಮ ಮಕ್ಕಳನ್ನು ಹೆಂಡತಿಯರನ್ನು ಸಾಗಿಸಿದ್ದಾರೆ. ಶೇ.೧೭.೩೯ರಷ್ಟು ಹೆಣ್ಣು ಮಕ್ಕಳು ಅಪರಿಚಿತರಿಂದ ಮೋಸಹೋಗಿದ್ದಾರೆ. ಶೇ.೩೦.೪೩ರಷ್ಟು ಪರಿಚಿತರಿಂದಲೇ ಸಾಗಾಣಿಕೆಯಾಗಿದ್ದಾರೆ. ಶೇ. ೨೬.೦೮ರಷ್ಟು ಪ್ರಿಯತಮನಿಂದ ಸುಳ್ಳು ಪ್ರೀತಿ, ಸುಳ್ಳು ಮದುವೆ ಭರವಸೆಗಳಿಂದ ಮೋಸ ಹೋಗಿದ್ದಾರೆ. ಶೇ.೧೭.೩೯ರಷ್ಟು ತಮ್ಮ ಗಂಡಂದಿರಿಂದಲೇ ಮಾರಾಟಕ್ಕೆ ಒಳಗಾಗಿದ್ದಾರೆ. ಸಾಂಪ್ರದಾಯಿಕವಾಗಿ ಕುಟುಂಬದವರೇ ವಿವಾಹ ಮಾಡಿದ್ದರೂ ಸಹ ತಮ್ಮ

ಗಂಡಂದಿರ ದನ ದಾಹಕ್ಕೆ ಈ ಕೂಪಕ್ಕೆ ಬಿದ್ದವರಾಗಿದ್ದಾರೆ. ಶೇ.೮.೬೯ರಷ್ಟು ಹೆತ್ತ ತಂದೆಯಿಂದಲೆ ಮಾರಾಟವಾಗಿದ್ದಾರೆ. ಹೆಣ್ಣುಮಕ್ಕಳು ಎನ್ನುವ ಕಾರಣಕ್ಕೆ ತಂದೆಯೇ ನೇರವಾಗಿ ಬ್ರಾಥಲ್‌ಗೆ ಮಾರಾಟ ಮಾಡಿದ ಪ್ರಕರಣ ಒಂದಾದರೆ, ಹಣದ ಆಸೆಗಾಗಿ ತಮ್ಮ ಸಂಪ್ರದಾಯವಲ್ಲದಿದ್ದರೂ ಮಗಳನ್ನು ದೇವದಾಸಿಗೆ ಅರ್ಪಿಸುವ ಮೂಲಕ ಮಾರಾಟ ಮಾಡಿದ್ದಾರೆ.

೭. ಅಧ್ಯಯನಕ್ಕೆ ಒಳಪಟ್ಟ ಹೆಣ್ಣು ಮಕ್ಕಳಲ್ಲಿ ಅನೈತಿಕ ಸಾಗಾಣಿಕೆ ಸಂದರ್ಭದಲ್ಲಿ ಅವರಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ್ದಾರೆ, ಆದರೆ ತಾವು ಅಪ್ರಾಪ್ತರಾಗಿದ್ದ ಕಾರಣ ಅಲ್ಲಿಂದ ಹೊರಬರಲು ಧೈರ್ಯ ಸಾಲದಾಗಿದೆ. ತುಂಬಾ ಚಿಕ್ಕವಯಸ್ಸಿನವರೂ ಆದ್ದರಿಂದ ತಾವು ಸಿಲುಕಿರುವುದು ಎಂಥಹ ಅಪಾಯದಲ್ಲಿ ಎಂಬ ಅರಿವು ಅವರಿಗೆ ಇಲ್ಲದೆ ಅಲ್ಲಿಯೇ ಉಳಿದಿದ್ದಾರೆ. ಆದರೆ ಶೇ.೪೩.೪೭ ಹೆಣ್ಣು ಮಕ್ಕಳನ್ನು ರೌಡಿಗಳ ಸುಪರ್ದಿಯಲ್ಲಿ ಕೊಠಡಿಗಳಲ್ಲಿ ಕೂಡಿ ಹಾಕಿದ್ದರಿಂದ ಅವರಿಗೆ ಅಲ್ಲಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ಕೆಲವರು ಹೆದರಿಕೆಯಿಂದ ತಪ್ಪಿಸಿಕೊಳ್ಳುವ ಸಾಹಸ ಮಾಡಿಲ್ಲ. ಆದರೆ ಶೇ.೧೭.೩೯ರಷ್ಟು ಹೆಣ್ಣು ಮಕ್ಕಳನ್ನು ಅವರ ಕುಟುಂಬದವರೇ ಮಾರಾಟ ಮಾಡಿದ್ದರಿಂದ ವಿಧಿಯಿಲ್ಲದೆ ಅಲ್ಲಿಯೇ ಉಳಿದಿದ್ದಾರೆ. ಅನೈತಿಕ ಸಾಗಾಣಿಕೆದಾರರು ಹೆಣ್ಣು ಮಕ್ಕಳನ್ನು ಖರೀದಿ ಮಾಡಿ ಮತ್ತೊಬ್ಬರಿಗೆ ಮಾರುವವರೆಗೂ ಆ ಹೆಣ್ಣುಮಕ್ಕಳು ಬಂಡವಾಳವಾಗಿರುತ್ತಾರೆ. ಸರಕಾಗಿರುತ್ತಾರೆ. ಆದ್ದರಿಂದ ಪ್ರತಿ ನಿಮಿಷವೂ ಅವರನ್ನು ಕಾಯುವ ಮತ್ತು ಕುಟುಂಬದವರ ಹುಡುಕಾಟಕ್ಕೆ ಸುಳಿವು ಸಿಗದ ಹಾಗೆ ಬಚ್ಚಿಡುತ್ತಾರೆ. ಲೈಂಗಿಕ ವ್ಯವಹಾರಕ್ಕೆ ನಿರಾಕರಿಸಿದ ಹೆಣ್ಣು ಮಕ್ಕಳನ್ನು ಉಪವಾಸದಿಂದ ಹೊಡೆದು, ಬಡಿದು ಮಾಡಿ ದೌರ್ಜನ್ಯ ಮತ್ತು ಅತ್ಯಾಚಾರ ಮಾಡುವ ಮೂಲಕ ಎಲ್ಲಿಯೂ ಹೋಗದಂತೆ ಕೊಠಡಿಗಳಲ್ಲಿ ಕೂಡಿ ಹಾಕುತ್ತಾರೆ.

೮. ಶೇ.೬೫.೨೧ರಷ್ಟು ಹೆಣ್ಣು ಮಕ್ಕಳು ಯಾವುದೇ ಕಾನೂನು ಕ್ರಮಗಳಿಗೆ ಒಳಗಾಗಿಲ್ಲ. ಅಂದರೆ ಅವರು ಸಾಗಾಣಿಕೆಗೊಂಡ ಜಾಗಕ್ಕೆ ಯಾವುದೇ ಪೋಲೀಸ್ ರೇಡ್ ಆಗಿಲ್ಲ. ಶೇ.೩೪.೭೮ರಷ್ಟು ಮಾತ್ರ ಪೋಲೀಸರು ಹಿಡಿದಿದ್ದರು ಎಂದು ಉತ್ತರಿಸಿದ್ದಾರೆ. ಇದು ಕಾನೂನು ವ್ಯವಸ್ಥೆಗೂ ಮತ್ತು ಸಾಗಾಣಿಕೆದಾರರಿಗೂ ನಡುವೆ ಇರುವ ಸಂಬಂಧವನ್ನು ತಿಳಿಸುತ್ತದೆ. ಹೆಣ್ಣು ಮಕ್ಕಳನ್ನು ಕೊಂಡು ಕೊಂಡು ಮಾಲೀಕರು ಅಥವಾ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಾಣಿಕೆ ಮಾಡುವವರು, ಪೋಲೀಸರಿಗೆ ಪ್ರತಿ ತಿಂಗಳು ಅಥವಾ ಇಂತಿಷ್ಟು ಪ್ರಕರಣಕ್ಕೆ ಇಷ್ಟು ಎಂದು ಹಣ ಸಂದಾಯ ಮಾಡುವರು. ಆದ ಕಾರಣ ಪೋಲೀಸ್ ರೇಡ್ ಮಾಹಿತಿ ಮೊದಲೇ ಸಾಗಾಣಿಕೆದಾರರಿಗೆ ಸಿಕ್ಕಿ ತಪ್ಪಿಸಿಕೊಳ್ಳುವ ಸಾಧ್ಯತೆಗಳೇ ಹೆಚ್ಚಿದೆ ಮತ್ತು ರೇಡ್‌ನಲ್ಲಿ ಸಿಕ್ಕ ಹೆಣ್ಣು ಮಕ್ಕಳನ್ನು ಅತ್ಯಾಚಾರ ಮಾಡಿದ ಪ್ರಸಂಗಗಳೂ ಇವೆ. ತಪ್ಪಿಸಿಕೊಂಡ ಹೆಣ್ಣು ಮಕ್ಕಳು ಪೋಲೀಸರ ಕೈಯಲ್ಲಿ ಸಿಕ್ಕಾಗ ಕಾನೂನು ಕ್ರಮದಂತೆ ಅವರನ್ನು ರಕ್ಷಿಸದೆ, ದೈಹಿಕವಾಗಿ ಹಲ್ಲೆ ಮಾಡಿ ಮತ್ತೆ ಸಾಕಾಣಿಕೆದಾರರಿಗೆ ಮತ್ತು ಬ್ರಾಥಲ್‌ಗಳಿಗೆ ಕಳುಹಿಸುತ್ತಾರೆ. ಇದು ರಾಜಕಾರಣ ಮತ್ತು ಕಾನೂನು ವ್ಯವಸ್ಥೆಯ ಮನೋಧರ್ಮವನ್ನು ನಿರೂಪಿಸುತ್ತದೆ.

೯. ಅಧ್ಯಯನಕ್ಕೊಳಪಡಿಸಿದ ಹೆಣ್ಣುಮಕ್ಕಳಲ್ಲಿ ಶೇ.೫೨.೧೭ರಷ್ಟು ಜನ ವೇಶ್ಯಾವಾಟಿಕೆಯಲ್ಲಿಯೇ ಉಳಿದಿದ್ದಾರೆ. ಹಲವರು ಚಿಕ್ಕವಯಸ್ಸಿನಲ್ಲಿಯೆ ಸಾಗಾಣಿಕೆಗೆ ಒಳಗಾಗಿ ಕುಟುಂಬದಿಂದ ದೂರವಾಗಿ ಶಿಕ್ಷಣ, ಭಾಷೆಯ ಕೊರತೆಯಿಂದ ಅನೈತಿಕತೆಯ ಚೌಕಟ್ಟಿನಿಂದ ಹೊರಬರಲಾರದೆ ಅನಿವಾರ್ಯವಾಗಿ ಜೀವನ ನಿರ್ವಹಣೆಗೆ ಲೈಂಗಿಕ ಜೀತದಲ್ಲಿಯೇ ಉಳಿದಿದ್ದಾರೆ. ಮಡಿ ಮೈಲಿಗೆ ಎನ್ನುವ ಪುರುಷ ಪ್ರಧಾನತೆಯ ಕಟ್ಟು ಪಾಡುಗಳೂ ಸಹ ಇದಕ್ಕೆ ಪೂರಕವಾಗಿಯೇ ಕೆಲಸ ಮಾಡಿವೆ. ಅಂದರೆ ಒಂದು ಸಲ ಮೈಲಿಗೆಯಾದ ಹೆಣ್ಣು ಸಮಾಜಕ್ಕೆ ಮತ್ತು ಕುಟುಂಬಕ್ಕೆ ಕಳಂಕ, ನಾಯಿ ಮುಟ್ಟಿದ ಮಡಿಕೆ ಎನ್ನುವಂತೆ ಇವರನ್ನು ನೋಡುವುದರಿಂದ ಆ ಕೂಪದಿಂದ ಹೊರಬರಲು ನಿರಾಕರಿಸಿದ್ದಾರೆ. ಶೇ.೨೧.೭೩ರಷ್ಟು ಹೆಣ್ಣು ಮಕ್ಕಳು ಇದರಿಂದ ಹೊರ ಬಂದರೂ ಸಹ ಕುಟುಂಬದ ಘನತೆಗಾಗಿ ಅವರಿಂದ ದೂರವೇ ಉಳಿದು ತಮ್ಮ ಜೀವನವನ್ನು ಪುನಃ ನಿರ್ಮಿಸಿಕೊಂಡಿದ್ದಾರೆ. ಕೇವಲ ಶೇ.೧೭.೩೯ ಹೆಣ್ಣು ಮಕ್ಕಳು ಮಾತ್ರ ಕುಟುಂಬದ ಜೊತೆಗೆ ವಾಸವಿದ್ದಾರೆ. ಇದರಿಂದ ತಿಳಿಯುವ ಅಂಶವೆಂದರೆ ಸಾಗಾಣಿಕೆಯು ವೇಶ್ಯಾವಾಟಿಕೆಯನ್ನು ಪೋಷಿಸುತ್ತಿದೆ ಮತ್ತು ಈ ವಿಷವರ್ತುಲ ಕಾಲಚಕ್ರದೊಡನೆ ಉರುಳುತ್ತಲೇ ಇರುತ್ತದೆ.

೧೦. ಅನೈತಿಕ ಸಾಗಾಣಿಕೆಗೆ ಒಳಗಾದ ಸಂದರ್ಭದಲ್ಲಿ ಶೇ.೮೬.೯೫ರಷ್ಟು ಹೆಣ್ಣುಮಕ್ಕಳಿಗೆ ಅದರ ಅರಿವು ಇಲ್ಲವಾಗಿದೆ. ಕೇವಲ ಶೇ.೧೩.೦೪ ಹೆಣ್ಣು ಮಕ್ಕಳಿಗೆ ಮಾತ್ರ ತಾವು ಮಾರಾಟವಾಗುವ ಕುರಿತು ವಿಷಯದ ಅರಿವು ಇದೆ. ಹೆಚ್ಚಿನವರು ಆ ಸಂದರ್ಭದಲ್ಲಿ ಅಪ್ರಾಪ್ತರಾಗಿದ್ದು ತಮ್ಮ ಸುತ್ತ ನಡೆಯುತ್ತಿರುವ ಘಟನೆಗಳು ಅರಿವಿಗೆ ಬಂದಿಲ್ಲ. ಬಹಳಷ್ಟು ಹೆಣ್ಣು ಮಕ್ಕಳು ಪರಿಚಯದವರು ಪ್ರಿಯಕರ, ಪತಿ ಮತ್ತು ತಂದೆಯವರಿಂದಲೇ ಮಾರಾಟವಾದ ಕಾರಣ ಅದರ ಕುರಿತು ತಿಳಿದಿಲ್ಲ. ಇದು ಬೇಲಿಯೇ ಎದ್ದು ಹೊಲ ಮೇಯ್ದಂತೆ ಆಗಿದೆ. ಈ ಎಲ್ಲಾ ಹೆಣ್ಣು ಮಕ್ಕಳನ್ನು ಹಣಕ್ಕಾಗಿಯೇ ಮಾರಾಟ ಮಾಡಲಾಗಿದೆ ಮತ್ತು ಲೈಂಗಿಕ ಜೀತವೆಂಬ ಅನೈತಿಕ ವ್ಯವಹಾರಗಳಿಗೆ ಕೊಂಡುಕೊಳ್ಳಲಾಗಿದೆ. ಸುಮಾರು ೩೦ ಸಾವಿರದಿಂದ ೩ ಲಕ್ಷದವರೆಗೂ ವಕ್ತ್ಯಗಳು ಮಾರಾಟವಾಗಿದ್ದಾರೆ.

೧೧. ಅನೈತಿಕ ವ್ಯವಹಾರಗಳಿಗೆ ಮಾರಾಟವಾದ ನಂತರ ಕೇವಲ ಶೇ.೨೬.೦೮ ಹೆಣ್ಣುಮಕ್ಕಳ ದೂರು ಮಾತ್ರ ದಾಖಲಾಗಿದೆ. ಕುಟುಂಬದವರು ವಿದ್ಯಾವಂತರು ಮತ್ತು ಹಣವಂತರು ಆದ ಕಾರಣ ತಮ್ಮ ಮಕ್ಕಳನ್ನು ಹುಡುಕುವಲ್ಲಿ ಯಶಸ್ವಿಯಾಗಿದ್ದಾರೆ. ಆದರೆ ಶೇ.೭೩.೯೧ರಷ್ಟು ಹೆಣ್ಣುಮಕ್ಕಳು ದೂರು ದಾಖಲು ಮಾಡಿಲ್ಲ. ಒತ್ತಡ, ಭಯ ಮತ್ತು ತಿಳುವಳಿಕೆಯ ಕೊರತೆ ಇದಕ್ಕೆ ಪ್ರಮುಖ ಕಾರಣ. ಹಾಗೆಯೇ ಇವರನ್ನು ಪತಿ, ಪ್ರಿಯಕರ, ತಂದೆಯೇ ಮಾರಾಟ ಮಾಡಿರುವಾಗ ಇವರು ಯಾರ ಮೇಲೆ ದೂರು ದಾಖಲಿಸಬೇಕು ಎಂಬುದೇ ಯಕ್ಷ ಪ್ರಶ್ನೆ ಹಣದ ಕೊರತೆಯು ಸಹ ಪ್ರಮುಖವಾದುದು.

೧೨. ಅನೈತಿಕ ಸಾಗಾಣಿಕೆಗೆ ಒಳಗಾದ ರೀತಿಯನ್ನು ಅಧ್ಯಯಿಸಿದಾಗ ಶೇ.೨೬.೦೮ರಷ್ಟು ಅಪಹರಣ, ಶೇ.೨೬.೦೮ರಷ್ಟು ಹೆದರಿಸಿ ಮತ್ತು ಶೇ.೪೭.೮೨ ಮೋಸದ ಮೂಲಕ ಸಾಗಾಣಿಕೆಗೆ ಒಳಗಾಗಿದ್ದಾರೆ. ಹೀಗೆ ಸಾಗಾಣಿಕೆಗೆ ಒಳಗಾದವರನ್ನು ಹೆಚ್ಚಿನದಾಗಿ ಅಂದರೆ ಶೇ.೪೩.೪೭ರಷ್ಟು ಘರ್‌ವಾಲಿಮನೆಗೆ ಸಾಗಿಸಲಾಗಿದೆ. ಹಾಗೆಯೇ ದುಬೈನಂತಹ ಹೊರ ದೇಶಕ್ಕೆ ಶೇ.೮.೬೯ ಹೆಣ್ಣು ಮಕ್ಕಳನ್ನು ಮೋಸದಿಂದಾಗಿ ಉದ್ಯೋಗದ ಆಮಿಷದಿಂದ ಸಾಗಿಸಲಾಗಿದೆ. ಶೇ. ೧೭.೩೯ರಷ್ಟು ಹೆಣ್ಣು ಮಕ್ಕಳನ್ನು ನೇರವಾಗಿ ಬೇರೆ ರಾಜ್ಯಗಳಿಗೆ ಅಂದರೆ 'ಗುಜ್ಜಾರ್' ಮದುವೆ ಮೂಲಕ ಬ್ರಾಥಲ್‌ಗಳಿಗೆ ಮಹಾರಾಷ್ಟ್ರ, ಗೋವಾ, ಗುಜರಾತಿಗೆ ಸಾಗಿಸಲಾಗಿದೆ. ಸಾಕಷ್ಟು ಹೆಣ್ಣು ಮಕ್ಕಳು ಮೈಸೂರು ಮತ್ತು ಬೆಂಗಳೂರಿನಿಂದ ಮುಂಬೈ, ಮುಂಬೈನಿಂದ ಬೆಂಗಳೂರಿಗೆ ಸಾಗಾಣಿಕೆಯಾದವರಾಗಿದ್ದಾರೆ. ಲಾಡ್ಜ್‌ಗಳಲ್ಲಿ ಪೋಲೀಸ್ ರೇಡ್ ಸಾಧ್ಯತೆಗಳು ಹೆಚ್ಚು ಇರುವುದರಿಂದ ಅಲ್ಲಿಗೆ ಕಡಿಮೆ ಸಾಗಾಣಿಕೆಯಾಗಿದೆ. ಇವೆಲ್ಲಾ ಫಲಿತಗಳು ಸಾಗಾಣಿಕೆಯು ಅಂತರಾಷ್ಟ್ರೀಯ ವ್ಯಾಪ್ತಿಗೆ ಹಬ್ಬಿರುವುದನ್ನು ಮತ್ತು ಈ ಜಾಲ ಜಾಗತಿಕ ಮಟ್ಟದಲ್ಲಿ ವಿಸ್ತರಣೆಯಾಗಿರುವುದನ್ನು ಸಾಬೀತು ಪಡಿಸುತ್ತದೆ.

೧೩. ಸಾಗಾಣಿಕೆಗೆ ಒಳಗಾದ ಸಂದರ್ಭದಲ್ಲಿ ಶೇ.೪೩.೪೭ ಹೆಣ್ಣು ಮಕ್ಕಳು ಲೈಂಗಿಕ ಹಿಂಸೆ, ದೌರ್ಜನ್ಯ ಮತ್ತು ಅತ್ಯಾಚಾರಿಗಳಿಗೆ ಒಳಗಾಗಿದ್ದಾರೆ. ಸುಳ್ಳು ಪ್ರೀತಿಯಿಂದ ಮೋಸ ಹೋದವರು ಮತ್ತು ಬ್ರಾಥಲ್‌ಗಳಿಗೆ ಮಾರಾಟವಾದವರು ಈ ಹಿಂಸೆಯನ್ನು ಅಧಿಕವಾಗಿ ಅನುಭವಿಸಿದ್ದಾರೆ. ಸಾಗಾಣಿಕೆಯಾಗುವಾಗ ರೌಡಿಗಳು ಮತ್ತು ರೇಡ್ ಆದಾಗ ಪೋಲಿಸರಿಂದಲು ಅತ್ಯಾಚಾರಕ್ಕೆ ಗುರಿಯಾಗಿದ್ದಾರೆ. ಇದರಲ್ಲಿ ಶೇ.೧೭.೩೯ ಹೆಣ್ಣು ಮಕ್ಕಳು ಹೆಚ್.ಐ.ವಿ ಸೋಂಕಿಗೆ ಬಲಿಯಾಗಿದ್ದಾರೆ. ಹೆಚ್ಚಿನವರು ಎಸ್.ಟಿ.ಡಿ ಮತ್ತು ಲೈಂಗಿಕ ಸೋಂಕುಗಳಿಗೆ ಬಲಿಯಾಗಿದ್ದಾರೆ. ಒಬ್ಬರು ಮಾತ್ರ ಸ್ತನ ಕ್ಯಾನ್ಸರ್‌ಗೆ ಬಲಿಯಾಗಿ ನಂತರ ಅದು ಉಲ್ಬಣಗೊಂಡು ಸಾವನ್ನಪ್ಪಿದ್ದಾರೆ. ಬಹಳ ಚಿಕ್ಕ ವಯಸ್ಸಿಗೆ ಸಾಗಾಣಿಕೆಗೊಂಡು ಲೈಂಗಿಕ ಜೀತಕ್ಕೆ ಬಿದ್ದಿರುವ ಈ ಹೆಣ್ಣು ಮಕ್ಕಳು ಬಹಳಷ್ಟು ಆರೋಗ್ಯ ಸಮಸ್ಯೆ ಎದುರಿಸುತ್ತಿದ್ದಾರೆ. ದುಡಿಮೆಯ ಹಣ ಸಿಗದೆ ಮತ್ತು ದುಡಿತದ ಸಂಬಳ ಕಡಿಮೆ ಇರುವುದರಿಂದ ಸರಿಯಾದ ವೈದ್ಯಕೀಯ ಚಿಕಿತ್ಸೆಯೂ ಇವರಿಗೆ ಸಾಧ್ಯವಾಗುತ್ತಿಲ್ಲ. ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಈ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದರೂ ಸಹ ಸಾಮಾಜಿಕವಾಗಿ ಇವರನ್ನು ನೋಡುವ ದೃಷ್ಟಿಕೋನದಿಂದ ಸೌಲಭ್ಯ ಪಡೆಯಲು ಹಿಂಜರಿಯುತ್ತಾರೆ. ಶೇ.೨೬.೦೮ ಹೆಣ್ಣುಮಕ್ಕಳು ಯಾವುದೇ ಸೋಂಕಿಗೆ ಬಲಿಯಾಗಿಲ್ಲ. ಕಾರಣ ಅವರನ್ನು ಬಹಳ ಬೇಗ ಅನೈತಿಕ ವ್ಯವಹಾರಕ್ಕೆ ಬಲಿಯಾಗುವ ಮೊದಲು ಕಾಪಾಡಿರುವುದು ಮತ್ತು ಬಲಿಯಾದ ಹೆಣ್ಣು ಮಕ್ಕಳನ್ನು ಬಹಳ ಕಡಿಮೆ ಅವಧಿಯಲ್ಲಿಯೆ ಅದರಿಂದ ಮುಕ್ತಿಗೊಳಿಸಿರುವುದು.

## ೮.೨ ಅಧ್ಯಯನದ ಮಿತಿಗಳು

ಯಾವುದೇ ಬಗೆಯ ಸಂಶೋಧನೆಗಳು ಸಹ ಪರಿಪೂರ್ಣತೆಯನ್ನು ಹೊಂದಿರಲು ಸಾಧ್ಯವಿಲ್ಲ. ಅದರಲ್ಲೂ ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನಿಸುವ ಮತ್ತು ಅಪಾಯಕಾರಿ ಬೆಳವಣಿಗೆಯುಳ್ಳ ಸಾಗಾಣಿಕೆಯಂತ ವಿಷಯಕಾರಿ ಜಾಗತಿಕ ವಿಷಯಗಳ ಅಧ್ಯಯನವು ಹಲವಾರು ಸವಾಲು ಮತ್ತು ಮಿತಿಗಳನ್ನು ಹೊಂದಿರುತ್ತದೆ. ಸಮಗ್ರವಾದ ಮಾಹಿತಿಯನ್ನು ಹೊರ ಹಾಕುತ್ತೇನೆ ಎಂಬುದು ಸಂಶೋಧಕರ ಅಹಂಕಾರವಾದೀತು. ನಿರ್ಬಂಧಿತ ಪರಿಸರದಲ್ಲಿ ಸಿಲುಕಿರುವ ಅನೈತಿಕ ಸಾಗಾಣಿಕೆಯ ಮೂಲಕ ತಮ್ಮ ಹಕ್ಕುಗಳನ್ನು ಕಳೆದುಕೊಂಡಿರುವ ಅಸಹಾಯಕ ಮತ್ತು ಯಾವಾಗಲೂ ವಿಷವರ್ತುಲದ ಕಾವಲಿನಲ್ಲಿರುವ ಹೆಣ್ಣುಮಕ್ಕಳ ಬದುಕಿನ ಹಲವು ಸಂಗತಿಗಳನ್ನು ನೇರವಾಗಿ ಹೊರಹಾಕುವಂತಹ ಸನ್ನಿವೇಶಗಳು ತೀರವಿರಳ. ಅಂತಹ ಮನೋಭೂಮಿಕೆಯಲ್ಲಿ ರೂಪಿತವಾಗಿರುವ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆಯ ಪ್ರಕರಣಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಸವಾಲಿನ ಸಂಗತಿಯೇ ಸರಿ. ಆ ಹೆಣ್ಣು ಮಕ್ಕಳು ಸಾಗಾಣಿಕೆಯಲ್ಲಿ ಅನುಭವಿಸಿದ ದೌರ್ಜನ್ಯ ಹಿಂಸೆಗಳನ್ನು ಗ್ರಹಿಸುವಲ್ಲಿ ಮತ್ತು ವಿಶ್ಲೇಷಣೆಗೆ ಒಳಪಡಿಸುವಲ್ಲಿ ಕೆಲವು ಕೊರತೆಗಳು ಕಾಣಿಸಬಹುದು. ಇದು ಅದ್ಯಯನದ ಮಿತಿಯು ಹೌದು. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಕೆಲವು ಮಿತಿಗಳೆಂದರೆ ಸಾಕಷ್ಟು ವಿಸ್ತೃತವಾದ ವ್ಯಾಪ್ತಿಯನ್ನು ಹೊಂದಿರುವ ಪ್ರಸ್ತುತ ವಿಷಯವನ್ನು ಸಂಪೂರ್ಣವಾಗಿ ಅಧ್ಯಯನಕ್ಕಿರುವ ಕಾಲಮಿತಿಯಲ್ಲಿ ಅಧ್ಯಯಿಸುವುದು ಅಸಾಧ್ಯವಾದುದು. ಈ ನಿಟ್ಟಿನಲ್ಲಿ ಹೆಣ್ಣುಮಕ್ಕಳ ಅನೈತಿಕ ಸಾಗಾಣಿಕೆ ಕುರಿತ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಮೈಸೂರು ಜಿಲ್ಲೆಗಳಿಗೆ ಸೀಮಿತಗೊಳಿಸಿರುವುದು ಅಧ್ಯಯನ ವ್ಯಾಪ್ತಿಯ ಮಿತಿಯಾಗಿದೆ. ಸಂಘಟಿತವಾಗಿಯೂ, ಗಡಿ ವ್ಯಾಪ್ತಿಯನ್ನು ಮೀರಿದ ಅಪರಾಧವಾಗಿ ಗುರುತಿಸಲ್ಪಡುವ ಹೆಣ್ಣುಮಕ್ಕಳ ಸಾಗಾಣಿಕೆಯ ಸ್ವರೂಪವನ್ನು ಗುರುತಿಸುವುದು ಮತ್ತು ಆ ಹೆಣ್ಣು ಮಕ್ಕಳನ್ನು ಮಾತಾಡಿಸುವುದು ಕಷ್ಟಕರವಾದ ಕಾರ್ಯವಾಗಿದೆ. ಈ ಹೆಣ್ಣು ಮಕ್ಕಳನ್ನು ಪದೇ ಪದೇ ಸ್ಥಳಾಂತರಗೊಳಿಸುವ ಕಾರಣ ಹೆಚ್ಚಿನ ಮಾಹಿತಿ ಸಂಗ್ರಹಣೆಗೆ ತೊಡಕಾಗಿದೆ. ದೊರೆತ ಹೆಣ್ಣುಮಕ್ಕಳು ಮನಸ್ಸು ಬಿಚ್ಚಿ ಮಾತನಾಡದ ಕಾರಣ ಮತ್ತು ರೌಡಿಗಳ ಹಾಗೂ ತಲೆ ಹಿಡುಕರ ಸುಪರ್ದಿಯಲ್ಲೇ ಸಂದರ್ಶನ ನಡೆಸಬೇಕಾದ ಕಾರಣ ಹೆಚ್ಚಿನ ಮಾಹಿತಿ ಸಂಗ್ರಹಣೆಗೆ ಸಾಧ್ಯವಾಗದಿರುವುದು ಅಧ್ಯಯನದ ಮಿತಿಗಳಲ್ಲಿ ಒಂದಾಗಿದೆ.

## ೮.೩ ಅಧ್ಯಯನದ ಸವಾಲುಗಳು

೧. ಅನೈತಿಕ ಸಾಗಾಣಿಕೆಯು ಮುಚ್ಚಿದ ಅಥವಾ ಮರೆಮಾಡಲಾದ ಅಪರಾಧದ ಸ್ವರೂಪವಾದ ಕಾರಣ ಅವರಿಗೆ ಆಧುನೀಕರಣಗೊಂಡ ಸೌಲಭ್ಯಗಳು ಸುಲಭವಾಗಿ ದೊರೆಯುತ್ತಿರುವುದರಿಂದ ಸಾಗಾಣಿಕೆದಾರರನ್ನು ಮತ್ತು ದಮನಿತರನ್ನು ಗುರಿತಿಸುವುದು ಸವಾಲಾಗಿದೆ.

೨. ಅನೈತಿಕ ಸಾಗಾಣಿಕೆಗೆ ಒಳಗಾದ ಹೆಣ್ಣುಮಕ್ಕಳನ್ನು ಗುರುತಿಸುವುದು ಕಷ್ಟದ ಕೆಲಸ ಸರ್ಕಾರೇತರ ಸಂಸ್ಥೆಗಳ ಮೂಲಕ ಇವರನ್ನು ತಲುಪಲು ಪ್ರಯತ್ನಿಸಿದರೂ ಅವರು ತಮಗೆ

ಸಿಗಬೇಕಿದ್ದ ಮಾಹಿತಿ ಮತ್ತೊಬ್ಬರ ಪಾಲಾಗುವುದನ್ನು ತಪ್ಪಿಸಲು ನಮಗೆ ಸರಿಯಾದ ಮಾಹಿತಿ ಮತ್ತು ಮಾರ್ಗದರ್ಶನ ನೀಡುವುದಿಲ್ಲ.

೩. ಈ ಅನೈತಿಕ ಸಾಗಾಣಿಕೆಯಲ್ಲಿ ಹೆಣ್ಣು ಮಕ್ಕಳನ್ನು ಸ್ಥಳಾಂತರಗೊಳಿಸುವ ಪ್ರಕ್ರಿಯೆ ನಿರಂತರವಾಗಿರುವುದರಿಂದ ಒಮ್ಮೆ ದೊರೆತ ವಕ್ತೃಗಳು ಹೆಚ್ಚಿನ ಮಾಹಿತಿಗೆ ಮತ್ತೊಮ್ಮೆ ಸಿಗುವುದು ದುರ್ಬಲವಾಗುತ್ತದೆ.

೪. ಸಾಗಾಣಿಕೆಗೊಂಡ ಹೆಣ್ಣು ಮಕ್ಕಳು ಅವರು ಇರುವ ಜಾಗ ಬ್ರಾಥಲ್ ಆಗಿರುತ್ತದೆ. ಮತ್ತು ಅಲ್ಲಿಯವರ ಕಣ್ಗಾವಲಿನಲ್ಲೇ ನಮ್ಮ ಜೊತೆ ಮಾತನಾಡಬೇಕಿರುವುದರಿಂದ ಸಂಪೂರ್ಣ ಸತ್ಯ ಹೇಳುವರೆಂಬ ನಂಬಿಕೆ ಇಲ್ಲ.

೫. ಸಂದರ್ಶನದ ಸಮಯದಲ್ಲಿ ಅವರಿಗೆ ನಮ್ಮಿಂದ ಅಪಾಯವಾಗಬಹುದು, ಸಾಕ್ಷಿ ದೊರೆಯಬಹುದು ಎಂಬ ಕಾರಣಕ್ಕೆ ಧ್ವನಿ ಮುದ್ರಣ, ಮೊಬೈಲ್‌ಗಳನ್ನು ಬಳಸಲು ಆಸ್ಪದ ನೀಡುವುದಿಲ್ಲ ಇದರಿಂದ ನಮ್ಮ ನೆನಪಿನಲ್ಲಿ ಉಳಿದದ್ದನ್ನಷ್ಟೇ ಮಾಹಿತಿಯಾಗಿ ಬಳಸಬೇಕಾಗುವುದು.

೬. ಅನೈತಿಕ ಸಾಗಾಣಿಕೆಗೊಂಡ ಹೆಣ್ಣು ಮಕ್ಕಳು ೮೦% ವೇಶ್ಯಾವಾಣಿಕೆ ಜಾಲದಲ್ಲೇ ಇರುವುದರಿಂದ ಅವರನ್ನು ಪದೇ ಪದೇ ಬೇಟಿ ಮಾಡಲು ಸಾಧ್ಯವಾಗುವುದಿಲ್ಲ. ಬೇಟಿ ಮಾಡಲು ಘರ್‌ವಾಲಿಗಳು ಅವಕಾಶ ನಿರಾಕರಿಸುತ್ತಾರೆ. ಏಕೆಂದರೆ ಅವರಿಗೆ ಸಮಯವೆಂದರೆ ಹಣಕ್ಕೆ ಸಮವಾಗಿರುತ್ತದೆ.

೭. ವಕ್ತೃಗಳನ್ನು ಸಂದರ್ಶಿಸುವಾಗ ಅವರನ್ನು ಪದೇ ಪದೇ ಬೇಟಿ ಮಾಡುವ ಅವಶ್ಯಕತೆ ಇರುತ್ತದೆ. ಇದರಿಂದಾಗಿ ಅವರಿರುವ ಜಾಗಕ್ಕೆ ನಾವು ಹೋದಾಗ ಹಲವು ಬಾರಿ ನಾವು ಹಿಂದಿರುಗುವಾಗ ನಮ್ಮನ್ನು ರೌಡಿಗಳು, ಪಿಂಪ್‌ಗಳು, ಹಿಂಬಾಲಿಸಿದ್ದು ನಡೆದಿದೆ. ಅಪಾಯದ ಸಾಧ್ಯತೆಗಳು ಬಹಳ ಇವೆ.

೮. ಕುಟುಂಬದವರಿಂದ, ಸ್ನೇಹಿತರಿಂದ ಸಂಶೋಧನಾ ವಿಷಯದ ಕುರಿತು ಕ್ಷೇತ್ರಕಾರ್ಯವನ್ನು ಮರೆಮಾಡಲಾಗಿದೆ. ಏಕೆಂದರೆ ಇದು ಆತಂಕದ ವಾತಾವರಣವನ್ನು ಹೊಂದಿದ್ದು ಪ್ರಾಣಕ್ಕೆ ಕುತ್ತು ತರಬಹುದಾದ ಸನ್ನಿವೇಶಗಳನ್ನು ಎದುರಿಸುವ ಕಾರ್ಯವಾಗಿದೆ.

೯. ಅನೈತಿಕ ಸಾಗಾಣಿಕೆಗೆ ಒಳಗಾಗಿರುವ ಹೆಣ್ಣುಮಕ್ಕಳ ಸಂಖ್ಯೆ ಸಂಶೋಧನೆಗೆ ಮತ್ತು ಅಧ್ಯಯನಗಳ ಮೂಲಕ, ಆರಕ್ಷಕ ಠಾಣೆಗಳಲ್ಲಿ ದಾಖಲಾಗಿರುವ ದಾಖಲೆಗಳ ಮೂಲಕ ಕಾಣಿಸಿರುವ ಅಂಕಿ-ಅಂಶಗಳಿಗಿಂತ ಶೇ.೧೦ಪಟ್ಟು ಹೆಚ್ಚಾಗಿದೆ.

೧೦. ಅನೈತಿಕ ಸಾಗಾಣಿಕೆಯಲ್ಲಿ ಪೋಷಕರು, ಒಡಹುಟ್ಟಿದವರು, ಸಂಬಂಧಿಕರು, ಸಮುದಾಯದ ಸ್ನೇಹಿತರು, ವಿವಾಹ ಸಂಪರ್ಕ ಕೇಂದ್ರಗಳು, ಧರ್ಮ ಗುರುಗಳು, ಪ್ರವಾಸೋದ್ಯಮ ಗೈಡ್‌ಗಳು,

ಪ್ರಭಾವ ಶಾಲಿ ಅಧಿಕಾರಿಗಳು ಮತ್ತು ಸ್ಥಳೀಯರು ತೊಡಗಿರುವುದರಿಂದ ಯಾರು ಸತ್ಯ ಹೇಳುತ್ತಾರೆ ಎಂಬುದೇ ಯಕ್ಷ ಪ್ರಶ್ನೆಯಾಗಿದ್ದು ಇಡೀ ಸಾಮಾಜಿಕ ವ್ಯವಸ್ಥೆಯನ್ನೇ ಅನುಮಾನಿಸುವ ಪರಿಸ್ಥಿತಿ ಇದೆ.

**೮.೪ ಶಿಫಾರಸ್ಸುಗಳು**

೧. ಅನೈತಿಕ ಸಾಗಾಣಿಕೆಯ ಅಪರಾಧವನ್ನು ತನಿಖೆ ಮಾಡುವ ಮತ್ತು ಶಿಕ್ಷಿಸುವ ಕಾನೂನುಗಳನ್ನು ಹಾಗೂ ದಮನಿತರಿಗೆ ಸಂಬಂಧಿಸಿದ ಕಾನೂನುಗಳನ್ನು ಪ್ರತ್ಯೇಕವಾಗಿಯೇ ರಚಿಸಬೇಕು. ಸ್ಥಳೀಯ ಅಪರಾಧಿ ಸಮೂಹಗಳು, ವ್ಯಕ್ತಿಗಳು ಹಾಗೂ ಮಧ್ಯವರ್ತಿಗಳನ್ನು ಗುರುತಿಸಿ ಬಂಧಿಸಲು ಮತ್ತು ಅವರನ್ನು ಪರಿವರ್ತಿಸಿ ಮುಖ್ಯವಾಹಿನಿಗೆ ತರಲು ಸಹಾಯಕವಾಗುವಂತೆ ಅವಶ್ಯಕ ಅನುದಾನ ಮತ್ತು ಸಿಬ್ಬಂದಿಯನ್ನು ಸರ್ಕಾರ ಒದಗಿಸಬೇಕು.

೨. ಗುಜ್ಜರ್ ಮದುವೆ, ಬಾಲ್ಯವಿವಾಹ, ದೇವದಾಸಿ ಇತ್ಯಾದಿಯ ಮೂಲಕ ನಡೆಯುವ ಅನೈತಿಕ ಸಾಗಾಣಿಕೆಯನ್ನು ತಡೆಯಲು ಇರುವ ನಿಗ್ರಹ ದಳವನ್ನು ಹೆಚ್ಚು ವಿಸ್ತೃತಗೊಳಸಬೇಕು. ನಾಪತ್ತೆಯಾದ, ಪ್ರತಿಯೊಬ್ಬರನ್ನು ಪತ್ತೆ ಹಚ್ಚಲು ಪರಿಣಾಮಕಾರಿಯಾದ ಕ್ರಮಗಳನ್ನು ಕೈಗೊಳ್ಳಬೇಕು.

೩. ರಾಜ್ಯ, ಜಿಲ್ಲೆ, ತಾಲ್ಲೂಕು ಮಟ್ಟದಲ್ಲಿ ಪೋಲೀಸ್ ಇಲಾಖೆ, ಸರ್ಕಾರೇತರ ಸಂಸ್ಥೆಗಳು, ಮಹಿಳಾ ಸಂಘಟನೆಗಳು, ಸಾಮಾಜಿಕ ಕಳಕಳಿಯುಳ್ಳ ಜನರನ್ನು ಒಳಗೊಂಡ ಜಾಲವನ್ನು ಮಾಡಿಕೊಂಡು ಹೆಣ್ಣುಮಕ್ಕಳ ಸಾಗಾಣಿಕೆ ಮತ್ತು ಮಾರಾಟ ಜಾಲದ ಮೂಲ ಬೇರುಗಳನ್ನು ನಿಯಂತ್ರಿಸಲು ಗಂಭೀರ ಕ್ರಮ ಕೈಗೊಳ್ಳಬೇಕು.

೪. ಕಳ್ಳ ಸಾಗಾಣಿಕೆಯ ಮೂಲ, ಬೇಡಿಕೆ ಮತ್ತು ಸಾಗಣೆ ಪ್ರದೇಶಗಳನ್ನು ನಿರ್ದಿಷ್ಟವಾಗಿ ಮ್ಯಾಪಿಂಗ್ ಮಾಡುವುದರಿಂದ ಬಹಳ ಉಪಯುಕ್ತವಾಗುತ್ತದೆ. ಇದರಿಂದ ಸಮಾಜದಲ್ಲಿ ಆಗುತ್ತಿರುವ ರಚನಾತ್ಮಕ ರೂಪಾಂತರಗಳನ್ನು ಗುರುತಿಸುವುದರಿಂದ ಕಳ್ಳಸಾಗಾಣಿಕೆಯನ್ನು ತಡೆಯಬಹುದು.

೫. ಶೋಷಣೆಯ ಮತ್ತು ಹಿಂಸೆಯ ಸಂದರ್ಭದಲ್ಲಿ ಕಾನೂನು ಮತ್ತು ನ್ಯಾಯಾಂಗವನ್ನು ಅರಸಿ ಬರುವಾಗ ಮತ್ತು ಯೋಜನೆಗಳ ಅನುಷ್ಠಾನದ ಸಂದರ್ಭದಲ್ಲಿ ದಮನಿತರ ಗೌಪ್ಯತೆಯನ್ನು ಕಾಯ್ದುಕೊಂಡು ಖಾಸಗಿತನದ ಹಕ್ಕನ್ನು ಗೌರವಿಸಬೇಕು. ಅಪ್ರಾಪ್ತ ದಮನಿತರು ಅನೈತಿಕ ಸಾಗಾಣಿಕೆಯಲ್ಲಿ ಕಂಡುಬಂದಲ್ಲಿ ಸಂರಕ್ಷಣೆಗೆ ಸಂಬಂಧಿಸಿದಂತೆ ವಿಧಾನಗಳು ಮತ್ತು ನೀತಿಗಳು ಬೇರೆ ಇರಬೇಕು.

೬. ದಮನಿತರ ಸಾಮಾಜಿಕ ಕಳಂಕ ನಿವಾರಣೆಗೆ ಹಾಗೂ ಕೀಳರಿಮೆ ನಿವಾರಣೆಗೆ ಸಹಾಯವಾಗುವಂತೆ ರಾಜಕೀಯ, ಶೈಕ್ಷಣಿಕ ಮತ್ತು ಉದ್ಯೋಗಗಳಲ್ಲಿ ಮೀಸಲಾತಿ ಒದಗಿಸಬೇಕು. ಪಡಿತರ ಚೀಟಿ, ಆಧಾರ್ ಕಾರ್ಡ್, ಮತದಾನ ಚೀಟಿ, ಆರೋಗ್ಯ ಕಾರ್ಡ್, ಮುಂತಾದ ನಾಗರೀಕ ಪ್ರಾತಿನಿಧ್ಯದ ಗುರುತಿನ ಚೀಟಿಗಳನ್ನು ನೀಡಬೇಕು.

೭. ಅಸಹಾಯಕ ಶೋಷಿತ ಹೆಣ್ಣುಮಕ್ಕಳ ರಕ್ಷಣೆ ಮತ್ತು ಪೋಷಣೆಗಾಗಿ ಪ್ರತಿ ಜಿಲ್ಲೆಯಲ್ಲಿ ಕಡ್ಡಾಯವಾಗಿ ಸರ್ಕಾರಿ ಬಾಲ ಮಂದಿರಗಳು, ಸ್ವೀಕಾರ ಕೇಂದ್ರ, ಸ್ಟೇಕ್ ಹೋಂಗಳನ್ನು ಸ್ಥಾಪಿಸಬೇಕು. ಅನಿವಾರ್ಯ ಮತ್ತು ಹೆಚ್ಚಿನ ಅವಶ್ಯಕತೆ ಇರುವ ಸ್ಥಳಗಳಲ್ಲಿ ಮಾತ್ರ ಖಾಸಗಿ ಸ್ವಾಮ್ಯದ 'ಉಜ್ವಲಾ ಸ್ವಾಧಾರ' ಕೇಂದ್ರಗಳನ್ನು ರೂಪಿಸಬೇಕು. ಕಡ್ಡಾಯವಾಗಿ ಸ್ವಶಕ್ತಿ ವೃತ್ತಿ ತರಬೇತಿಯನ್ನು ನೀಡಬೇಕು ಮತ್ತು ಕಡ್ಡಾಯವಾಗಿ ಆಪ್ತ ಸಮಾಲೋಚಕರನ್ನು ನಿಯೋಜನೆ ಮಾಡಿಕೊಳ್ಳಬೇಕು. ಆಪ್ತ ಸಮಾಲೋಚನೆಯು ದಮನಿತ ಹೆಣ್ಣುಮಕ್ಕಳಿಗೆ ಬಹಳ ಅವಶ್ಯಕತೆ ಇದೆ. ಈ ಸಂದರ್ಭದಲ್ಲಿ ತನ್ನ ಸಾಗಾಣಿಕೆಗೆ ಕಾರಣವಾದವರ ಬಗ್ಗೆಯೂ ಸಹ ಸುಳಿವನ್ನು ನೀಡುತ್ತಾರೆ. ಅಂತಹ ಸಂದರ್ಭದಲ್ಲಿ ಅವರು ಯಾರೆ ಆಗಿದ್ದರು ಅಂದರೆ ಹೆಣ್ಣು ಮಕ್ಕಳ ತಂದೆ, ತಾಯಿ, ಸಂಬಂಧಿಕರು, ಗಂಡ ಯಾರೇ ಆಗಿದ್ದರೂ ಸಹ ಅವರಿಗೆ ಕಠಿಣವಾಗಿ ಶಿಕ್ಷೆ ವಿಧಿಸುವ ವ್ಯವಸ್ಥೆಯಾಗಬೇಕು.

೮. ಸಾಗಾಣಿಕೆಗೊಂಡು ರೆಡ್‌ಲೈಟ್ ಏರಿಯಾದಲ್ಲಿರುವ ಹೆಣ್ಣುಮಕ್ಕಳಲ್ಲಿ ಅದನ್ನು ಬಿಟ್ಟು ಬರಲು ತಯಾರಿರುವವರಿಗೆ ತಕ್ಷಣವೇ ಎಲ್ಲ ಮೂಲಭೂತ ಸೌಕರ್ಯಗಳನ್ನು ಒದಗಿಸಬೇಕು. ರಕ್ಷಣೆಗೊಂಡು ಬರುವ ಹೆಣ್ಣುಮಕ್ಕಳ ಪುನರ್ವಸತಿ ಕಾರ್ಯವು ಪರಿಣಾಮಕಾರಿಯಾಗಿ ನಡೆಯಬೇಕು. ಅವರಿಗೆ ನೀಡುತ್ತಿರುವ ತರಬೇತಿಗಳು ಮಾರುಕಟ್ಟೆ ಒದಗಿಸುವಂತಿರಬೇಕು. ಉದಾ:- ಅವರ ಆಸಕ್ತಿಗೆ ಮತ್ತು ವಯೋಮಾನಕ್ಕೆ ಅನುಗುಣವಾಗಿ ಮತ್ತು ಪ್ರಚಲಿತ ಮಾರುಕಟ್ಟೆಯ ಬೇಡಿಕೆಗೆ ಅನುಗುಣವಾಗಿ ಸೇವಾ ಹಾಗೂ ತಾಂತ್ರಿಕ ಕೌಶಲ್ಯ ತರಬೇತಿಗಳನ್ನು ನೀಡಬೇಕು. ಆಟೋ ಚಲಾಯಿಸುವುದು, ಹೋಮ್ ಗಾರ್ಡ್ಸ್, ಸುರಕ್ಷತಾ ಸಿಬ್ಬಂದಿ, ಸ್ವಚ್ಛತಾ ಸಿಬ್ಬಂಧಿ ಇತ್ಯಾದಿಗಳ ಜೊತೆಗೆ, ತೋಟಗಾರಿಕೆ, ಪಶು ಸಂಗೋಪನೆ, ಅಡುಗೆ, ಹೌಸ್ ಕೀಪಿಂಗ್, ಮೆಹಂದಿ ಡಿಸೈನ್, ಟೈಲರಿಂಗ್, ಎಂಬ್ರಾಯಿಡರಿ ಮುಂತಾದ ತರಬೇತಿಯ ಅವಕಾಶ ಕಲ್ಪಿಸುವುದು ಸರ್ಕಾರಿ ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಕೊಠಡಿಗಳನ್ನು ೨೪ ಘಂಟೆಗಳು ತೆರೆದಿರಬೇಕು.

೯. ಅಸ್ಪೃಶ್ಯತೆ ಜಾತಿಯಂತ ಅನಿಷ್ಟ ಆಚರಣೆಗಳನ್ನು ಬಾಲ್ಯ ವಿವಾಹ ದೇವದಾಸಿ ಪದ್ಧತಿಗಳನ್ನು ಕಡ್ಡಾಯವಾಗಿ ಸಮಾಜ ನಿರಾಕರಿಸಬೇಕು. ಲಿಂಗತಾರತಮ್ಯ ಮಾಡದೇ ಶಿಕ್ಷಣ ಮತ್ತು ಸಮಾನ ಅವಕಾಶಗಳನ್ನು ನೀಡಬೇಕು. ಶಾಲಾ ಹಂತದಲ್ಲಿಯೇ ಲಿಂಗ ಸಮಾನತೆ ಮತ್ತು ಲೈಂಗಿಕ ಶಿಕ್ಷಣದ ಕುರಿತು ಮಾಹಿತಿ ನೀಡಬೇಕು.

೧೦. ಲಿಂಗಾಧಾರಿತ ಹಿಂಸೆಯ ಬಗ್ಗೆ ಜಗತ್ತಿನಾದ್ಯಂತ ಅರಿವು ಜಾಗೃತಿ ಮೂಡುತ್ತಿರುವ ಈ ಸಂದರ್ಭದಲ್ಲಿ ದಮನಿತ ಹೆಣ್ಣಿನ ಒಳ ಮತ್ತು ಹೊರ ಬದುಕಿನಲ್ಲಿ ಕಾಣುವ ಹಿಂಸೆಯನ್ನು ಮಾನವ ಹಕ್ಕುಗಳ ಉಲ್ಲಂಘನೆ ಎಂದು ಪರಿಗಣಿಸಬೇಕಾಗಿದೆ. ಆದ್ದರಿಂದ ನ್ಯಾಯಾಂಗ, ಪೋಲೀಸ್ ವ್ಯವಸ್ಥೆಯನ್ನು ಹಾಗೂ ಮಾಧ್ಯಮವನ್ನು ಈ ನಿಟ್ಟಿನಲ್ಲಿ ಸಂವೇದನಾ ಶೀಲವಾಗಿ ಮಾಡಬೇಕಾಗಿದೆ. ಇದಕ್ಕಾಗಿ ಪೋಲೀಸ್ ಸಿಬ್ಬಂದಿ, ಪಬ್ಲಿಕ್ ಪ್ರಾಸಿಕ್ಯೂಟರ್‌ಗಳು ಮತ್ತು ನ್ಯಾಯಾಂಗದವರಿಗೆ ನೀಡುವ ತರಬೇತಿಯಲ್ಲಿ ದಮನಿತರು ಎದುರಿಸುವ ವಿಷಯಗಳಿಗೆ ಸೂಕ್ಷ್ಮವಾಗಿರುವ ಪಠ್ಯವಿರಬೇಕು.

# ಅನುಬಂಧಗಳು

## ಪರಾಮರ್ಶನ ಗ್ರಂಥಗಳು


೧. **ಅರ್ಧನಾರೀಶ್ವರ**: ತಮಿಳು ಮೂಲ ಪೆರುಮಾಳ್ ಮುರುಗನ್, ಕನ್ನಡ ಅನುವಾದ: ಕೆ.ನಲ್ಲತಂಬಿ, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೧೬.

೨. **ಅನಾವರಣ**, ಸಾ.ರಾ.ಅಬೂಬಕ್ಕರ್, ಚಂದ್ರಗಿರಿ ಪ್ರಕಾಶನ ಮಂಗಳೂರು, ೨೦೦೨.

೩. **ಅನುಪಮಾ ನಿರಂಜನ ಅವರ ಕಾದಂಬರಿಗಳು ಒಂದು ಸಾಹಿತ್ಯಕ ಅಧ್ಯಯನ**, ಡಾ. ವಿಜಯಶ್ರೀ ಸಬರದ, ಡಿ.ವಿ.ಕೆ ಮೂರ್ತಿ ಪ್ರಕಾಶಕರು, ಮೈಸೂರು, ೧೯೯೪.

೪. **ಅಂಬೇಡ್ಕರ್ ದೃಷ್ಟಿಯಲ್ಲಿ ಮನು**: ಕೆ.ಮಾಯಿಗೌಡ, ನೇಗಿಲಯೋಗಿ ಪ್ರಕಾಶನ, ಮಂಡ್ಯ, ೨೦೦೬.

೫. **ಅಸಮಾನತೆಯ ಬಣ್ಣಗಳು**, ಜಿ.ರಾಜಶೇಖರ, ಕೆ.ಫಣಿರಾಜ, ಅಹರ್ನಿಶಿ ಪ್ರಕಾಶನ ಶಿವಮೊಗ್ಗ. ೨೦೧೩.

೬. **ಆಶಯ, ಆಕೃತಿ**, ಸಿ.ಎನ್.ರಾಮಚಂದ್ರನ್, ಅಭಿನವ ಪ್ರಕಾಶನ, ಬೆಂಗಳೂರು, ೧೯೯೫.

೭. **ಇಬ್ಬನಿಯ ಕಾವು**, ಬಾನು ಮುಷ್ತಾಕ್, ಲಡಾಯಿ ಪ್ರಕಾಶನ, ಗದಗ, ೨೦೧೩.

೮. **ಒಲಂಪಿಕ್ಸ್ ಎಂಬ ಕೆಂಪು ದೀಪ** , ಲೀಲಾ ಸಂಪಿಗೆ, ಪ್ಯಾಪಿರಸ್ ಮೇಫ್ಲವರ್ ಮೀಡಿಯಾ ಹೌಸ್, ಬೆಂಗಳೂರು, ೨೦೦೮.

೯. **ಒಡಲಬೆಂಕಿ ಆರದಿರಲಿ**, ಡಾ. ವಸು ಮಳಲಿ, ಚಿಂತನ ಪುಸ್ತಕ ಬೆಂಗಳೂರು, ೨೦೧೫

೧೦. **ಕನ್ನಡ ಸಂಶೋಧನೆಯ ವೈಧಾನಿಕತೆಗಳು**, ಅಮರೇಶ ನುಗಡೋಣಿ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೮.

೧೧. **ಕುಟುಂಬ ವ್ಯವಸ್ಥೆ** ; ಮಾರ್ಕ್ಸ್‌ವಾದ-ಸ್ತ್ರೀವಾದ, ತೆಲುಗಿನಲ್ಲಿ ಓಲ್ಗಾ, ಕನ್ನಡಕ್ಕೆ ಬಿ.ಸುಜ್ಞಾನಮೂರ್ತಿ, ಪಲ್ಲವ ಪ್ರಕಾಶನ, ಚನ್ನಪಟ್ಟಣ, ೨೦೧೦.

೧೨. **ಚಹರೆ**, ಎಚ್. ಎಸ್. ಶ್ರೀಮತಿ, ಇಳಾ ಮುದ್ರಣ, ಚಾಮರಾಜಪೇಟೆ, ಬೆಂಗಳೂರು.

೧೩. **ಜಾಗತೀಕರಣ ಮತ್ತು ಸಂಸ್ಕೃತಿ, ದಪ್ತಗಿರ ಸಾಬ್, ಕನಸು ಪ್ರಕಾಶನ, ೨೦೦೪**.

೧೪. **ದಿ ಸೆಕೆಂಡ ಸೆಕ್ಸ**, ಎಚ್. ಎಸ್. ಶ್ರೀಮತಿ (ಅನು), ಅಧ್ಯಯನ ಮಂಡಳಿ, ಬೆಂಗಳೂರು, ೨೦೦೭.

೧೫. **ದೇವದಾಸಿ ಮತ್ತು ಬೆತ್ತಲೆ ಸೇವೆ**, ಮೂಲ ಉತ್ತಮ ಕಾಂಬಳೆ, ಕನ್ನಡಕ್ಕೆ ಡಾ.ಸಿದ್ರಾಮ ಕಾರಣಿಕ, ಲಡಾಯಿ ಪ್ರಕಾಶನ, ಗದಗ, ೨೦೧೩.

೧೬. **ದೇವಾಲಯಗಳು ಮತ್ತು ಲೈಂಗಿಕ ಶಿಲ್ಪ,** ತಾಪಿ ಧರ್ಮಾರಾವ್, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೨.

೧೭. **ಧರ್ಮ ಶಾಸ್ತ್ರಗಳು, ಸ್ತ್ರೀ ಹಾಗೂ ಶೋಷಣೆ,** ನಿರುಪಮ ಎಂ, ಆರತಿ ಪಬ್ಲಿಕೇಷನ್, ಬೆಂಗಳೂರು, ೧೯೯೬.

೧೮. **ನುಡಿ ರಂಗೋಲಿ**, ವಿಜಯಾ, ನಾಕುತಂತಿ ಪ್ರಕಾಶನ ಬೆಂಗಳೂರು, ೨೦೧೭.

೧೯. **ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ** (ಸಂಶೋಧನಾ ಮಹಾಪ್ರಬಂಧ), ಸುನಂದ ಎಂ., ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು, ೨೦೧೧.

೨೦. **ನೀರ ದಾರಿ- ದಲಿತ ಮಹಿಳಾ ಪ್ರಜ್ಞೆ ವಿಭಿನ್ನ ನೆಲೆಗಳಿಂದ,** ದು.ಸರಸ್ವತಿ, ಕವಿ ಪ್ರಕಾಶನ, ಕವಲಕ್ಕಿ, ಉತ್ತರ ಕನ್ನಡ, ೨೦೧೪.

೨೧. **ನೋಯುವ ಹಲ್ಲಿಗೆ ಹೊರಳುವ ನಾಲಿಗೆ,** ಎಚ್.ಎಸ್.ಅನುಪಮ, ಸೃಷ್ಟಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೪.

೨೨. **ನ್ಯಾಯಕ್ಕಾಗಿ ಮಹಿಳೆಯರ ಹೋರಾಟ,** ವೆಂಕೋಬ್ ರಾವ್, ದಿವ್ಯ ಚಂದ್ರ ಪ್ರಕಾಶನ, ಬೆಂಗಳೂರು, ೨೦೦೫.

೨೩. **ಪಾತರದವರು,** ಶೈಲಜಾ ಹಿರೇಮಠ, ಪ್ರಸಾರಾಂಗ, ಕವಿಹಂ, ೧೯೯೯.

೨೪. **ಪುರುಷ ಅಹಂಕಾರಕ್ಕೆ ಸವಾಲ್**, ಮೂಲ ತಾರಾಬಾಯಿ ಶಿಂಧೆ, ಕನ್ನಡಕ್ಕೆ ಬಿ.ಸುಜ್ಞಾನಮೂರ್ತಿ, ಲಡಾಯಿ ಪ್ರಕಾಶನ, ಗದಗ, ೨೦೧೧.

೨೫. **ಬದಲಾಗುತ್ತಿರುವ ಕರ್ನಾಟಕ,** ಚಂದ್ರ ಪೂಜಾರಿ ಎಂ, ಗಾಯಿತ್ರಿ ಪ್ರಕಾಶನ ಬಳ್ಳಾರಿ. ೨೦೧೪.

೨೬. **ಬಾಳ ಕೌದಿ,** ಕೆ.ನೀಲಾ, ಪಲ್ಲವ ಪ್ರಕಾಶನ, ಚನ್ನಪಟ್ಟಣ, ಬಳ್ಳಾರಿ, ೨೦೧೪.

೨೭. **ಬುದ್ಧನಿಲ್ಲದ ಅಮ್ರಪಾಲಿ,** ಲೀಲಾ ಸಂಪಿಗೆ, ಚಾರುಮತಿ ಪ್ರಕಾಶನ, ಬೆಂಗಳೂರು, ೨೦೧೪.

೨೮. **ಬೆಂಗಳೂರು ದರ್ಶನ,** ಸಂಪುಟ ೧- ಎಲ್.ಎಸ್ ಶೇಷಗಿರಿ ರಾವ್- ಉದಯಭಾನು ಕಲಾಸಂಘ, ರಾಮಕೃಷ್ಣ ಮಠ ಬಡಾವಣೆ, ಬೆಂಗಳೂರು, ೨೦೦೫

೨೯. **ಭಾರತೀಯ ಸಮಾಜದ ರಚನೆ ಮತ್ತು ಬದಲಾವಣೆ,** ಭಾರತಿ ಹಾದಿಗೆ ಬಿ.ಎಂ, ಚೇತನ ಬುಕ್ ಹೌಸ್, ಮೈಸೂರು, ೨೦೦೫.

೩೦. **ಭಾರತೀಯ ಸಾಮಾಜಿಕ ಸಂಸ್ಥೆಗಳು,** ನಂಜಮ್ಮಣ್ಣಿ ಎಂ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೦೩.

೩೧. **ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ,** ಎಂ.ಚಿದಾನಂದ ಮೂರ್ತಿ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೧೧.

೩೨. **ಮನುಸ್ಮೃತಿ,** ಅನು: ಶೇಷ ನವರತ್ನ, ಸಮಾಜ ಪುಸ್ತಕಾಲಯ, ಧಾರವಾಡ, ೨೦೧೯.

೩೩. **ಮನುಸ್ಮೃತಿ-ಅಪರಾಧ-ಶಿಕ್ಷೆ:** ಬಿ.ಸುಜ್ಞಾನಮೂರ್ತಿ, ಲಡಾಯಿ ಪ್ರಕಾಶನ, ಗದಗ, ೨೦೧೫.

೩೪. **ಮಾಧ್ಯಮ ಮಾರುಕಟ್ಟೆ–ಮಹಿಳೆ,** ವಿಜಯ ಕುಮಾರ್ ಹೆಚ್, ಗೀತಾಂಜಲಿ ಪುಸ್ತಕ ಪ್ರಕಾಶನ, ೨೦೧೪.

೩೫. **ಮಾನುಷಿ,** ಆರ್.ಇಂದಿರಾ, ಸಾರಾ ಎಂಟರ್ ಪ್ರೈಸಸ್, ಮೈಸೂರು, ೨೦೦೬

೩೬. **ಮುಳ್ಳ ಮೇಲಿನ ಸೆರಗು, ಅತ್ಯಾಚಾರ ಮತ್ತು ಕಾನೂನು: ಇಣುಕು ನೋಟ,** ಡಾ.ಎಚ್ ಎಸ್ ಅನುಪಮಾ, ಲಡಾಯಿ ಪ್ರಕಾಶನ, ಗದಗ, ೨೦೧೪.

೩೭. **ಮೈ ಮನಗಳ ಸುಳಿಯಲ್ಲಿ,** ಶಿವರಾಮ ಕಾರಂತ, ಎಸ್.ಬಿ.ಎಸ್.ಪಬ್ಲಿಷರ್ಸ್ ಹಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ಮುನ್ನುಡಿ, ೧೯೭೦.

೩೮. **ಮಹಿಳಾ ಅಧ್ಯಯನ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರೀತಿ ಶುಭಚಂದ್ರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೩೯. **ಮಹಿಳಾ ಅಧ್ಯಯನ ಸಂಚಿಕೆ, ಲಿಂಗ ಅಸಮಾನತೆಯ ನೆಲೆಗಳು,**ಲೇ: ವಿಜಯಕುಮಾರಿ ಎಸ್.ಕರಿಕಲ್, (ಸಂಯುಕ್ತ ಸಂ) ಸಂ.ಡಾ.ಶಿವಾನಂದ ಎಸ್.ವಿರಕ್ತಮಠ, ಪ್ರಸಾರಾಂಗ, ಕವಿಹಂ, ೨೦೧೧.

೪೦. **ಮಹಿಳಾ ಅಧ್ಯಯನ–೭, ಸಿಮನ್ ದ ಬೋವಾ ಅವರ ದಿ ಸೆಕೆಂಡ್ ಸೆಕ್ಸ್, ಒಂದು ಸಂಕ್ಷಿಪ್ತ ಪರಿಚಯ,** ಹೇಮಲತಾ ಎಚ್.ಎಂ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು.

೪೧. **ಮಹಿಳಾ ಅಸ್ತಿತ್ವದ ಸಂಕಥನ, ಕವಿತ ರೈ ಬಿ.ಆರ್, ಸಿ.ವಿ.ಜಿ, ಬೆಂಗಳೂರು, ೨೦೦೫.**

೪೨. **ಮಹಿಳಾ ಆರೋಗ್ಯ–ಒಂದು ಮರು ಚಿಂತನೆ, ಪ್ರಸಾರಾಂಗ,** ಪ್ರಸಾರಾಂಗ, ಕವಿಹಂ, ೨೦೦೮.

೪೩. **ಮಹಿಳಾ ಚಳುವಳಿ: ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ,** ಡಾ.ಹಾಲತಿ ಸೋಮಶೇಖರ್, ಅಭಿರುಚಿ ಪ್ರಕಾಶನ, ಮೈಸೂರು, ೨೦೦೭.

೪೪. **ಮಹಿಳಾ ಜಾಗೃತಿಯ ಪ್ರಕಟಣೆ,** ಮಂಜುಶ್ರೀ ಆಫಸೆಟ್ ಪ್ರಿಂಟರ್ಸ, ಬೆಂಗಳೂರು, ೧೯೯೯.

೪೫. **ಮಹಿಳಾ ಲೋಕ,** ನೇಮಿಚಂದ್ರ, ನವ ಕರ್ನಾಟಕ ಪ್ರಕಾಶನ, ೨೦೦೫.

೪೬. **ಮಹಿಳಾ ಶೋಷಣೆ ಸವಾಲುಗಳು,** ವಿಜಯಶ್ರೀ ಸಬರದ, ಪ್ರಸಾರಾಂಗ, ಗುಲ್ಬರ್ಗ ವಿಶ್ವವಿದ್ಯಾಲಯ, ೨೦೦೫.

೪೭. **ಮಹಿಳಾ ಹಕ್ಕುಗಳು– ಮಾನವ ಹಕ್ಕುಗಳ ನೆಲೆಯಲ್ಲಿ,** ಗೀತಾ ಕೃಷ್ಣಮೂರ್ತಿ, ಮಹಿಳಾ ಅಧ್ಯಯನ ಕೇಂದ್ರ, ಪ್ರಸಾರಾಂಗ, ಕವಿಹಂ, ೨೦೦೯.

೪೮. **ಮಹಿಳಾ ಹಕ್ಕುಗಳು,** ಒಡೆಯರ್.ಡಿ.ಹೆಗಡೆ, ಅಜುನ್ ಪಬ್ಲಿಷಿಂಗ್ ಹೌಸ್, ೨೦೦೭.

೪೯. **ಮಹಿಳಾ ಸಂಘಟನೆ ಹೋರಾಟ,** ಸಬಿಹಾ ಭೂಮೀಗೌಡ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಬೆಂಗಳೂರು, ೨೦೦೮.

೫೦. **ಮಹಿಳಾ ಸಂಕಥನ,** ಗಾಯತ್ರಿ ನಾವಡ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.೨೦೦೮.

೫೧. **ಮಹಿಳೆ ಇಂದಿನ ಸವಾಲುಗಳು,** ಸಬಿಹಾ ಭೂಮೀಗೌಡ, ಲಡಾಯಿ ಪ್ರಕಾಶನ, ಗದಗ, ೨೦೧೪.

೪೨. **ಮಹಿಳೆ, ಚಳುವಳಿ ಮತ್ತು ರಾಜಕಾರಣ**, ಷರೀಫಾ.ಕೆ, ಸಿರಿವರ ಪ್ರಕಾಶನ ಬೆಂಗಳೂರು, ೨೦೧೫.

೪೩. **ಮಹಿಳೆ– ದಲಿತ ಮತ್ತು ರಾಜಕೀಯ ಪ್ರಜ್ಞೆ**, ಎಚ್.ಎಸ್.ಅನುಪಮಾ, ಲಡಾಯಿ ಪ್ರಕಾಶನ, ಗದಗ,೨೦೧೨.

೪೪. **ಮಹಿಳೆ ಬಿಡುಗಡೆಯ ಹಾದಿಯಲ್ಲಿ, ಗಾಯತ್ರಿ ಎನ್, ನವ ಕರ್ನಾಟಕ ಪ್ರಕಾಶನ, ಬೆಂಗಳೂರು,೧೯೯೬.**

೪೫. **ಮಹಿಳೆ ಮತ್ತು ಕಾನೂನು ಮತ್ತು ರಾಜಕಾರಣ**, ಗೀತಾ ಕೃಷ್ಣಮೂರ್ತಿ, ಪ್ರಸಾರಾಂಗ, ಕವಿಹಂ, ೨೦೦೧.

೪೬. **ಮಹಿಳೆ ಮತ್ತು ಕೌಟುಂಬಿಕ ಹಿಂಸೆ**, ಇಂದಿರಾ ಆರ್, ರಾಘವ ಟ್ರಸ್ಟ್, ಮೈಸೂರು, ೨೦೦೦.

೪೭. **ಮಹಿಳೆ ಮತ್ತು ಜಾತಿ ಒಂದು ಸೈದ್ಧಾಂತಿಕ ಗ್ರಹಿಕೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೧.

೪೮. **ಮಹಿಳೆ ಮತ್ತು ಸವಾಲುಗಳು**. ಎಸ್.ಇಂದಿರಾ, ಶ್ರುತಿಲೋಕ ಪ್ರಕಾಶನ ಮೈಸೂರು, ೨೦೧೦.

೪೯. **ಮಹಿಳೆ ಮತ್ತು ಧರ್ಮ** ,ಶಿವಾನಂದ ಎಸ್.ವಿರಕ್ತಮಠ, ಪ್ರಸಾರಾಂಗ, ಕವಿಹಂ, ೨೦೧೮.

೫೦. **ಮಹಿಳೆ ಮತ್ತು ಸಮೂಹ ಮಾಧ್ಯಮಗಳು**, ಕೆ. ಸರೋಜಾ, ಪ್ರಸಾರಾಂಗ, ಕವಿಹಂ,೨೦೦೪.

೫೧. **ಮಹಿಳೆ ಸಮಾಜ ಮತ್ತು ಕಾನೂನು**, ಬೆ.ಕಾ. ಮೂರ್ತಿಶ್ವರಯ್ಯ. ಕರ್ನಾಟಕ ಬುಕ್ ಏಜನ್ಸಿ ೨೦೦೦.

೫೨. **ಮಹಿಳೆ ಸಮಾಜ ಮತ್ತು ಸಂಸ್ಕೃತಿ**, ಆರ್.ಇಂದಿರಾ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೨,

೫೩. **ಮಹಿಳೆ ಮತ್ತು ಮೌಢ್ಯ**: ಡಾ.ವಸುಂದರಾ ಭೂಪತಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು,೨೦೧೪.

೫೪. **ಮಹಿಳೆ ಮತ್ತು ಕೋಮುವಾದ**, ಮಾಧವಿ ಎಸ್ ಭಂಡಾರಿ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೨೦೦೬.

೫೫. **ಮಹಿಳೆಯ ಆರ್ಥಿಕತೆ ಮತ್ತು ಅಭಿವೃದ್ದಿ, ಚಂದ್ರಶೇಖರ್ ಟಿ.ಆರ್**. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೩.

೫೬. **ಮಹಿಳೆಯ ಮೇಲಿನ ದೌರ್ಜನ್ಯ ಹಿನ್ನೆಲೆಯಲ್ಲಿ ಮಹಿಳಾ ಅಪರಾಧಗಳು: ವ್ಯಾಖ್ಯೆ ಮತ್ತು ಶಿಕ್ಷೆ, ಸಂಶೋಧನಾ** ಗ್ರಂಥ(ಅಪ್ರಕಟಿತ), ಸುಮಲತಾ ಆಕಳವಾಡಿ, ಮಹಿಳಾ ಅಧ್ಯಯನ ವಿಭಾಗ, ಕವಿಹಂ,

೫೭. **ಮಹಿಳೆ:ಸಾಮಾಜಿಕ ಮತ್ತು ರಾಜಕೀಯ ಸವಾಲುಗಳು**– ಟಿ.ಆರ್.ಚಂದ್ರಶೇಖರ್– ಪ್ರಸಾರಾಂಗ, ಗುಲಬರ್ಗಾ ವಿವಿ–೨೦೦೫.

೫೮. **ಮಹಿಳೆ ಸಂಘಟನೆ ಹೋರಾಟ**, ಸಬಿಹಾ ಭೂಮಿಗೌಡ ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು. ೨೦೦೮.

೬೯. **ಮಹಿಳೆಯ ಮುನ್ನಡೆ**, ಅಂದನೂರು ಶೋಭಾ, ಮಾನಸಿ ಪ್ರಕಾಶನ, ಬೆಂಗಳೂರು,೧೯೮೮.

೭೦. **ಲೈಂಗಿಕ ಕಾರ್ಯಕರ್ತೆಯರ ಸ್ಥಿತಿಗತಿಗಳ ಅಧ್ಯಯನ**– ಡಾ.ಜಯಮಾಲ ಸಮಿತಿ ವರದಿ, ಕರ್ನಾಟಕ ಸರ್ಕಾರ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

೭೧. **ಲೈಂಗಿಕ ಜೀತ ಅಪರಾಧಿ ಯಾರು?**, ರೂಪ ಹಾಸನ, ಪ್ರಜಾವಾಣಿ, ದಿನಾಂಕ: ೩೦.೦೯.೨೦೧೪, ಬೆಂಗಳೂರು, ೨೦೧೪.

೭೨. **ಲಿಂಗ ಸೂಕ್ಷ್ಮತೆ ಮತ್ತು ನ್ಯಾಯ**, ಮಹೇಶ್.ಎಚ್, ಐ.ಸಿ.ಆರ್.ಎ, ಬೆಂಗಳೂರು, ೧೯೯೯.

೭೩. **ವೇಶ್ಯಾವಾಟಿಕೆ ಒಂದು ಅಧ್ಯಯನ**, ಲೀಲಾ ಸಂಪಿಗೆ, ನೆಲೆ ಅಕಾಡೆಮಿ ಪ್ರಕಾಶನ, ಬೆಂಗಳೂರು, ೨೦೦೫.

೭೪. **ವೇಶ್ಯೆಯರು ಮತ್ತು ಲೈಂಗಿಕ ಅಲ್ಪಸಂಖ್ಯಾತರು ನಡೆದು ಬಂದ ದಾರಿ**, ಶಿವರಾಮಯ್ಯ, ಸೃಷ್ಟಿ ಪಬ್ಲಿಕೇಷನ್ಸ, ಬೆಂಗಳೂರು, ೨೦೧೨.

೭೫. **ಸಮಾಜ ವಿಜ್ಞಾನಗಳಲ್ಲಿ ಸಂಶೋಧನಾ ವಿಧಾನಗಳು**, ಚಂದ್ರಶೇಖರ್.ಬಿ.ಎಸ್., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೧.

೭೬. **ಸರಹದ್ದಗಳ ಆಚೆ –ಈಚೆ**, ಸುಮಿತ್ರಾಬಾಯಿ ಬಿ.ಎನ್, ಇಳಾ ಪ್ರಕಾಶನ ಬೆಂಗಳೂರು, ೨೦೦೯.

೭೭. **ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ** (ಒಂದು ಸಾಂಸ್ಕೃತಿಕ ಅಧ್ಯಯನ)(ಸಂಶೋದನಾ ಗ್ರಂಥ), ಕಮಲಾ ಹೆಮ್ಮಿಗೆ, ವಿಮೋಚನಾ ಪ್ರಕಾಶನ, ಅಥಣಿ, ೧೯೯೮.

೭೮. **ಸಾಕಾರದತ್ತ ಸಮಾನತೆಯ ಕನಸು– ಮಹಿಳಾ ಪ್ರತಿರೋಧದ ನೆಲೆಗಳು**, ಪ್ರೀತಿ ಶುಭಚಂದ್ರ ಮತ್ತು ಎಂ.ಎನ್.ಸುಮನಾ, ಲಡಾಯಿ ಪ್ರಕಾಶನ, ಗದಗ, ೨೦೧೫.

೭೯. **ಸಾಮಾಜಿಕ ಮತ್ತು ಮಾನವಿಕ ಅಧ್ಯಯನಗಳ ಪರಿಭಾಷಾಕೋಶ**, ಸಂ.ಡಾ.ಎಂ.ಚಂದ್ರ ಪೂಜಾರಿ, ಡಾ.ಟಿ.ಆರ್.ಚಂದ್ರಶೇಖರ, ಡಾ.ಎ.ಎಸ್.ಶ್ರೀಧರ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೫.

೮೦. **ಸಾಮಾಜಿಕ ಸಮಸ್ಯೆಗಳು**, ಶಂಕರ್ ರಾವ್.ಚ.ನ, ಜೈ ಭಾರತ್ ಪ್ರಕಾಶನ, ಮಂಗಳೂರು, ೧೯೯೦.

೮೧. **ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ**, ಸಾರಾ ಅಬುಬಕರ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೮೨. **ಸಿಮಾನ್ ದ ಬೋವ ದ ಸೆಕೆಂಡ್ ಸೆಕ್ಸ್–ಕನ್ನಡ ಓದು**, ಅನು:ಹೆಚ್.ಎಸ್.ಶ್ರೀಮತಿ, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು, ೨೦೧೧.

೮೩. **ಸುಡುಬಿಸಿಲ ಹುಡಿಹಾದಿ**, ಸಂಶೋಧನಾ ಗ್ರಂಥ (ಪ್ರಕಟಿತ), ಶ್ರೀದೇವಿ ವಿ ಆಲೂರ, ಶ್ರೀ ವಿಕಾಸ್ ಪಬ್ಲಿಕೇಷನ್ಸ್, ಕಮಲಾಪುರ, ೨೦೧೩.

೮೪. **ಸುವರ್ಣ ಕರ್ನಾಟಕ ದರ್ಶನ**, ಅನಂತ ರಾಮರಾವ್, ವಿದ್ಯಾ ಪಬ್ಲಿಕೇಶನ್, ಕದ್ರಿ, ಮಂಗಳೂರು, ೨೦೦೭.

೮೫. **ಸ್ತ್ರೀ ಮತವನುತ್ತರಿಸಲಾದಿತೇ?**, ಆಶಾದೇವಿ.ಎಂ.ಎಸ್, ಅಕ್ಷರ ಪ್ರಕಾಶನ, ೨೦೦೪.

೮೬. **ಸ್ತ್ರೀವಾದ: ಆನ್ವಯಿಕತೆ**, ಶ್ರೀಮತಿ ಎಚ್.ಎಸ್, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨ .

೮೭. **ಸ್ತ್ರೀವಾದ: ತಾತ್ವಿಕತೆ**, ಶ್ರೀಮತಿ ಎಚ್.ಎಸ್, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨.

೮೮. **ಸ್ತ್ರೀವಾದ ಪದ ವಿವರಣಾ ಕೋಶ**, ಎಚ್.ಎಸ್.ಶ್ರೀಮತಿ, ಅಭಿನವ ಪ್ರಕಾಶನ, ಬೆಂಗಳೂರು, ४೦, ೨೦೧೮.

೮೯. **ಸ್ತ್ರೀವಾದಿ ಪರಿಕಲ್ಪನೆಗಳು**, ಕೇಶವಶರ್ಮ.ಕೆ, ದೇಸಿ ಪುಸ್ತಕ ಮಾಲೆ, ಬೆಂಗಳೂರು, ೨೦೧೫.

೯೦. **ಸ್ತ್ರೀವಾದಿ ಪ್ರವೇಶ**, ಸುಮಿತ್ರಾ ಬಾಯಿ ಬಿ.ಎನ್, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೨೦೦೪.

೯೧. **ಸ್ತ್ರೀವಾದಿ ಸಾಹಿತ್ಯ ವಿಮರ್ಶೆ**, ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, ಅಭಿನವ, ಬೆಂಗಳೂರು, ೨೦೧೪.

೯೨. **ಸ್ತ್ರೀವಾದಿ ಮನೋವಿಜ್ಞಾನ**, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೯.

೯೩. **ಸ್ತ್ರೀವಾದಿ ಸಂಶೋಧನೆ ವಿಧಿ-ವಿಧಾನಗಳು**, ಎಚ್. ಎಸ್. ಶ್ರೀಮತಿ, ಪ್ರಗತಿ ಗ್ರಾಫಿಕ್ಸ, ಬೆಂಗಳೂರು, ೨೦೧೨.

೯೪. **ಸ್ತ್ರೀ ಸಂವೇಧನೆಯಲ್ಲಿ ಕನ್ನಡ ಕಥನ**, ಎಲ್.ಜಿ.ಮೀರಾ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲೀಷರ್ಸ್, ಬೆಂಗಳೂರು, ೨೦೦೪.

೯೫. **ಸ್ತ್ರೀ ಪರ**; ಡಾ. ಹಾಲತಿ ಸೋಮಶೇಖರ್, ವಿಸ್ಮಯ ಪ್ರಕಾಶನ, ಮೈಸೂರ್, ೨೦೦೮.

೯೬. **ಸ್ತ್ರೀಪರ ಕಾನೂನು**, ಹಾಲತಿ ಸೋಮಶೇಖರ್ ಹೆಚ್.ಎಂ., ಲೋಕೇಶ್ ವಿಸ್ಮಯ ಪ್ರಕಾಶನ, ೨೦೦೮.

೯೭. **ಸಂಶೋಧಕರು ಮತ್ತು ಕಾರ್ಯಕ್ಷೇತ್ರ**, ಚಂದ್ರಪೂಜಾರಿ ಎಂ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೮.

೯೮. **ಸಂಶೋಧನಾ ಪ್ರಸ್ತಾವ**, ಚಂದ್ರಪೂಜಾರಿ ಎಂ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೫.

೯೯. **ಸಂಶೋಧನಾ ಜವಾಬ್ದಾರಿ**, ಚಂದ್ರಪೂಜಾರಿ ಎಂ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೮.

೧೦೦. **ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ**, ಎಂ.ಉಷಾ, ಪ್ರಸಾರಾಂಗ, ಕವಿ.ಹಂ, ೨೦೧೭.

೧೦೧. **ಸಾಂಸ್ಕೃತಿಕ ಪರಿಕಲ್ಪನೆಗಳು**- ಕೇಶವ ಶರ್ಮ ಕೆ- ದೇನಿ ಪುಸ್ತಕ, ಬೆಂಗಳೂರು-೨೦೧೩.

೧೦೨. **ಹೆಣ್ಣು ನೋಟ**- ಡಾ ಹೆಚ್ ಎಸ್ ಅನುಪಮ ಮತ್ತು ಡಾ. ಸಬಿತಾ ಬನ್ನಾಡಿ-ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೨೦೧೭.

೧೦೩. **ಹೆಣ್ಣುಸಿರ ತಲ್ಲಣಗಳು**, ರೂಪ ಹಾಸನ, ಅಭಿರುಚಿ ಪ್ರಕಾಶನ, ಮೈಸೂರು, ೨೦೧೫.

೧೦೪. **ಹೆಣ್ಣು–ಸಂಕರ ಕಾಲದ ಆತ್ಮಪ್ರಜ್ಞೆ**, ಎಚ್.ಎಸ್.ಅನುಪಮಾ, ಲಡಾಯಿ ಪ್ರಕಾಶನ, ಗದಗ,೨೦೧೩.

೧೦೫. **ಹೆಣ್ಣು ಹೆಂಗಸು**, ಶ್ರೀಮತಿ ಹೆಚ್.ಎಸ್, ಬ್ಯಾಲದ ಕೆರೆ ಪ್ರಕಾಶನ, ೨೦೦೪.

೧೦೬. **ಹೆಣ್ಣುತನ ಎಂಬ ಕಣ್ಕಟ್ಟು**: ಎಚ್.ಎಸ್.ಶ್ರೀಮತಿ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೦.

೧೦೭. **ಹೇಳುತೇನೆ ಕೇಳು**– ಹೆಣ್ಣಿನ ಆತ್ಮಕಥೆಗಳು, ಸುಕನ್ಯಾ ಕನಾರಳ್ಳಿ, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೧೨.

೧೦೮. **ಹೆಣ್ಣು ಹೆಜ್ಜೆ**: ಸಾವಿತ್ರಿ ಮುಜುಮದಾರ, ಜನದನಿ ಪ್ರಕಾಶನ, ಅಳವಂಡಿ, ೨೦೧೪.

**ಮಹಾ ಪ್ರಬಂಧಗಳು ಮತ್ತು ಕಿರು ಪ್ರಬಂಧಗಳು**

೧. **ಅಸಂಘಟಿತ ವಲಯದಲ್ಲಿನ ಮಹಿಳಾ ಕೆಲಸಗಾರರು**– ಒಂದು ಅಧ್ಯಯನ, ಟಿ. ಅಕ್ಕಮ್ಮ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೦.

೨. **ಕೌಟುಂಬಿಕ ಹಿಂಸೆ ಮತ್ತು ಮಹಿಳೆ**, ಶಿವನಂದಚಾರ್ ಬಡಿಗಾರ್, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೭.

೩. **ಜನಪದ ಮತ್ತು ಆಧುನಿಕ ಬುಡಕಟ್ಟು ಸಮುದಾಯಗಳಲ್ಲಿ ವೇಶ್ಯಾವಾಟಿಕೆ ಪರಂಪರೆ ಮತ್ತು ಸಮಸ್ಯೆಗಳು**, ಲೀಲಾ ಸಂಪಿಗೆ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೪.

೪. **ಜಾಹಿರಾತುಗಳಲ್ಲಿ ಮಹಿಳಾ ಪ್ರತಿನಿಧೀಕರಣ**, ಕಲಾವತಿ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೭.

೫. **ಬಸರಳ್ಳಿಯ ದೇವದಾಸಿ ಪದ್ಧತಿ**, ಉಮೇಶ ಬಸಪ್ಪ ಕಾತರಕಿ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೭.

೬. **ಮಹಿಳಾ ದೌರ್ಜನ್ಯಗಳು: ಲಿಂಗ ಸಂಬಂಧಿ ಅಧ್ಯಯನ**, ಲೋಕೇಶ್ ಎಸ್.ಎನ್, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೫.

೭. **ಮಹಿಳೆಯ ಮೇಲಿನ ದೌರ್ಜನ್ಯ ಹಿನ್ನೆಲೆಯಲ್ಲಿ ಮಹಾ ಅಪರಾಧಗಳ ವ್ಯಾಖ್ಯೆ ಮತ್ತು ಶಿಕ್ಷೆ**, ಸುಮಲತಾ ಆಕಳವಾಡಿ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೯.

೮. **ಮಹಿಳೆ, ಕಾನೂನು ಮತ್ತು ನ್ಯಾಯ**, ಕೆ.ಎಸ್. ಗೀತಾ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೩.

೯. **ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯ**, ಶ್ರೀದೇವಿ ಆಲೂರ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೯.

**English References**

1. Analyzing the Dimensions: Trafficking and HIV/AIDS in South Asia, Roma Debabrata, STOP (NGO) Publication, New Delhi, (2002),

2. Bangladesh National women Lawyers association (BNWLA): **A Survey in the area of Child and women Trafficking Dhake**, 1997.

3. Census of India 2011

4. **Criminal Abuse of Women and Children**- An International Perspective, OBI, N I Ebbe and others, CRC Press, united States.

5. **Crime in India-2010 Statistics**, 2011, National Crime Record Bureau ministry of home affairs, new delhi.

6. **Crime in India-2012 Compendium, 2013**, National Crime Record Bureau ministry of home affairs, new delhi.

7. **Crime in India-2014 Compendium, 2015,** National Crime Record Bureau ministry of home affairs, New Delhi.

8. **Crime in India-2015 Compendium,** 2016, National Crime Record Bureau ministry of home affairs. New Delhi.

9. Current status of victim service providers and criminal justice actors in india on Anti Human Trafficking- UNODC- 2013.

10. Dangerous Sex , Invisible labor- sex work and the Law in India – Prabha Kotiswaran- Oxford University press-2012.

11. Dimensions of women exploitation – Meenkshi Malhotra- ISHA books , Delhi-2004

12. **Dreams and hunger Drive Trafficking in to India**, Anindita Darhupta:- Inter press service, 09th December, 2003.

13. Encyclopedia of women and development- women and crime – volume 5- Sushma srivastava- Common wealth publications- new delhi-2007.

14. **Equality Now, Bemard Henin, may 2013**.

15. **From Bondage to Freedom : An analysis of International legal regime on human trafficking, Kinnu Gujan: 2006.**

16. Global sex workers-rights resistance and redefinition- Kamala Kempadoo and Jo Doezema- Routaedge, 29 west, 35th street , new York -1998.

17. **Human Trafficking in the Russion Federation; Examination of the Anti-Trafficking Efforts of the Federal Government, Non Government Organization and the International Organization for Migration,** Master of Arts

Thesis, Jennifer Ann Hartl, Graduate College of the University of IOWA. IOWA, Russia.

**18. Issues and Concerns of Missing Girls in Karnataka – A case Study of Mysore District (Mysore City),** Centre for the Study of Social Exclusion and Inclusive Policy, University of Mysore, Manasagangothri, Mysore, 2012.

19. **India's Human Trafficking Laws and Policies and the UN Trafficking Protocol:** Achieving Clarity, Jindal Global Law School, 2015.

**20. Indian Country Report- To Prevent And Combat Trafficking And Commercial Sexual Exploitation Of Children And Women :** World Congress III, Against Sexual Exploitation Of Children And Adolescents, Ministry of Women and Child Development, Rio.De, Janeiro, Brazil, 2008.

21. **Innocent Victims : Trafficking in women and girls across Nepal India Border A Paper for Regional Conference on trafficking in women**, Gauri Pradhan, Banglkok, 1998.

22. National Crime Records Bureau, Ministry of Home Affairs. Govt, of India, for details see: http://ncrb.nic.in/, (Accessed on 03.07.2014)

23. **Number of Percentage of Population below poverty line:** Reserve Bank of India retrieved 06th June 2016.

24. Public Safety canada workshop on human trafficking summary report- 2015.

**25. Report of Institute of Social Science, 2003.**

26. **Research Study on Human Right Violation of Victims of Trafficking** – A Research Study (Project Roshini), Social Action Forum for Manavaadhikar, NGO(LAWYERS), Delhi.

27. Rethinking violence against women- R Emerson Do bash and Russell P Robash- SAGE publications Inc, Collifornia-1998.

28. Survey of rural India - a comprehensive study of Gram panchayat and community development block- Volume 4- Dr.N.Seshgiri- Gyan publishing house, new delhi-2013.

29. The CIA, World Fact Book Solo, Skyhorse Publishing Inc. (2009).

30. The Immoral Traffic (Prevention) Act, Section 7, substituted by the Immoral Traffic (Prevention) Amendment Act, 1978.

31. The Indian Penal Code 1860, Section 370 (1).

32. The Indian Express, June 28, 2011

33. The scandal of the state- women law and citizenship in post colonial India- Rajeshwari Sunder Rajan – permanent block- ranikhet-2008

34. Trafficking in Women and Children in India , Sankar Sen, Orient Longman (2005).

35. Trafficking in Women and Children for Sexual Exploitation, P.M Nair, UNODC, New Delhi,(2007),

**36. Transnational Prostitution : changing patterns in a global patterns** , Susanne Thorbek and Bandana Pattanaik, Zed books , 2003.

37. **Trafficking of women for sexual purpose , Fiona David, research and public policy series no-95,** Australian Institute of Criminology, 2008.

38. **Trafficking Women and children for Sexual exploitation-hand book for Law enforcement agencies in India,** Nayar, P.M,UNIFEM,New Delhi, 2007.

39. Women and Sexual exploitation- harassment at work- Rehana Sikri- Kanishka Publisher, new Delhi- 1999.

40. www. unodc.cvgl.. measurer to Combat human trafficking umapathi

41. www.pvotection project.org

42. http://Faculthy webster, edulwookltlm/Trafficking.Ltml

43. http://www.ncbi.nlm.nihgov/pmclarticler-/pmc 3051545.

* * * *

